ಅಂತರ ಭಾರತೀಯ ಪುಸ್ತಕಮಾಲೆ

# ನಿದ್ದೆಗೆಟ್ಟವರು

**ಸತೀನಾಥ ಭಾದುಡಿ**

ಅನುವಾದ:
**ಅಹೋಬಲ ಶಂಕರ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮುಖ ಪುಟ ಚಿತ್ರ: ಸುಬ್ರತಾ ಗಂಗೂಲಿ

ISBN 81-237-3504-9

ಮೊದಲ ಮುದ್ರಣ : 2001 (ಶಕ 1922)

Original Title: Jagari (*Bangla*)
Kannada Translation: Niddegettavaru
**ರೂ. 80.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110016 ಇವರಿಂದ ಪ್ರಕಟಿತ.

# ಅನುಕ್ರಮಣಿಕೆ

# ಮುನ್ನುಡಿ

ಪ್ಯಾರೀಚಂದ್ ಮಿತ್ರರ ಆಲಾಲೇರ್ ಘರೇರ್ ದುಲಾಲ್ (1858) ಎಂಬ ಕೃತಿ ಪ್ರಕಟವಾದಾಗಲೇ ವಂಗ ಕಾದಂಬರಿ ಹುಟ್ಟಿಕೊಂಡಿತೆಂದು ಹೇಳಬಹುದು. ಪ್ಯಾರೀಚಂದರು ಈ ಕಾದಂಬರಿಯಲ್ಲಿ ಸಮಕಾಲೀನವಾದ ವಸ್ತುವನ್ನು ಆರಿಸಿಕೊಂಡು ಆ ಮೂಲಕ ತಮ್ಮ ವಿಶೇಷ ಸಾಮಾಜಿಕ ಪ್ರಜ್ಞೆಯನ್ನು ತೋರಿಸಿಕೊಂಡಿದ್ದಾರೆ, ನಿಜ. ಆದರೂ ಎಲ್ಲ ದೃಷ್ಟಿಗಳಿಂದಲೂ ನೋಡಿದರೆ ಕಾದಂಬರಿ ಸಾಹಿತ್ಯದ ನಿಜವಾದ ಮೂಲ ಪುರುಷರು ಬಂಕಿಮಚಂದ್ರ ಚಟರ್ಜಿಯವರೇ ಎಂದು ಹೇಳಬೇಕಾಗುತ್ತದೆ. ಆಲಾಲೇರ್ ಘರೇರ್ ದುಲಾಲ್ ಮೊದಲ ಕಾದಂಬರಿ ಎನ್ನಿಸಿಕೊಂಡಿರಬಹುದು. ಇದರಲ್ಲಿ ಕಾದಂಬರಿಯ ಅನೇಕ ಅವಶ್ಯಕ ಲಕ್ಷಣಗಳಿರಬಹುದು. ಆದರೂ ಅದರಲ್ಲಿ ಕಾದಂಬರಿಯ ಹೃದಯ ಸ್ಪಂದನ ಮಾತ್ರ ಆಗಿಲ್ಲ.

ಆದುದರಿಂದ ಯಥಾರ್ಥವಾಗಿ ಬಂಗಾಳಿ ಕಾದಂಬರಿಯನ್ನು ಶಕ್ತಿಶಾಲಿಯಾದ ಒಂದು ಕಲಾ ಮಾಧ್ಯಮವಾಗಿ ಸ್ಥಾಪನೆ ಮಾಡಿದವರು ಬಂಕಿಮಚಂದ್ರರೇ ಎಂಬುದು ನಿರ್ವಿವಾದ. ಅವರು ಸೃಜಿಸಿರುವ ಕಥಾ ಪಾತ್ರಗಳ ಜೀವಂತ ಮತ್ತು ಭಾವನಾಶೀಲ ವ್ಯಕ್ತಿತ್ವ ಈ ಪಾತ್ರಗಳ ವಿಧಿ ಅಥವಾ ನಿಯತಿಯ ಬಗೆಗೆ ಲೇಖಕರ ಆಗಿನ (ಹತ್ತೊಂಬತ್ತನೆಯ ಶತಮಾನದ) ಅಭಿಪ್ರಾಯಗಳು ಮತ್ತು ಅವರ ಸಾಮಾಜಿಕ, ಕೌಟುಂಬಿಕ ಕೃತಿಗಳ ಪಾತ್ರಗಳೊಂದಿಗೆ ಸಮಕಾಲೀನ ಸಮಾಜದ ಸುಶಿಕ್ಷಿತ ಜನರ ಬೌದ್ಧಿಕ, ಸಾಂಸ್ಕೃತಿಕ ಮೌಲ್ಯಗಳ, ಒಳತೋಟಿಗಳ ತುಲನೆ ಇವೆಲ್ಲ ಆ ಕಾದಂಬರಿಗಳ ಗಣನೀಯ ವಿಶೇಷ ಗುಣಗಳು ಎನ್ನುವುದರಲ್ಲಿ ಸಂಶಯವಿಲ್ಲ. ಆದರೂ ಸಹ, ಈಗ ಒಂದು ಶತಮಾನದ ಅನಂತರ ಬಂಕಿಮರ ಕಾಲದ ಬಂಗಾಳಿ ಸಭ್ಯಸ್ತರಂತೂ ಈಗಿನವರಿಗೆ ಹೋಲಿಸಿದರೆ ತುಂಬಾ ಜಡ ಸ್ವಭಾವದವರೂ ಸಂಪ್ರದಾಯಸ್ಥರೂ ನೀತಿ ನಡತೆಗಳ ಬಗೆಗೆ ಹೆಚ್ಚಾಗಿ ತಲೆ ಕೆಡಿಸಿಕೊಳ್ಳುವವರೂ ಆಗಿದ್ದರು ಎಂದು ನಮಗೆ ಅನ್ನಿಸದೆ ಇರುವುದಿಲ್ಲ. ಆದರೆ, ಬಂಕಿಮರ ಹೆಣ್ಣು ಪಾತ್ರಗಳನ್ನು ಮಾತ್ರ ಎಂದಿಗೂ ಮರೆಯುವ ಹಾಗಿಲ್ಲ. ಸ್ವಜೀವತೆಯಲ್ಲಿ, ವ್ಯಕ್ತಿತ್ವ ಸೌಂದರ್ಯದಲ್ಲಿ, ಗಾಂಭೀರ್ಯದಲ್ಲಿ ಅಲ್ಲದೆ ವಾಸ್ತವಿಕತೆಯಲ್ಲಿ ಎಣೆಯೇ ಇಲ್ಲದ ಶೈವಲಿನಿ (ಚಂದ್ರಶೇಖರ) ಸ್ಮರಣೀಯಳಾದ ರೋಹಿಣಿ (ಕೃಷ್ಣ ಕಾಂತೇರ್ ವಿಲ್ 1878) ವಿಸ್ಮಯಕರಳಾದ ಮೃಣ್ಮಯಿ (ಕಪಾಲ ಕುಂಡಲ, 1866) ಇವು ಕೆಲವು ನಿದರ್ಶನಗಳು. ಬಂಕಿಮರ ಪುರುಷ ಪಾತ್ರಗಳು ಯಾವುದೋ ಇಲ್ಲದ ಸಮನ್ವಯವನ್ನು ಅರಸಲು ವ್ಯರ್ಥ ಪ್ರಯತ್ನ ಮಾಡುತ್ತಿರುವಾಗ ಅದೇ ಸಂದರ್ಭದಲ್ಲಿ ಅವರ ಹೆಣ್ಣು ಪಾತ್ರಗಳು ಮಾತ್ರ ದೇವೀ ಚೌಧುರಾಣಿ (1884)

ಯಂಥ ಪರಸೀಮಿತ ಪಾತ್ರದಲ್ಲೂ ಸಹ - ಯಥಾರ್ಥವಾದ ಜೀವನಾವೇಗದಿಂದ ಹುರಿದುಂಬಿದವುಗಳಾಗಿವೆ.

ರವೀಂದ್ರನಾಥ ಟಾಗೋರರು ತಮ್ಮ *ಚೋಖೇರ್ ಬಾಲಿ* (1903)ಯ ಮೂಲಕ ವಂಗ ಸಮಾಜದ ಮಧ್ಯಮ ವರ್ಗದವರ ಬದುಕಿನ ಒಡಕು ತೊಡಕಿನಿಂದ ಜನಿಸುವ ನಾನಾ ವಿಕಾರಗಳನ್ನು ಪ್ರತಿಬಿಂಬಿಸಿದರು. ಅವರ ಕಥಾನಾಯಕರು ತಮ್ಮ ಪರಿಸರದ ಇಂಥ ಒಡಕು, ತೊಡಕುಗಳನ್ನು ಎದುರಿಸಿ ಹೋರಾಡುತ್ತಾರೆ. ಈ ಬಗೆಯ ನಾಯಕರನ್ನು ಸೃಜಿಸಿದುದರ ಫಲವಾಗಿ ರವೀಂದ್ರರ ಕಾದಂಬರಿಗಳಲ್ಲಿ ನಾವು ಪೂರ್ತಿಯಾಗಿ ಅನಾಟಕೀಯವಾದರೂ ಗಂಭೀರವಾದ ತುಡಿತದಿಂದ ಪೀಡಿತರಾದ ವ್ಯಕ್ತಿಗಳ ಇತಿಹಾಸವನ್ನು ತಿಳಿದುಕೊಳ್ಳುತ್ತೇವೆ. ಇಂಥ ಪುರೋಗಾಮಿ ನಾಯಕರುಗಳಲ್ಲಿ ಚಿರಸ್ಮರಣೀಯರಾಗಿ ನಿಂತಿರುವವರು ಗೋರಾ, ಶಚೀಶ ಮತ್ತು ಅತೀಂದ್ರ. ರವೀಂದ್ರರ ಸ್ತ್ರೀ ಪಾತ್ರಗಳೂ ಕಡಮೆ ದರ್ಜೆಯವಲ್ಲ. ವಿನೋದಿನಿ, ಸುಚರಿತ, ದಾಮಿನಿ, ಕುಮುದಿನಿ - ಇವರಲ್ಲಿ ಯಾರೂ ಸುಖ, ನೆಮ್ಮದಿಗಳ ಪರಿಸರದಲ್ಲಿ ಹುಟ್ಟಿ ಬಂದವರಲ್ಲ. ಇವರೆಲ್ಲ ಒಂದಲ್ಲ, ಒಂದು ರೀತಿ ದುಃಖ, ಬಡತನದ ಬದುಕಿನಲ್ಲಿ ಮುಳುಗಿ ತೇಲಿ ಬಂದವರು. ಇವರು ತಮ್ಮ ಸಮಾಜದ ಸೀಮಿತವಾದ ಬಾಳುವೆಯಲ್ಲೂ ಸ್ವಾತಂತ್ರ್ಯದ ಜಾಡನ್ನು ಹಿಡಿದು ಮುನ್ನುಗ್ಗಲು ಯತ್ನಿಸಿದವರು. ರವೀಂದ್ರರ ಕಡೆಯ ಕಾದಂಬರಿಯಾದ *ಶೇಷೇರ್ ಕವಿತಾ* (1929) ಕೃತಿಯ ನಾಯಕಿ ಲಾವಣ್ಯಳು ಒಬ್ಬ ಸ್ವಾವಲಂಬಿ ಜೀವನ ನಡೆಸುವ ಗವರ್ನೆಸ್. ಒಟ್ಟಿನಲ್ಲಿ ರವೀಂದ್ರರ ಮೊದಲ ಕಾದಂಬರಿಯಾದ *ಚೋಖೇರ್ ಬಾಲಿಯೇ* ವಂಗ ಕಾದಂಬರಿಯ ಇಪ್ಪತ್ತನೆಯ ಶತಮಾನದ ಪರ್ಯಾಯಕ್ಕೆ ನಾಂದಿ.

ಕೆಲವು ಪ್ರಧಾನ ಪಾತ್ರಗಳು ಮತ್ತು ಅವರನ್ನು ಸುತ್ತುವರೆದ ಘಟನಾ ಪರಂಪರೆಗಳೇ ವೈಶಿಷ್ಟ್ಯವಾಗಿರುವಂಥ ಬಂಕಿಮಚಂದ್ರರು ಮೇಲುಪಂಕ್ತಿ ಹಾಕಿದ್ದ, ರಚನಾ ಪದ್ಧತಿ ಅಲ್ಲೇ ತಡೆಹಾಕಲ್ಪಟ್ಟಿತ್ತು. ಈಗ ನಾಯಕ ನಾಯಕಿಯರ ಮನಸ್ಸಿನ ಜಗತ್ತಿನಲ್ಲಾಗುವ ಘಾತ-ಪ್ರತಿಘಾತಗಳ ತುಡಿತದಿಂದ ತುಂಬಿದ ಕಾದಂಬರಿಯ ಯುಗ ಹುಟ್ಟಿಕೊಂಡಿತು. ವಾಸ್ತವಿಕ ಪಾತ್ರ ಸೃಷ್ಟಿಯ ಮೇಲಿದ್ದ ಪ್ರಾಧಾನ್ಯ ಹೋಗಿ ಅದರ ಬದಲಾಗಿ ಕಥಾಪಾತ್ರಗಳ ವ್ಯಕ್ತಿತ್ವ ವೈಶಿಷ್ಟ್ಯ ಸ್ವಾತಂತ್ರ್ಯಗಳ ಕಡೆ ಪ್ರಾಮುಖ್ಯ ಬಂತು. *ಗೋರಾ* (1910) ಮತ್ತು *ಚತುರಂಗ* (1915) ಎಂಬ ಎರಡು ಕಾದಂಬರಿಗಳನ್ನು ಬರೆದು ರವೀಂದ್ರರು ಈ ಹೊಸ ಪದ್ಧತಿಯನ್ನು ಹಾಕಿದರು. ಈ ಕೃತಿಗಳಲ್ಲಿನ ನಾಯಕ-ನಾಯಕಿಯರ ವ್ಯಕ್ತಿತ್ವದ ಒಳತೋಟಿ, ಸಂಕಟಗಳು ಎಲ್ಲಕ್ಕಿಂತಲೂ ಹೆಚ್ಚಾಗಿ ಕಲಾಪೂರ್ಣವಾಗಿ ನಿರೂಪಿಸಲ್ಪಟ್ಟಿವೆ. ಈ ಎರಡು ಕಾದಂಬರಿಗಳೂ ಈ ಗುಣಗಳಿಗೇ ಪ್ರಾಧಾನ್ಯ ಕೊಟ್ಟು ರಚಿಸಿದಂಥ ಕೃತಿಗಳಾಗಿವೆ. *ಗೋರಾ* ಈಗಲೂ ಸಹ ಎಣೆಯಿಲ್ಲದ ಮಹಾಕಾವ್ಯ ಲಕ್ಷಣಗಳುಳ್ಳ ಕಾದಂಬರಿಯಾಗಿ ವಿಜೃಂಭಿಸುತ್ತಿದೆ. *ಚತುರಂಗ*ವಾದರೋ ಅಸಾಧಾರಣ ಕಲಾ ಸೌಂದರ್ಯದಲ್ಲೂ ರಚನಾತಂತ್ರದ ಪ್ರೌಢಿಮೆಯಲ್ಲೂ ಸಾಟಿ ಇಲ್ಲದ ಕೃತಿಯಾಗಿ ಉಳಿದುಕೊಂಡಿದೆ.

ಬಂಕಿಮರ ನಾಯಕ-ನಾಯಕಿಯರು ಘಟನಾ ಸಮೂಹದ ದೊಡ್ಡ ಬೆಟ್ಟವನ್ನು ಏರಿ, ಇಳಿಯುವುದರಲ್ಲೇ ಬದುಕು ಕಳೆಯುತ್ತಾರೆ. ರವೀಂದ್ರರ ಕೃತಿಗಳಲ್ಲಿ ಅಂತಹ

ಹೇಳಿಕೊಳ್ಳುವ ಘಟನೆಗಳೇ ಇಲ್ಲ. ಆದರೆ ಅವರ ಕಾದಂಬರಿಗಳ ನಾಯಕ-ನಾಯಕಿಯರ ವ್ಯಕ್ತಿತ್ವದ ಸ್ಪರ್ಶದಿಂದಲೇ ಸಾಧಾರಣ ಸಂಗತಿಗಳೂ ಅಸಾಧಾರಣವಾಗಿ ಹೋಗುತ್ತವೆ. ಸಾಧಾರಣ ಘಟನೆಗಳಿಂದ ಹುಟ್ಟುವ ತುಡಿತದಲ್ಲಿಯೂ ರವೀಂದ್ರರು ವ್ಯಕ್ತಿತ್ವದ ನೈಜ ಜೀವನ ಛಂದಸ್ಸನ್ನು ಆವಿಷ್ಕಾರ ಮಾಡಲು ಹವಣಿಸುತ್ತಾರೆ. ಗೋರಾನ ಜನ್ಮ ರಹಸ್ಯವನ್ನು ಓದುಗರಿಂದ ಮರೆ ಮಾಚುವಂಥ ನಾಟಕೀಯತೆ ರವೀಂದ್ರರಿಗೆ ಹಿಡಿಸುವುದಿಲ್ಲ. ಬಂಕಿಮರು ಕಾದಂಬರಿಯ ಮೂಲಪುರುಷರಾದರೆ ರವೀಂದ್ರರು ಈ ಕಲಾ ಮಾಧ್ಯಮವನ್ನು ಬಳಸಿಕೊಂಡು ವಂಗ ಸಮಾಜದ ಮಧ್ಯದ ವರ್ಗದವರ ಆತ್ಮಶೋಧನೆಗೆ ಪ್ರೇರಣೆ ನೀಡಿದರು. ಬಂಕಿಮರು ರಕ್ತ-ಮಾಂಸ-ಸ್ನಾಯುಗಳಿಂದ ರಚಿಸಲ್ಪಟ್ಟ ವ್ಯಕ್ತಿಗಳ ಆಕಾಂಕ್ಷೆ ಮತ್ತು ವ್ಯರ್ಥತೆಗಳನ್ನು ರೂಪಿಸಿದರು. ರವೀಂದ್ರರು ಈ ಬಗೆಯ ವ್ಯರ್ಥತೆಗೆ ಕಾರಣವಾಗುವ ಶಕ್ತಿಗಳು ಯಾವುವು ಎಂಬುದನ್ನು ಹೊರಗೆ ತರಲು ಪ್ರಯತ್ನಿಸಿದರು. ಅದಕ್ಕಾಗೇ ಅವರ ಯಾವುದೇ ಎರಡು ಕಾದಂಬರಿಗಳು ವಸ್ತು ನಿರೂಪಣೆಯಲ್ಲಾಗಲಿ, ಶಿಲ್ಪತಂತ್ರದಲ್ಲಾಗಲಿ ಒಂದನ್ನೊಂದು ಅನುಸರಿಸಿರುವುದಿಲ್ಲ. ಬಂಕಿಮರ ಕಾದಂಬರಿಗಳು ಕ್ಲಾಸಿಕಲ್ (ಪ್ರಾಚೀನ ಸಾಹಿತ್ಯ ಕೃತಿಗಳ ಶೈಲಿ) ಮಾದರಿಯಲ್ಲಿ ರಚಿಸಲ್ಪಟ್ಟಿರುವುದರಿಂದ ಅವುಗಳ ಯಾವುದೇ ಪರಿಚ್ಛೇದದ ನಾಟಕೀಯ ಪರಿಚಯ ಗಮನಾರ್ಹವಾಗಿದೆ. ಟಾಗೋರರ ಕಾದಂಬರಿಗಳಲ್ಲಾದರೋ ಬೌದ್ಧಿಕ ಉನ್ಮೇಷವೇ ಗುರುತ್ವ ಪಡೆದಿರುತ್ತದೆ. ಅದಕ್ಕೆ ಚಾರ್ ಅಧ್ಯಾಯ್ (1904) ಕಾದಂಬರಿಯ ಕಡೆಯ ದೃಶ್ಯವೊಂದನ್ನು ಬಿಟ್ಟರೆ ಬೇರೆ ಯಾವ ಕೃತಿಯಲ್ಲೂ ನಾಟಕೀಯತೆ ಎಂಬುದರ ಸುಳಿವೇ ಇಲ್ಲ.

1913ನೇ ಇಸವಿಯಲ್ಲಿ ಶರಶ್ಚಂದ್ರ ಚಟರ್ಜಿಯವರ *ಬಡೀ ದೀದಿ* ಕಾದಂಬರಿ ಪುಸ್ತಕ ರೂಪವಾಗಿ ಹೊರಬರುವ ಮೊದಲೇ ಒಂದು ದೊಡ್ಡ ಕತೆಯ ರೂಪದಲ್ಲಿ 'ಭಾರತಿ' ಪತ್ರಿಕೆಯಲ್ಲಿ ಪ್ರಕಟವಾಯಿತು. 1915ರಲ್ಲಿ ಟಾಗೋರರ *ಚತುರಂಗ* ಪ್ರಕಟವಾಯಿತು. ಆದರೆ ಕತೆ *ಬಡೀ ದೀದಿ* ಯಂತೆ ಜನಪ್ರಿಯವಾಗಲಿಲ್ಲ ಎಂದು ಹೇಳಬೇಕಾಗಿಲ್ಲ. ಇಲ್ಲಿ ವಿಶೇಷವೇನೆಂದರೆ ಶರಶ್ಚಂದ್ರರು ಎಂದಿನ ಪದ್ಧತಿಯ ಪ್ರಕಾರ ಅವಿಚ್ಛಿನ್ನವಾಗಿ ಸಂಗತಿಯಾದ ಮೇಲೆ ಸಂಗತಿಯನ್ನು ನಿರೂಪಿಸುತ್ತ, ಎಲ್ಲ ವಿಧಗಳಲ್ಲೂ ಸಮರ್ಪಕವಾಗಿ ಕೊನೆಗಾಣುವಂತೆ ಕತೆ ಹೆಣೆದುಕೊಂಡು ಹೋದರು. ಅದೇ ಸಮಯದಲ್ಲಿ ರವೀಂದ್ರರು ಕಾದಂಬರೀ ಕಲೆಯನ್ನು ಅಜ್ಜಮ್ಮನ ಕತೆಗಳಂತೆ ಮೊದಲು, ಕೊನೆಗಳಿರುವ ಸಂಪ್ರದಾಯದ ಹೊರಗಡೆ ತಂದುಬಿಟ್ಟಿದ್ದರು. ಕಾದಂಬರಿಗೆ ಭಿನ್ನವಾದ ಒಂದು ಹೊಸ ಸ್ವರೂಪ ಕೊಟ್ಟು ಅದನ್ನು ವಾಸ್ತವಿಕ ಜೀವನಕ್ಕೆ ಆದಷ್ಟು ಸಮೀಪ ಬರುವಂತೆ ಮಾಡಲು ಪ್ರಯತ್ನಿಸಿದರು. ಅವರು ಈ ಹೊಸ ತಂತ್ರವನ್ನು ಅವಲಂಬಿಸಿದುದು ದೊಡ್ಡ ಲೇಖಕನೊಬ್ಬನ ಪ್ರಯೋಗದ ಹುಚ್ಚಿನಿಂದಲ್ಲವೇ ಅಲ್ಲ; ಬಾಳುವೆಯ ಜಟಿಲತೆಯ ಆಳವನ್ನು ನಿಲುಕಿಸಿಕೊಳ್ಳಲು ಹೋಗುವ ಸಾಧಕನ ಛಲದಿಂದ. ಗಮನಿಸಬೇಕಾದ ಒಂದು ಸಂಗತಿಯೇನೆಂದರೆ ಟಾಗೋರರು *ಚತುರಂಗ*ದಲ್ಲಿ ಈ ಹೊಸ ಪದ್ಧತಿಯನ್ನು ಬಳಸಿಕೊಂಡಾಗಲೇ

ಯೂರೋಪಿನ ಬೇರೆ ಬೇರೆ ಸಾಹಿತ್ಯಗಳಲ್ಲೂ ಕಾದಂಬರಿಯನ್ನು ಈ ಬಗೆಯಾಗಿ ಭಿನ್ನ ಸ್ವರೂಪದಲ್ಲಿ ಬರೆಯುವ ಪ್ರಯೋಗವು ಮೊದಲಾಯಿತು.

ಶರಶ್ಚಂದ್ರರಾದರೋ ಇಂಥ ಜಟಿಲತೆಗಳಿಗೆಲ್ಲ ಕೈಹಾಕಿ ತಲೆ ಕೆಡಿಸಿಕೊಳ್ಳಲಿಲ್ಲ. ಅವರು ಹೇಳಬೇಕಾದುದರಲ್ಲೂ ಅಂತಹ ಹೆಚ್ಚುಗಟ್ಟಲೆ ಏನಿರಲಿಲ್ಲ. ಬಂಕಿಮರು ತಮ್ಮ ಕತೆಗಳಲ್ಲಿ ಸ್ತ್ರೀ ಪುರುಷರ ಶಾರೀರಕ ವ್ಯಕ್ತಿತ್ವದ ಭವಿತವ್ಯದ ಕಡೆ ಲಕ್ಷ್ಯವಿಟ್ಟು ಬರೆದರು. ರವೀಂದ್ರರ ಗುರಿಯೇ ಬೇರೆ. ಅವರು ಆ ವ್ಯಕ್ತಿತ್ವದ ನೋವಿನಿಂದ ಕೂಡಿದ ಆತ್ಮವಿಕಾಸವನ್ನು ನಿರೂಪಿಸಲು ಹೋದರು. ಶರಶ್ಚಂದ್ರರು ಗಂಡಸರಿಗೆ ಮಾತ್ರ ಅಲ್ಲ, ಹೆಂಗಸರಿಗೂ ಸ್ನೇಹ, ಪ್ರೇಮಗಳು ಅತ್ಯಾವಶ್ಯಕ ಎಂಬುದನ್ನು ಘೋಷಿಸಿದರು: ಆಕಾಲ ಎಂತಹದು? ಆಗಿನ ಓದುಗರಿಗೆ ರವೀಂದ್ರರ ಮುಖ್ಯಪಾತ್ರಗಳ ಉಚ್ಚ ಆದರ್ಶಗಳನ್ನು ನಿಲುಕಿಸಿಕೊಳ್ಳಲು ಆಗುತ್ತಿರಲಿಲ್ಲ. 'ಭಾರತಿ' ಪತ್ರಿಕೆಯಲ್ಲಿ ಬರೆಯುತ್ತಿದ್ದ ಲೇಖಕರ ಕೃತ್ರಿಮ ಸಾಹಸ, ಶೃಂಗಾರಗಳ ಕತೆಗಳೂ, ಅವುಗಳ ಕಪಟ ಭಾವಾವೇಗವೂ ನಿತ್ಯಜೀವನದ ಬಡವಾದ ಆಗು ಹೋಗುಗಳಿಗೆ ದೂರವಾಗಿದ್ದುವು. ಅದೇ ಸಮಯದಲ್ಲಿ ಸಾಹಿತ್ಯ ರಂಗದಲ್ಲಿ ಹೊಸ ಅಲೆಗಳನ್ನು ಎಬ್ಬಿಸುತ್ತೇವೆಂದು ಡಂಗುರ ಸಾರಿ ಹೊರಟ 'ಕಲ್ಲೋಲ' ಗುಂಪಿನ ಬರೆಹಗಾರರ ಕೃತಿಗಳು ಬರೇ ಪಾಶ್ಚಾತ್ಯ ಸಾಹಿತ್ಯದ ಹೊಸ ಪ್ರಯೋಗಗಳ ಅನುಕರಣೆಯಾಗೇ ಉಳಿದವೇ ಹೊರತು ಬೇರೇನನ್ನೂ ಸಾಧಿಸಲಿಲ್ಲ. ಆಗ ಶರಶ್ಚಂದ್ರರೊಬ್ಬರೇ ನಿಂತು ವಂಗ ಜನತೆಯ ನೀರಸ, ಧೂಳಿಧೂಸರ ಜೀವನದ ಮೇಲೆ ಅಪೂರ್ವವಾದ ಒಂದು ಸುರಸ ಸಾಹಿತ್ಯದ ಬೆಳಕು ಬೀರಿದರು. ನಿರಾತಂಕತೆಯೇ ಗುರಿಯೆಂದು ತಮ್ಮ ಸುಖ, ದುಃಖಗಳಲ್ಲೇ ಮುಳುಗಿದ್ದ ವಂಗ ಮಧ್ಯಮ ವರ್ಗದ ಓದುಗರು ಶರಶ್ಚಂದ್ರರ ಕಾದಂಬರಿಗಳಲ್ಲಿ ಅಭಿವ್ಯಕ್ತವಾಗಿದ್ದ ಸಾಧಾರಣವಾದರೂ ಕಾವ್ಯಕರುಣ ಜೀವನದ ಸುಂದರ, ತ್ಯಾಗಪೂರ್ಣ ಗುರಿಗಳನ್ನು ಮೆಚ್ಚಿಕೊಂಡರು. *ಗೃಹದಾಹ* (1920) ಕಾದಂಬರಿ ಒಂದನ್ನು ಬಿಟ್ಟರೆ ಶರಶ್ಚಂದ್ರರ ಬೇರೆಲ್ಲ ಕಾದಂಬರಿಗಳಲ್ಲೂ ಈ ಲಕ್ಷಣಗಳು ಕಾಣಬರುತ್ತವೆ. ಆದರೆ ಇದೂ ನಿಜ: ತನ್ನ ಆರ್ಥಿಕ ಅಸ್ತಿವಾರವೇ ಕುಸಿದು ಬೀಳುತ್ತಿರುವಂಥ ವಂಗ ಮಧ್ಯಮ ವರ್ಗದ ಭವಿತವ್ಯದ ಕಡೆ ಶರಶ್ಚಂದ್ರರ ದೃಷ್ಟಿ ಹೋಗಲೇ ಇಲ್ಲ. ಆದರೂ ಆ ಮುರಿದು ಬೀಳುತ್ತಿರುವ ಸಮಾಜದ ನಡುವೆ ನಿಂತೂ ಶರಶ್ಚಂದ್ರರು ವ್ಯಕ್ತಿಗತ ಕರುಣೆ, ಅನುಕಂಪಗಳಿಗಾಗಿಯೂ ಸುವಿಚಾರಗಳಿಗಾಗಿಯೂ ಕರೆ ನೀಡಿದ್ದಾರೆ. ಇಂಗ್ಲೆಂಡಿನ ಚಾರ್ಲ್ಸ್ ಡಿಕನ್ಸ್‌ನಂತೆಯೇ ಮನೋರಂಜನೆಗಾಗಿ ಕಥಾ ಸ್ವಾರಸ್ಯದ ಕಡೆ ಹೆಚ್ಚು ಗಮನ ಕೊಟ್ಟಿದ್ದರು. ಇಷ್ಟಾದರೂ ಅವರ ಕಾದಂಬರಿಗಳಲ್ಲಿ ಎದ್ದು ಕಾಣುವ ಅತಿಶಯ ಮಾನವೀಯತೆಯನ್ನು ಯಾರೂ ನಿರ್ಲಕ್ಷ್ಯ ಮಾಡುವ ಹಾಗಿಲ್ಲ. ಈ ಸಂದರ್ಭದಲ್ಲಿ ಬರೇ ಹೃದಯ ವೈಶಾಲ್ಯದಿಂದಲೇ ಯಾವ ಲೇಖಕನಾದರೂ ಮಹಾ ಕಾದಂಬರಿಕಾರನಾಗುತ್ತಾನೆಯೇ ಎಂಬ ಪ್ರಶ್ನೆ ನಿಲ್ಲುತ್ತದೆ.

ವಂಗ ಕಾದಂಬರಿಯು ತನ್ನ ಮೂರನೆಯ ಪರ್ಯಾಯಕ್ಕೆ ಬಂದು ನಿಂತುದು ಈ ಶತಮಾನದ ನಾಲ್ಕನೆಯ ದಶಕದಲ್ಲಿ. ಮೂರನೆಯ ದಶಕದ ಕಾದಂಬರಿಕಾರರೆಂದು ಗಣ್ಯರಾಗಿದ್ದವರೇ ವಂಗ ಕಾದಂಬರಿ ಕ್ಷೇತ್ರವು ಬಂಕಿಮ,

ರವೀಂದ್ರ, ಶರಶ್ಚಂದ್ರರಂತಹ ಒಂದೇ ವ್ಯಕ್ತಿಪ್ರತಿಭೆಯ ಲೀಲಾಭೂಮಿಯಾಗಿ ಇರಬೇಕಾಗಿಲ್ಲವೆಂದು ಪ್ರಮಾಣ ಮಾಡಿಕೊಟ್ಟರು. ಅನೇಕ ಮಂದಿ ಲೇಖಕರು ವಂಗ ಕಾದಂಬರಿಯನ್ನು ನಾನಾ ದಿಕ್ಕುಗಳಿಂದ ಸಮೃದ್ಧಿಯಾಗಿ ಬೆಳೆಸಿದರು. ಪ್ರಾದೇಶಿಕ ಕಾದಂಬರಿ ಹುಟ್ಟಿಕೊಂಡಿತು. ಪಾಶ್ಚಾತ್ಯ ರಂಗದಲ್ಲಿ ವಿಚಾರ ಕ್ರಾಂತಿ ಎಬ್ಬಿಸಿದ ಫ್ರಾಯ್ಡ್‌ನ ಮನೋವಿಶ್ಲೇಷಣವೂ ಕಾರ್ಲ್ ಮಾರ್ಕ್ಸ್‌ನ ಸಮಾಜ ಕ್ರಾಂತಿವಾದವೂ ಒಂದೇ ಸಲ ವಂಗ ಕಾದಂಬರಿಯ ಮೇಲೆ ದಾಳಿ ಮಾಡಿದುವು. ರಾಷ್ಟ್ರೀಯ ಜಾಗೃತಿಯ ಕಡೆ ಜಿಜ್ಞಾಸೆ ತೀವ್ರವಾಯಿತು. ಬಹುಶಃ ಇವೆಲ್ಲ ಹೊರಗಡೆಯ ಶಕ್ತಿಗಳ ಪ್ರೇರಣೆಯಿಂದ ಅರಳಿಸಲ್ಪಟ್ಟ ಹೊಸ ಹುಮ್ಮಸ್ಸಿರಬಹುದು. ಅಥವಾ 'ಕಲ್ಲೋಲ' ಯುಗದ ಉಚ್ಚ ಮಹದಾಸೆಗಳ ಅಸ್ಪಷ್ಟ ಕಂಪನದ ಫಲವೂ ಆಗಿರಬಹುದು. ಆದರೆ ಒಂದು ವಿಷಯ ಮಾತ್ರ ನಿರ್ವಿವಾದ. ಇವೆಲ್ಲಕ್ಕೂ ಒಂದು ರೂಪರೇಷೆ ನೀಡಿದವರು, ಹೆಸರಿಗೆ ಮಾತ್ರ 'ಕಲ್ಲೋಲ' ಗುಂಪಿನವರಾದರೂ ಚಿಂತನೆ, ಧ್ಯೇಯಗಳಲ್ಲಿ ತಮ್ಮದೇ ವ್ಯಕ್ತಿತ್ವ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡಿದ್ದ ಕಲಾವಂತರು.

ಪ್ರಾದೇಶಿಕ ಕಾದಂಬರಿ ಮೊದಲು ಮಾಡಿದವರು ಶೈಲಜಾನಂದರಾದರೂ ಅದರ ನಿಜವಾದ ಪರಿಣತ ಸ್ವರೂಪವನ್ನು ನಿರ್ಮಿಸಿದವರು ತಾರಾಶಂಕರ ವಂದ್ಯೋಪಾಧ್ಯಾಯರು. ಪ್ರೇಮೇಂದ್ರ ಮಿತ್ರರ ಲೇಖನಿಯಿಂದ ಕೆಳಗೆ ಬಿದ್ದವರ, ನಿಕೃಷ್ಟರೆನ್ನಿಸಿಕೊಂಡವರ ಚಿತ್ರಗಳು ಹೊರಬರಲು ಯತ್ನಿಸಿವೆಯಾದರೂ ಯುವನಾಶ್ವರ *ಪಾಟಾಲ್ ಡಾಂಗಾರ್ ಪಾಂಚಾಲಿ* (ಪಾಟಾಲ್ ಡಾಂಗಾದ ಜಾನಪದ) ಎಂಬ ಕೃತಿಯಲ್ಲೂ ಮಾಣಿಕ್ ವಂದ್ಯೋಪಾಧ್ಯಾಯರ ಸಣ್ಣ ಕತೆಗಳಲ್ಲೂ ಈ ವಿಷಯದ ಮೇಲೆ ಎಂದಿಗೂ ಮರೆಯಲಾಗದ ಚಿತ್ರಗಳನ್ನು ಕಾಣುತ್ತೇವೆ. ಇದೇ ಗುಂಪಿಗೆ ಸೇರಿದ ವಿಭೂತಿ ಭೂಷಣ ವಂದ್ಯೋಪಾಧ್ಯಾಯರು ಕಾದಂಬರೀ ಪ್ರಪಂಚದಲ್ಲಿ ಹೊಸದೊಂದು ದಿಗಂತವನ್ನೇ ತೆರೆದು ತೋರಿಸಿದರು. ಈ ದಿಶೆಯಲ್ಲಿ ಅವರ *ಪಥೇರ್ ಪಾಂಚಾಲಿ* (1919) ಮತ್ತು *ಆರಣ್ಯಕ* (1938) ಕಾದಂಬರಿಗಳು ಮಹಾಕೃತಿಗಳಾಗಿ ಗಣಿಸಲ್ಪಟ್ಟಿವೆ.

ಮೂವತ್ತರ ಲೇಖಕರಲ್ಲಿ ಮೂವರು ಕಾದಂಬರಿಕಾರರ ಕೃತಿಗಳು ವಂಗ ಕಥಾ ಸಾಹಿತ್ಯದಲ್ಲಿ ಶಾಶ್ವತವಾಗಿ ಉಳಿಯುವ ಅಧಿಕಾರ ಪಡೆದಿವೆ. ಅವುಗಳಲ್ಲಿ ತಾರಾ ಶಂಕರರ *ಗಣದೇವತಾ* (1941) ಮತ್ತು *ಕವಿ* (1942), ಮಾಣಿಕ್ ಬಂದ್ಯೋಪಾಧ್ಯಾಯರ *ಪುತುಲ್ ನಾಚೇರ್ ಇತಿಕಥಾ* (1936) ಮತ್ತು *ಪದ್ಮಾ ನದೀರ್ ಮಾಝಿ* (1936) ಮತ್ತು ವಿಭೂತಿ ಭೂಷಣರ *ಪಥೇರ್ ಪಾಂಚಾಲಿ* ಮತ್ತು *ಆರಣ್ಯಕ* ಎಂಬ ಕಾದಂಬರಿಗಳು ಮುಖ್ಯ. ಇಷ್ಟಾದರೂ ಈ ಕಾದಂಬರಿಗಳಲ್ಲಿ ಪರಸ್ಪರ ಎಷ್ಟು ವೈಪರೀತ್ಯ, ವಿಷಯ ವಸ್ತುವಿನಲ್ಲಿ ಎಷ್ಟು ವ್ಯತ್ಯಾಸ ಅಲ್ಲದೆ ವಿನ್ಯಾಸದಲ್ಲೂ ಸಹ! ವಂಗಭೂಮಿಯ ನಾನಾ ಪ್ರದೇಶಗಳಲ್ಲಿ ಚದುರಿ ಹೋಗಿರುವ ಎಷ್ಟು ರಂಗು ರಂಗಾದ ಪ್ರಕೃತಿ ವೈಚಿತ್ರ್ಯಗಳು, ಎಷ್ಟು ನಮೂನೆಯ ಮನುಷ್ಯರ ಪರಿಚಯ, ಎಷ್ಟು ವಿಧವಾದ ಪರಿಸರ ವಿಶೇಷಗಳು - ಇವೆಲ್ಲವನ್ನೂ ಈ ಮೂವತ್ತರ ಕಾದಂಬರಿಕಾರರು, ಈ ಬ್ಯಾನರ್ಜಿತ್ರಯರೆಂದು ಪ್ರಸಿದ್ಧರಾದ ಲೇಖಕರು ತಮ್ಮ ವಿಶೇಷ ಶ್ರದ್ಧೆ, ಜಿಜ್ಞಾಸೆಗಳಿಂದ ಆರಿಸಿ ಒಂದುಗೂಡಿಸಿ ತಮ್ಮ ಪ್ರತಿಭೆಯಿಂದ

ಕಾದಂಬರಿಗಳಲ್ಲಿ ಎರಕಹೊಯ್ದು ಶಾಶ್ವತ ಸಾಹಿತ್ಯವಾಗಿ ಮಾರ್ಪಡಿಸಿ ಅಮರತ್ವಕ್ಕೆ ಏರಿಸಿಬಿಟ್ಟಿದ್ದಾರೆ. ಇಂಥ ಪ್ರಾದೇಶಿಕ ಕಾದಂಬರಿಗಳ ಮುಖ್ಯ ವೈಶಿಷ್ಟ್ಯವಾಗಿರುವುದು ಪಾತ್ರಪರಿಸರಗಳ ಸಮನ್ವಯ, ಅಂದರೆ ಪಾತ್ರಗಳ ವ್ಯಕ್ತಿತ್ವದೊಂದಿಗೆ ಅವರ ವರ್ಗೀಯ ಲಕ್ಷಣಗಳ ಜೋಡಣೆ-ಈ ಜೋಡಣೆಯಲ್ಲೂ ಈ ಲೇಖಕರು ಮನನೀಯವಾದ ಜಾಣ್ಮೆ ತೋರಿದ್ದಾರೆ.

ಇದೇ ಪರ್ಯಾಯಕ್ಕೆ ಸೇರಿದವರಾದ ಬನಫೂಲ್ ಎಂಬ ಕಾದಂಬರಿ ಮತ್ತು ಸಣ್ಣಕತೆಯ ಲೇಖಕರ ನಿಜವಾದ ಹೆಸರು ಬಾಲಾಯಿ ಚಂದ್ರ ಮುಖರ್ಜಿ. ವೈದ್ಯ ವೃತ್ತಿಗೆ ಸೇರಿದ ಈ ಲೇಖಕರ ಕೃತಿಗಳು ತಮ್ಮ ವಸ್ತು ವೈವಿಧ್ಯಕ್ಕೂ ನಿರೂಪಣೆಯ ತಂತ್ರಕ್ಕೂ ಪ್ರಸಿದ್ಧಿಯಾಗಿವೆ.

ಇಷ್ಟೆಲ್ಲ ಹೇಳಿದ ಮೇಲೂ ಒಟ್ಟಿನಲ್ಲಿ ಈ ದಶಕದ ಲೇಖಕರಲ್ಲೆಲ್ಲ, ಕೇವಲ ತಾರಾಶಂಕರರೊಬ್ಬರೇ ತಮ್ಮ ಎಣೆಯಿಲ್ಲದ ಸಾಹಿತ್ಯ ಕೃತಿಗಳ ಅಸಾಧಾರಣ ಗುಣಗಳಿಂದ ಮಹಾ ಕಾದಂಬರಿಕಾರರೆಂಬ ಬಿರುದಿಗೆ ಅರ್ಹರಾಗಿದ್ದಾರೆ. ಮಾಣಿಕ್‌ಚಂದ್ರರು ತಮ್ಮ ಜೀವನದ ಮೊದಲ ಹಂತದಲ್ಲಿ ಕುರುಡು ಅದೃಷ್ಟದ ಆಟದ ವಸ್ತುಗಳಾಗಿರುವವರ, ನಿಸ್ಸಂಗರೂ ನಿಸ್ಸಹಾಯಕರೂ ಆಗಿರುವವರ ಕತೆಗಳನ್ನು ಹೆಣೆದರು. ತರುವಾಯ ಮಾರ್ಕ್ಸ್‌ವಾದದಿಂದ ಪ್ರಭಾವಿತರಾಗಿ ಅದರ ಬೆಳಕಿನಲ್ಲಿ ಜೀವನವನ್ನು ವಿಮರ್ಶೆ ಮಾಡುತ್ತ ಅನೇಕ ಕೃತಿಗಳನ್ನು ರಚಿಸಿದರು. ಇದರಿಂದ ಪ್ರಗತಿಶೀಲ ಲೇಖಕರೆನ್ನಿಸಿಕೊಳ್ಳಲು ಅರ್ಹರಾದರು. ಆದರೆ ಈ ಪ್ರಭಾವ ಅವರ ಸಣ್ಣಕತೆಗಳಲ್ಲಿ ಫಲಪ್ರದವಾದ ಹಾಗೆ ಕಾದಂಬರಿಗಳಲ್ಲಿ ಆಗಲಿಲ್ಲ. ವಿಭೂತಿಭೂಷಣರು ಪ್ರಕೃತಿಯ ನಾನಾ ಲೀಲಾ ವಿಲಾಸಗಳಲ್ಲಿ ತನ್ಮಯರಾಗಿದ್ದು ದೀನದರಿದ್ರರ ಬಾಳುವೆಯ ಸಂಕಟಧ ಗಳಿಗೆಗಳಲ್ಲೂ ಅಮೃತದ ಪ್ರಕಾಶವನ್ನು ಕಂಡು ಸುಖ ಪಡುವುದರಲ್ಲೇ ಬದುಕನ್ನು ಕಳೆದರು. ತಾರಾಶಂಕರರೊಬ್ಬರೇ ಭಾರತ ವರ್ಷದ ಜನ ಕೋಟಿಯ ಕನಸು ನನಸುಗಳನ್ನೂ ಅವರ ನೈತಿಕ ದೃಷ್ಟಿ ಭಂಗಿಯನ್ನೂ ಅವರ ಆರ್ಥಿಕ, ಸಾಂಘಿಕ ಸುಖ, ದುಃಖಗಳನ್ನೂ ಅವರ ಭವಿಷ್ಯದ ಇತಿಹಾಸದ ಗತಿಯನ್ನೂ ಅರ್ಥ ಮಾಡಿಕೊಂಡು ಅವನ್ನೆಲ್ಲ ತಮ್ಮ ಕಾದಂಬರಿಗಳಲ್ಲಿ ರೂಪಿಸಿದರು. ತಾರಾಶಂಕರರು ತಮ್ಮ ತರುಣ ಪ್ರಾಯದಲ್ಲಿ ಮಾರ್ಕ್ಸ್ ವಾದದಿಂದ ಆಕರ್ಷಿತರಾಗಿದ್ದು ಪ್ರೌಢ ವಯಸ್ಸಿನಲ್ಲಿ ಕ್ರಮೇಣ ಗಾಂಧೀವಾದದ ಪ್ರಭಾವಕ್ಕೊಳಗಾಗಿ ಅದರಲ್ಲೇ ದೀಕ್ಷಾಬದ್ಧರಾದರೂ ಈ ಬೌದ್ಧಿಕ ಬದಲಾವಣೆಯಿಂದ ಅವರ ಕಲಾಸೃಷ್ಟಿಗೆ ಎಳ್ಳಷ್ಟೂ ಹಾನಿಯಾಗದಿರುವುದು ಅವರ ಸಾಹಿತ್ಯ ದೃಷ್ಟಿಯ ಅವಿಚಲತೆಗೆ ದೊಡ್ಡ ನಿದರ್ಶನ. ಭಾರತೀಯ ಜೀವನ ಮತ್ತು ಭಾರತೀಯತ್ವ ಅವರ ದೃಷ್ಟಿ ಸೀಮೆಯಿಂದ ಎಂದೂ ನಷ್ಟವಾಗಿ ಹೋಗದಿರುವುದೂ ಅವರ ಯಶಸ್ಸಿಗೆ ಕಾರಣ.

ಮೂವತ್ತರ ಕಾದಂಬರಿಕಾರರು ಬಹುಮಟ್ಟಿಗೆ ಪ್ರತಿಷ್ಠಿತರಾಗಿ ಹೋದಮೇಲೆ, ಅಂದರೆ 1945ರಲ್ಲಿ ಸತೀನಾಥ ಭಾದುಡಿಯವರ ಜಾಗರಿ ಪ್ರಕಟವಾಯಿತು. (ಭಾದುಡಿಯವರ ಜನ್ಮ 1906ರಲ್ಲಿ ಸಾವು 1965ರಲ್ಲಿ) ಬಿಹಾರ ಪ್ರಾಂತದ ಪೂರ್ಣಿಯಾ ಜಿಲ್ಲೆಯ ಸುತ್ತಮುತ್ತಲ ಪ್ರದೇಶ ಅವರ ಸಾಹಿತ್ಯ ಕೃತಿಗಳ ಹಿನ್ನೆಲೆ.

*ಧೋಂಡಾಯಿ ಚರಿತ ಮಾನಸ್* (ಭಾಗ ಒಂದು ಮತ್ತು ಎರಡು 1949-51) ಮತ್ತು *ಅಚಿನ್ ರಾಗಿಣಿ* (1954) ಎಂಬವು ಅವರ ಇತರ ಕಾದಂಬರಿಗಳು. ಹೃದಯ ಸ್ಪರ್ಶಿಯಾದ ಹೊಚ್ಚ ಹೊಸ ವಸ್ತು ನಿರೂಪಣೆ ಮತ್ತು ಅನುಕಂಪದಿಂದ ಕೂಡಿದ ವಿಶಾಲ ಮಾನವ ದೃಷ್ಟಿಕೋನ - ಇವೇ ಭಾದುಡಿಯವರ ಕೃತಿಗಳೆಲ್ಲದರ ವಿಶಿಷ್ಟ ಗುಣಗಳು. ಜಾಗರಿಯ ಮೂಲಕವೇ ಈ ಲೇಖಕರ ಕಾದಂಬರೀ ಕ್ಷೇತ್ರದ ಯಾತ್ರೆ ಮೊದಲಾಯಿತು. ಹೊರಬಂದ ಕೂಡಲೇ ಜಾಗರಿಯು ಓದುಗರ ಮನಸ್ಸನ್ನು ಸೆಳೆಯಿತು. ಪ್ರಕಾಶಿತವಾದ ಮೇಲೆ ಯಶಸ್ಸು ಬರುವುದಕ್ಕೂ ತಡವಾಗದೆ ಹೋದದ್ದಕ್ಕೆ ಎರಡು ಕಾರಣಗಳು. ಒಂದು, ದೇಶದಾದ್ಯಂತ ಕಲ್ಲೋಲವೆಬ್ಬಿಸಿದ ನಲವತ್ತೆರಡರ ರಾಷ್ಟ್ರೀಯ ಆಂದೋಳನವನ್ನು ಕುರಿತು ಬರೆದ ಸಾರ್ಥಕವಾದ ಕಾದಂಬರಿ ಇದೇ ಮೊದಲು. ಎರಡನೆಯದು, ಈ ಕೃತಿಯ ವೈಶಿಷ್ಟ್ಯಪೂರ್ಣವಾದ ರಚನಾತಂತ್ರ. ಆಗ ನಲವತ್ತೆರಡರ ಆಂದೋಳನ ಆಗಿ ಮೂರೇ ವರುಷಗಳಾಗಿದ್ದುವು. ಅದರ ಅದ್ಭುತ ಘಟನೆಗಳು ಸಾಧಾರಣ ಜನರ ಮನಸ್ಸಿನಲ್ಲಿ ಇನ್ನೂ ಪ್ರತ್ಯಕ್ಷವಾಗಿದ್ದುವು. ಬಂದೀಖಾನೆಯ ಕಗ್ಗತ್ತಲೆಯ ಗವಿಗಳಲ್ಲಿ ಎಷ್ಟೋ ಜನ ಜೀವತೆತ್ತಿದ್ದರು. ಈ ಕಾದಂಬರಿಯಲ್ಲಿ ಆ ಸಮಯದ ಮೈನವಿರೇಳಿಸುವ ಚಿತ್ರ ಅಸಾಧಾರಣ ವಾಸ್ತವತೆಯಿಂದ ಮೂಡಿ ಬಂದಿದೆ. ಬಿಲೂ, ಅಪ್ಪ, ಅಮ್ಮ ನೀಲೂ - ಈ ನಾಲ್ಕು ಮಂದಿಯೂ ಒಂದೇ ಭಯಂಕರ ರಾತ್ರಿಯ ಅಂತ್ಯವನ್ನು ಎದುರು ನೋಡುತ್ತ ನಿಮಿಷ, ಗಳಿಗೆಗಳನ್ನು ಎಣಿಸುತ್ತ ಬೇರೆ ಬೇರೆ ಸ್ಥಳಗಳಲ್ಲಿ ಕೂತಿರುತ್ತಾರೆ. ರಾತ್ರಿಯ ಕೊನೆಯ ಜಾವ ಕಳೆದೊಡನೆ ಬಿಲೂ ಗಲ್ಲಿಗೇರಿಸಲ್ಪಡುತ್ತಾನೆ. ಈ ನಾಲ್ಕು ಜನ (ಮೊದಲ ಮೂವರು ಜೈಲಿನ ಒಳಗಡೆ ಬೇರೆ ಬೇರೆ ಸೆಲ್ ಅಥವಾ ವಾರ್ಡುಗಳಲ್ಲಿ, ನಾಲ್ಕನೆಯವ ನೀಲೂ ಜೈಲಿನ ಹೊರಗಡೆ - ಗೇಟಿನಲ್ಲಿ) ಈ ಗಳಿಗೆಯನ್ನು ನಿರೀಕ್ಷಿಸುತ್ತ ತಮ್ಮ ತಮ್ಮ ಯೋಚನೆಗಳನ್ನು ಪ್ರಕಟ ಮಾಡುವ ಏಕೋಕ್ತಿಗಳಿಂದ ಕೂಡಿದೆ, ಕಾದಂಬರಿ. ಈ ರಚನಾತಂತ್ರದ ವಿಚಾರವಾಗಿ ಆಮೇಲೆ ಹೇಳಲಾಗುತ್ತದೆ. ಮೊದಲು ಕಾದಂಬರಿಯ ವಿಷಯವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಅಗತ್ಯ.

ಇಡೀ ಭಾರತ ವರ್ಷವು 1921ರಿಂದ ಮೊದಲುಗೊಂಡು 1942ರವರೆಗೆ ನಾಲ್ಕು ಬಾರಿ ಸ್ವಾತಂತ್ರ್ಯ ಚಳವಳಿಗಳಿಂದ ಅಲ್ಲಾಡಿ ಹೋಗಿತ್ತು. ಇದರ ಪರಿಣಾಮವಾಗಿ ರಾಜಕಾರಣ ಬರೇ ವೃತ್ತಪತ್ರಿಕೆಗಳ ಕಾಲಮ್ಮುಗಳಲ್ಲಿ ಸೀಮಿತವಾಗದೆ ಸಾಧಾರಣ ಪ್ರಜೆಗಳ ಜೀವನದ ಒಂದು ಅಂಶವಾಗಿ ಹೋಗಿತ್ತು. ಜಾಗರಿಯ ಮಾಸ್ಟರ್ ಸಾಹೇಬರ ಕುಟುಂಬದಂತೆ ಎಷ್ಟೋ ರಾಷ್ಟ್ರೀಯ ಕುಟುಂಬಗಳು ಹುಟ್ಟಿ ಬಂದುವು. ವಂಗ ದೇಶದ ಇತಿಹಾಸದಲ್ಲಿ ಇದಕ್ಕೆ ಹಿಂದೆ ಅಂದರೆ 1905ರಲ್ಲಿ ಸ್ವದೇಶಿ ಚಳವಳಿ ನಡೆದಿತ್ತು. ಆ ಚಳವಳಿಯೂ ವಂಗ ದೇಶದ ಜನತೆಯ ಜೀವನಕ್ಕೂ ಅಲ್ಲದೆ ಕುಟುಂಬ ಜೀವನಕ್ಕೂ ಅನೇಕ ಕರ್ಮಕ್ಷೇತ್ರಗಳಿಗೂ ತಟ್ಟಿತ್ತು. ಇದರ ಪರಿಣಾಮವಾಗಿ ಇಪ್ಪತ್ತನೆಯ ಶತಮಾನದ ಎರಡನೆಯ ದಶಕದಲ್ಲಿ ರಾಜಕೀಯ, ವಿಷಯಾಧಾರಿತ ಕಾದಂಬರಿಯು ಹುಟ್ಟಿಕೊಳ್ಳುವುದು ಅನಿವಾರ್ಯವಾಯಿತು. *ಘರೇ ಬಾಹಿರೇ* (1916) ಎಂಬ ಕಾದಂಬರಿಯಲ್ಲಿ ರವೀಂದ್ರರು ವಂಗ ವಿಭಜನೆಯ

ಘಟನೆಯನ್ನು ಆರಿಸಿಕೊಂಡು ರಾಜಕೀಯ ಜಾಗೃತಿಯನ್ನು ಉಂಟುಮಾಡುವ ರಂಗು ಕೊಟ್ಟು ಒಂದು ಕಥಾ ಚಿತ್ರವನ್ನು ರಚಿಸಿದರು. ಅದು ಸಹ ಪಾತ್ರ, ಪಾತ್ರಿಯರ ಏಕೋಕ್ತಿಗಳಿಂದ ಕೂಡಿರುವ ಕಾದಂಬರಿ. ರಾಜಕೀಯ ವಾತಾವರಣವನ್ನು ಒಳಗೊಂಡಿದ್ದರೂ ಪ್ರಾಧಾನ್ಯ ಪಡೆದಿರುವುದು ಒಂದು ಕುಟುಂಬದ ಒಳತೋಟಿ. ವಂಗ ಕಥಾ ಸಾಹಿತ್ಯದಲ್ಲಿ ಎರಡನೆಯ ರಾಜಕೀಯ ಕಾದಂಬರಿ ಶರಶ್ಚಂದ್ರರ ಹೆಸರಾಂತ ಪಥೇರ್ ಧಾಬಿ (1926). ಇದರಲ್ಲಿ ಶರಶ್ಚಂದ್ರರು ರಾಷ್ಟ್ರೀಯ ಉಗ್ರವಾದಿಗಳ ಕೂಟ, ಮಸಲತ್ತುಗಳ ಮೇಲೆ ಬೆಳಕು ಚೆಲ್ಲುತ್ತ ಸಾಧಾರಣವಾದೊಂದು ಕತೆಯ ಸುತ್ತ ಭಯಾನಕ ಮತ್ತು ಅಷ್ಟೇ ಸ್ವಾರಸ್ಯವಾದ ಒಂದು ಚೌಕಟ್ಟನ್ನು ರಚಿಸಿದರು. ಇದರಿಂದ ಈ ಕಾದಂಬರಿಗೆ ಸಹಜವಾದ ಜನಪ್ರಿಯತೆ ಲಭಿಸಲು ಸಾಧ್ಯವಾಯಿತು. ರವೀಂದ್ರರು ಮತ್ತೊಂದು ರಾಜಕೀಯ ಕಾದಂಬರಿ (ಚಾರ್ ಅಧ್ಯಾಯ್) ರಚಿಸಿದ್ದಾರೆ. ಘರೇ ಬಾಹಿರೇ ಮತ್ತು ಚಾರ್ ಅಧ್ಯಾಯ್ ಎಂಬ ಈ ಎರಡು ಕಾದಂಬರಿಗಳಲ್ಲೂ ರವೀಂದ್ರರು ರಾಜಕೀಯ ಪಕ್ಷವನ್ನು ವ್ಯಕ್ತಿ ಸ್ವಾತಂತ್ರ್ಯಕ್ಕೆ ವಿರೋಧಿಯಾದ ಒಂದು ದುಷ್ಟ ಶಕ್ತಿಯ ಭೂಮಿಕೆಯಲ್ಲಿ ನಿರೂಪಿಸಿದ್ದಾರೆ. ವ್ಯಕ್ತಿಯ ಸ್ವಾತಂತ್ರ್ಯ ವಿಕಾಸದ ಹಾದಿಯಲ್ಲಿ ಪಾರ್ಟಿಯ ನೇತೃತ್ವ ಅಥವಾ ಅಧಿಕಾರಶಾಹಿ ಹೇಗೆ ತಡೆ ಹಾಕುತ್ತದೆಂಬುದನ್ನು ರವೀಂದ್ರರು ಎರಡು ಬಾರಿ ವರ್ಣಿಸಿದ್ದಾರೆ. ಪರಂಪರೆಗಳಿಂದ ನಡೆದುಬಂದ ನಮ್ಮ ಕೌಟುಂಬಿಕ ಜೀವನದಲ್ಲಿ ಇತ್ತೀಚೆಗೆ ನಡೆದ ರಾಜಕೀಯ ಚಳವಳಿಗಳು ಉಂಟುಮಾಡಿದ ತಳಮಳವನ್ನು ಅತ್ಯಂತ ಸೂಕ್ಷ್ಮವಾಗಿಯೂ ಮನೋಜ್ಞವಾಗಿಯೂ ತಾರಾಶಂಕರರು ತಮ್ಮ ಧಾತ್ರೀದೇವತಾ (1939) ಎಂಬ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಯಾವ ವಿಧವಾದ ಉಗ್ರವಾದಿಗಳ ಆಂದೋಳನವು ಕ್ರಮೇಣ ತಾನಾಗಿ ರೂಪಾಂತರ ಪಡೆಯಿತೋ ಯಾವ ರೀತಿ ಉಗ್ರವಾದಿಗಳು ತಮ್ಮ ಹಾನಿಕರ ಹಾದಿಯನ್ನು ತೊರೆದು ಗಾಂಧೀಜಿ ತೋರಿಸಿಕೊಟ್ಟ ಅಹಿಂಸಾ ಮಾರ್ಗದ ಚಳವಳಿಯಲ್ಲಿ ಸೇರಿಕೊಂಡರೋ - ಆ ಕತೆಯೇ ಧಾತ್ರಿ ದೇವತಾ ಎಂಬ ಬೃಹತ್ ಕಾದಂಬರಿಯ ವಸ್ತು. ಅದಷ್ಟೇ ಅಲ್ಲ. ಅದು ಒಂದು ರಾಜಕೀಯ ಕೌಟುಂಬಿಕ ಕಾದಂಬರಿ. ಜಾಗರಿ ಕಾದಂಬರಿಯಲ್ಲಿ ನಾವು ರಾಷ್ಟ್ರೀಯ ಜಾಗೃತಿಯುಳ್ಳ ಒಂದು ಬಂಗಾಳಿ ಕುಟುಂಬವನ್ನು ಕಾಣುತ್ತೇವೆ. ಧಾತ್ರಿ ದೇವತಾ ಕಾದಂಬರಿಯಲ್ಲಿ ಒಂದು ರಾಷ್ಟ್ರೀಯ ಕುಟುಂಬ ಹೇಗೆ ಹುಟ್ಟಿಕೊಂಡಿತೆಂಬುದನ್ನು ತಿಳಿದುಕೊಂಡೆವು. ಕಥಾನಾಯಕ ಶಿವನಾಥನ ಸಂಗಡವೇ ಅವನ ಹೆಂಡತಿ ಗೌರಿ, ಅವನ ಸೋದರತ್ತೆ, ಅಷ್ಟೇಕೆ, ಇನ್ನೂ ತೊದಲು ಮಾತಾಡುವ ಅವನ ಮಗುವೂ 'ವಂದೇ ಮಾತರಂ' ಮಂತ್ರದಿಂದ ಸ್ಫೂರ್ತಿ ಪಡೆಯುತ್ತಾರೆ. ಇದೇ ಕಾದಂಬರಿಯ ಕಡೆಯ ಘಟ್ಟ. ಇದೇ ಉಪಸಂಹಾರದ ಘಟನೆಗಳಲ್ಲೇ ನಡೆಯುವ ಮುಖ್ಯ ಪಾತ್ರಗಳ ಮಾನಸಿಕ ಕ್ಲೇಶ, ಒಳತೋಟಿಗಳಿಂದ ತುಂಬಿರುವ ಅಧ್ಯಾಯವೇ ಕಾದಂಬರಿಯ ಅತ್ಯಂತ ರಸಭರಿತ ಅಂಶ. ಸಾಧಾರಣ ಸಂಸಾರಿಕ ಬುದ್ಧಿಹೀನತೆ, ತಪ್ಪು ಅಭಿಪ್ರಾಯ, ಅನುಮಾನಗಳಿಂದ ಮುರಿದು ಬೀಳುತ್ತಿರುವ ಕುಟುಂಬವನ್ನು ಹೇಗೆ ನಾಡಿನೆಲ್ಲೆಲ್ಲ ಎಚ್ಚರವಾಗಿರುವ ರಾಷ್ಟ್ರೀಯ ಕಾಲಪುರುಷನು ಮತ್ತೆ ಮೇಲೆತ್ತಿ ನಿಲ್ಲಿಸಿ ತೇಜಸ್ಸಿನಿಂದ,

ಕ್ರಿಯಾಶಕ್ತಿಯಿಂದ ತುಂಬಿಸಿ ಅದಕ್ಕೊಂದು ಬೃಹತ್ತರ ಚೇತನಾ ಕ್ಷೇತ್ರದಲ್ಲಿ ಹೊಸ ಜನ್ಮ ಕೊಟ್ಟನೆಂಬಂಥ ಕತೆಯನ್ನು ತಾರಾಶಂಕರರೊಬ್ಬರಲ್ಲದೆ ಬೇರೆ ಯಾರೂ ಬರೆಯಲು ಆಗಿಲ್ಲ.

ಸತೀನಾಥ ಭಾದುಡಿಯವರ ಜಾಗರಿ ವಂಗ ರಾಜಕೀಯ ಕಾದಂಬರೀ ಕ್ಷೇತ್ರದಲ್ಲಿ ಹೊಸದೊಂದು ಸ್ತರವನ್ನು ಎಬ್ಬಿಸಿತು. 1942ನೆಯ ವರುಷದಲ್ಲಿ ರಾಜಕೀಯ ಪಕ್ಷಗಳಲ್ಲಿ ರಾಷ್ಟ್ರೀಯ ಚೇತನ ಮತ್ತು ದೃಷ್ಟಿಕೋನಗಳ ಭಿನ್ನತೆಯು ನಿಧಾನವಾಗಿ ತಲೆದೋರುತ್ತ ಬಂತು. ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ (ಸಿ.ಎಸ್.ಪಿ.) ಮತ್ತು ಕಮ್ಯೂನಿಸ್ಟ್ ಪಾರ್ಟಿ - ಇವೆರಡು ಪಕ್ಷಗಳೂ ಕಾಂಗ್ರೆಸ್ ಸಂಸ್ಥೆ ಸೃಜಿಸಿದ್ದ ಅತಿ ದೊಡ್ಡದಾದ ಒಂದು ಏಕತಾನದ ನಡುವೆ ತಮ್ಮ ತಮ್ಮ ಪ್ರತ್ಯೇಕ ಸ್ವರಗಳಿಗೆ ಸ್ಪಷ್ಟತೆ ನೀಡಲು ಬಯಸಿದುವು. ಆಗಸ್ಟ್ ಆಂದೋಳನದ ಔಚಿತ್ಯವನ್ನು ಕುರಿತು ಕಮ್ಯೂನಿಸ್ಟರಿಗೂ ಸೋಷಲಿಸ್ಟರಿಗೂ ತೀವ್ರ ಮತಭೇದ ಉಂಟಾಯಿತು. ಮತ್ತು ಚಳವಳಿಯ ಕಾರ್ಯಕ್ರಮ ಹಾಗೂ ಪದ್ಧತಿಗಳನ್ನು ಕುರಿತು ಸೋಷಲಿಸ್ಟರಿಗೂ ಕಾಂಗ್ರೆಸ್ಸಿನ ಗಾಂಧೀವಾದಿಗಳಿಗೂ ಅಷ್ಟೇ ತೀವ್ರವಾದ ಮತಭೇದ ಹುಟ್ಟಿಕೊಂಡಿತು. ಈ ಘರ್ಷಣೆಗಳೆಲ್ಲ ಜಾಗರಿಯಲ್ಲಿ ಪ್ರತಿಬಿಂಬಿತವಾಗಿವೆ. ಇದರಲ್ಲಿ ವರ್ಣಿಸುವ ಮಾಸ್ಟರ್ ಸಾಹೇಬರ ಕುಟುಂಬವು ಒಂದು ರೀತಿಯಾಗಿ ಅಂದಿನ ಭಾರತೀಯ ರಾಜಕೀಯ ಜಗತ್ತಿನ ಸೂಕ್ಷ್ಮ ಪ್ರತಿರೂಪ. ಬಿಲೂ ಕಾಂಗ್ರೆಸ್ ಸೋಷಲಿಸ್ಟ್. ಅವನ ಅಪ್ಪ ಮತ್ತು ಅಮ್ಮ (ಮಾಸ್ಟರ್ ಸಾಹೇಬರು ಮತ್ತು ಅವರ ಪತ್ನಿ) ಗಾಂಧೀವಾದಿ ಕಾಂಗ್ರೆಸ್ ಮತ್ತು ಅವರ [illegible] ಮಗ ನೀಲೂ ಕಮ್ಯೂನಿಸ್ಟ್. ಆಗಸ್ಟ್ ಆಂದೋಳನದ ಪ್ರಚಂಡ ಧಕ್ಕೆ ಈ ಕುಟುಂಬಕ್ಕೆ ಹೊಡೆದಿದೆ. ವಿಶಾಲ ಅರ್ಥದಲ್ಲಿ, ಇಡೀ ಭಾರತ ವರ್ಷಕ್ಕೇ. ಜಾಗರಿಯು ಭಾದುಡಿಯವರ ಮೊಟ್ಟಮೊದಲನೆಯ ಕಾದಂಬರಿ. ಈ ಲೇಖಕರು ರಾಜಕೀಯ ವಿಷಯಗಳನ್ನು ತಮ್ಮ ಕಾದಂಬರಿಗಳಲ್ಲಿ ಬಾರಿ ಬಾರಿಗೂ ಬಳಸಿಕೊಂಡಿರುವರು. *ಚಿತ್ರಗುಪ್ತೇರ್ ಫೈಲ್* (1949) ಎಂಬ ಕಾದಂಬರಿಯಲ್ಲಿ ಮತ್ತು *ಧೋಂಡಾಯಿ ಚರಿತ ಮಾನಸ* ಕಾದಂಬರಿಯ ಮೊದಲನೆಯ ಭಾಗದಲ್ಲಿ ಇದೇ ವಿಷಯ ಬರುತ್ತದೆ. ಇವುಗಳಲ್ಲಿ *ಧೋಂಡಾಯಿ* ನನ್ನ ಅಭಿಪ್ರಾಯದಲ್ಲಿ ಲೇಖಕರ ಶ್ರೇಷ್ಠ ಕೃತಿ. ಈ ಕಾದಂಬರಿಯ ಎರಡನೆಯ ಭಾಗದಲ್ಲಿ ನಲವತ್ತೆರಡರ ಅಗ್ನಿಕಾಂಡವನ್ನು ಅವರು ಚಿತ್ರಣ ಮಾಡಿದ್ದಾರೆ. ಲೇಖಕರ ಅಭಿಜ್ಞತಾ ದೃಷ್ಟಿಯಿಂದ ಅದು ಈ ಘಟನೆಗಳಿಂದ ಎಷ್ಟುಮಟ್ಟಿಗೆ ಪ್ರಭಾವಿತವಾಗಿತ್ತೆಂದು ಇದರಿಂದ ಮನದಟ್ಟಾಗುತ್ತದೆ. ಆಗಸ್ಟ್ ಚಳವಳಿಯಿಂದ ಯುಗಪ್ರವರ್ತಕವಾದ ಒಂದು ರಾಜಕೀಯ ಆಂದೋಳನದ ದಳ್ಳುರಿಯ ಬೆಳಕಿನಲ್ಲಿ ಇವರು ಮನುಷ್ಯರ ಮನಸ್ಸಿನ ಮೇಲಿರುವ ಮುಸುಗನ್ನು ಕಳಚಿ ಹಾಕಿ ಅದರ ಅಂತರಾಳದ ಸ್ವರೂಪವನ್ನು ಕಾಣಲು ಹವಣಿಸಿದ್ದರೂ ರಾಜಕೀಯ ಕಾದಂಬರಿಯ ಆಧಾರದ ಮೇಲೆ ಅವರು ಓದುಗರಿಗೆ ನೀಡಿರುವುದು ಮಾನವೀಯ ವೈಚಿತ್ರ್ಯದ ಕತೆಯ ಒಂದು ರಸಪಾಕ. ಜಾಗರಿಯ ಇನ್ನೊಂದು ವೈಶಿಷ್ಟ್ಯ ಏನೆಂದರೆ ರಾಜನೀತಿಯು ಇದರಲ್ಲಿ ಪ್ರಚಾರವಲ್ಲ. ಕಾದಂಬರಿಯ ರಚನಾತಂತ್ರವನ್ನು ಗಮನಿಸಿದರೆ ಈ ಮಾತು ಸ್ಪಷ್ಟವಾಗುತ್ತವೆ. ಸಂಜೆಯಿಂದ ಮೊದಲಾಗಿ ರಾತ್ರಿ ಕಡೆಯ ಗಳಿಗೆಯವರೆಗಿನ ಉದ್ವೇಗಮಯ

ಹನ್ನೆರಡು ಗಂಟೆಗಳು ಈ ಕಾದಂಬರಿಗೆ ನೆಪಕ್ಕೆ ಮಾತ್ರ ದೊರಕಿರುವ ಅವಧಿ. ಆದರೆ ಈ ತೋರಿಕೆಯ ಹನ್ನೆರಡು ಗಂಟೆಯ ಅವಧಿಯಲ್ಲಿ ಪಾತ್ರಗಳು ಏಕೋಕ್ತಿಯ ಮೂಲಕ ಅಭಿವ್ಯಕ್ತ ಮಾಡುವ ತಮ್ಮ ನೆನಹುಗಳ ಲೋಕವು ವಿಶಾಲ ಅತೀತದ ಕಡೆ ತನ್ನ ಸುದೀರ್ಘ ನೆರಳನ್ನು ಹರಡಿದೆ. ಅಂತರ್ಗತ ಏಕೋಕ್ತಿಗಳಾದುದರಿಂದ ನೆನಪು ಮಾಡಿಕೊಳ್ಳುವ ವ್ಯಕ್ತಿಗಳಿಗೆ ಸಮಯದ ಇತಿ-ಮಿತಿಗಳಿರುವುದಿಲ್ಲ. ಭೂತ-ವರ್ತಮಾನ-ಭವಿಷ್ಯತ್ತುಗಳ ನಡುವೆ ಮನಸ್ಸು ನಿರಂಕುಶವಾಗಿ ಓಡಾಡುತ್ತದೆ. ಇದೇ ಉದಾಹರಣೆಗೆ ಗೋಪಾಲ ಹಾಲದಾರರ ಏಕದಾ (1939) ಎಂಬ ಕಾದಂಬರಿಯಲ್ಲಿ ನಾವು ಒಂದೇ ದಿನದ ಕತೆಯನ್ನು ಓದಿದ್ದೇವೆ. ಅದರಲ್ಲೂ ನಾಯಕನ ಚೇತನಾಪ್ರವಾಹವು ಅನೇಕ ಆನುಷಂಗಿಕ ವಿಷಯಗಳ ನಡುವಣಿಂದ ಹನ್ನೆರಡು ಗಂಟೆಗಳ ಸೀಮಿತ ಸಮಯದ ಆಚೆ ಹಾರಿ ಹೋಗುತ್ತದೆ. ಆದರೆ ಜಾಗರಿ ರಚನಾ ತಂತ್ರದ ವೈಶಿಷ್ಟ್ಯ ಬೇರೆ ಕಾರಣಕ್ಕಾಗಿಯೂ ಅನಿವಾರ್ಯವಾಗಿದೆ. ಇಲ್ಲಿ ವರ್ಣಿಸಿರುವ ಇಡೀ ರಾತ್ರಿಯು ಒಂದೇ ನಾಟಕದ ಕಡೆಯ ದೃಶ್ಯ. ಒಂದು ವಿಶಾಲ ಪರದೆಯ ಹಿಂದೆ ನಾಲ್ಕು ವ್ಯಕ್ತಿಗಳಿಗೆ ಪರಸ್ಪರ ಸಂಭಾಷಣೆಗಳಿಗಿಂತ ಹೆಚ್ಚಾಗಿ ಅವಶ್ಯಕವಾಗಿದ್ದುದು ತಮ್ಮ ತಮ್ಮ ದೀರ್ಘ ಸ್ವಗತೋಕ್ತಿಗಳನ್ನು ವ್ಯಕ್ತಮಾಡಬೇಕೆಂದು. ಗೊತ್ತು ಮಾಡಿದ್ದ ಭಯಂಕರ ಗಳಿಗೆಯ ಹೆಜ್ಜೆ ಸಪ್ಪಳಗಳನ್ನು ಎಣಿಸುತ್ತ ಎಣಿಸುತ್ತ ಆ ನಾಲ್ಕು ಜನರೂ ಪರಸ್ಪರ ಪೋಣಿಸಿಕೊಂಡ ಒಂದು ಜಗತ್ತು ಅಥವಾ ನಾಲ್ಕು ವಿಶ್ವಾನುಭೂತಿಗಳು ನಮ್ಮ ಮುಂದೆ ಮೂರ್ತವಾಗಿ ನಿಲ್ಲುತ್ತವೆ. ಇಷ್ಟಾದರೂ ಈ ರಚನಾತಂತ್ರದ ಫಲವಾಗಿ ನಾಟಕೀಯವಾದ ಪರಿಸಮಾಪ್ತಿಯು ಸಹ ಕಡೆಯ ಗಳಿಗೆಯವರೆಗೆ ಅನಾವೃತವಾಗದೆ ಹೋಗುತ್ತದೆ. ಇನ್ನೊಂದು ಕಾರಣಕ್ಕಾಗಿಯೂ ಈ ರಚನಾತಂತ್ರ ಅನಿವಾರ್ಯವಾಗಬೇಕಾಯಿತು. ಲೇಖಕರು [illegible] ರಾಜಕೀಯ ಉದ್ದೇಶ್ಯಕ್ಕಾಗಿಯೂ ಈ ಕತೆ ಬರೆದಿಲ್ಲ. ನೀಲೂ ಪಾತ್ರವನ್ನು [illegible] ಭೂಮಿಕೆಯಲ್ಲಿ ನಿಲ್ಲುವಂತೆ ಮಾಡುವುದಕ್ಕೆ ಇದು ಅವಶ್ಯಕವಾಗಿತ್ತು. ವಾಡಿಕೆಯಂತೆ [illegible] ಕಾದಂಬರಿಗಳ ರಚನಾತಂತ್ರವನ್ನು ಉಪಯೋಗಿಸಿದ್ದಲ್ಲಿ ನೀಲೂವನ್ನು ಹೀಗೆ ಒಳಗಡೆಯಿಂದ ನೋಡಿ ಅರಿಯಲು ಸಾಧ್ಯವಾಗುತ್ತಿರಲಿಲ್ಲ. ಪಾರ್ಟಿ ಕರ್ಮಚಾರಿಯಲ್ಲ, ಮನುಷ್ಯ ಈ ಕಾದಂಬರಿಯ ವಸ್ತು.

-ಸರೋಜ್ ಬಂದ್ಯೋಪಾಧ್ಯಾಯ

# ಕಂಡೆಮ್ಡ್ ಸೆಲ್

ಎರಡನೆಯ ನಂಬರು ವಾರ್ಡಿನ ಮುಂದೆ ಇರುವ ಅರಳೀಮರದ ನೆತ್ತಿಯ ಮೇಲೆ ಸಂಜೆಯ ಮ್ಲಾನವಾದ ಬೆಳಕು ಮಿನುಗುತ್ತಿದೆ. ನೂರಾರು ಹಕ್ಕಿಗಳು ರೆಂಬೆಗಳಿಂದ ರೆಂಬೆಗಳಿಗೆ ಹಾರಾಡುತ್ತಿವೆ. ಒಂದು ಗಳಿಗೆ ಸಹ ಸುಮ್ಮನಿರುವುದಿಲ್ಲ. ಇನ್ನೇನು, ಈಗಲೋ ಆಗಲೋ, ನಾಲ್ಕೂ ಕಡೆ ಕತ್ತಲ ತೆರೆ ಕಳಚಿ ಬೀಳುತ್ತದೆ. ಆಮೇಲೆ ಎಲ್ಲೆಲ್ಲೂ ಮೌನದ ರಾಜ್ಯ. ಅದಕ್ಕೇ ಏನೋ ಬಹುಶಃ ಕಡೆಯ ಗಳಿಗೆಯಲ್ಲಿ ಇಷ್ಟು ಗಡಿಬಿಡಿ; ಈ ರೆಕ್ಕೆಗಳ ಝಟಪಟ ಈ ಕೇಕೆ, ಕೋಲಾಹಲ. ಕಾಲದ ಕಡೆಯಿಂದ ಎಷ್ಟು ಆನಂದ ಕಸಿಯಬಹುದೋ ಅಷ್ಟೂ ಕಸಿದುಕೊಳ್ಳಬೇಕೆಂಬ ತವಕ. ನಿಜವಾಗಿ, ಈ ಹಕ್ಕಿಗಳು ಸಂಜೆಯಾಗುತ್ತಲೂ ಹೀಗೆ ಚಂಚಲವಾಗುವುದು ಇದಕ್ಕೇ ಏನು ?

ನಾನೂ ಈ ಸೆಲ್ಲಿಗೆ ವರ್ಗವಾಗುವ ಮೊದಲು ಎರಡನೆಯ ನಂಬರು ವಾರ್ಡಿನಲ್ಲಿದ್ದಾಗ ಸಂಜೆ ಇತರ ಖೈದಿಗಳೊಂದಿಗೆ ಒಳಗೆ ಕೂಡಿ ಹಾಕುವುದಕ್ಕೆ ಮುನ್ನ ಅವರೊಂದಿಗೆ ಸೇರಿ ಹೊರಗಡೆ ಬಯಲಿನ ಹವೆಯನ್ನು ಆದಷ್ಟೂ ಸೇವಿಸಿ ಬರುತ್ತಿದ್ದೆ. ನಿಜವಾಗಿ, ಏತರ ಸಲುವಾಗಿ ? ಬಹುಶಃ ಬೇರೆ ಏತಕ್ಕೂ ಅಲ್ಲ. ಕೋಣೆಯೊಳಗೆ ಕೂತಿದ್ದೆ. ಅಲ್ಲೇ ಇರಬಹುದಾಗಿತ್ತು. ಹೊರಗಡೆ ಬರುವುದಕ್ಕೆ ಕಾರಣವೇನಿತ್ತು ? ಆದರೂ ಒಮ್ಮೆ ಹೋಗಬೇಕೆನ್ನಿಸುತ್ತಿತ್ತು. ನಾನೊಬ್ಬನೇ ಅಲ್ಲ.... ಬೇರೆಲ್ಲ ರಾಜಕೀಯ ಖೈದಿಗಳಿಗೂ ಹಾಗೇ ಅನ್ನಿಸುತ್ತಿತ್ತು. ಅದನ್ನು ನಾನು ಗಮನಿಸಿದ್ದೇನೆ. ಈ ವಾರ್ಡರುಗಳಿಗೆಲ್ಲ ಏಕೋ ಕೋಪ. ತಮ್ಮ ತಮ್ಮೊಳಗೇ ಏನೇನೋ ಗೊಣಗಿಕೊಳ್ಳುತ್ತಿದ್ದರು. ಈ ರಾಜಕೀಯ ಖೈದಿಗಳು ತಮ್ಮನ್ನೆಲ್ಲ ಸುಮ್ಮಸುಮ್ಮನೆ ಪೀಡಿಸುತ್ತಿರುವ ಹಾಗೆ. ಎಲ್ಲಾದರೂ ಉಂಟೆ ? ನಮ್ಮಲ್ಲಿ ಯಾರಿಗೂ ಅಂತಹ ಉದ್ದೇಶವೇನಿಲ್ಲ. ಅವಕಾಶವಿರುವಾಗ ಬಯಲಿನಲ್ಲಿ ನಿರ್ಬಂಧವಿಲ್ಲದೆ ಗಾಳಿ ಸೇವನೆ ಮಾಡುವ ಸುಖ ಸಿಕ್ಕಷ್ಟು ಅನುಭವಿಸಿದರೆ ತಪ್ಪೇನು ?

ಆ ಕಡೆ ರಾತ್ರಿಯಾದರೂ ಸಹ ಇನ್ನೂ ರೆಕ್ಕೆಗಳನ್ನು ಬಿಚ್ಚಿ ಹಾರುತ್ತಿರುವ ಹಕ್ಕಿಗಳು ಕಾಗೆಗಳೇನೋ ? ಇಷ್ಟು ದೂರದಿಂದ ಹೇಳಲಾಗುವುದಿಲ್ಲ.

ಹಿಂದೆ ಒಮ್ಮೆ ಬಕಡೀ ಕೋಲಿನಲ್ಲಿ ಸಭೆ ಪೂರೈಸಿಕೊಂಡು ವಾಪಸ್ಸು ಬರುವಾಗ ಕಾಮಾಕ್ಷೀ ಖಾನಾದ ದೊಡ್ಡ ಆಲದಮರದ ಅಡಿಯಲ್ಲಿ ಇಡೀ ರಾತ್ರಿ ನಾವೆಲ್ಲ ತಂಗಬೇಕಾಯಿತು. ಆ ಸ್ಥಳದ ಮಣ್ಣಿನ ಮೇಲೆ ಮಲಗಿಕೊಂಡಿದ್ದರೆ ಕುಷ್ಠರೋಗ ವಾಸಿಯಾಗುವುದಂತೆ! ಆ ಆಸೆಯಿಂದಲೇ ಅನೇಕ ಮಂದಿ ರೋಗಿಗಳು ಎಷ್ಟೋ ದೂರದ ಊರುಗಳಿಂದ ಬರುತ್ತಾರೆ. ಸುತ್ತಮುತ್ತಲ ಮರಗಳ ಕೆಳಗಡೆ ಮಲಗಿಕೊಂಡಿದ್ದವರು ಅವರೇ ಏನೋ! ಆಗ ನನ್ನ ಜೊತೆಯಲ್ಲಿ ನೀಲೂ ಇದ್ದ. ಬಹುಶಃ ಈ ಸಹದೇವನೂ ಇದ್ದ ಎಂದೆನಿಸುತ್ತದೆ. ಇಡೀ ರಾತ್ರಿ ನಾವು ಕಣ್ಣು

ಮುಚ್ಚಿದ್ದರೆ ಸರಿ! ಅದೇನು ಹಕ್ಕಿಗಳ ರೆಕ್ಕೆ ಬಡಿದಾಡುವಿಕೆ! ಮರದ ಕೆಳಗೆ ನಾವು ಮಗ್ಗುಲು ಮಗ್ಗುಲಾಗಿ ಮಲಗಿದ್ದೆವು. ಈ ಮರದಡಿ ಬಂದು ಮಲಗಲು ತನ್ನನ್ನು ಎಳೆದುಕೊಂಡು ಬಂದನಲ್ಲ ಎಂದು ನೀಲುವಿಗೆ ಕೋಪ. ನಾನು ಅವನನ್ನು ಈ ಹಕ್ಕಿಗಳು ಏಕೆ ಹೀಗೇಕೆ ಬಡಿದಾಡಿಕೊಳ್ಳುತ್ತವೆ ಎಂದು ಕೇಳಿದೆ. ಅದಕ್ಕೆ ಅವನು, "ಇನ್ನ್ಯಾಕೆ? ಇರುವೆಗಿರುವೆ ಕಚ್ಚುತ್ತವೆ ಅಂತ ಕಾಣುತ್ತೆ" ಅನ್ನುವುದೇ? ಅವನು ಯಾವಾಗಲೂ ಹೀಗೇ. ಯೋಚನೆ ಮಾಡುವುದಕ್ಕೆ ಸಮಯವೇ ಬೇಡ. ಎಲ್ಲ ಪ್ರಶ್ನೆಗಳಿಗೂ ಒಂದು ಉತ್ತರ ತಯಾರಾಗಿರುತ್ತದೆ ಅವನ ತುಟಿಗಳ ಮೇಲೆ. ಯಾವ ವಿಷಯ ಕೇಳಿ, ಅವನಿಗೊಂದು ಸ್ಥಿರವಾದ ಅಭಿಪ್ರಾಯ ಇರುತ್ತದೆ. ಯಾರೇನು ಹೇಳಿದರೂ ಜಗ್ಗಿದರೆ ಸೈ, ನಮ್ಮ ನೀಲು!

ಸಂಜೆಯ ಕೆಂಪು ಬೆಳಕು ಕ್ರಮೇಣ ಕಂದು ಬಣ್ಣಕ್ಕೆ ತಿರುಗುತ್ತಿದೆ. ಅರಳೀಮರದ ನೆತ್ತಿಯ ಮೇಲಣ ಬೈತಲೆಯ ಮೇಲೆ ಮುಗಿಲಿನ ಮಾಸಲು ಕೆಂಪಿನ ಕುಂಕುಮ! (ಸಿಂಧೂರ). ಮರದ ಎಲೆಗಳೀಗ ಹಸುರೆಂದು ಕರೆಸಿಕೊಳ್ಳುವ ಹಾಗಿಲ್ಲ..... ಹೋದರೆ ಹೋಗಲಿ. ಮರದ ಎಲೆಗಳ ಹಸಿರು ಸಹ ಹೋಯಿತು. ಅದೊಂದೇ ಇಲ್ಲಿ ಕಾಣಿಸುತ್ತ ಇದ್ದ ಹಸಿರು! ಅದನ್ನು ಬಿಟ್ಟರೆ ಇನ್ನು ಇರುವುದು ಒಂದು ತುಣುಕು ನೀಲಿ ಆಕಾಶ, ನನ್ನ ಪಾಲಿಗೆ. ಅದೂ ಕಬ್ಬಿಣದ ಸಲಾಕೆಗಳ ಸಂದಿನಿಂದ ಎಷ್ಟು ಕಾಣಬಹುದೋ ಅಷ್ಟು ಮಾತ್ರ. ಕಬ್ಬಿಣದ ತಂತಿಗಳ ಟೋಸ್ಟರಿನ ಮಧ್ಯೆ ಒಂದು ತುಂಡು ಬ್ರೆಡ್ಡಿನಂತೆ (ಸೆಲ್ಲಿನ ಬಂದಿಗಳ ದೃಷ್ಟಿಗೆ ಬೀಳುವುದು ಅದೇ. ಆದರೆ ಈ ಸೌಕರ್ಯ, ಪಾಪ, 'ಸಿ' ಕ್ಲಾಸಿನ ಖೈದಿಗಳ ಪಾಲಿಗೆ ಸೊನ್ನೆ!) ಈ ನೀಲಿ ಆಕಾಶವಲ್ಲದೆ, ಇನ್ನೊಂದು ದೃಷ್ಟಿಗೆ ಬೀಳುವುದೇನೆಂದರೆ ಜೈಲಿನ ಗೋಡೆಯ ಮೇಲುಗಡೆ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆದಿರುವ 'ಪೂರ್ಣಿಯಾ ಸೆಂಟ್ರಲ್ ಜೈಲ್ ಬಿಹಾರ್ ಎಂಬ ನಮ್ಮ ಬಂದೀಖಾನೆಯ ನಾಮಫಲಕ! ಈ ಸುಂದರ ನೀಲಿ ಆಕಾಶದ ತುಣುಕು ನನ್ನ ಪಾಲಿಗಿರುವ ಪ್ರತ್ಯೇಕ ಐಶ್ವರ್ಯ.... ಅದರ ಸುಖವನ್ನು ಎಷ್ಟು ಸವಿಯಬಹುದೋ ಅಷ್ಟನ್ನೂ ಸವಿದುಬಿಟ್ಟಿದ್ದೇನೆ. ಆ ತಿಳಿ ನೀಲಿ ಬಣ್ಣದ ಸೊಬಗನ್ನು ಎಷ್ಟು ನೋಡಿದರೂ ತೃಪ್ತಿಯಿಲ್ಲ. ಇಂತಹ ಅಸಾಧಾರಣ ಸುಖ ನನಗೆ ಲಭಿಸಿರುವ ಹಾಗೆ ಮತ್ತಾರಿಗೆ ಲಭಿಸಿದೆ? ನನ್ನ ಈ ಮೆಚ್ಚಿನ ನೀಲಿ ಆಕಾಶ ಗಳಿಗೆ ಗಳಿಗೆಗೂ ರೂಪ ಬದಲಾಯಿಸುತ್ತ ಇರುತ್ತದೆ.... ಆಗಲೇ ಕುಂಕುಮದ ಬಣ್ಣ ಹೋಗಿ ಕೆನ್ನೀಲಿ. ಇಂಥ ಅಮೂಲ್ಯವಾದ ರಸಾನುಭವದ ಸೌಕರ್ಯ ನನ್ನಂಥ, ಎಲ್ಲಾ ಕಳೆದುಕೊಂಡ ಜುಜುಬಿ, ಪರದೇಸಿ ಖೈದಿಗೆ ದೊರೆಯುವಂತೆ ಮಾಡಿದ್ದಾನಲ್ಲ, ಈ ಜೈಲು ಸಾಹೇಬ, ಅದು ಹೇಗೆ? ನನಗಂತೂ ಅರ್ಥವಾಗುವುದಿಲ್ಲ. ಬಹುಶಃ ಆತನಿಗೆ ಗೊತ್ತಾಗಿಲ್ಲ ಅಂತ ಕಾಣುತ್ತೆ. ಗೊತ್ತಾಗಿ ಹೋದರೆ, ಬಹುಶಃ ನಾಳೆಯೇ "ಕಮ್ಯಾಂಡರ್" ಖೈದಿಗಳಿಗೆ* ನನ್ನ ಎದುರುಗಡೆ ಇರುವ ಪೌಳೀ ಗೋಡೆಯನ್ನು ಇನ್ನೂ ಎತ್ತರವಾಗಿ ಏರಿಸುವಂತೆ ಆಜ್ಞೆ ಮಾಡಿದರೂ ಮಾಡಬಹುದು. "ಹ್ಞೂ.... ಕಟ್ಟಿರೋ... ಇನ್ನೂ ಎತ್ತರ ತುಂಬಾ ಎತ್ತರ ಎಷ್ಟು ಎತ್ತರ ಅಂದರೆ ಅಗತ್ಯವಿದ್ದರೆ ಆಕಾಶದೆತ್ತರ ಹಾಕಿರೋ ಇಟ್ಟಿಗೆ?" ಎಂದು ಹುಕುಂ ಮಾಡಿದರೂ ಮಾಡುತ್ತಾನೆ.

*ಚಾಕರಿ ವಹಿಸಿರುವ ಕೆಲವು ಖೈದಿಗಳು

ಈ ಮರದ ಹಸಿರು ಎಲೆಗಳು, ಈ ಸುಂದರ ನೀಲಿ ಆಕಾಶ - ಇವೆರಡನ್ನು ಬಿಟ್ಟರೆ ಇಲ್ಲಿ ಸದಾ ಕಣ್ಣಿಗೆ ಬೀಳುವುದೆಂದರೆ ಕಬ್ಬಿಣ, ಇಟ್ಟಿಗೆ, ಸಿಮೆಂಟ್, ಸಿಮೆಂಟ್ ಇಟ್ಟಿಗೆ, ಕಬ್ಬಿಣ -ಬರೇ ಇವೇ! ಇವುಗಳು ಕಣ್ಣನ್ನು ಆಕರ್ಷಿಸುವುದಿಲ್ಲ ನಿಜ. ಆದರೆ ಅಷ್ಟೇ ಅಲ್ಲ ಅದರ ಬದಲಾಗಿ ಕಣ್ಣನ್ನು ಚುಚ್ಚುತ್ತವೆ. ದೃಷ್ಟಿಗೆ ಹೊಡೆದು ತಲೆ ತಿರುಗುವಂತೆ ಮಾಡುತ್ತವೆ. ಈ ಹಸಿರು, ಈ ನೀಲಿ.... ಇವೆರಡರ ಹೊರತಾಗಿ ಕಣ್ಣಿಗೆ ಬೀಳುವ ಬೇರೆಲ್ಲ ಬಣ್ಣಗಳೂ ಬೀಭತ್ಸವಾಗಿರುತ್ತವೆ. ಮನಸ್ಸಿಗೆ ಹೇಸಿಗೆ ಹುಟ್ಟಿಸುತ್ತದೆ. ಕಣ್ಣನ್ನು ನೋಯಿಸುತ್ತವೆ. ಸೆಲ್ಲಿನ ಒಳಗಡೆಯ ಗೋಡೆಗಳೂ ಸಹ ನಿರ್ಜೀವ.... ಎಲ್ಲಾ ಬಣ್ಣಗೆಟ್ಟ ಸ್ವರೂಪ. ಅವುಗಳಿಗೆ ಸುಣ್ಣ ಬಳಿದು ಎಷ್ಟು ಯುಗಗಳಾಗಿದ್ದುವೋ! ಎಲ್ಲಾ ಕಡೆಯೂ ಯಾವ ಯಾವುದೋ ಕರೆಗಳು, ಮಚ್ಚೆಗಳು.... ಎಷ್ಟೋ ವಿಳ್ಳೇದೆಲೆ ಅಗಿದು ಉಗಿದಿರುವ ಕಲೆಗಳು. ಬಹುಶಃ ನನ್ನ ಹಿಂದೆ ಇಲ್ಲಿ ಕೂಡಿಡಲಾಗಿದ್ದ ಖೈದಿಯೊಬ್ಬನಿಗೆ ವಾರ್ಡರುಗಳು 'ಖಯನಿ' (ಹೊಗೇಸೊಪ್ಪಿನ ಪುಡಿ) ತಿನ್ನಿಸಿರಬೇಕು. ಅವನೀಗ ಬಿಡುಗಡೆ ಹೊಂದಿ ಯಾವ ಗುರುತಿಲ್ಲದ ಪ್ರದೇಶಕ್ಕೆ ಹೋಗಿ ತಲೆ ಮರೆಸಿಕೊಂಡಿದ್ದಾನೋ ಯಾರಿಗೆ ಗೊತ್ತು. ಆದರೆ ತನ್ನ ಜ್ಞಾಪಕಾರ್ಥವಾಗಿ ವಾರ್ಡರುಗಳನ್ನು ಉದ್ದೇಶಿಸಿ ಗೋಡೆಯ ಮೇಲೆಲ್ಲ "ತನ್ನ ಕೃತಜ್ಞತೆ" ಬರೆದು ಹೋಗುವುದನ್ನು ಮಾತ್ರ ಮರೆತಿಲ್ಲ!

ಸಂಗಡ ಮಾತಾಡುವುದಕ್ಕೆ ಒಬ್ಬರೂ ಇಲ್ಲ. ಆ ಕಾರಣದಿಂದ ಸೆಲ್ಲಿನ ಹೊರಗಡೆಯ ಜೈಲು ಪ್ರಪಂಚದೊಂದಿಗೆ ನನಗಿರುವ ಸಂಪರ್ಕ ಕೇವಲ ಕಿವಿಗೆ ಬೀಳುವ ಶಬ್ದಗಳಿಂದ. ವಾರ್ಡರನೊಬ್ಬನ ಸಂಗಡ ಮಾತ್ರ ನನಗೆ ಮಾತಾಡುವ ಅವಕಾಶ. ಅದಂತೂ ನನಗೆ ಇಷ್ಟವಾಗುವಂಥದಲ್ಲ. ನಾಲ್ಕೂ ಕಡೆ ಗೋಡೆಗಳು. ಯಾವ ಕಡೆ ಕಣ್ಣು ತಿರುಗಿಸಿದರೂ ದೃಷ್ಟಿಗೆ ಪೆಟ್ಟು ಬಿದ್ದು ಹಿಂದೆ ಬರುತ್ತದೆ. ಆದರೆ ಹೊರಗಡೆಯಿಂದ ಯಾವುದಾದರೂ ಶಬ್ದ ಕೇಳಿ ಬರುತ್ತದೇನೋ ಎಂದು ಕಾತರದಿಂದ ಕಿವಿಯಾನಿಸಿಕೊಂಡೇ ಇರುತ್ತೇನೆ. ಹದಿನಾರು ಅಡಿ ಉದ್ದ, ಹತ್ತು ಅಡಿ ಅಗಲ ಇರುವ ಕೋಣೆ ಅದು. ಮುಂದುಗಡೆ ಕಬ್ಬಿಣದ ಸಲಾಕೆಗಳುಳ್ಳ ಬಾಗಿಲು. ಬಲಗಡೆಯ ಗೋಡೆಯ ಮೇಲುಭಾಗದಲ್ಲಿ ಸಣ್ಣದೊಂದು ಗವಾಕ್ಷಿ. ಅದೇ ಗೋಡೆಯ ತಳಭಾಗದಲ್ಲಿ ನೆಲಕ್ಕೆ ಸೇರಿಕೊಂಡಂತೆ ಒಂದು ಮಾರು ಅಗಲ, ಒಂದೂವರೆ ಮಾರು ಉದ್ದ ಇರುವ ದಪ್ಪನೆಯ ಕಬ್ಬಿಣದ ತಗಡುಗಳೆರಡನ್ನು ಗೋಡೆಗೆ ಹೊಡೆದಿದ್ದಾರೆ. ಅವುಗಳ ಪ್ರಯೋಜನವೇನೋ ನನಗೆ ಗೊತ್ತಾಗಿಲ್ಲ. ಬಹುಶಃ ಅದರ ಮಧ್ಯೆ ಇರುವ ರಂಧ್ರಗಳಿಂದ ಗಾಳಿ ಒಳಗೆ ಬರಲೆಂದೋ ಏನೋ! ಅಥವಾ ಖೈದಿಗಳು ಒಳಗಡೆ ಏನು ಮಾಡುತ್ತಿದ್ದಾರೋ ಎಂಬುದನ್ನು ವಾರ್ಡರುಗಳು ಹೊರಗಿನಿಂದ ಚೆನ್ನಾಗಿ ನೋಡಬಹುದೆಂದೇನೋ! ಅಂತೂ ಹೀಗೇ ಎಂದು ಹೇಳುವುದಕ್ಕಾಗದು. ಸೆಲ್ಲಿನ ಸಾಮಾನುಗಳಲ್ಲಿ ಒಂದುಕಡೆ ಎರಡು ಮಣ್ಣಿನ ಮಡಕೆಗಳಿವೆ. ಅವುಗಳ ಸುತ್ತ ಡಾಂಬರನ್ನು ಹಚ್ಚಲಾಗಿದೆ. (ಜೈಲಿನವರ ಭಾಷೆಯಲ್ಲಿ ಇವಕ್ಕೆ 'ಟೋಕರಿ' ಎನ್ನುತ್ತಾರೆ.) ಈ ಜಾಗದಲ್ಲಿ ಮಾತ್ರ ಸ್ವಲ್ಪ ಸುಣ್ಣದ ಕೆಲಸ ಮಾಡಲಾಗಿದೆ. ವೃತ್ತದ ಚತುರ್ಥಾಂಶ ಆಕಾರದಲ್ಲಿ ಸೆಲ್ಲಿನ ಹೊರಗಡೆ ಗವಾಕ್ಷವಿರುವ ಗೋಡೆಯ ದಿಕ್ಕಿನಲ್ಲಿ ಗೋಡೆಯ ಪಕ್ಕದಲ್ಲೇ ಸುಮಾರು ಅಗಲವಿರುವ ಪಕ್ಕಾ ರಸ್ತೆ

ಹೋಗುತ್ತದೆ. ಈ ರಸ್ತೆ ವೃತ್ತಾಕಾರದಲ್ಲಿ ಜೈಲಿನ ಎಲ್ಲ ವಾರ್ಡುಗಳನ್ನೂ ಸುತ್ತುವರೆದಿದೆ. ಈ ರಸ್ತೆಯ ಆಚೆಯ • ಬದಿಯಲ್ಲಿಯೇ ಜೈಲು ಆಸ್ಪತ್ರೆಯ ಹೊರಗೋಡೆ. ಈ ರಸ್ತೆಯ ಮೇಲೆ ಎಷ್ಟೋ ಮಂದಿ ಹಾದು ಹೋಗುತ್ತಾರೆ. ಖೈದಿಗಳ ವಾರ್ಡರುಗಳು, ಡಾಕ್ಟರು, ಕಾಂಪೌಂಡರುಗಳು, ಕಂಟ್ರಾಕ್ಟರುಗಳು, ಮೇಸ್ತ್ರಿಗಳು, ಆಫೀಸರುಗಳು- ಇಂಥವರೇ ಅಲ್ಲದೆ ಇನ್ನೂ ಇತರರೆಷ್ಟೋ ಮಂದಿ. ಹಗಲು ಹೊತ್ತಂತೂ ಜನ ಓಡಾಡುವುದು ನೋಡಿದರೆ ಸಣ್ಣ ಪಟ್ಟಣದ ದೊಡ್ಡ ರಸ್ತೆಯೇನೋ ಎಂದು ಅನ್ನಿಸುತ್ತದೆ. ಮತ್ತೆ, ಇಷ್ಟು ದೊಡ್ಡದಾಗಿರುವ ಪೂರ್ಣಿಯಾ ಸೆಂಟ್ರಲ್ ಜೈಲು ಅಂದರೆ ಸಾಮಾನ್ಯವೇ ? ಯಾವ ಶಹರಿಗೆ ಕಮ್ಮಿ? ಸಾಧಾರಣ ಸಮಯದಲ್ಲೇ ಇಲ್ಲಿ ಸುಮಾರು ಎರಡು ಸಾವಿರದ ಐನೂರು ಜನ ಖೈದಿಗಳಿರುತ್ತಾರೆ. ಆದರೆ ಈಗಂತೂ ಅಂದರೆ, ಸಾವಿರದ ಒಂಬೈನೂರ ನಲವತ್ತೆರಡನೆ ಇಸವಿ, ಮೇ ತಿಂಗಳಲ್ಲಿ ಸುಮಾರು ನಾಲ್ಕೂವರೆ ಸಾವಿರ ಖೈದಿಗಳಿರುತ್ತಾರೆ! ಇನ್ನೂ ಹೆಚ್ಚಾಗದಿದ್ದರೆ ಆಶ್ಚರ್ಯ. ಹೇಗೆ ಹೆಚ್ಚಾಗಬೇಕು ? ಹೊರಗಡೆ ಸಾವಿರಾರು ಮಂದಿ ಹೊಟ್ಟೆಗೆ ರೊಟ್ಟಿಯಿಲ್ಲದೆ ಬೀದಿಯಲ್ಲಿ ಬಿದ್ದು ಸತ್ತರೂ ಚಿಂತೆಯಿಲ್ಲ, ಆದರೆ ನಮ್ಮ ದೇಶದ ಸರ್ಕಾರವನ್ನು ಎದುರು ಹಾಕಿಕೊಂಡು ಏನಾದರೂ ಮಾಡಿ ಜೈಲಿಗೆ ಹೋಗು ಅಂದರೆ, ಉಹೂಂ! ಒಂದು ಸಲ 'ಇನ್ಕಿಲಾಬ್ ಜಿಂದಾಬಾದ್' (ಕ್ರಾಂತಿಗೆ ಜಯವಾಗಲಿ) ಎಂದು ಘೋಷಣೆ ಮಾಡಿದರೆ ಸಾಕು. ಇಲ್ಲವೇ ಯಾವುದಾದರೂ ದಿನಸಿ ಅಂಗಡಿಗೋ ಮಿಠಾಯಿ ಅಂಗಡಿಗೋ ಮುತ್ತಿಗೆ ಹಾಕಿ ಹೊಟ್ಟೆ ತುಂಬಿಸಿಕೊಂಡರೆ ಸಾಕು - ಕಡಮೆ ಅಂದರೆ, ಆರು ತಿಂಗಳವರೆಗೂ ಆರಾಮವಾಗಿ ಹೊಟ್ಟೆಗೆ ಅನ್ನ, ನೀರು.... ಮಲಗಲು ಸುರಕ್ಷಿತವಾದ ಒಂದು ಜಾಗ ಸಿಕ್ಕೇ ಸಿಗುತ್ತದೆ.... ಆದರೆ ಎಲ್ಲಿ ? ಯಾರು, ಎಷ್ಟು ಜನ ಮಾಡುತ್ತಾರೆ ಹಾಗೆ ? ಹೊಟ್ಟೆಗಿಲ್ಲದೆ ಸುಮ್ಮನೆ ಸತ್ತರೆ ಯಾರನ್ನು ಉದ್ಧಾರ ಮಾಡಿದ ಹಾಗಾಯಿತು ? ನಾಲ್ಕೂವರೆ ಸಾವಿರ ಜನ! ಯಾವುದೇ ಊರಿನಲ್ಲಿ ಐದು ಸಾವಿರ ಜನ ವಾಸಮಾಡುವವರಿದ್ದರೆ ಅದೊಂದು ಮ್ಯುನಿಸಿಪಾಲಿಟಿ ಅನ್ನಿಸಿಕೊಂಡು ಬಿಡುತ್ತದೆ. ಈ ಜೈಲು ಸಹ ಹಾಗೇ ಒಂದು ಸಣ್ಣ ಊರು ಅನ್ನಿ. ಈ ಊರನ್ನು 'ಲೋಹಾ ಗರಾದ್' (ಕಬ್ಬಿಣದ ಸಲಾಕೆ) ಎಂದು ಹೆಸರಿಟ್ಟು ಕರೆಯಬಹುದು. 'ಲೆನಿನ್ ಗರಾದ್' ಎಂಬ ಹೆಸರಿನೊಂದಿಗೆ ಪ್ರಾಸ ಹೊಂದಿಕೊಳ್ಳುತ್ತದೆ! ಆಗಾಗ ನನ್ನ ಕೋಣೆಯ ಗೋಡೆಯಲ್ಲಿ ಅಡಕ ಮಾಡಿರುವ ಆ ಕಬ್ಬಿಣದ ತಗಡಿನ ತೂತಿಗೆ ಕಿವಿಯಿಟ್ಟು ಕೂತಿರುತ್ತೇನೆ. ಆಹಾ! ಮನುಷ್ಯರ ಕೊರಳ ದನಿ ಅದೆಷ್ಟು ಇಂಪಾಗಿರುತ್ತದೋ! ಜೈಲಿನ ಒಳಗಡೆಯ ಪಾಲಿಟಿಕ್ಸ್ (ರಾಜಕೀಯ) ಹೊರಗಡೆಯ ಪಾಲಿಟಿಕ್ಸ್ ಇಲ್ಲಿ ಕೂತು ಕೇಳಿದರು ಸಾಕು, ಎಲ್ಲಾ ತಿಳಿದು ಹೋಗುತ್ತದೆ. ಸೂಪರಿಂಟೆಂಡೆಂಟರೊಂದಿಗೆ ಜೈಲರ್ ಸಾಹೇಬ ಹೊಂದಿಕೊಂಡು ಹೋಗುವುದಿಲ್ಲ. ಹೆಡ್ ಜಮಾದಾರನನ್ನು ಜೈಲರ್ ಸಾಹೇಬ 'ಆಪ್' (ತಾವು) ಎಂದು ಸಂಬೋಧಿಸುತ್ತಾನೋ, ಇಲ್ಲವೇ, ತುಮ್ (ನೀನು) ಎಂದೋ.... ಜಪಾನಿಗಳ ರಣಕೌಶಲದ ವ್ಯಾಖ್ಯಾನ, ಬರ್ಮಾ ದೇಶದಿಂದ (ಜಪಾನರ ವಶವಾಗುವುದಕ್ಕೆ ಮುಂಚೆ) ನಮ್ಮ ದೇಶಕ್ಕೆ ಕರೆ ತರಿಸಿದ ಜೈಲ್ ನೌಕರರು ಹೇಗೆ ನಮ್ಮ ಬಿಹಾರಿ ಜೈಲ್

ನೌಕರರನ್ನು ಮೂಲೆಗೆ ತಳ್ಳಿದ್ದಾರೆ, ಜೈಲಿನ 'ಜನಸಂಖ್ಯೆ' ಮಿತಿಮೀರಿ ಬೆಳೆದದ್ದರಿಂದ ಎಷ್ಟು ಮಂದಿ ಖೈದಿಗಳನ್ನು ಸುಮ್ಮಸುಮ್ಮನೆ ಬಿಡುಗಡೆ ಮಾಡಲಾಗುತ್ತೆ.... ಇತ್ಯಾದಿ ಇನ್ನೂ ಹೀಗೇ ಎಷ್ಟೋ ವಿಷಯಗಳು ಕಿವಿಗೆ ಬೀಳುತ್ತಾ ಇರುತ್ತವೆ. ಯಾವಾಗಲೋ ಒಮ್ಮೆ ರಾಜಕೀಯ ಖೈದಿಗಳು ಮುಷ್ಕರ ಹೂಡಿದಾಗ ಅವರ ಮೇಲೆ ಲಾಠೀ ಛಾರ್ಜು ಮಾಡಲಾಗಿತ್ತು. ಕೂಡಲೇ ಅದೆಷ್ಟೋ ಬಾರಿ ಆಸ್ಪತ್ರೆಯಿಂದ ಸ್ಟ್ರೆಚರು ಬಂತು ಹೋಯಿತು..... ಬಂತು ಹೋಯಿತು.... ನಾನೂ ಈ ಕೋಣೆಯಲ್ಲಿ ಕೂತೇ ಗಾಯಗೊಂಡವರ ಲೆಕ್ಕ ಮಾಡಿದೆ. 'ಝುಣ ಝುಣ'ವೆಂಬ ಶಬ್ದ ಕೇಳಿದೊಡನೆ, ಯಾವ ಖೈದಿಗೋ ಕೈಕಾಲು ಬೇಡಿ ಹಾಕಬೇಕೆಂದು ಜೈಲರ ಹುಕುಂ ಆಗಿದೆ (ಬಹುಶಃ ಯಾವ ಅಧಿಕಾರಿಯನ್ನೋ ಎದುರು ಹಾಕಿಕೊಂಡ ಕಾರಣ) ಎಂದು ತಿಳಿದುಕೊಳ್ಳಲು ಕಷ್ಟವಾಗಿರಲಿಲ್ಲ.

ಅಬ್ಬ.... ಏನು ಸೊಳ್ಳೆ ಕಾಟ! ಸಂಜೆಯಾದರೆ ಸಾಕು.... ಇವುಗಳ ಹಿಂಸೆ ತಡೆಯಲು ಆಗದು. ಅಂದು ಸೂಪರಿಂಟೆಂಡೆಂಟ್ ಸಾಹೇಬರು ಬಂದು ನನ್ನನ್ನು 'ನಿನಗೇನಾದರೂ ಬೇಕೆ?' ಎಂದು ಕೇಳಿದ್ದರು. ಏನಾದರೂ ಬೇಕಾಗಿದ್ದರೆ, ಸಾಧ್ಯವಿದ್ದರೆ ಕೊಡುತ್ತ ಇದ್ದರೇನೋ. ಚಿಕ್ಕ ವಯಸ್ಸಿನಿಂದಲೂ ನಾನು ಇದರ ಬಗೆಗೆ ಕೇಳುತ್ತ ಬಂದಿದ್ದೇನೆ - 'ಫಾಸಿ' ಶಿಕ್ಷೆಗೆ ಗುರಿಯಾದವರನ್ನು ಹೀಗೆ ಬಂದು ಕೇಳುತ್ತಾರಂತೆ! ಅಂಥವರಲ್ಲಿ ಅನೇಕರು ಒಳ್ಳೆಯ ತಿಂಡಿ ತಿನಿಸುಗಳನ್ನು ತಿನ್ನ ಬಯಸುವರು. ನಮ್ಮ ಹೊಸ ಸೂಪರಿಂಟೆಂಡೆಂಟ್ ಸಾಹೇಬನೂ ನನ್ನಿಂದ ಇಂತಹುದೊಂದು ಬೇಡಿಕೆಯನ್ನು ನಿರೀಕ್ಷಿಸಿದ್ದನೇನೋ! ಒಳ್ಳೆಯದೊಂದು ಸೊಳ್ಳೇ ಪರದೆಯನ್ನು ಕೇಳೋಣವೆಂದು ಅನ್ನಿಸಿತ್ತು. ಕೆಲವು ದಿನಗಳಾದರೂ ಸುಖವಾಗಿ ನಿದ್ದೆ ಮಾಡೋಣ ಎಂದು. ಆದರೆ ಅವರು ಕೇಳಿದಾಗ ಬಾಯಿಬಿಟ್ಟು ಕೇಳಲಾಗಲಿಲ್ಲ, ಏಕೋ.... ಏನೋ ಒಂದು ಬಗೆಯಾಗಿ ನನ್ನ ಆತ್ಮಗೌರವಕ್ಕೆ ಹಾನಿಯಾದೀತೆಂಬ ಅಳುಕೇ? ಅದಕ್ಕೇ ಅವರ ಪ್ರಶ್ನೆಗೆ, "ಏನೂ ಬೇಕಾಗಿಲ್ಲ, ಸಾರ್, ಧನ್ಯವಾದಗಳು. ನನಗೇನೂ ಆವಶ್ಯಕವಿಲ್ಲ. ಆರಾಮವಾಗಿದ್ದೇನೆ" ಎಂದು ಹೇಳಿಬಿಟ್ಟೆ. ವಾರ್ಡರುಗಳು ಆಮೇಲೆ ಹಿಂದೆ ನಡೆದ ಒಂದು ವಿಷಯ ಹೇಳಿದರು. ಒರಿಸ್ಸಾದ ಯಾವುದೋ ಆಶ್ರಿತ ಸಂಸ್ಥಾನದ ಇಬ್ಬರು "ಸ್ವರಾಜ್ಯ" ಬಾಬುಗಳು ಇದೇ ಸೆಲ್ಲಿನಲ್ಲಿ ಇದ್ದರಂತೆ. ಒಬ್ಬನು ಒಂದನೆಯ ನಂಬರು ಸೆಲ್ಲಿನಲ್ಲಿ ಮತ್ತೊಬ್ಬ ಎರಡನೆಯ ನಂಬರಿನಲ್ಲಿ. ಅವರು ಸಾಹೇಬನೊಬ್ಬನನ್ನ ಕೊಲೆ ಮಾಡಿದ್ದರೆಂದು 'ಫಾಸಿ' ಶಿಕ್ಷೆಗೆ ಗುರಿಯಾಗಿದ್ದರು. "ಕೊಲೆ ಮಾಡಿದ್ದರೆ?" ಎಂದು ಅಚ್ಚರಿಯಿಂದ ಕೇಳಿದ್ದಕ್ಕೆ ಅವರು, "ಹೂಂ.... ಒಂದೇ ಸಲಕ್ಕೆ ಪ್ರಾಣ ತೆಗೆದುಬಿಟ್ಟರು.... ಹ್ಞಾ.... ಈಗ ಐದು ವರುಷಗಳ ಮಾತು!" ಎಂದು ಉದ್ಗರಿಸಿದರು. ಅವರು 'ಫಾಸಿ'ಯಾಗುವ ಹಿಂದಿನ ದಿನ ಕೋಳಿ ಮೊಟ್ಟೆಗಳನ್ನು ತರಿಸಿ ಅದನ್ನು ಬೇಯಿಸಿಕೊಂಡು ತಿಂದು ತೃಪ್ತಿಪಟ್ಟರು. ಆಮೇಲೆ ರಾತ್ರಿಯಾಗುತ್ತಲೂ ಶುರು... "ಇನ್‌ಕಿಲಾಬ್ ಜಿಂದಾಬಾದ್" ಮತ್ತು ಇನ್ನೂ ಯಾವ ಯಾವುದೋ ಘೋಷಣೆಗಳನ್ನು ಕೂಗುತ್ತ ಹೋದರು. ರಾತ್ರಿ ಕಡೆಯ ಝಾವದವರೆಗೂ ಗಟ್ಟಿಯಾಗಿ ಒಂದೇ ಸಮನೆ ಕೂಗುತ್ತ ಕಾಲ ಕಳೆದರು. "ಅವತ್ತು ಯಾವ ವಾರ್ಡಿನಲ್ಲೂ ಖೈದಿಗಳು ನಿದ್ದೆ ಮಾಡಿದ್ದರೆ ಕೇಳಿ. ನೀವೂ ಹಾಗೆ

ಏನನ್ನಾದರೂ ಕೇಳಿ ತರಿಸಿಕೊಂಡು ತಿನ್ನಬಹುದಾಗಿತ್ತಲ್ಲ? ಯಾಕೆ ಬೇಡ ಅಂದಿರಿ?"

ಇರಬಹುದು. ವಾರ್ಡರುಗಳ ಮಾತು ನಂಬತಕ್ಕದ್ದೇ. ಆದರೆ ಅವರ ಉಪದೇಶ ಮಾತ್ರ ಹಿಡಿಸಲಿಲ್ಲ. ಈ ವಾರ್ಡರುಗಳಿದ್ದಾರಲ್ಲ? ಅವರಿಗೇನೂ ಓದು, ಬರೆಹ ಬಾರದು, ಶುಂಠರು. ಸಮಯ ಸಿಕ್ಕಿದಾಗೆಲ್ಲ ಕಳ್ಳತನ ಮಾಡುವರು, ಖೈದಿಗಳ ಮೇಲೆ ಜೋರು ಮಾಡುವರು. ದುರ್ಬಲರಾದ ಖೈದಿಗಳ ಮೇಲಂತೂ ಅಮಾನುಷವಾದ ಅತ್ಯಾಚಾರ ಮಾಡುವುದಕ್ಕೆ ಹೇಸುವುದಿಲ್ಲ. ಆದರೆ ಸ್ವಲ್ಪ ಜೋರು ಇರುವ ಖೈದಿಗಳಿಗೆ ಸಲಾಮು ಮಾಡಿ ಅವರಿಗೆ ಅನುಕೂಲವಾದದ್ದೇನಾದರೂ ಮಾಡಿಕೊಡುವರು. ಆದರೂ ಒಟ್ಟಿನಲ್ಲಿ ಇವರಲ್ಲಿ ಬಹು ಮಂದಿ ಸರಳ ಬುದ್ಧಿಯವರು. ಮಾತು, ಕಥೆಯ ಮರ್ಮ ಅರಿಯರು. ಸೌಜನ್ಯವೆಂದರೆ ಏನೋ ಸ್ವಲ್ಪವೂ ಗೊತ್ತಿಲ್ಲ. ಸೂಪರಿಂಟೆಂಡೆಂಟ್ ಮುಂತಾದ ಪ್ರಭೃತಿಗಳು ಎಲ್ಲರೂ ಶಿಷ್ಟಾಚಾರಕ್ಕಾಗಿ ನನ್ನ ಮುಂದೆ 'ಫಾಸಿ'ಯನ್ನು ಕುರಿತಾಗಲಿ ಅದರ ಸಂಬಂಧವಾದ ಬೇರೆಯಾದ ವಿಷಯವನ್ನಾಗಲಿ ಮಾತಾಡುವುದಿಲ್ಲ. ಆದರೆ ಈ ವಾರ್ಡರುಗಳಾದರೋ ಪ್ರತಿಯೊಬ್ಬರೂ ಸಹ, ನನ್ನ ಮುಂದೆ ಮೊದಲು ಬೇರೆ ವಿಷಯವಾಗಿ ಒಂದೆರಡು ಮಾತುಗಳನ್ನಾಡಿ ಆಮೇಲೆ ನಿರ್ದಾಕ್ಷಿಣ್ಯವಾಗಿ 'ಫಾಸಿ'ಯನ್ನು ಕುರಿತು ಮಾತಾಡತೊಡಗುವರು. ಮೊದಲು ಮೊದಲು ಅಂಥ ಮಾತುಗಳನ್ನು ಕೇಳಿದೊಡನೆ ನನ್ನ ಎದೆಯ ಅಂತರಾಳದಲ್ಲೆಲ್ಲ ತಳಮಳವಾಗುತ್ತಿತ್ತು. ಕೂಡಲೇ ನಾನೆಷ್ಟು ದುರ್ಬಲನೆಂಬ ಭಾವನೆ ನನ್ನನ್ನು ನಾಚಿಗೆಗೊಳಿಸಿತ್ತು. ಇದ್ದಕ್ಕಿದ್ದ ಹಾಗೆ 'ಫಾಸಿ'ಯ ದೃಶ್ಯ ನನ್ನ ಕಣ್ಣ ಮುಂದೆ ಕಾಣತೊಡಗಿತು. ಒಮ್ಮೆ ಇದ್ದಕ್ಕಿದ್ದ ಹಾಗೆ ನನಗೆ ನಾನೇ ಧೈರ್ಯ ಹೇಳತೊಡಗಿದೆ. ಬಹುಶಃ, ಬಹುಶಃ... ಯಾರಿಗೆ ಗೊತ್ತು. ನನ್ನ 'ಫಾಸಿ'ಯಾಗುವ ಹುಕುಂ ರದ್ದಾದರೂ ಆಗಲಿಕ್ಕೆ ಸಾಧ್ಯ. ಹೀಗೆಲ್ಲ ಹೇಳಿಕೊಂಡು ಸಮಾಧಾನ ಮಾಡಿಕೊಳ್ಳುತ್ತಿದ್ದೆ. ಆದರೆ ಒಂದೆರಡು ದಿನಗಳಾದ ಮೇಲೆ ನನಗೆ ಹೆದರಿಕೆಯೆಲ್ಲ ಮಾಯವಾಗಿ ಹೋಯಿತು. ಇಂಥ ಮಾತು ನನ್ನಲ್ಲಿ ಯಾವ ಪ್ರತಿಕ್ರಿಯೆಯನ್ನೂ ಉಂಟುಮಾಡುತ್ತಿರಲಿಲ್ಲ. ಸೆಲ್ಲಿನ ಪಶ್ಚಿಮ ದಿಕ್ಕಿನಲ್ಲೇ 'ಫಾಸಿ'ಯ ಸ್ತಂಭ. ವಾರ್ಡರುಗಳು ಬಂದು ಸುದ್ದಿ ತಿಳಿಸುವರು. ಇವತ್ತು 'ಫಾಸಿ' ಸ್ತಂಭಕ್ಕೆ ಕಪ್ಪು ಬಣ್ಣ ಬಳಿದಿದ್ದಾರಂತೆ. ಇವತ್ತು 'ಫಾಸಿ'ಯ ಹಗ್ಗಕ್ಕೆ ನನ್ನ ತೂಕದಷ್ಟಿರುವ ಮರಳಿನ ಚೀಲವನ್ನು ಬಿಗಿಯಾಗಿ ಕಟ್ಟಿ ತೂಗು ಹಾಕಿ ಹಗ್ಗ ಸಾಕಷ್ಟು ಮಜಬೂತಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷೆ ಮಾಡಲಾಗುತ್ತದಂತೆ! ಇನ್ನೂ ಹೀಗೇ ಏನೇನೋ ಮಾತುಗಳು!

ಅಂತೂ ಈ ನನ್ನ ಮನಸ್ಸಿನ ಗತಿ ತುಂಬ ಆಶ್ಚರ್ಯಕರವಾಗಿದೆ. ಕರೀ ಬಣ್ಣ ಎಂದೊಡನೆ ಯೋಚನೆ ಮಾಡತೊಡಗುತ್ತೇನೆ. ಕರೀ ಬಣ್ಣ ಎಂದರೆ ಏನು... ಬ್ಲಾಕ್ ಜಪಾನ್ ರಂಗೋ ಅಥವಾ ಬರೇ ಟಾರೋ? ವಾರ್ಡರುಗಳನ್ನು ಪ್ರಶ್ನೆ ಕೂಡ ಮಾಡುತ್ತೇನೆ. "ಏನಪ್ಪಾ ಟಾರ್ ಹಚ್ಚಿದರೇ ಕಂಬಕ್ಕೆ ಅಥವಾ ಇನ್ನಾವುದಾದರೂ ರಂಗೋ? ಹಗ್ಗ ಎಂಥಾದ್ದು? ಸೆಣಬಿನದು ತಾನೆ?" ಹೀಗೆಲ್ಲ ಕೇಳತೊಡಗುತ್ತೇನೆ.

ನನ್ನ ಬಗ್ಗೆ ನನಗೇ ಬೇಸರ ಬರುತ್ತದೆ. ಏಕೆ ಹೀಗಾಗಿ ಹೋದೆ ನಾನು ? ಅಲ್ಲ, ಹಗ್ಗ ಯಾತರಿಂದ ತಯಾರಾಗಿರುವುದು ಅನ್ನುವ ವಿಷಯ ತಿಳಿದುಕೊಳ್ಳಬೇಕಾದ ಅಗತ್ಯ ನನಗೇನು ? ಎಷ್ಟೋ ಕಾಲದಿಂದ ನನ್ನ ಮನಸ್ಸಿನ ಈ ವಿಚಿತ್ರ ಅವಸ್ಥೆಯನ್ನು ನಾನು ಗಮನಿಸುತ್ತ ಬಂದಿದ್ದೇನೆ. ಪ್ರಯೋಜನವಾದದ್ದಕ್ಕಿಂತಲೂ ಅಪ್ರಯೋಜನವಾದದ್ದೇ ನನಗೆ ಏಕೋ ಹೆಚ್ಚು ಆಕರ್ಷಕವಾಗಿ ಹೋಗಿದೆ ? ಶಾಲೆಯ ಪರೀಕ್ಷೆಯಲ್ಲಿ ಎಲ್ಲರೂ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ತಯಾರು ಮಾಡಿಕೊಳ್ಳುತ್ತಿದ್ದರೆ ನಾನು ಅದರ ಕಡೆ ಗಮನವೇ ಕೊಡದೆ ಯಾವ ಯಾವುದೋ ಕೆಲಸಕ್ಕೆ ಬಾರದ ಟಿಪ್ಪಣಿಗಳು, ಫುಟ್‌ನೋಟ್ಸ್ ಮುಂತಾದವುಗಳನ್ನು ಕುರಿತು ಯೋಚಿಸುತ್ತಿದ್ದೆ. ಆದರೆ ಮೊದಲು ಸಹ, "ವರ್ಷದ ಆರಂಭದಲ್ಲೇ ಪರೀಕ್ಷೆಗೆ ಓದುವ ವಿಷಯ ಆಮೇಲೆ ಹೇಗಿದ್ದರೂ ಓದಬೇಕಾಗುತ್ತಲ್ಲ, ಈಗ ಜುಜುಬಿ ವಿಷಯಗಳನ್ನು ಚೆನ್ನಾಗಿ ಓದಿ ತಿಳಿದುಕೊಂಡರೆ ಯಾರಿಗೆ ನಷ್ಟ... ?" ಹೀಗೇ ನನ್ನ ಮನಸ್ಸು ಓಡುತ್ತಿತ್ತು. ಕಡೆಗೆ ಪರೀಕ್ಷೆ ಹತ್ತಿರ ಬಂದಾಗ ಕೂಡ ಪರೀಕ್ಷೆಯ ತಯಾರಿ ತಪ್ಪಿಹೋಗುತ್ತಿತ್ತು.

ಒಂದು ವಿಷಯ ನೆನಪಿಗೆ ಬರುತ್ತದೆ. ನಾನು ಒಮ್ಮೆ ಕಾಶೀ ವಿದ್ಯಾಪೀಠದಲ್ಲಿ ವ್ಯಾಸಂಗ ಮಾಡುತ್ತಾಯಿದ್ದೆ. ಆಗೊಂದು ದಿನ ರಾತ್ರಿ ನಡೆದ ಸಮಾಚಾರ ಮರೆಯುವ ಹಾಗೇ ಇಲ್ಲ. ಅವತ್ತು ನಾನೂ ನನ್ನ ಗೆಳೆಯ ಶಕಲದೇವನೂ ನಿದ್ದೆ ಮಾಡದೆ ಓದುತ್ತಾ ಇದ್ದೇವೆ. ಅವನು ಒಂದು ಚಿಟಿಕೆ ನಶ್ಯ ಏರಿಸಿ ಮಧ್ಯರಾತ್ರಿಯಲ್ಲಿ ಅವತ್ತಿನ "ತಾಜ್" ಪತ್ರಿಕೆಯ ಸಂಪಾದಕೀಯ ಲೇಖನ ಗಟ್ಟಿಯಾಗಿ ಓದುತ್ತಾ ಇದ್ದ. ಆಗ ಹಠಾತ್ತಾಗಿ ಪೋಲೀಸರು 'ಧಾಳಿ' ಮಾಡಿ ನನ್ನನ್ನು ಅರೆಸ್ಟ್ ಮಾಡಿದರು. ಯಾವುದೋ ರಾಜನೈತಿಕ ಖೂನಿ ಕೇಸಿನಲ್ಲಿ ನಾನು ಸೇರಿಕೊಂಡಿದ್ದೇನೆಂಬ ಗುಮಾನಿಯ ಮೇಲೇ ನನ್ನನ್ನು ಹಿಡಿದುಕೊಂಡು ಹೋದದ್ದು. ಆಗ ನನಗೆ ಫಾಸಿಯಾಗಬಹುದೆಂಬ ಭಯದಿಂದ ಅದೆಷ್ಟು ತತ್ತರಿಸಿ ಹೋಗಿದ್ದೆ. ಆಮೇಲೆ ಯಾವ ರುಜುವಾತೂ ಇಲ್ಲದೆ ನನ್ನನ್ನು ಬಿಡುಗಡೆ ಮಾಡಿದ್ದೂ ಆಯಿತು. ನಾನು ತಪ್ಪಿತಸ್ಥನಲ್ಲದಿದ್ದರೂ ನನಗೆ ಫಾಸಿಯಾಗುತ್ತದೆಂಬ ಭಯ ಏಕೆ ಬಂತು ? ಈಗ, 'ಫಾಸಿ'ಯ ಶಿಕ್ಷೆ ಜಾರಿ ಮಾಡಬೇಕೆಂದು ಹುಕುಂ ಆದ ಮೇಲೆ ಸಹ ನನಗೆ ಅಷ್ಟೇನೂ ಭಯವಾಗುತ್ತಿಲ್ಲ. ಅದು ದೂರವಾಗಿದ್ದಿದ್ದರೆ ಮೊದಲಿನ ಹಾಗೆ ಭಯದಿಂದಲೇ ಸಾಯುವಂತಾಗುತ್ತಿದ್ದೆ. ಜೈಲಿಗೆ ಮೊದಲು ಎಂದೂ ಹೋಗದೆ ಇರುವವರು ಜೈಲು ವಾಸ ಎಷ್ಟು ಘೋರವಾಗಿರುತ್ತದೋ ಎಂದು ಹೆದರುತ್ತಾರೆ. ಆದರೆ ಜೈಲಿಗೆ ಬಂದೊಡನೆ ಅವರ ಹೆದರಿಕೆ ತಾನಾಗಿ ಸರಿದುಹೋಗುತ್ತದೆ.

ಛೆ! ಈ ಸೊಳ್ಳೆ ಕಾಟ ವಿಪರೀತವಾಗಿದೆ. ಏಕೋ ಗೊತ್ತಿಲ್ಲ. ನಮ್ಮ ಗಾಂಧೀ ಆಶ್ರಮದಲ್ಲಿದ್ದ ಸೊಳ್ಳೆಗಳು ಇದಕ್ಕಿಂತ ಹೆಚ್ಚು ಸದ್ದು ಮಾಡುತ್ತವೆ. ಆಕಾರದಲ್ಲೂ ದೊಡ್ಡವು, ಆದರೆ ಕಚ್ಚುವುದು ಕಡಮೆ. ಕಚ್ಚಿದರೂ ಹೆಚ್ಚು ನೋವಾಗುವುದಿಲ್ಲ. ನೀಲೂ ಇದ್ದಿದ್ದರೆ ಕೂಡಲೇ ನಕ್ಕು, "ಯಾಕೆ ಗೊತ್ತೇನೋ, ಆಶ್ರಮದ ಸೊಳ್ಳೆಗಳಲ್ಲವೇ! ಅಹಿಂಸೆಯ ಮಾರ್ಗದಲ್ಲೇ ರಕ್ತ ಹೀರಿಕೊಂಡು ಹೋಗುತ್ತವೆ! ಹಾಗೆ ಕಲಿತುಕೊಂಡಿವೆ ಅವು" ಎಂದು ಬಿಡುತ್ತಿದ್ದ. ಅಮ್ಮ ಇದ್ದಿದ್ದರೆ ನಗು ತಡೆದುಕೊಂಡು, "ಸಾಕು.... ಸಾಕು.... ನಿನ್ನ ಕುಚೇಷ್ಟೆ!" ಎಂದು ಅವನ ಬಾಯಿ

ಮುಚ್ಚಿಸುತ್ತಿದ್ದಳು. ಅಂದಹಾಗೆ, ಈಗ, ಈ ಸಮಯದಲ್ಲಿ ಅಮ್ಮನ ಮುಖ ನನ್ನ ಕಣ್ಣ ಮುಂದೆ ಬರುತ್ತದೆ. ಸ್ಪಷ್ಟವಾಗಿ ನೋಡಬಲ್ಲೆ. ಕಣ್ಣುಗಳ ತಳಭಾಗದಲ್ಲಿ ಎರಡೂ ಕಡೆ ಆಳವಾದ ಗೆರೆಗಳು ಬಿದ್ದಿವೆ. ಅಮ್ಮನ ಮನಸ್ಸಿನಲ್ಲಿ ಯಾವಾಗಲೂ ಏನೋ ಭಯ. ಅದು ಮುಖದಲ್ಲಿ ಕಾಣುತ್ತದೆ. ನೀಲುವಿನ ಮಾತಿನಲ್ಲಿ ಅಪ್ಪನ ವಿಷಯವಾಗಿ ಅಡಗಿರುವ ವ್ಯಂಗ್ಯವನ್ನು ಅವರ ಕಿವಿಗೆ ಬೀಳದಂತೆ ಮರೆಮಾಚುವ ಪ್ರಯತ್ನ ಮಾಡುತ್ತಾಳೆ. ನೀಲು ಎಂದಿನ ಹಾಗೆ ಬಾಯಿಗೆ ಬಂದದ್ದನ್ನು ಒದರಿ ಬಿಡುತ್ತಾನೆ. ಇತರರಿಗೆ ಅದರಿಂದ ಏನಾದರೂ ನೋವಾದೀತು.... ಅವರು ಮಾಡುವ ಕೆಲಸಕ್ಕೆ ಹಾನಿಯಾದೀತು ಅನ್ನುವುದರ ಕಡೆ ಅವನು ಪೂರ್ತಿಯಾಗಿ ಉದಾಸೀನ. ನಯ, ಸೂಕ್ಷ್ಮತೆ ಅನ್ನುವುದು ಅವನಿಗೆ ಅರಿಯದ ವಸ್ತು. ನೀಲುವಿನ ಮನಸ್ಸು, ದೃಷ್ಟಿ ಎಲ್ಲಾ ಸ್ಥೂಲ. ಲೇಖನಿ ಮತ್ತು ಕುಂಚ ಅವನಿಗೆ ಪ್ರಿಯವಾದ ಪದಾರ್ಥಗಳಲ್ಲ. ಕಾಯಕವೇ ಅವನಿಗೆ ಕೈಲಾಸ. ಗುದ್ದಲಿ, ಪಿಕಾಸಿಗಳಿಂದಲೇ ಸ್ವರ್ಗದ ಸೌಧ ಕಟ್ಟಬೇಕು ಅಂತಾನೆ. ಅವನ ಕೈಯಲ್ಲಿ ಶೋಭಿಸುವ ಆಯುಧವೆಂದರೆ ಹರಿತವಾದ ಅಲಗುಳ್ಳ ಕತ್ತಿಯೋ, ಕಠಾರಿಯೋ! ಪರಶುರಾಮನಿಗೆ ಕೊಡಲಿ ಇದ್ದ ಹಾಗೆ. ನಿಷ್ಕರುಣಿ ಮತ್ತು ಕಠೋರಿ, ಕರ್ತವ್ಯನಿಷ್ಠ ನಮ್ಮ ನೀಲು. ತನಗೆ ಕವಿತೆ ಸ್ವಲ್ಪವೂ ಹಿಡಿಸುವುದಿಲ್ಲ ಎಂದು ಒಮ್ಮೆ ನನ್ನೊಡನೆ ಹೇಳಿದ್ದ. ಆಗ ನಾನು, "ಆಗಲಿ, ನೋಡು. ನಾನು ನಿನಗೊಂದು ಎಂಥ ಕವಿತೆ ಬರೆದುಕೊಡುತೇನೋ ಅಂತ! ಆಗ ಹೇಗೆ ಇಷ್ಟವಾಗುವುದಿಲ್ಲ ನೋಡುತ್ತೇನೆ" ಎಂದಿದ್ದೆ. ಅಂದದ್ದೇ ಒಂದು ಪದ್ಯ ಬರೆದುಕೊಟ್ಟೆ. ಚೆನ್ನಾಗಿ ಯೋಚನೆ ಮಾಡಿ, ಧನಿಕ-ಶ್ರಮಿಕರ ಘರ್ಷಣ, ಲಾರೀ ಏಟುಗಳ 'ರಪಟಪ', ಕೂಲಿಯಾಳುಗಳ ಗರ್ಜನೆ ಎಲ್ಲಾ ಕಲಸಿ ಒಂದು ಕವನ ಕಟ್ಟಿ ಓದು ಅಂದೆ. ಇಷ್ಟವಾಯಿತು ಅವನಿಗೆ. ನನಗೀಗ ಅದರ ಒಂದು ಪಂಕ್ತಿಯೂ ಜ್ಞಾಪಕವಿಲ್ಲ. ನೀಲು ಅದನ್ನು ಕಟ್ಟುಹಾಕಿ ಆಶ್ರಮದಲ್ಲಿ ತೂಗು ಹಾಕಿದ. ಅದೂ ಅಮ್ಮನ ಕೋಣೆಯಲ್ಲಿ.

ಮತ್ತೆ ಅಮ್ಮನ ಮುಖ ಚಿತ್ರಿಸಿಕೊಳ್ಳುತ್ತೇನೆ. ಹ್ಞಾ... ಬಾಗಿಲ ಬಳಿ ಕೂತಿದ್ದಾಳೆ. ತಲೆಯಲುಗಿಸುತ್ತ ಅಲುಗಿಸುತ್ತ ನೀಲು ಕಡೆ ನೋಡಿ ಹಲ್ಲಿನ ಬುಡಕ್ಕೆ ನಾಲಗೆ ತಗುಲಿಸಿ ಒಂದು ಶಬ್ದ ಮಾಡಿದಳು - 'ಚಿಕ್' ಎಂದು. ಆಮೇಲೆ ಒಂದು ಗಾದೆ ನುಡಿದಳು - "ಸತ್ತರೂ ಸ್ವಭಾವ ಬದಲಾಯಿಸದು" ಎಂದು. ನೀಲು ನನ್ನ ಕಡೆ ಕಣ್ಣಿಂದ ಒಂದು ಸನ್ನೆ ಮಾಡಿದ. ಅದರ ಅರ್ಥ 'ಅಣ್ಣಾ.... ಈ ಸಲ ನಾವಿಬ್ಬರೂ ಒಟ್ಟಿಗೆ ಏನು ಊಹಿಸಿದ್ದೆವೋ ಹಾಗೇ ಆಯಿತು.' ಅಮ್ಮ ಅವಳ ವಾಡಿಕೆಯಂತೆ ನಾವು ಊಹಿಸಿದ್ದ ಸಂಸ್ಕೃತ ಶ್ಲೋಕವನ್ನೇ ಉಚ್ಚರಿಸಿದರು: "ಅಂಗಾರ್ ಶತ್ರ ಧೌತೇನ್ ಮಲಿನಶ್ಚ ನಃಮುಂಚತೇ!" ನಾವಿಬ್ಬರೂ ಕೂಡಲೇ ನಕ್ಕೆವು. ಅಮ್ಮ ನಾವು ಅಂದುಕೊಂಡಿದ್ದಂತೆಯೇ ಮಲಿನಶ್ಚ ಅಂದಳು. ನಮ್ಮ ನಗುವಿನ ಶಬ್ದ ಕೇಳಿ ತಪ್ಪು ಮಾಡಿದ್ದೇನೆಂದು ತಿಳಿದುಕೊಂಡಳು. "ಹಾಳಾಗಲಿ! ಯಾರಿಗೆ ಜ್ಞಾಪಕ ಇರತ್ತೆ?" ಎಂದಳು. ಆಗ ನೀಲು "ಹಾಗಾದರೆ ಹೇಳುವುದು ಯಾಕೆ?" ಎಂದ. ಅಮ್ಮನ ಇಂಥ ತಪ್ಪುಗಳು ನಮ್ಮಿಬ್ಬರಿಗೂ ಬಾಯಿಪಾಠವಾಗಿದೆ. ಹೆಚ್ಚಾಗಿ ನೀಲುವೇ ಅವುಗಳನ್ನು ತೋರಿಸಿಕೊಟ್ಟಿದ್ದಾನೆ. ಇಲ್ಲದಿದ್ದರೆ ನಾನು ಅವುಗಳನ್ನು ಗಮನಿಸುತ್ತಲೇ ಇರಲಿಲ್ಲ. ಅಮ್ಮ ಇನ್ನೊಂದು ಬಹಳವಾಗಿ ಮಾಡುವ ತಪ್ಪು -

"ದಯಾದಾಕ್ಷಿಣಾತ್ಯ". ಅಮ್ಮನಿಗೆ ನಾನು ಒಂದೆರಡು ಬಾರಿ, "ಹಾಗಲ್ಲಮ್ಮ - ದಯಾದಾಕ್ಷಿಣ್ಯ" ಎಂದು ಹೇಳಿಕೊಟ್ಟಿದ್ದರೂ ಅವಳಿಗೆ ಜ್ಞಾಪಕವಿರುತ್ತಿರಲಿಲ್ಲ. ಮತ್ತೆ ತಪ್ಪು ತೋರಿಸಿಕೊಟ್ಟರೆ ಮನಸ್ಸು ನೊಂದೀತೆಂದು ನಾನು ಸುಮ್ಮನೆ ಇದ್ದುಬಿಡುತ್ತಿದ್ದೆ. ನೀಲುವಿಗೆ ಅಂತಹ ದಾಕ್ಷಿಣ್ಯವಿಲ್ಲ. ಬೇರೆಯವರ ನಡೆನುಡಿ, ಮಾತು, ಕತೆಗಳಲ್ಲಿನ ಹುಳುಕುಗಳನ್ನು ಬೇಗ ಗಮನಿಸುವನು. ಅಲ್ಲದೆ ಸ್ವಲ್ಪವೂ ವಿವೇಚನೆಯಿಲ್ಲದೆ ಅವರನ್ನು ಆಡಿಕೊಳ್ಳುವನು. ಆದರಿಂದ ಅವರ ಮನಸ್ಸು ನೊಂದೀತೇನೋ ಎಂಬ ಪರಿವೆಯೇ ಇಲ್ಲ. ನಮ್ಮಪ್ಪನ ಹತ್ತಿರ ನಮ್ಮಿಬ್ಬರಿಗೂ ಅಷ್ಟಾಗಿ ಸಲಿಗೆ ಇಲ್ಲ. ಯಾವಾಗಲೂ ದೂರವಾಗೇ ಇರುತ್ತಿದ್ದೆವು. ಮಾತಾಡಿದರೂ, ಅವಶ್ಯಕ ಬಿದ್ದಾಗ ಮಾತ್ರ. ಈ ಕಾರಣದಿಂದಲೇ ಅಪ್ಪನ ಮತ್ತು ಆಶ್ರಮದ ಇತರರ ಊಟ ಮುಗಿದ ಮೇಲೆ ನಾವಿಬ್ಬರೂ ಅಮ್ಮನ ಜೊತೆಯಲ್ಲಿ ಊಟಕ್ಕೆ ಕೂಡುತ್ತಿದ್ದೆವು. ಜತೆಗೆ ಸ್ವಲ್ಪ ಹಾಲಿಲ್ಲದೆ ಹೋದರೆ ಅಮ್ಮನ ಊಟ ಸರಿ ಹೋಗುವುದಿಲ್ಲ. ಇದೊಂದೇ, ಬಹುಶಃ ಅಮ್ಮನ ಭೋಗ್ಯವಸ್ತು. ಆಶ್ರಮದಲ್ಲಿ ಅನೇಕ ಮಂದಿ ಇರುತ್ತಾರೆ. ಅಲ್ಲದೆ ಸಮಯಾಸಮಯವೆನ್ನದೆ ಅತಿಥಿಗಳು ಬಂದು ಹೋಗುತ್ತಿರುತ್ತಾರೆ. ಇದು ವಾಡಿಕೆ. ಈ ಕಾರಣದಿಂದ ಹಾಲು ಉಳಿಯುವುದೇ ಕ್ವಚಿತ್. ಸ್ವಲ್ಪ ಹಾಲಿದ್ದರೂ ಅಮ್ಮ ಅದನ್ನು ನನಗೂ ನೀಲುವಿಗೂ ಹಂಚಿಬಿಡುವಳು. ಅದಕ್ಕಾಗಿ ನಾನು ಮೊದಲೇ ನಮ್ಮ ಬಟ್ಟಲಿಂದ ಸ್ವಲ್ಪ ಹಾಲನ್ನು ಅಮ್ಮನಿಗಾಗಿ ಬೇರೊಂದು ಬಟ್ಟಲಲ್ಲಿ ತೆಗೆದಿಟ್ಟರೆ, ನೀಲು ಸುಮ್ಮನೆ ಇರುವುದಿಲ್ಲ. ತತ್‌ಕ್ಷಣ, "ಓಹೋ ಅಮ್ಮನಿಗೆ ಹಾಲಿಲ್ಲದೆ ಹೋದರೆ ಊಟವೇ ಆಗೋದಿಲ್ಲವೇನೋ" ಎಂದು ಒದರಿ ಬಿಡುವನು. ಬಹು ಸಣ್ಣ ವಿಷಯ. ಆದರೂ ಆ ಮಾತು ಕಿವಿಗೆ ಬಿದ್ದರೆ ಅಮ್ಮನ ಮುಖ ಬಣ್ಣಗೆಡುವುದು. ಈ ನೀಲುವಿಗೆ ಎಷ್ಟೋ ವಿಷಯಗಳು ಗೊತ್ತಾಗುತ್ತವೆ. ಆದರೆ ಇದು ಯಾಕೋ ಗೊತ್ತಾಗುವುದಿಲ್ಲ.

ಅಮ್ಮನಿಗೆ ಯಾವಾಗಲಾದರೂ ಆರೋಗ್ಯ ಕೆಟ್ಟರೆ, ಯಾರಾದರೂ ಅವಳ ಅಸ್ವಸ್ಥತೆಯನ್ನು ಉತ್ಪ್ರೇಕ್ಷೆ ಮಾಡಿ ಕಳವಳ ತೋರಿದರೆ ಅವಳಿಗೇನೋ ಸ್ವಲ್ಪ ತೃಪ್ತಿಯಾಗುತ್ತದೆ. ಅದು ನನಗೆ ಗೊತ್ತಿರುವುದರಿಂದ ಅಮ್ಮನ ಹಣೇ ಮೇಲೆ ಕೈಯಿಟ್ಟು, "ಅಬ್ಬ, ಸುಡುತ್ತಾಯಿದೆ - ಜ್ವರ ಏರಿದೆ ಅಂತ ಕಾಣುತ್ತೆ" ಅಂತ ಅಂದರೆ ನೀಲು, "ಹ್ಹಾ ಹ್ಹಾ ಹ್ಹಾ!" ಎಂದು ರೂಮೆಲ್ಲ ಅದುರುವಂತೆ ಗಟ್ಟಿಯಾಗಿ ನಕ್ಕುಬಿಡುವನು. ನೀಲು ವಿಷಯ ಜ್ಞಾಪಕ ಬಂದಾಗ ಇವೆಲ್ಲ ಸಹ ಜತೆಯಲ್ಲೇ ನೆನಪಿಗೆ ಬರುತ್ತವೆ.

ಸೂಪರಿಂಟೆಂಡಂಟರು ನನ್ನನ್ನು, "ನಿನಗೇನಾದರೂ ಬೇಕೆ ?" ಎಂದು ಕೇಳಿದ ವಿಷಯ ಹೇಳುತ್ತಿದ್ದೆನಲ್ಲ ? ಹ್ಹಾ.... ನಾನೂ ಏನೂ ಬೇಕಾಗಿಲ್ಲ ಎಂದು ಹೇಳಿಬಿಟ್ಟೆನಲ್ಲ! ಆಮೇಲೆ ನನ್ನ ಮನಸ್ಸಿನಲ್ಲಿ ತುಂಬಾ ತೃಪ್ತಿಯಾಯಿತು. ತೃಪ್ತಿ ಒಂದೇ ಅಲ್ಲ, ಹೆಮ್ಮೆ ಸಹ. ಸಾಹೇಬರು ಒಬ್ಬರೇ ಅಲ್ಲ ಬಂದಿದ್ದು. ಸಂಗಡ ಜೈಲರ್, ಅಸಿಸ್ಟೆಂಟ್ ಜೈಲರ್, ಡಾಕ್ಟರು, ಜಮಾದಾರ, ಕೆಲವರು ಅಂಗರಕ್ಷಕರು, ವಾರ್ಡರು ಮತ್ತು ಮೇಟ್ ಸಹ... ಹ್ಹಾ.... ಇವರ ಜತೆಯಲ್ಲಿ ಒಬ್ಬ ಸಿಖ್ ಖೈದಿ, ಸಾಹೇಬರ ನೆತ್ತಿಯ ಮೇಲುಗಡೆ ಖಾಕೀ ಬಣ್ಣದ "ರಾಜಛತ್ರಿ"ಯನ್ನು ಎತ್ತಿ ಹಿಡಿದುಕೊಂಡು

ಬಂದಿದ್ದನ್ನು ಹೇಳುವುದು ಮರೆತುಹೋದೆ. ನಿಜವಾಗಿ, ಜೈಲ್ ಸೂಪರಿಂಟೆಂಡೆಂಟ್ ಸಾಹೇಬರು ಅಂದರೆ ಸಾಮಾನ್ಯವೇ? ಇಡೀ ಜೈಲ್ ಸಾಮ್ರಾಜ್ಯಕ್ಕೆಲ್ಲ ಏಕಛತ್ರಾಧಿಪತಿಯಲ್ಲವೇ! ಅವತ್ತಿನ ದಿನ ಆ ಅಧಿಕಾರಿ ಕೇಳಿದ ಪ್ರಶ್ನೆಗೆ 'ನ'ಕಾರ ಹೇಳಿದ ಮೇಲೆ ಎದುರಿಗಿದ್ದವರಲ್ಲಿ ಯಾರ ಮುಖವನ್ನೂ ನೋಡಲಾರದೆ ಹೋದೆ.... ಏನೋ ಒಂದು ಬಗೆಯಾಗಿ ಕರಗಿ ಹೋಗಿಬಿಟ್ಟೆ.... ಅಲ್ಲ, ಅವರ ಮುಖಗಳನ್ನು ನೋಡಿದ್ದರೆ ಚೆನ್ನಾಗಿತ್ತು! ನನ್ನ ನಿರಾಕರಣೆ ಅವರ ಮೇಲೆ ಯಾವ ಪರಿಣಾಮ ಉಂಟು ಮಾಡಿತು ಅನ್ನುವುದನ್ನು ತಿಳಿದುಕೊಂಡಿದ್ದರೆ ಚೆನ್ನಾಗಿತ್ತು ಎಂದುಕೊಂಡೆ. ನನ್ನನ್ನೇ ಯಾವುದೋ ನಾಟಕದ ನಾಯಕನ ಭಂಗಿಯಲ್ಲಿ ಗಮನಿಸತೊಡಗಿದೆ.... ಹಿಂದೆ ಚಿಕ್ಕ ವಯಸ್ಸಿನಲ್ಲಿ ನಮ್ಮ ಸಂತೋಷ ದಾದಾ ಬಾಯಿಂದ ಸ್ವದೇಶೀ ಚಳವಳಿಯ ಸಂಬಂಧವಾದ ಕತೆಗಳನ್ನು ಕೇಳಿದಾಗ ಎಷ್ಟೋ ಬಾರಿ ನನ್ನ ಕಣ್ಣಲ್ಲಿ ನೀರು ತುಂಬುತ್ತಿತ್ತು. ಸತ್ತೂ ಅಮರನಾಗಿರುವ ಆ ದೇಶ ಭಕ್ತನೊಬ್ಬನ ಚಿತ್ರ ಈಗಲೂ ನನ್ನ ಕಣ್ಣ ಮುಂದೆ ನಿಲ್ಲುತ್ತದೆ... ಆಹಾ! "ಈಗ ನನ್ನನ್ನ ಕೆಣಕಬೇಡಿ.... ಶಾಂತಿಯಿಂದ ಸಾಯಲು ಬಿಡಿ!" ಬಂದೂಕಿನ ಗೋಲಿಯಿಂದ ಪೆಟ್ಟು ತಿಂದು ಸಾಯುತ್ತಿರುವಾಗಲೂ ಆತ್ಮ ಸನ್ಮಾನದಿಂದ ವಿಜೃಂಭಿಸಿದ ಆ ವೀರನ ಈ ನುಡಿಯೊಂದಿಗೆ ನನ್ನ ಮಾತನ್ನು ಹೋಲಿಸಿಕೊಂಡೆ. ಆ ಕತೆ ಕೇಳಿ ನನ್ನ ಕಣ್ಣಲ್ಲಿ ನೀರು ತುಂಬಿತು. ಆದರೆ ನನಗೇನೂ ಬೇಡ ಎಂಬುದನ್ನು ಕೇಳಿ ಅಲ್ಲಿದ್ದವರಲ್ಲಿ ಯಾರಿಗೂ ಯಾವ ಪರಿಣಾಮವೂ ಆಗಿರಲಿಕ್ಕಿಲ್ಲವೆ? ಬಹುಶಃ ಆಗಿರಲಿಕ್ಕಿಲ್ಲ. ಯಾಕೆಂದರೆ ಇವರೆಲ್ಲ ಇಂಥದನ್ನು ಪ್ರತಿದಿನ ನೋಡುತ್ತ ಇರುತ್ತಾರೆ. ಎಲ್ಲರೂ ಸುಮಾರಾಗಿ ವಯಸ್ಸಾದವರು. ಸಂಸಾರವಿರುವವರು. ಅನುಭವದಲ್ಲಿ ಪಳಗಿದವರು. ಇವರು ಯಾಕೆ ಹುಡುಗರಂತೆ ಭಾವನಾವಶರಾಗುತ್ತಾರೆ? ನನ್ನ ಮನೋವೃತ್ತಿ ಬೇರೆ... ಜನ ನನ್ನನ್ನು ಪ್ರಶಂಸೆ ಮಾಡಲಿ, ನನ್ನ ವಿಷಯ ಎಲ್ಲರ ಮುಂದೆ ವರ್ಣಿಸಿ 'ಭಲೆ' ಅನ್ನಲಿ ಎಂಬುದೇ ನನಗೆ ಬೇಕಾಗಿರುವುದು, ಇದು ನನ್ನ ದುರ್ಬಲತೆ! ಅಷ್ಟೆ.... ಒಮ್ಮೊಮ್ಮೆ ನನ್ನ ವಿಷಯದಲ್ಲಿ ನನಗೇ ಸಂದೇಹ ಹುಟ್ಟಿಕೊಳ್ಳುತ್ತದೆ. ಬಹುಶಃ ದೇಶದ ಭವಿಷ್ಯತ್ತಿಗಿಂತಲೂ ಹೆಚ್ಚಾಗಿ ನನ್ನ ಹೆಸರಿನ ಭವಿಷ್ಯತ್ತೇ ನನಗೆ ಮುಖ್ಯ ಗುರಿಯೇನೋ! ಯಾಕಿರಕೂಡದು? ಒಂದು ದಿನವೂ ಸಹ ಪ್ರಾಪಂಚಿಕ ಸುಖಗಳಲ್ಲಿ ಮುಳುಗಿಲ್ಲ. ಇದುವರೆಗೂ ದೇಶಕ್ಕೋಸ್ಕರ ಯಾವುದನ್ನು ಒಳ್ಳೆಯದು ಎಂದುಕೊಂಡಿದ್ದೆನೋ ಅದನ್ನು ನೆರವೇರಿಸುವುದರಲ್ಲಿ ಎಳ್ಳಷ್ಟೂ ಹಿಂದೆಗೆದಿಲ್ಲ. ನನ್ನ ವ್ಯಕ್ತಿಗತ ಸುಖವನ್ನಾಗಲೀ, ಭವಿಷ್ಯತ್ತನ್ನಾಗಲಿ ನಾನೆಂದೂ ಯೋಚಿಸಿಲ್ಲ. ಹೀಗಿರುವಾಗ ಇದಕ್ಕೆ ಬದಲಾಗಿ ನಾನೇನಾದರೂ ಒಂದು ಪಕ್ಷ, ದೇಶದ ಜನ ನನ್ನನ್ನ ಕುರಿತು ಒಂದೆರಡು ಒಳ್ಳೇ ಮಾತಾಡಲಿ, ಸ್ವಲ್ಪ ಪ್ರಶಂಸೆ ಮಾಡಲಿ ಎಂದು ಆಸೆ ಪಟ್ಟಿದ್ದರೆ ಅದರಲ್ಲಿ ತಪ್ಪೇನು? ಜೈಲಿನ ಡಾಕ್ಟರು ಖಂಡಿತವಾಗಿ ನನ್ನ ವಿಷಯವಾಗಿ ತನ್ನ ಮನೆಯಲ್ಲಿ ಪ್ರಸ್ತಾವ ಮಾಡಿರುತ್ತಾನೆ. ಅಸಿಸ್ಟೆಂಟ್ ಜೈಲರ್ ಈಗಾಗಲೇ ಅಪ್ಪರ್ ಡಿವಿಜನ್ (ಮೇಲು ವರ್ಗದ) ರಾಜಕೀಯ ಬಂದಿಗಳ ವಾರ್ಡಿನಲ್ಲಿ ಹೋಗಿ ನನ್ನ ವಿಷಯವಾಗಿ ಅವರೆಲ್ಲರ ಮುಂದೆ ಹೇಳಿರುತ್ತಾನೆ. ಅಪ್ಪನೂ ಅದೇ ವಾರ್ಡಿನಲ್ಲಲ್ಲವೆ ಇರುವುದು? ಅವರ ಕಿವಿಗೂ ಬಿದ್ದಿರುತ್ತದೆ ನನ್ನ

ಮಾತು. ನಮ್ಮಪ್ಪ ನಿರ್ವಿಕಾರನಾದ ಮನುಷ್ಯ. ಹೊರಗಣಿಂದ ಅವರ ಮನಸ್ಸಿನಲ್ಲಿ ಏನಾಗುತ್ತ ಇದೆ ಎಂದು ತಿಳಿಯಲಾಗುವುದಿಲ್ಲ. ಒಬ್ಬಂಟಿಗರಾಗಿ ಕೂತು ಚರಖಾ ತಿರುಗಿಸುತ್ತ ಇರುತ್ತಾರೆ. ಕಣ್ಣ ಅಂಚಿನಿಂದ ಎರಡು ತೊಟ್ಟು ನೀರು ಬಿದ್ದು ದಾರ ಒದ್ದೆಯಾಗಿ ಹೋಗಿರುತ್ತೇನೋ! ಛೆ.... ಇಲ್ಲ... ಹಾಗಾಗಲಾರದು. ಅಪ್ಪನ ಕಡೆಯಿಂದ ಇಷ್ಟೊಂದು ವ್ಯಾಕುಲತೆಯನ್ನು ನಿರೀಕ್ಷಿಸಲಾರೆ. ಬಹುಶಃ, ಸ್ವಲ್ಪ ಮಟ್ಟಿಗೆ ಯೋಚನಾಮಗ್ನರಾಗುತ್ತಾರೆ. ಚರಖಾದಲ್ಲಿ ನೆಟ್ಟಿರುವ ಮನಸ್ಸು ಸ್ವಲ್ಪ ಅಲ್ಲಾಡೀತು. ದಾರವೂ ಒಂದೆರಡು ಬಾರಿ ಹೆಚ್ಚಾಗಿ ಕಿತ್ತುಹೋದೀತು. ಅಷ್ಟು ಮಾತ್ರ... ನನ್ನಲ್ಲಿ ಒಂದು ಸಂದೇಹ ಒಂದು ಶಂಕೆ - ಏನೆಂದರೆ, ನಾನು ನಿರೀಕ್ಷಿಸಿದ್ದಂತೆ, ಜೈಲು ಅಧಿಕಾರಿಗಳ ಮನಸ್ಸಿನ ಮೇಲೇಕೆ ಪರಿಣಾಮ ಮಾಡಲಾಗಲಿಲ್ಲ! ಅದಕ್ಕೆ ಕಾರಣ ದೊಡ್ಡ ದನಿಯಲ್ಲಿ ಕೂಗಿ ಹೇಳಲಿಲ್ಲ. ತಲೆ ತಗ್ಗಿಸಿ ನಿಧಾನವಾಗಿ ಹೇಳಿದೆ. ಬಹುಶಃ ಈ ಜನ ನನ್ನ ಮನಸ್ಸು ಸರಳವಲ್ಲವೆಂದು ಭಾವಿಸಿರಬಹುದು. ಸರ್ಕಾರದ ವಿರುದ್ಧವಾಗಿ ನಾನೇನೋ ನನ್ನ ಸ್ವಾಭಿಮಾನ ತೋರಿಸಿಕೊಳ್ಳುತ್ತಿರಬೇಕೆಂದು ನನ್ನ ಮುಖಭಾವದಿಂದ ಅಂದುಕೊಂಡಿರಬೇಕು. ಈ ಜನ ಹಗಲು, ರಾತ್ರಿ ಕಳ್ಳ, ಡಕಾಯಿತ, ಕೊಲೆಪಾತಕರೊಂದಿಗೆ ವ್ಯವಹಾರ ಮಾಡಬೇಕಾದವರು. ಅದರ ಫಲವಾಗಿ ಕ್ರಮೇಣ ಅವರ ಮನಸ್ಸಿನಲ್ಲಿದ್ದ ಅಲ್ಪ ಸ್ವಲ್ಪ ಸರಳತೆ, ಮಾರ್ದವ - ಎಲ್ಲ ಒಣಗಿ ಹೋಗಿರುತ್ತದೆ. ಅದಕ್ಕಾಗೇ ಇವರು ಕಳ್ಳ, ಡಕಾಯಿತರು ಮತ್ತು ಸಾಧಾರಣ ರಾಜಕೀಯ ಖೈದಿಗಳ ನಡುವಣ ವ್ಯತ್ಯಾಸ ಗುರುತಿಸಲಾರರು. ಆಚರಣೆಯಲ್ಲಿ, ಏನಾದರೂ ವ್ಯತ್ಯಾಸ ಕಂಡರೂ ಅದು ಬಹುಶಃ ಏಟಿನ ಭಯದಿಂದಲೋ ಅಥವಾ ಕೇವಲ ಸ್ವಾರ್ಥದ ಪ್ರೇರಣೆಯಿಂದಲೋ ಇರಬೇಕೆಂದು ಅಂದುಕೊಳ್ಳುವರು. ಆದರೆ 'ಎ' ಕ್ಲಾಸ್ ರಾಜಕೀಯ ಖೈದಿಗಳ ಮುಂದೆ ಇವರ ನಡವಳಿಕೆಯೇ ಬೇರೆ ನಮೂನೆ. 'ಸಿ' ಕ್ಲಾಸ್ ಖೈದಿಗಳಲ್ಲಿ ಯಾರಾದರೂ ಆಮಶಂಕೆಯೆಂದು ಔಷಧಿ ಕೇಳಿದರೆ "ಮೊಸರನ್ನ ಮಾತ್ರ ನಿರೀಕ್ಷಿಸಬೇಡಿ" ಅಂದರೆ ಖೈದಿಗಳು ಮೊಸರಿನ ಪಥ್ಯ ಸಿಕ್ಕೀತೆಂಬ ಆಸೆಯಿಂದ ಆಮಶಂಕೆಯನ್ನು ನಟಿಸುತ್ತಾರೆಂಬ ಅನುಮಾನ ಎಂದು ಹೇಳುವ ಡಾಕ್ಟರು ಅದೇ 'ಎ' ಕ್ಲಾಸ್ ರಾಜಕೀಯ ಖೈದಿಗಳ ಮುಂದೆ ತೋರುವ ಸೌಜನ್ಯ, ವಿನಯಗಳನ್ನು ನೋಡಬೇಕು! ಇದೇ ಎರಡು ವರುಷಗಳ ಹಿಂದೆ ವ್ಯಕ್ತಿಗತ ಸತ್ಯಾಗ್ರಹ ಆದ ಸಂದರ್ಭದಲ್ಲಿ ದಸ್ತಗಿರಿಯಾಗಿ ಬಂದ ಕಾಂಗ್ರೆಸ್ ಮುಂದಾಳುಗಳ ಸುತ್ತ ಇದೇ ಜೈಲ್ ಅಧಿಕಾರಿಗಳು ಸಲಾಮು ಹಾಕಿಕೊಂಡು ಸುತ್ತುತ್ತ, ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಿ ಅವರಿಂದ ಮನ್ನಣೆಯನ್ನು ಪಡೆಯಲು ಹೇಗೆ ಹಾತೊರೆಯುತ್ತ ಇದ್ದರೋ ಅದನ್ನು ನಾನು ನೋಡಿದ್ದೇನೆ. ಏಕೆಂದರೆ ಪುನಃ ಬಿಹಾರಿನಲ್ಲಿ ಕಾಂಗ್ರೆಸ್ ಪ್ರಭುತ್ವ ಬರಬಹುದೆಂಬ ನಿರೀಕ್ಷೆ ಅವರಿಗೆ! ಮತ್ತು ಈಗಲೋ....

ಇಂಥ ಜೈಲ್ ಅಧಿಕಾರಿಗಳ ಮನಸ್ಸಿನ ಮೇಲೆ ನನ್ನ ಮಾತು ಮತ್ತು ವ್ಯವಹಾರ ಪರಿಣಾಮ ಮಾಡದಿದ್ದರೆ ಆಶ್ಚರ್ಯವೇನು? ಅದರ ಬದಲಾಗಿ ನಾನು ಸ್ವಲ್ಪ ಬಿರುಸಾದ ದನಿಯಲ್ಲಿ, "ಯಾರಿಗೆ ಬೇಕು ನಿಮ್ಮ ಅನುಗ್ರಹ! ಥ್ಹು! ಜೋಡಲ್ಲಿ ಹೊಡೆದ ಮೇಲೆ ಗೋದಾನ ಕೊಟ್ಟರಂತೆ ಯಾರೋ!" ಎಂದು ನಾಟಕೀಯವಾಗಿ

ಹೂಂಕರಿಸಿದ್ದರೆ, ಅಥವಾ ಇದೇ ರೀತಿಯಾಗಿ ಇನ್ನೇನಾದರೂ ಕೂಗಿ ಸೂಪರಿಂಟೆಂಡೆಂಟರ ರಿಯಾಯಿತಿಯನ್ನು ನಿರಾಕರಿಸಿದ್ದರೆ ಬಹುಶಃ ಆಗ ಪ್ರಭಾವಿತರಾಗುತ್ತಿದ್ದರೇನೋ!.... ಸ್ವಲ್ಪ ನಾಟಕೀಯತೆಯ ಭಾವತೋರಿದರೇನು, ನಾನು ನಿರೀಕ್ಷಿಸಿದ ಪರಿಣಾಮ ಆಗೇ ಆಗುತ್ತಿತ್ತು. ಒಮ್ಮೆ ಅಂದರೆ ಕಳೆದ ಅಕ್ಟೋಬರ್ ತಿಂಗಳಲ್ಲಿ ಎರಡನೆಯ ನಂಬರು ವಾರ್ಡಿನ ಖೈದಿಗಳ ಮೇಲೆ ಲಾಠೀ ಪ್ರಹಾರ ಮಾಡಲಾಗಿತ್ತು. ಆ ಏಟಿನಿಂದ ತಲೆಗೆ ಪೆಟ್ಟು ತಿಂದ ಸುಖದೇವನು ನಾಟಕೀಯ ಭಂಗಿಯಲ್ಲಿ ನೆಲದ ಮೇಲೆ ಬಿದ್ದು ಒರಗುತ್ತಲೇ (ಸ್ಟೇಜಿನ ಮೇಲೆ ನಾಯಕನು ಸಾಯುವ ರೀತಿಯಲ್ಲಿ) ಕೈಚಾಚಿ ಕರ್ಕಶ ದನಿಯಲ್ಲಿ, "ನೀವೆಲ್ಲ ನಾಚಿಕೆ ಇಲ್ಲದವರೋ!" ಎಂದು ನರಳುವ ದನಿಯಲ್ಲಿ ಕೂಗಿದುದು ಈಗಲೂ ಕಣ್ಣಿಗೆ ಕಟ್ಟುತ್ತದೆ. - ಇದೇ ರೀತಿ ನಾನೂ ಸ್ಕೂಲಿನಲ್ಲಿದ್ದಾಗ ವಾರ್ಷಿಕ ಸಮಾರಂಭದಲ್ಲಿ "ಮೇಘನಾದ ವಧ" ಕಾವ್ಯದಿಂದ ಒಂದು ಭಾಗವನ್ನು ಅಭಿನಯ ಮಾಡಿದ್ದೆ. ನಮ್ಮ ಅಸಿಸ್ಟೆಂಟ್ ಹೆಡ್ ಮಾಸ್ಟರು ಕಾಳೀ ಬಾಬು ಕಲಿಸಿಕೊಟ್ಟಂತೆ ಒಂದು ಕೈಯನ್ನು ಸೊಂಟದ ಮೇಲೆ ಇಟ್ಟುಕೊಂಡು ಇನ್ನೊಂದು ಕೈಯನ್ನು ನೆಲದ ಮೇಲೆ ಊರಿ ನರಳುವ ದನಿಯಲ್ಲಿ ಮೇಘನಾದ ಸಾಯುವ ದೃಶ್ಯವನ್ನು ಅಭಿನಯ ಮಾಡಿದ್ದೆ ಸುಖದೇವನು ಲಾಠೀ ಏಟು ತಿಂದು ನರಳುತ್ತ ಕೂಗುವ ನಾಟಕೀಯ ಭಂಗಿಯ ಮಾತು ಮಾತ್ರ ಆ ಜಾಗದ ಪರಿಸರದೊಂದಿಗೆ ಹೊಂದಿಕೊಳ್ಳಲಿಲ್ಲ - ಆದರೆ, ನಾನು ಗಮನಿಸಿದಂತೆ ಸಾಧಾರಣ ಖೈದಿಗಳು ಸುಖದೇವನ ಕೃತಕ ಸಂಕಟವನ್ನು ಹೇಗೋ ಬಯಲು ಮಾಡಿಬಿಟ್ಟರು....

"ಬಾಬುವಿಗೆ ಊಟ ಆಯಿತೆ ?"

ನನ್ನ ಚಿಂತಾಸರಣಿ ಇದ್ದಕ್ಕಿದ್ದ ಹಾಗೆ ಭಂಗವಾಯಿತು. ತಲೆ ಎತ್ತಿ ನೋಡಿದರೆ ವಾರ್ಡರ್ ಸಾಹೇಬ ಎದುರಿಗೆ ನಿಂತಿದ್ದಾನೆ! ಮುಖದಲ್ಲೂ ಮಾತಿನಲ್ಲೂ ಸಹಾನುಭೂತಿಯ ಭಾವ. ಹೊರಗಡೆ ದೀಪಗಳನ್ನು ಹಚ್ಚಿ ಎಷ್ಟೋ ಹೊತ್ತಾಗಿ ಹೋಗಿದೆ. ನಾನು ಗಮನಿಸಲೇ ಇಲ್ಲ. ಸೆಲ್ಲಿನೊಳಗೂ ದೀಪ ಹಚ್ಚಿದರೆ ಇವರಿಗೇನು ನಷ್ಟವೋ ಗೊತ್ತಿಲ್ಲ. ಬಹುಶಃ ಖೈದಿಗಳು ಸೀಮೆಎಣ್ಣೆ ಸುರಿದುಕೊಂಡು ಆತ್ಮಹತ್ಯೆ ಮಾಡಿಕೊಳ್ಳಬಹುದೆಂಬ ಭಯವೇನೋ. ಆದರೆ ಅದು ಅಷ್ಟು ಸುಲಭವೇ? ಆದರೂ ಇವರುಗಳಿಗೆ ಆ ಸಾಹಸ ಪರೀಕ್ಷೆ ಮಾಡುವುದಕ್ಕೆ ಇಷ್ಟವಿಲ್ಲ. ಇಲ್ಲಿನ ಪ್ರತಿಯೊಂದು ನಿಯಮವೂ ಹೀಗೆಯೇ. ಯಾವುದಾದರೊಂದು ಹಳೆಯ ಅನುಭವದ ಜ್ಞಾಪಕವೇ ಅದಕ್ಕೆ ಮೂಲ. ಇಂತಹುದು ತುಚ್ಛವೆಂದು ತೋರುವ ನಿಯಮದಿಂದ ಅಲ್ಲವೆ ಹೋದವರುಷ ಆದ ಖೈದಿಗಳ ದಂಗೆ ವಿಫಲವಾದದ್ದು ? ಹೊರಬಾಗಿಲ ಕಾವಲುಗಾರನನ್ನು ಹೊಡೆದು ಹಾಕಿ ಅವನಿಂದ ಬೀಗದ ಕೈಗಳ ಗೊಂಚಲನ್ನು ಕಸಿದುಕೊಂಡು ಬಿಟ್ಟಿದ್ದರು. ಆದರೇನು ? ಬಲು ದೊಡ್ಡ ಕಬ್ಬಿಣದ ಬಳೆಯಲ್ಲಿ ನೂರಕ್ಕೆ ಮೇಲ್ಪಟ್ಟು ನಾನಾ ಗಾತ್ರದ ಬೀಗದ ಕೈಗಳಿದ್ದುವು. ಅವುಗಳಲ್ಲಿ ಹೆಚ್ಚು ಸಂಖ್ಯೆ ಎಲ್ಲ ಕೆಲಸಕ್ಕೆ ಬಾರದವು. ಈ ರೀತಿಯಾಗಿ ಅಪ್ರಯೋಜಕವಾದ ಕೀಲಿಗಳನ್ನು ನಿಜವಾದ ಕೀಲಿಯೊಂದಿಗೆ ಬೆರೆಸಿಡಬೇಕೆಂದು ಜೈಲಿನ ನಿಯಮ. ದಂಗೆ ಎದ್ದ ಖೈದಿಗಳು ಈ ಬಗೆಯ ಕೀಲಿಯ ಗೊಂಚಲನ್ನು ಕೈವಶ ಮಾಡಿಕೊಂಡರೂ

ಸಹ ಬೀಗಕ್ಕೆ ಸರಿಹೋಗುವ ಕೀಲಿ ಯಾವುದೆಂದು ನೋಡಲು ಒಂದೊಂದಾಗಿ ಪರೀಕ್ಷೆ ಮಾಡುವುದರಲ್ಲಿ ಐದು ನಿಮಿಷಗಳು ಆಗಿಹೋದುವು. ಅಷ್ಟರಲ್ಲಿ ಅಲಾರ್ಮ್ ಸಿಗ್ನಲ್ ಊದಿತು. ಕೂಡಲೇ ಬಂದೂಕುಗಳನ್ನು ಹಿಡಿದು ಸಿಪಾಯಿಗಳು ಹಾಜರಾದರು. ಆಮೇಲೆ.... ಗೊತ್ತೇ ಇದೆಯಲ್ಲ!

ವಾರ್ಡರ ಪ್ರಶ್ನೆಗೆ ಜವಾಬು ಕೊಡದೆ ನಾನವನನ್ನು, "ಎಷ್ಟು ಗಂಟೆ ಈಗ ?" ಎಂದು ಕೇಳಿದೆ. "ಡ್ಯೂಟಿಯ ಸರದಿ ಬದಲಿಸುವ ಸಮಯ ಆಗಿದೆ" ಎಂದು ಉತ್ತರಿಸಿದ ವಾರ್ಡರು. ಸೆಂಟ್ರಲ್ ವಾರ್ಡಿನಲ್ಲಿ ಈಗ ಎಷ್ಟು ಖೈದಿಗಳು ಬಂಧಿಸಲ್ಪಟ್ಟಿದ್ದಾರೆ ? ಇವತ್ತು ಹೊಸ ಖೈದಿಗಳು ಎಷ್ಟು ಜನ ಬಂದಿದ್ದಾರೆ ? ಎಷ್ಟು ಮಂದಿಗೆ ಬಿಡುಗಡೆ ಆಗಿದೆ ? ಒಟ್ಟಿನ ಲೆಕ್ಕಾಚಾರ ಸರಿಯಾಗಿದೆಯೋ ? ಇದರ ತನಿಖೆ ನಡೆಯುತ್ತಿದೆ ಈ ಸಮಯದಲ್ಲಿ. ವಾರ್ಡರು ತನ್ನ ಮೊದಲಿನ ಪ್ರಶ್ನೆ ಮರೆಯದೆ ಮತ್ತೆ ಕೇಳಿದ, "ಇನ್ನೂ ಊಟ ಮಾಡಿಲ್ಲವೆ ?"

"ಇಲ್ಲ - ಹಸಿವಾಗಿಲ್ಲ" ಎಂದೆ. ಆಗವನು, "ಮೊಸರಿದೆ ಸ್ವಲ್ಪ ಊಟ ಮಾಡಿಬಿಡಿ" ಎಂದ. ವಾರಕ್ಕೊಮ್ಮೆ ಕೆಳದರ್ಜೆಯ ಖೈದಿಗಳಿಗೆ ಊಟದಲ್ಲಿ ಮೊಸರು ಕೊಡಲಾಗುತ್ತದೆ. ಆ ಮೊಸರೋ ಹೆಸರಿಗೆ ಮಾತ್ರ - ನೀರು ನೀರಾಗಿರುತ್ತದೆ. ಹಿತ್ತಾಳೆಯ ಪಾತ್ರೆಯಲ್ಲಿ ಕೊಡುತ್ತಾರೆ. ಅದರಲ್ಲೇನೋ ಸೀಕಲು ವಾಸನೆ. ಅದು ಸಹ ವಾರಕ್ಕೆ ಒಂದು ಸಲ. ಈ ನಿಯಮ ಬಿಹಾರಿನಲ್ಲಿ ಹಿಂದೆ ಕಾಂಗ್ರೆಸ್ ಮಂತ್ರಿಮಂಡಲ ಪ್ರಭುತ್ವ ಮಾಡಿದಾಗ ಜಾರಿ ಮಾಡಲ್ಪಟ್ಟಿತು. ಇದರ ಬಗೆಗೆ ಮೂರನೆಯ ದರ್ಜೆಯ ('ಸಿ' ಕ್ಲಾಸ್) ರಾಜಕೀಯ ಖೈದಿಗಳು ವ್ಯಂಗ್ಯವಾಗಿ ನಗುತ್ತ ಟೀಕೆ ಮಾಡುತ್ತಾರೆ. ಈ ಕಾಂಗ್ರೆಸ್ ಮುಂದಾಳುಗಳ ವಿವೇಚನಾ ಜ್ಞಾನ ಎಂಥಾದ್ದು ? ಅಲ್ಲ, ರಾಜಕೀಯ ಖೈದಿಗಳಲ್ಲೂ ಪಕ್ಷಪಾತವೇಕೆ ? ಎಲ್ಲರನ್ನೂ ಒಂದೇ ಶ್ರೇಣಿಯೆಂದು ಪರಿಗಣಿಸಬಾರದಾಗಿತ್ತೆ. ವರ್ಗಭೇದ ಯಾಕೆ ? ಮೇಲಿನ ಶ್ರೇಣಿಗೆ ('ಎ' ಕ್ಲಾಸ್) ಹತ್ತಾಣೆ ಭತ್ಯ ಮತ್ತು ('ಸಿ' ಕ್ಲಾಸ್) ಕೆಳ ದರ್ಜೆಯವರಿಗೆ ಮಾತ್ರ ಮೂರೂವರೆ ಆಣೆ ಕೊಡುವುದು ಯಾವ ನ್ಯಾಯ ? ಹೋಗಲಿ, ಕೆಳದರ್ಜೆಯವರಿಗೂ ತಮ್ಮ ಸ್ವಂತ ಖರ್ಚಿನಲ್ಲಿ ಬೇಕಾದದ್ದನ್ನು ತರಿಸಿಕೊಳ್ಳುವ ಸ್ವಾತಂತ್ರ್ಯ ಕೊಟ್ಟಿದ್ದರೆ ಇವರಿಗೆ ಏನು ನಷ್ಟವಾಗುತ್ತಿತ್ತು ? ತಿಂಗಳಿಗೆ ಎರಡು ಬಾರಿ ತಮ್ಮವರಿಗೆ ಪತ್ರ ಬರೆಯುವ ಅವಕಾಶ ಕೊಟ್ಟರೆ ಇವರಿಗೆ ಹೋದದ್ದೇನು ? ಪೋಗಲಿ, ಸ್ವಂತ ಖರ್ಚಿನಲ್ಲಿ ಬೀಡಿ, ಸಿಗರೇಟು ಇಂಥ ಜುಜುಬಿ ಸೌಕರ್ಯಗಳನ್ನಾದರೂ ಪಡೆಯುವ ಸೌಲಭ್ಯ ಬೇಡವೇ ? ಹೀಗ ಎಷ್ಟೋ ಟೀಕೆಗಳು - ದೂರುಗಳು.

ಸೆಂಟ್ರಲ್ ಟವರಿನ ಮೇಲುಗಡೆಯಿಂದ ವಾರ್ಡರನೊಬ್ಬ ದೊಡ್ಡ ದನಿಯಲ್ಲಿ ರಾಗವಾಗಿ ಕೂಗುವುದು ಕೇಳಿ ಬರುತ್ತಿದೆ. "ಬೋಲೋರೆ ಏಕ್ ನಂಬರ್!"..... "ಬೋಲೋರೆ ದೋ ನಂಬರ್!".... "ಬೋಲೋರೆ ತೀನ್ ನಂಬರ್!" "ಬೋಲೋರೆ ಚಾ....ಆ...ರ್ ನಂಬರ್... ಬೋಲೋರೆ... ನಯಾ.... ಗೋಲ್..." "ಬೋಲೋರೆ ಔರತ್ ಕಿತಾ (ಹೆಂಗಸರ ವಾರ್ಡ್) ಆ...." ಹೀಗೆ ಪ್ರತಿಯೊಂದು ವಾರ್ಡನ್ನೂ ಉದ್ದೇಶಿಸಿ ಜವಾಬು ಬರುವವರೆಗೂ ಕೂಗುತ್ತ ಇರುತ್ತಾನೆ ವಾರ್ಡರು.

ಎಲ್ಲ ವಾರ್ಡುಗಳಿಂದಲೂ ಜವಾಬು ಬಂದಿಲ್ಲ. ಬಹುಶಃ ನಮ್ಮ ವಾರ್ಡಿಗೂ ಅವನ ಕೂಗು ಕೇಳಿಸಿಲ್ಲ. ಎಷ್ಟೋ ವಾರ್ಡುಗಳಿಂದ ಜವಾಬು ಬರದಿದ್ದರೂ ಅವನು ಲಕ್ಷ್ಯಕೊಡುವುದೇ ಇಲ್ಲ. ಅವನ ದಿನಚರಿಯ ಕೆಲಸ ಕೂಗುವುದು. ಸುಮ್ಮನೆ ಯಂತ್ರದಂತೆ, ಗ್ರಾಮಾಫೋನ್ ರಿಕಾರ್ಡಿನಂತೆ ಒಮ್ಮೆ ಕಿರುಚಿ ಹೋದರೆ ಮುಗಿದ ಹಾಗೆ. ಪ್ರತಿಯೊಂದು ವಾರ್ಡಿನಲ್ಲೂ ಎಷ್ಟೆಷ್ಟು ಮಂದಿ ಖೈದಿಗಳು ಕೂಡಿ ಹಾಕಲ್ಪಟ್ಟಿದ್ದಾರೆ ಎಂಬ ಮಾಹಿತಿ ಕೊಡಬೇಕಾಗಿ ಆ ಕೂಗಿನ ನಿರೀಕ್ಷೆ. ನ್ಯಾಯವಾಗಿ ಪ್ರತಿಯೊಂದು ವಾರ್ಡಿನ ವಾರ್ಡರೂ ಉತ್ತರ ಕೊಡಬೇಕು - ಬಹುಶಃ ಆಯಾ ವಾರ್ಡಿನ ಖೈದಿಗಳ ಸಂಖ್ಯೆ ಇದಕ್ಕೆ ಮೊದಲೇ ಕೆಳಗಡೆ ಆಫೀಸಿನ ರಿಜಿಸ್ಟರಿನಲ್ಲಿ ದಾಖಲಾಗಿ ಬಿಟ್ಟಿರುತ್ತದೆಂದೇ ಈ ಕೂಗಿಗೆ ಅಷ್ಟು ನಿರ್ಲಕ್ಷ್ಯ. 'ಆದರೂ ಅದೊಂದು ರೂಢಿ ನಿಯಮ ಪಾಲನೆ ನಡೆದುಕೊಂಡು ಹೋಗಬೇಕು. 'ಟಂಗ್.... ಟಂಗ್' ಎಂದು ಗಂಟೆಯ ಶಬ್ದ ಕೇಳಬರುತ್ತದೆ. ಅದು ಲೆಕ್ಕಾಚಾರ ಮುಗಿಯಿತು ಎಂಬುದಕ್ಕೆ ಸೂಚನೆ. ರಾತ್ರಿ ಒಂಬತ್ತು ಗಂಟೆ. ಇವತ್ತಿಗೆ ಇದು ಕೊನೆ. ಟವರಿನ ಮೇಲೆ ಉರಿಯುತ್ತಿರುವ ಎಲೆಕ್ಟ್ರಿಕ್ ದೀಪ ಸುಮಾರು ಐನೂರು ಕ್ಯಾಂಡಲ್ ಪವರಿನದಿರಬೇಕು. ಆದರೆ 'ಬ್ಲಾಕ್‌ಔಟ್'* ಸಲುವಾಗಿ ಅವರ ಸುತ್ತ ಕರಿಯ ಆವರಣ ಹೊದಿಸಲಾಗಿತ್ತು. ಆದರೆ ಸರಿಯಾಗಿ ಅದರ ತಳಬದಿಯಲ್ಲೇ ಬಿದಿರಿನ ಕಡ್ಡಿಗಳಿಂದ ಹೆಣೆದ ದೊಡ್ಡದೊಂದು ಛತ್ರಿಯಿದೆ - ವಾರ್ಡರನನ್ನು ಮಳೆ, ಬಿಸಿಲುಗಳಿಂದ ಕಾಪಾಡುವುದಕ್ಕೆಂದು.

ಬ್ಲಾಕ್ ಔಟ್ ಸಲುವಾಗಿ ಟವರಿನ ಗೋಪುರಕ್ಕೆಲ್ಲ ಕರಿಯ ಬಣ್ಣ ಬಳಿಯಲಾಗಿದೆ. ಆದರೆ ಈ ಛತ್ರಿಯ ಮೇಲೆ ಬಿದ್ದ ಬೆಳಕು ನಾಲ್ಕೂ ದಿಕ್ಕುಗಳಲ್ಲಿ ಎಷ್ಟು ಪ್ರತಿಬಿಂಬಿತವಾಗುತ್ತದೆಂದರೆ ಒಂದೇ ಸಮನಾಗಿ ಅದರ ಕಡೆ ನೋಡಲಾಗುವುದಿಲ್ಲ. ಈ ರೀತಿಯಾಗಿ ಆ ಛತ್ರಿಯು ಬ್ಲಾಕ್‌ಔಟ್‌ನ ಪ್ರಯೋಜನವನ್ನೇ ವಿಫಲ ಮಾಡಿಬಿಟ್ಟಿದೆ. ಈ ಗೋಪುರ ಮತ್ತು ಅದರ ಮೇಲೆ ಇರುವ ಛತ್ರಿಯನ್ನು ನೋಡಿದರೆ ನನಗೆ ಕಾಶಿಯ ಅಹಲ್ಯಾಬಾಯಿ ಘಾಟಿನ ನೆನಪು ಬರುತ್ತದೆ. ಘಾಟಿನ ಗೋಪುರದ ಮೇಲುಗಡೆ ನಮ್ಮ ಸಂಜೆಯ ಕೂಟ ಕೂಡುವುದು ವಾಡಿಕೆ. ಸಿಂಹೇಶ್ವರ ಸುಕೂಲನು ಒಂದು ದಿನ ಅದರ ಮೇಲೆ ನಿಂತು ತಾಂಬೂಲದ ಉಗುಳನ್ನು ಪಿಚಕಾರಿಯಂತೆ ಉಗುಳಿದ್ದ. ಅದನ್ನು ಕುರಿತು ಅದೆಷ್ಟು ಗಲಾಟೆ ಆ ದಿನ! ನನ್ನನ್ನು ತನ್ನ ದಳಕ್ಕೆ ಸೇರಿಕೊಳ್ಳಬೇಕೆಂದು ಅವನಿಗೆ ಇಷ್ಟವೆಂದು ನನಗೆ ಗೊತ್ತಾಯಿತು. ಆದರೆ ನಾನು ಅವನ ಇಷ್ಟದಂತೆ ಮಾಡಲಾಗಲಿಲ್ಲ. ನನ್ನ ಅಂತರ್ಯವನ್ನೇ ಪರೀಕ್ಷೆ ಮಾಡಿಕೊಂಡು ನೋಡಿದರೆ ಕೇವಲ ಧೈರ್ಯ ಸಾಲದೆ ಅವನ ದಳಕ್ಕೆ ಸೇರಲಿಲ್ಲವೇ ಹೊರತು ಅವರ ಕಾರ್ಯಕ್ರಮಕ್ಕೆ ಸಹಾನುಭೂತಿಯಿಲ್ಲದೆ ಅಲ್ಲ ಎಂದು ಹೇಳಬಲ್ಲೆ.... ಆದರೆ ಈಗ ಆ ಭಯ ಎಲ್ಲಿ ಹೋಯಿತು? ವಯಸ್ಸು ಬೆಳೆದ ಹಾಗೆಲ್ಲ ಮನುಷ್ಯರು ಹೆಚ್ಚುಹೆಚ್ಚಾಗಿ ಸಾವಿಗೆ ಹೆದರುತ್ತಾರೆಂದು ಕೇಳಿದ್ದೇನೆ. ಆದರೆ ನನಗೇಕೆ ಹಾಗೆ ಆಗಿಲ್ಲ? ಈಗ ಸಿಂಹೇಶ್ವರನ ಸಂಗಡ ಭೇಟಿಯಾದರೆ ಎಷ್ಟು ಮಾತಾಡಬಹುದಾಗಿತ್ತು! ಬಹಳ ಕಾಲದ ಮೇಲೆ ಒಮ್ಮೆ ಅವನನ್ನು ರಾಮಗಢ್

---

* ಯುದ್ಧಕಾಲದಲ್ಲಿ ಜೈಲುಗಳಲ್ಲೂ ಈ 'ಬ್ಲಾಕ್‌ಔಟ್' ಪಾಲಿಸಲಾಗುತ್ತಿತ್ತು.

ಕಾಂಗ್ರೆಸ್ ಅಧಿವೇಶನದಲ್ಲಿ ಕಂಡೆ. ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರದಲ್ಲಿದ್ದಾಗ ಅವನು ಬರೈಲಿ ಜೈಲಿನಿಂದ ಬಿಡುಗಡೆ ಮಾಡಲ್ಪಟ್ಟಿದ್ದ. ಮೇಲ್ (ಟಪಾಲ್) ಡಕಾಯತಿಯ ಕೇಸಿನಲ್ಲಿ ಅವನಿಗೆ ಸಜಾ ಆಗಿದ್ದದ್ದು. ಲಕ್ನೌ ಬಳಿ ಆ ಸ್ಥಳ. ಹೆಸರು ಪಿಪ್‌ರಾಹಾ ಅಥವಾ ಇನ್ನೇನೋ ಸರಿಯಾಗಿ ನೆನಪಿಲ್ಲ.

ಹೊಸ ವಾರ್ಡರು (ರಾತ್ರಿ ಡ್ಯೂಟಿಯವನು) ಯಾವಾಗ ಬಂದನೋ ಗೊತ್ತೇ ಆಗಲಿಲ್ಲ. ನನ್ನ ಧ್ಯಾನ ಭಂಗ ಮಾಡಿ ನನ್ನನ್ನು, "ಸ್ವಾಮೀ, ಒಂದು ಬೀಡಿ ಸೇದುತ್ತೀರಾ?" ಎಂದು ಕೇಳಿದ.

ಇವತ್ತೇನೋ ವಾರ್ಡರುಗಳು ಸಹ ನನ್ನ ಬಳಿ ಆತ್ಮೀಯರಾಗಲು ತವಕ ತೋರುತ್ತಿದ್ದಾರೆ. ನನಗೆ ಅವರಿಂದ ಏನಾದರೂ ಉಪಕಾರವಾದೀತೇನೋ, ಸ್ವಲ್ಪವಾದರೂ ಖುಷಿ ಪಡಿಸೋಣ ಎಂದು ಆಸೆ ಪಡುತ್ತಿದ್ದಾರೆ. ಈ ಸಹಾನುಭೂತಿ ಅವರಲ್ಲಿ ತನಗೆ ತಾನೇ ಹುಟ್ಟಿರುವುದು, ಸ್ವಲ್ಪವೂ ಸೋಗಿಲ್ಲ. ಪಾಪ, ಆ ವಾರ್ಡರು ಬೀಡಿ ಕೊಡಲು ಬಂದರೆ ಬೇಡಪ್ಪ ಎಂದು ಹೇಳಿದಾಗ ಎಷ್ಟು ಪೇಚಾಡಿಕೊಂಡನೋ ಅನ್ನಿಸತ್ತೆ.... ಅದನ್ನು ಮರೆಮಾಚಲು ಆ ಕಡೆ ಈ ಕಡೆ ನೋಡುತ್ತ ಪೆಚ್ಚು ಮುಖ ಹಾಕಿಕೊಂಡು ತನ್ನ ಡ್ಯೂಟಿಯನ್ನು ಮುಗಿಸುವುದರಲ್ಲಿ ನಿರತನಾದ. ಒಮ್ಮೆ ಬಾಗಿಲಿಗೆ ಹಾಕಿದ್ದ ಬೀಗವನ್ನು 'ಖಡಂಗ್' ಎಂದು ಅಲ್ಲಾಡಿಸಿದ. ಆಮೇಲೆ ಸಲಾಕೆಗಳ ಮೇಲೆ ಶಬ್ದ ಮಾಡುತ್ತ ಕೈಯಾಡಿಸಿದ. ಮತ್ತೆ ಬಾಗಿಲನ್ನು ಅಲ್ಲಾಡಿಸಿ ನೋಡಿದ. ಇದರ ಉದ್ದೇಶ ಬಾಗಿಲು ಸರಿಯಾಗಿ ಮುಚ್ಚಿದೆಯೇ, ಇಲ್ಲವೇ, ಅಗುಳಿ ಸರಿಯಾಗಿ ಹಾಕಲ್ಪಟ್ಟಿದೆಯೇ, ಇಲ್ಲವೇ ಎಂದು ನೋಡುವುದಕ್ಕೆ. ಹಿಂದಿನ ವಾರ್ಡರು ಇದ್ದಾಗಲೇ ಬಾಗಿಲು, ಬೀಗ, ಚಿಲಕ ಎಲ್ಲಾ ಬಂದೋಬಸ್ತಾಗಿದೆಯೋ ಇಲ್ಲವೋ ನೋಡಬೇಕಾಗಿತ್ತು. ಖೈದಿ ಪರಾರಿಯಾದರೆ ಅದರ ಜವಾಬುದಾರಿ ಹಿಂದಿನ ವಾರ್ಡರದಲ್ಲ. ರಾತ್ರಿಯ ವಾರ್ಡರಿಗೆ ತಾನು ಎಲ್ಲ ಬಂದೋಬಸ್ತು ಮಾಡಿ ಒಪ್ಪಿಸಿದ್ದೆ ಎಂದು ಅವನು ಸುರಕ್ಷಿತವಾಗಿರಬಹುದು. ಅದಕ್ಕೇ ಈ ವ್ಯವಸ್ಥೆ. ಆದರೆ ಈಗ ಹಿಂದಿನ ವಾರ್ಡರು ತನ್ನ ಡ್ಯೂಟಿ ಮುಗಿಸಿ ಹೊರಟುಹೋಗಿದ್ದಾನೆ. ಗೂಡು ಸೇರಿಕೊಳ್ಳುವ ಆತುರ. ಡ್ಯೂಟಿ ಮುಗಿದೊಡನೆ ಮನೆ ಕಡೆ ದೃಷ್ಟಿ. ಒಂದು ನಿಮಿಷ ತಡ ಆಗಕೂಡದು. ಬೆಳಗಿನಿಂದ ಒಂದೇ ಸಮನಾಗಿ ಎಂಟು ಗಂಟೆ ಡ್ಯೂಟಿ ಮಾಡಿದ್ದಾನೆ, ಪಾಪ.... ಅವನದು ತಾನೇ ತಪ್ಪೇನು?

ವಾರ್ಡರಿಗೆ ಮನಸ್ಸು ಬೇಸರವಾಗಿದೆಯೆಂದು ತಿಳಿದುಕೊಂಡು ನಾನು ಅವನನ್ನ ಪ್ರಸನ್ನ ಮಾಡಲು, "ಸಿಪಾಯಿಜೀ, ಆ ಕಡೆ 'ಡಿಗ್ರಿ' (ಸೆಲ್)ಗಳ ಕೆಲಸವೆಲ್ಲ ಪೂರೈಸಿತೇ?" ಎಂದು ಪ್ರಶ್ನೆ ಮಾಡಿದೆ. ಅದಕ್ಕೆ ಅವನು, "ಹ್ಞಾ... ಹತ್ತು ನಂಬರ್ ಒಂಬತ್ತು ನಂಬರ್, ಏಳು ನಂಬರ್ ಮತ್ತು ಒಂದು ನಂಬರ್ - ಈ ಐದು ಡಿಗ್ರಿ ಸೆಲ್‌ಗಳಲ್ಲಿ 'ಆಸಾಮೀ' ಇದ್ದಾರೆ. ಇವತ್ತು ಹತ್ತು ನಂಬರಿನಿಂದ ಶುರು ಮಾಡಿದ್ದೀನಿ. ವಾರ್ಡಿನ ಸಿಪಾಯಿ ಎಲ್ಲೋ ಹೊರಗಡೆ ಹೋಗಿ ಹರಟೆ ಹೊಡೆಯುತ್ತಿದ್ದಾನೆ. ನನ್ನ ಮೇಲೆ ಮತ್ತು ಮೂರನೆಯ ನಂಬರ ಸಿಪಾಯಿ ಮೇಲೆ ಲೆಕ್ಕ ಮಾಡುವ ಭಾರ ಹೊರಿಸಲಾಗಿದೆ" ಎಂದ.

ಕಂಡೆಮ್ಡ್ ಸೆಲ್ಸ್ ಅಂದರೆ 'ಫಾಸಿ' ಸೆಲ್ಲುಗಳಲ್ಲಿ ಐದು ಜನ ಖೈದಿಗಳು. ಅವರನ್ನೇ

'ಆಸಾಮಿ'ಗಳೆನ್ನುವುದು. ಕಂಡೆಮ್ಡ್ ಸೆಲ್ ಅಂದರೆ ನನ್ನ ಮನಸ್ಸಿನಲ್ಲಿ ಈ ಸೆಲ್ಲುಗಳು ಇಂಜಿನೀರಿಂಗ್ ವಿಭಾಗದವರ ಕಡೆಯಿಂದ ಕಂಡೆಮ್ಡ್ (ಅಂದರೆ ತಿರಸ್ಕೃತ ವಾದಂಥವು) 'ಕಂಡೆಮ್ಡ್ ಪ್ರಿಜನರ್ಸ್' ('ಫಾಸಿ' ಶಿಕ್ಷೆ ವಿಧಿಸಲ್ಪಟ್ಟಿರುವ ಖೈದಿಗಳು) ಆದಂಥವರಿಗೋಸ್ಕರವಾಗಿ ಪ್ರತ್ಯೇಕವಾಗಿಡಲ್ಪಟ್ಟವು ಎಂದು ಅನ್ನಿಸುತ್ತದೆ. ಹಾಗಾದರೆ ಈ ಹೆಸರಿರುವ ವಾರ್ಡುಗಳನ್ನು ನೋಡಿದರೆ ಮೊದಲಲ್ಲಿ ಈ ಮಾತು ಅನ್ನಿಸುವುದಿಲ್ಲ. ಒಂಬತ್ತನೆಯ ಮತ್ತು ಹತ್ತನೆಯ ನಂಬರ್ ಸೆಲ್ಲುಗಳಲ್ಲಿ ಇಬ್ಬರು ಬಾಂಬ್ ಕೇಸಿನಲ್ಲಿ ಆಪಾದಿತರಾದ 'ಆಸಾಮಿ'ಗಳು. ಇವರನ್ನು 'ಅಂಡರ್ ಟ್ರಯಲ್' ವಾರ್ಡುಗಳಲ್ಲಿ ಇಡಬೇಕಾಗಿತ್ತು. ಈ ಸೆಲ್ಲುಗಳಲ್ಲಿ ಯಾಕೆ ತಂದರೋ ಗೊತ್ತಿಲ್ಲ. 'ಫಾಸೀ' ಸೆಲ್ಲುಗಳು ಇಪ್ಪತ್ತಿವೆ. ಇವುಗಳಲ್ಲದೆ ಇನ್ನೂ ನಲವತ್ತು - ಐವತ್ತು ಬೇರೆ ಸೆಲ್ಲುಗಳಿವೆ. ಅವುಗಳಲ್ಲಿ ಯಾವುದಾದರೂ ಒಂದರಲ್ಲಿ ಇಡಬಹುದಾಗಿತ್ತು. ಬಹುಶಃ ಪೊಲೀಸರ ಕಡೆಯಿಂದ ಬಂದ ಆದೇಶವಿರಬೇಕು. ಬಹುಶಃ ಇವರ ಕಡೆಯಿಂದ ತಪ್ಪು ಒಪ್ಪಿಕೊಳ್ಳುವ ಹೇಳಿಕೆಗಳನ್ನು ನಿರೀಕ್ಷಿಸಿ, ಇವರನ್ನು ಇತರ ರಾಜಕೀಯ ಬಂದಿಗಳ ಸಂಪರ್ಕದಿಂದ ದೂರವಾಗಿಡುವ ಉದ್ದೇಶ್ಯವಿರಬಹುದು. ಏಳನೆಯ ನಂಬರಿನಲ್ಲಿರುವ ಆಸಾಮಿ ಹುಚ್ಚ. ಸದಾ ತನ್ನಲ್ಲಿ ತಾನೇ ಮಾತಾಡಿಕೊಳ್ಳು ತ್ತಿರುತ್ತಾನೆ. ವಾರ್ಡರನನ್ನು ಕಂಡೊಡನೆ ಬೈಯ್ಯಬಾರದ ಮಾತುಗಳಲ್ಲಿ ಬೈಯುತ್ತಾನೆ. ಒಂಬತ್ತು, ಹತ್ತನೆಯ ನಂಬರ್ ಸೆಲ್ಲುಗಳ ಬಾಗಿಲು ಸದಾ ತೆರೆದಿರುತ್ತದೆ. ಆದರೆ ಹಗಲಲ್ಲಿ ಮಾತ್ರ ಎಂದಾದರೂ ಮಧ್ಯಾಹ್ನದ ವೇಳೆ ಅಲ್ಲಿರುವವರು ನನ್ನ ಸೆಲ್ಲಿನ ಸ್ಪೆಷಲ್ ವಾರ್ಡರಿಗೆ ಬೀಡಿ, ಸಕ್ಕರೆ ಮುಂತಾದುವನ್ನು ಕೊಟ್ಟು ನನ್ನೊಡನೆ ಒಂದೆರಡು ಮಾತಾಡಿ ಹೋಗಲು ಅನುಮತಿ ಪಡೆಯುವರು. ಸಂಜೆಯ ವೇಳೆ ಅವರ ಸೆಲ್ ಬಾಗಿಲುಗಳು ಮುಚ್ಚಲ್ಪಟ್ಟ ಮೇಲೆ ಅವರು ತಮ್ಮ ಸೆಲ್ಲಿನೊಳಗಡೆಯಿಂದಲೇ ಏಳನೆಯ ನಂಬರಿನ ಹುಚ್ಚನನ್ನು ಕೆಣಕುವರು. ಅವನ ಹೆಸರು ಹಿಡಿದು ಕೂಗಿದೊಡನೆ ಅವನು ದೊಡ್ಡ ದನಿಯಲ್ಲಿ ಬೈಯಲು ತೊಡಗುವನು. ವಾರ್ಡರುಗಳು ಆ ಮನುಷ್ಯ ನಿಜವಾಗಿ ಹುಚ್ಚನಲ್ಲ, ಸುಮ್ಮನೆ ಹಾಗೆ ನಟಿಸುತ್ತಾನೆ ಎನ್ನುತ್ತಾರೆ - "ಇಂಥವರನ್ನು ಅವರುಗಳು ಎಷ್ಟೋ ನೋಡಿದ್ದಾರೆ. ಸರಕಾರವೇನು ಮೂರ್ಖರಲ್ಲ, ಹೀಗೆ ವೇಷ ಕಟ್ಟಿಕೊಂಡವರನ್ನು ಬಿಡುಗಡೆ ಮಾಡಲಿಕ್ಕೆ." ಮೂರನೆಯ ನಂಬರಿನಲ್ಲಿರುವವನೊಬ್ಬ ಖೂನಿ ಆಸಾಮಿ. ಸ್ವಂತ ಸೋದರನನ್ನೇ ಕೊಂದು ಹಾಕಿದ್ದಾನಂತೆ. ಅದೊಂದು ಕೆಟ್ಟ ಕತೆ. ಅವರ ಕುಟುಂಬದ ಹೊಲಸು ಜೀವನದ ವೃತ್ತಾಂತವನ್ನು ಅವನ ಹೆಂಡತಿಯೇ ಕೋರ್ಟಿನಲ್ಲಿ ಜಡ್ಜ್ ಸಾಹೇಬರ ಮುಂದೆ ವಿವರಿಸುತ್ತ ಹೇಳಿಕೆ ಕೊಟ್ಟಿದ್ದಾಳೆ. ಹೈಕೋರ್ಟಿನಲ್ಲಿ ಅಪೀಲು ಸಹ ಆಗಿತ್ತು. ಅದೂ ವಜಾ ಆಗಿ ಹೋಯಿತು. ಆ 'ಆಸಾಮಿ' ಈಗ ಹಗಲು, ರಾತ್ರಿ 'ಸೀತಾರಾಮ್ ಸೀತಾರಾಮ್' ಎನ್ನುತ್ತ ಭಜನೆ ಮಾಡುತ್ತಿರುತ್ತಾನೆ.

ವಾರ್ಡರನು ನನ್ನನ್ನು 'ಆಸಾಮಿ' ಎಂಬುದಾಗಿ ಕರೆದದ್ದು ನನಗೇಕೋ ಇಷ್ಟವಾಗಲಿಲ್ಲ. ಅದರ ಬದಲು ಬೇರೆ ಯಾವುದಾದರೂ ಒಳ್ಳೆಯ ಪದ ಉಪಯೋಗಿಸಿದ್ದರೆ ಸರಿ ಹೋಗುತ್ತಿತ್ತು. ಚಿಕ್ಕ ವಯಸ್ಸಿನಿಂದಲೂ ಆಗಿರುವ ಶಿಕ್ಷಣ, ಶಿಸ್ತು, ಸಂಸ್ಕಾರ - ಇವೆಲ್ಲ ಮನಸ್ಸಿನ ಮೇಲೆ ಒಂದು ಬಗೆಯ ಮುದ್ರೆಯೊತ್ತಿರುತ್ತವೆ.

ಅದನ್ನು ಒಮ್ಮೆಗೇ ಅಳಿಸಿ ಹಾಕಿಬಿಡುವುದು ಸಾಧ್ಯವಿಲ್ಲ. ಆಮೇಲೆ ಅಂದುಕೊಳ್ಳುತ್ತೇನೆ - ಏನೀಗ, ವಾರ್ಡರನು ಸರಿಯಾಗೇ ಕೂಗಿದ್ದಾನೆ. ನನ್ನನ್ನು 'ಆಸಾಮಿ' ಅನ್ನದೆ ಇನ್ನೇನು ಅನ್ನಬೇಕು ? ಇವತ್ತಿನ ದಿನ ನಾನೇ ಈ ಜೈಲಿನಲ್ಲಿರುವವರಲ್ಲೆಲ್ಲ ದೊಡ್ಡ 'ಆಸಾಮಿ'. 'ಫಾಸಿ' ಶೀಘ್ರದಲ್ಲೇ ಆಗುವ 'ಆಸಾಮಿ'ಯನ್ನು ಒಂದನೆಯ ನಂಬರು ಸೆಲ್ಲಿನಲ್ಲಿಡುತ್ತಾರೆ. ಒಂದನೆಯ ನಂಬರು ಸೆಲ್ಲಾದ ಮೇಲೆ ಒಂದು ಬಾಗಿಲಿದೆ. ಕೇವಲ ಫಾಸಿಗೆ ಹಾಕುವ ಸಮಯದಲ್ಲಿ ಈ ಬಾಗಿಲನ್ನು ತೆರೆದು ಆಸಾಮಿಯನ್ನು ಫಾಸಿಯ ಸ್ತಂಭಕ್ಕೆ ಕೊಂಡುಹೋಗಲಾಗುತ್ತದೆ. ಅಲ್ಲಿಯವರೆಗೂ ಬಾಗಿಲು ಮುಚ್ಚೇ ಇರುತ್ತದೆ. ಆ ಕಡೆಯ ಗಳಿಗೆ ಬರುವುದಕ್ಕೆ ಮೊದಲೇ ಆ ಬಾಗಿಲನ್ನು ನೋಡುವ ಇಚ್ಛೆಯಾಗುತ್ತದೆ ನನಗೆ. ಅದರ ಬೀಗವು ತುಕ್ಕು ಹಿಡಿದಿರುತ್ತದೆಯೆ ? ನನಗೂ ಸಾವಿಗೂ ಮಧ್ಯೆ ಇರುವುದು ಈ ಬಾಗಿಲು. ಇಷ್ಟೆಲ್ಲಾ ಯೋಚಿಸಿದರೂ ಕಡೆಗೂ 'ಆಸಾಮಿ' ಎಂಬ ಪದ ನನ್ನ ಮನಸ್ಸನ್ನು ಚುಚ್ಚುತ್ತಿದೆ. ಬಾಂಬು ಮೊಕದ್ದಮೆಯ ಆಳುಗಳನ್ನೂ ಸಿಪಾಯಿ 'ಆಸಾಮಿ' ಎಂದು ಕರೆದಿದ್ದ. ಆಗ ಅದು ಕಟುವಾಗಿ ತೋರಲಿಲ್ಲ. ಬಹುಶಃ ಕೆಲವು ಕಾಲದಿಂದಲೂ 'ಬಾಂಬು ಕೇಸಿನ ಆಸಾಮಿಗಳು' ಎಂಬ ಮಾತುಗಳನ್ನು ಕೇಳಿ ನನ್ನ ಕಿವಿಗೆ ಅಭ್ಯಾಸವಾಗಿ ಹೋಗಿತ್ತು. ಅದಕ್ಕೇನೋ ಈ ಮಾತುಗಳೊಂದಿಗೆ ದೇಶಭಕ್ತರ ಮಾತೃಭೂಮಿಯ ಪ್ರೇಮದ ಎಷ್ಟೋ ನೆನಪುಗಳು ಹೆಣೆದುಕೊಂಡು ಹೋಗಿವೆ. ಅದೂ ನನ್ನ ಮನಸ್ಸಿನಲ್ಲಂತೂ. ಆದರೆ 'ಫಾಸಿ'ಯ ಆಸಾಮಿ ಎಂಬ ಮಾತು ಮಾತ್ರ ಕಿವಿಗೆ ಬಿದ್ದರೆ ನನ್ನ ಮನಸ್ಸಲ್ಲಿ ಸಾಮಾನ್ಯ ಕೊಲೆಪಾತಕರು, ಡಕಾಯಿತರು, ಇಂಥವರ ವಿಷಯ ಜ್ಞಾಪಕಕ್ಕೆ ಬರುತ್ತದೆ. ಇವರುಗಳ ಚಿತ್ರವೇ ಈ ಮಾತುಗಳೊಂದಿಗೆ ಸೇರಿಕೊಂಡು ನನ್ನ ಮನಸ್ಸಲ್ಲಿ ಬೇರೂರಿಬಿಟ್ಟಿದೆ. ಈ ವಾರ್ಡರನು 'ಆಸಾಮಿ' ಎಂದು ಕರೆದು ಕಳ್ಳ, ಡಕಾಯಿತರ ಸಂಗಡ ನನ್ನನ್ನೂ ಒಟ್ಟಿಗೆ ಸೇರಿಸಿಬಿಟ್ಟಿದ್ದಾನೇನೋ ಎನ್ನಿಸುತ್ತದೆ. ಈ ಕಾರಣದಿಂದಲೇ ಏನೋ, ಆ ಪದದ ವಿರೋಧವಾಗಿ ನನ್ನ ಆಕ್ಷೇಪಣೆ. ಸಾಧಾರಣ ಜೈಲು ವಾರ್ಡರಿನ ದೃಷ್ಟಿಯಲ್ಲೂ ನಾನು ದೇಶಸೇವಕನೆಂಬ ಗೌರವಕ್ಕೆ ಅರ್ಹನಲ್ಲವಲ್ಲ ಎಂದು ನನ್ನ ಅಂತರ್ಯದಲ್ಲಿ ಸುಮ್ಮನೆ ನೋಯುತ್ತದೆ. ನನ್ನ ತ್ಯಾಗಕ್ಕಾಗಿ ಅವನ ಕಡೆಯಿಂದ, ಮಾತಿನಲ್ಲಾಗದೆ ಹೋದರೂ ಆಚರಣೆ, ಉಪಚಾರಗಳಲ್ಲಾದರೂ ಒಂದು ಪ್ರಶಂಸೆ ಸಿಗಬಹುದೆಂಬ ಅಪೇಕ್ಷೆ ಇತ್ತು. ಇವರೆಲ್ಲರಿಗೋಸ್ಕರ ನಾನು ನನ್ನ ಪ್ರಾಣವನ್ನೇ ತ್ಯಾಗ ಮಾಡುತ್ತಿದ್ದೇನೆ. ಇವರಿಗೆಲ್ಲಿಯದು ಕೃತಜ್ಞತೆ ? ಅದಿಲ್ಲ.... ಅದರ ಬದಲಾಗಿ ಇವರಲ್ಲಿ ತೋರುವುದು ಕೇವಲ ಮರುಕ. ದೇಶಭಕ್ತರ ಪರವಾಗಿರುವ ಸಹಾನುಭೂತಿಯೂ ಅಲ್ಲ. ಕೇವಲ ಇವತ್ತೋ ನಾಳೆಯೋ ಅಥವಾ ಇನ್ನು ಕೆಲವೇ ಗಂಟೆಗಳಿಗೋ ಈ ಸುಂದರವಾದ ಭೂಮಿಯ ಸಹವಾಸವನ್ನೇ ಬಿಟ್ಟು ಹೋಗುತ್ತಿರುವವನ ಕಡೆ ಅನುಕಂಪ.... ಅಷ್ಟೆ !

ನಮ್ಮ ಅತ್ತೆಯ ವಿಷಯ ನೆನಪಿಗೆ ಬರುತ್ತದೆ. ನಹಾಹಟಿ* ಜಂಕ್ಷನ್ನಿನಲ್ಲಿ ಅತ್ತೆಯನ್ನು ಪಶ್ಚಿಮದ ಕಡೆಯ ಟ್ರೈನಿನಲ್ಲಿ ಹತ್ತಿಸಲು ಹೋಗಿದ್ದೆ ಒಮ್ಮೆ. ಅತ್ತೆಯು ತಲೆ ಕೂದಲನ್ನು ಸಣ್ಣದಾಗಿ ಕತ್ತರಿಸಿದ್ದರು. ಉಟ್ಟಿದ್ದುದು ಕಾವಿ ಸೀರೆ. ಕೊರಳಲ್ಲಿ

---

*ಕಲಕತ್ತೆಗೆ ಸ್ವಲ್ಪ ದೂರದಲ್ಲಿರುವ ಒಂದು ರೈಲ್ವೆ ಜಂಕ್ಷನ್.

ತುಳಸೀ ಮಾಲೆ. ತನ್ನ ಸ್ವಂತ ಸಂಸಾರದೊಂದಿಗೆ ಅತ್ತೆ ಈಗ ಯಾವ ಸಂಪರ್ಕವನ್ನೂ ಇಟ್ಟುಕೊಂಡಿಲ್ಲ. ಯಾವುದೋ ಮಠದಲ್ಲೋ ಆಶ್ರಮದಲ್ಲೋ ಇರುವುದು. ಆ ಸಮಯದಲ್ಲಿ ನವದ್ವೀಪದಿಂದ ಬೃಂದಾವನದ ಕಡೆ ಹೊರಟಿದ್ದರು. ಜೊತೆಯಲ್ಲಿ ಏನೇನೋ ಸಾಮಾನು, ಸರಂಜಾಮುಗಳು. ಅವುಗಳಲ್ಲಿ ಜಿಂಕೆಯ ಚರ್ಮದ ಮಡಿ ಪೆಟ್ಟಿಗೆ, ಎಳನೀರು, ಎಳ್ಳಿನ ಡಬ್ಬಿ, ಗಿಣ್ಣಿನ ಹಾಲುಳ್ಳ ಸೀಸೆ ಇನ್ನೂ ಕೆಲವು, ಅತ್ತೆ ತನ್ನ ಆಶ್ರಮದ ನಿವಾಸಿಗಳಿಗೆಂದು ಕೊಂಡುಹೋಗುತ್ತಿದ್ದ ಸಾಮಾನುಗಳಿದ್ದುವು. ಈ ಸಾಮಾನುಗಳನ್ನೆಲ್ಲ ಜೋಪಾನವಾಗಿ ಗಾಡಿಯಲ್ಲಿ ತೆಗೆದಿಡುವುದರಲ್ಲಿ ಸಹಾಯ ಮಾಡಬೇಕೆಂದೇ ನಾನು ಸ್ಟೇಷನ್ನಿಗೆ ಹೋದದ್ದು. ಅತ್ತೆ ಗಾಡಿ ಹತ್ತಿದ್ದಾಯಿತು. ಎಲ್ಲ ಸಾಮಾನುಗಳನ್ನು ಕೂಲಿಯ ಹೊರೆಯಿಂದ ಇಳಿಸಿ ಗಾಡಿಯಲ್ಲಿ ಒಂದೊಂದಾಗಿ ಇಟ್ಟಾಯಿತು. ಆ ಮೇಲೆ ಅತ್ತೆ, "ಎಲ್ಲಾ ಸರಿಯಾಗಿ ಗಾಡಿಯಲ್ಲಿಡಿಸಿದೆಯಾ?" ಎಂದು ಕೇಳಿದಳು. ನಾನು ಒಂದೊಂದಾಗಿ ಎಣಿಸಿ, "ಹ್ಞಾ, ಅತ್ತೆ, ಎಲ್ಲಾ ಸೇರಿ ಇಪ್ಪತ್ತೆರಡು ಮಾಲುಗಳನ್ನು ಎತ್ತಿಟ್ಟಿದ್ದಾಯಿತು" ಎಂದೆ. ಹಾಗಂದದ್ದೆ ಕೂಡಲೇ ನೋಡಿದರೆ ಅತ್ತೆಯ ಕಣ್ಣ ಅಂಚಿನಲ್ಲಿ ಸ್ವಲ್ಪ ಒದ್ದೆ ಒದ್ದೆಯಾದಂತೆ ಕಂಡಿತು.

ನನಗೆ ಯಾಕೋ ಏನೋ ನಾನೆಲ್ಲೋ ಅತ್ತೆಯನ್ನು ನೋಯಿಸಿದ್ದೇನೆ ಎನ್ನಿಸಿತು. ಮನಸ್ಸಿಗೆ ಬಹಳ ಖೇದವಾಯಿತು. ತಿಳಿಯದೆ ಏನೋ ಅಂದಿದ್ದೇನೆ.... ಏನು ಎಂದು ಸರಿಯಾಗಿ ಗೊತ್ತಿಲ್ಲ. ಆಮೇಲೆ ಅತ್ತೆಯೇ ಹೇಳಿದಳು. ರೇಶಿಮೆ ಬಟ್ಟೆಯಲ್ಲಿ ಸುತ್ತಿ ಅಡಕ ಮಾಡಿಟ್ಟಿದ್ದ ಒಂದು ಕಟ್ಟು ಹಾಕಿದ ಪಟವಿತ್ತು. ಆ ಸಾಮಾನುಗಳಲ್ಲಿ ಅದು ಬೇರೆ ಯಾರದೋ ಅಲ್ಲ. ಅತ್ತೆಯ ಸ್ವರ್ಗಸ್ಥರಾದ ಗುರುದೇವನ ತೈಲ ಚಿತ್ರ! ಅದನ್ನು ನಾನು "ಮಾಲು"ಗಳ ನಡುವೆ ಎಣಿಸಿ ಹೇಳಿಬಿಟ್ಟಿದ್ದೆ! ಅದಕ್ಕಾಗಿ ಅತ್ತೆ ಅಷ್ಟಾಗಿ ಮನಸ್ಸಲ್ಲಿ ನೊಂದದ್ದು ನನಗೇಕೋ ಆಗ ಆಶ್ಚರ್ಯವಾಗಿ ಕಂಡಿತು.... ಈಗ ಈ ಸಮಯದಲ್ಲಿ ವಾರ್ಡರನು ನನ್ನನ್ನ 'ಆಸಾಮಿ' ಎಂದು ಕರೆದದ್ದಕ್ಕಾಗಿ ನಾನೆಷ್ಟು ನೊಂದುಕೊಂಡೆ? ಅದಕ್ಕೂ ಆಶ್ಚರ್ಯವೇ ಆಯಿತು. ಅಲ್ಲ ಫಾಸಿಯಾಗಬೇಕಾಗುವ ಆಳನ್ನು 'ಆಸಾಮಿ' ಎಂದು ಕರೆಯದೆ ಹೋದರೆ ಮಾತ್ರ ಆಶ್ಚರ್ಯಪಡಬೇಕಾದ್ದೇ ನ್ಯಾಯವಾಗಿ!

'ಫಾಸಿ' ಸ್ತಂಭ - ಗಲ್ಲಿಗೆ ಹಾಕುವ ಕಂಬ - ಈ ಮಾತಿನ ಸುತ್ತಲೂ ಅದೆಷ್ಟು ಮಂದಿ ದೇಶಭಕ್ತ ವೀರರ ಸ್ಮೃತಿಯ ಸುವಾಸನೆ ಆವರಿಸಿರುತ್ತದೆ! ಆದರೆ 'ಫಾಸಿ ಸ್ತಂಭ' ಎಂದೊಡನೆ ಎಷ್ಟೋ ಬಾರಿ ಮನಸ್ಸಿಗೆ ಬರುವುದು ಕೊಲೆಪಾತಕ 'ಆಸಾಮಿ'ಗಳ ವಿಷಯ ಮತ್ತು ಎಲ್ಲಕ್ಕೂ ಹೆಚ್ಚು ಅಚ್ಚರಿಯೆನಿಸುವುದು, ನನ್ನ ಮನಸ್ಸಿನ ತೆರೆಯ ಮೇಲೆ ಕಾಣಬರುವ ವ್ಯಾಯಾಮ ಶಾಲೆಯ 'ಹಾರಿಜಾಂಟಲ್ ಬಾರ್' ಮೇಲೆ ತೂಗುತ್ತಿರುವ ಒಂದು ಶವ. ಚೇತನವಿಲ್ಲದ ಪಾದಗಳೆರಡೂ ಅಂತರಿಕ್ಷದಲ್ಲಿ ಗಿರ್ರನೆ ಸುತ್ತುತ್ತಿವೆ. ಮೆಲ್ಲಗೆ, ಒಂದೇ ಸಮನಾದ ಗತಿಯಲ್ಲಿ ಉತ್ತರದ ಕಡೆ, ಈಶಾನ್ಯದ ಕಡೆ, ಪೂರ್ವ, ಆಗ್ನೇಯ, ದಕ್ಷಿಣ, ನೈರುತ್ಯ, ದಕ್ಷಿಣ, ಆಗ್ನೇಯ, ಪೂರ್ವ, ಈಶಾನ್ಯ - ಮತ್ತೆ ಉತ್ತರದ ಕಡೆ ಹೀಗೆ ಸುಮ್ಮನೆ ಸುತ್ತುತ್ತಿದೆ.... ಯಾವುದೋ ಇಂಗ್ಲಿಷ್ ಕಾದಂಬರಿಯಲ್ಲಿ ಓದಿದ ಒಂದು ದೃಶ್ಯ!...

ಹತ್ತನೆಯ ನಂಬರ್ ಸೆಲ್ಲಿನಿಂದ ಡ್ಯೂಟಿ ಶುರು ಮಾಡಿದೆನೆಂದು ವಾರ್ಡರು

ಹೇಳಿದ. ಅದರ ಅರ್ಥ ಇವತ್ತು ಹನ್ನೊಂದರಿಂದ ಹಿಡಿದು ಇಪ್ಪತ್ತನೆಯ ಸೆಲ್‌ವರೆಗೂ ಖಾಲಿ. ಯಾವ ಖೈದಿಗಳು ಜೈಲಿನ ನಿಯಮ, ನಿಬಂಧನೆಗಳನ್ನು ಉಲ್ಲಂಘಿಸುವರೋ ಅಂಥವರನ್ನು ಜೈಲು ಅಧಿಕಾರಿಗಳು ಸೆಲ್ಲುಗಳಲ್ಲಿ ಒಂಟಿಯಾಗಿರುವಂತೆ ಸಜಾ ವಿಧಿಸುವರು. ಅಂಥವರೇ ಈ ಸೆಲ್ಲುಗಳಲ್ಲಿ ಬಂಧಿಸಲ್ಪಟ್ಟಿರುವುದು. ಇದೊಂದು ಶಿಕ್ಷೆಯೆಂಬುದು ಅಧಿಕಾರಿಗಳ ಎಣಿಕೆ ಎಂದು ನನಗೆ ಅನ್ನಿಸುವುದಿಲ್ಲ. ವಾರ್ಡುಗಳಲ್ಲಿ ನಾನಾ ಸ್ವಭಾವಗಳುಳ್ಳ ಇತರ ಖೈದಿಗಳ ನಡುವೆ ಕಾಲಕಳೆದು ಬೇಸರವಾಗಿರುವಂಥವರಿಗೆ ಕೆಲವು ದಿನ ಎಲ್ಲರ ಸಂಪರ್ಕದಿಂದ ದೂರವಾಗಿ ಒಬ್ಬಂಟಿಗರಾಗೇ ಇದ್ದರೆ ಎಷ್ಟೋ ಆರಾಮ ಎನ್ನಿಸುವುದಿಲ್ಲವೆ? ಅಂತೂ ಈ ಸೆಲ್ಲುಗಳು ಸಾಧಾರಣವಾಗಿ ತುಂಬೇ ಇರುತ್ತವೆ. ಅಂಥಾದ್ದು ಇವತ್ತೇಕೋ ಇವೆಲ್ಲ ಒಟ್ಟಿಗೇ ಖಾಲಿಯಾದದ್ದು? ಹೀಗೆ ಎಂದೂ ನಡೆದಿಲ್ಲ... ಬಹುಶಃ ಬೇಕೆಂತಲೇ ಅವರೆಲ್ಲರನ್ನೂ ಬೇರೆಲ್ಲಾದರೂ ವರ್ಗಾಯಿಸಿದ್ದಾರೆ. ಬಹುಶಃ, ಸೂಪರಿಂಟೆಂಡೆಂಟರು ಅವರುಗಳ ತಪ್ಪನ್ನು ಮನ್ನಿಸಿ ಮೊದಲಿನ ವಾರ್ಡುಗಳಿಗೆ ಕಳಿಸುವಂತೆ ಹುಕುಂ ಮಾಡಿದ್ದಾರೆ. ಇವತ್ತಿನ ದಿನ ಕಂಡೆಮ್ಡ್ ಸೆಲ್ಲುಗಳಲ್ಲಿ ಎಷ್ಟು ಕಡಮೆ ಜನ ಇದ್ದರೂ ಒಳ್ಳೆಯದು ಎಂದು ಭಾವಿಸಿದ್ದರೂ ಇರಬಹುದು. ಇಂಥ ದಿನ ಅಲ್ಲಿದ್ದರೆ ಅವರುಗಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮ ಆದರೂ ಆಗಬಹುದು ಎಂಬ ಭಯವೇನೋ! ಆದ್ದರಿಂದ ಎಷ್ಟು ಜನರನ್ನು ಈ ಸ್ಥಳದಿಂದ ವರ್ಗಾಯಿಸಬಹುದೋ ಅಷ್ಟನ್ನು ವರ್ಗಾಯಿಸಲಾಗಿದೆ. ಧಣಿಯ ಹುಕುಮಿನಂತೆ ನಡೆಯಬೇಕಲ್ಲ? ಹದಿಮೂರನೆಯ ನಂಬರಿನ ಕುಷ್ಠರೋಗಿಯನ್ನು ಸಹ ಜನರಲ್ ವಾರ್ಡಿಗೆ ಬದಲಾಯಿಸಲಾಗಿದೆ. ಒಬ್ಬೊಬ್ಬ ಸೂಪರಿಂಟೆಂಡೆಂಟರದೂ ಒಂದೊಂದು ವಿಚಿತ್ರ ಸ್ವಭಾವ! ಮೇಜರ್ ಫಿಲಿಪ್ಪಟ್ಸ್‌ನನ್ನ ನೋಡಿದ್ದೇನೆ. ಹೆಂಗಸರ ಚಿತ್ರಗಳಿರುವ ಪುಸ್ತಕಗಳನ್ನು ಆತನೆಂದೂ ಖೈದಿಗಳಲ್ಲಿ ಚಲಾವಣೆಯಾಗಲು ಬಿಡುತ್ತಿರಲಿಲ್ಲ. ಆತನು ಮಾನಸಿಕ ವ್ಯಾಧಿಗಳನ್ನು ಕುರಿತು ಹೆಚ್ಚಾಗಿ ತಿಳಿದುಕೊಂಡಿದ್ದನೆಂದು ಕೇಳಿದ್ದೆ. ಆದ ಕಾರಣದಿಂದಲೇ ಏನೋ, ಹೆಣ್ಣು ದೇಹದ ಚಿತ್ರಗಳು ಜೈಲಿನಲ್ಲಿ ಬಹಳ ಕಾಲದವರೆಗೂ ಇರುವವರ ಮನಸ್ಸಿನಲ್ಲಿ ನಾನಾ ರೂಪವಾಗಿ ಪ್ರತಿಕ್ರಿಯೆ ಉಂಟು ಮಾಡಬಹುದೆಂಬ ಭಯದಿಂದ ಈ ನಿಯಮವನ್ನು ಜಾರಿಗೆ ತಂದಿದ್ದ. ಆಗೊಮ್ಮೆ ಹಜಾರಿಬಾಗ್ ಜೈಲಿನಲ್ಲಿ ಇದೇ ವಿಷಯವನ್ನು ಕುರಿತು ರಾಮ ಖೇಲಾವುನ್ ಬಾಬುಗಳೊಂದಿಗೆ ಅದೆಷ್ಟು ಚರ್ಚೆ ಈ ಸಾಹೇಬನದು? ಕಡೆಗೂ, ಪಾಪ, ಆ ಬಡಪಾಯಿಗೆ ಅತ್ಯಂತ ಪ್ರಿಯವಾದ ರಾಯಲ್ ಅಕ್ಯಾಡಮಿಯ ಆ ವರುಷದ ಚಿತ್ರಗಳುಳ್ಳ ಪುಸ್ತಕದಿಂದ ಹತ್ತು ಹದಿನೈದು ಹಾಳೆಗಳನ್ನು ಕತ್ತರಿಯಿಂದ ಕತ್ತರಿಸಿ ಹಾಕಿರುವ ಅವಸ್ಥೆಯಲ್ಲಿ ಅದನ್ನು ಆತನ ಕೈಯಲ್ಲಿ ಕೊಡಲಾಗಿತ್ತು. ಚಿತ್ರಗಳನ್ನು ನೋಡಿದ್ದರೆ ಆತನ ಮನಸ್ಸಿನ ಮೇಲೆ ಯಾವ ಪ್ರತಿಕ್ರಿಯೆಯಾಗಬಹುದಾಗಿತ್ತೋ ಅದನ್ನು ನಾವಂತೂ ನೋಡಲಿಲ್ಲ. ಆದರೆ ಚಿತ್ರಗಳಿಲ್ಲದ ಆ ಪುಸ್ತಕವನ್ನು ನೋಡಿ ಆತನ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಮಾತ್ರ ನಾವೆಲ್ಲ ಚೆನ್ನಾಗಿ ನೋಡಿದ್ದೆವು. ಫಿಲಿಪ್ಪಟ್ಸ್ ಸಾಹೇಬನೂ ನೋಡಬೇಕಾಯಿತು! ಇದರ

ಫಲಿತಾಂಶವಾಗಿ ರಾಮ ಖೇಲಾವ್ಸನ್ ಬಾಬುವಿಗೆ ನಿರ್ಜನ ಸೆಲ್ಲಿಗೆ ವರ್ಗಾಯಿಸಬೇಕೆಂದು ಸಜಾ ಆಯಿತು!

ಅಬ್ಬ, ಏನು ಸೆಕೆಯಾಗುತ್ತಿದೆಯೋ! ಹಾಳು, ಈ ಸೆಲ್ಲಿನಲ್ಲಿ ಗಾಳಿ ಬೀಸುವುದಕ್ಕೇ ಆಸ್ಪದವಿಲ್ಲ. ವೈಶಾಖಮಾಸ ಪೂರೈಸುತ್ತ ಬಂತು. ಬಹುಶಃ ಸೆಲ್ಲಿನ ಹೊರಗಡೆಯೂ ಹೀಗೇ ಸೆಕೆಯಿರಬೇಕು. ಬಾಗಿಲ ಹತ್ತಿರವೇ ನೆಲದ ಮೇಲೆ ಕಂಬಿಗಳನ್ನು ಹಿಡಿದುಕೊಂಡು ಕೂತಿದ್ದೇನೆ. ಹೊರಗಡೆಯಿಂದ ಸ್ವಲ್ಪವಾದರೂ ಬರುವ ತಂಪಾದ ಗಾಳಿ ಸೇವಿಸುವ ಆಸೆ! ಸೆಲ್ಲಿನೊಳಗಣ ಬಿಸಿಗಾಳಿ ಉಸಿರು ಕಟ್ಟಿಸುವಂತಿದೆ. ಸಲಾಕೆಗಳ ನಡುವೆ ತಲೆ ಹಾಕಿ ಸಾಧ್ಯ ಆದಷ್ಟು ಹೊರಗೆ ಚಾಚಿ ಹೊರಗಿನ ಗಾಳಿಯನ್ನು ಸ್ವಲ್ಪ ಸೇವನೆ ಮಾಡಿದರೆ ತಲೆಯ ಭಾರ ಕಡಮೆ ಆಗಲು ಸಾಧ್ಯ. ಇದನ್ನು ನಾನು ಅನುಭವ ಮಾಡಿದ್ದೇನೆ. ಇದಕ್ಕೆ ಮೊದಲು ಇಂಥ ಸಮಯದಲ್ಲಿ ತಲೆಯ ಭಾರ ಬಹಳ ಹೆಚ್ಚಾಗಿ ತೋರುತ್ತಿತ್ತು. ಈಚೆಗೆ ಕೆಲವು ದಿನಗಳಿಂದ ಸ್ನಾನ ಮಾಡುವಾಗ ವಾರ್ಡರನು ತಲೆಗೆ ಹಾಕಿ ತಿಕ್ಕಲು ಸ್ವಲ್ಪ ಸಾಸುವೆ ಎಣ್ಣೆ ಕೊಡುತ್ತಾನೆ. ಎಲ್ಲಿಂದ ತಂದನೋ ಏನೋ, ಹಳೆಯದೊಂದು ಬೆಣ್ಣೆಯ ಟಿನ್ನಿನಲ್ಲಿ ಎಣ್ಣೆ ಶೇಖರಿಸಿ ಇಟ್ಟಿದ್ದಾನೆ. ನಾನೊಬ್ಬ 'ಫಾಸಿ'ಯ ಆಸಾಮಿಯೆಂದು ಅವನಿಗೇನೋ ಮರುಕ. ಮೊದಲಲ್ಲಿ ತೆಗೆದುಕೊಳ್ಳಬಾರದೆಂದು ಅನ್ನಿಸಿತ್ತು. ಆದರೆ ಅವನು ನನ್ನ ಒಪ್ಪಿಗೆಯನ್ನು ನಿರೀಕ್ಷಿಸದೆಯೇ ಕೈಯಲ್ಲಿ ಎಣ್ಣೆ ಹಾಕಲು ಬಂದಾಗ ನಾನಾಗಿ ನಾನೇ ಕೈ ನೀಡಿದೆ. ಬಹುಶಃ, ಈ ತಲೆಭಾರದ ಹಿಂಸೆ ತಡೆಯಲಾರದೆ ತೆಗೆದುಕೊಳ್ಳಬೇಕಾಯಿತೇನೋ! ಈ ವಾರ್ಡರುಗಳಿಗೆ ಮಾತಿನಲ್ಲಿ ಎಷ್ಟೋ ಬಾರಿ ಸಂಯಮ ಇರುವುದಿಲ್ಲ. ದಿನವಿಡೀ ಎಂಟುಗಂಟೆ ಕಾಲ ಡ್ಯೂಟಿ ಮಾಡುತ್ತಾರೆ, ಒಂದೇ ಸಮನಾಗಿ. ರಾತ್ರಿ ಸಹ ಎರಡು ಗಂಟೆ ಇರುತ್ತದೆ. ಹೀಗೆ ಒಂದೇ ಸಮ ಡ್ಯೂಟಿ ಮಾಡುತ್ತಿರುವಾಗ ಸ್ವಲ್ಪ ಸ್ವಲ್ಪ ಮಾತುಕತೆಯಾಡುತ್ತಿದ್ದರೆ ಅವರ ಬೇಸರ ಕಡಮೆಯಾಗಬಹುದು. ಆದರೆ, ಈ ಮನುಷ್ಯ ಯಾವ ಮಾತೂ ಆಡದೆ ತಲೆಗೆ ತಿಕ್ಕಿಕೊಳ್ಳಲು ಎಷ್ಟೊಂದು ಸಾಸುವೆ ಎಣ್ಣೆ ಕೊಟ್ಟಿದ್ದಾನೆ! ಆಶ್ಚರ್ಯ! ಈ ಜನ ಏನೇನು ಸಾಮಾನು ಪಡೆಯುತ್ತಾರೋ ಅದೆಲ್ಲ ಜೈಲಿನಿಂದ ಕದ್ದದ್ದೇ! ಬಟ್ಟೆ ಒಗೆಯುವ ಸಾಬೂನು, ಅಕ್ಕಿ, ನೆಲಗಡಲೆ ಕಾಯಿ, ಆಲೂಗಡ್ಡೆ, ಕೊಬ್ಬರಿ ಎಣ್ಣೆ, ತೆಂಗಿನ ನಾರು, ಹರಿಕೇನ್ ಲಾಟೀನು ದೀಪದ ಬತ್ತಿ.... ಇಂಥ ಸಾಮಾನುಗಳು ಯಾವುವೂ ಅವರ ಕಣ್ಣು ತಪ್ಪಿಸಿಕೊಂಡು ಹೋಗಲಾರವು. ಮೇಲ್ತರಗತಿಯ ರಾಜಕೀಯ ಖೈದಿಗಳ ಚಹಾ ಕುಡಿಯುವ ಕಪ್ಪುಗಳಿಂದ ಮೊದಲಾಗಿ ಸ್ನಾನಕ್ಕೆ ಉಪಯೋಗಿಸುವ ವಸ್ತ್ರಗಳು ಸಹ, ರಾತ್ರಿ ಖೈದಿಗಳೆಲ್ಲ ವಾರ್ಡುಗಳ ಒಳಗಡೆ ಬಂಧಿಸಲ್ಪಟ್ಟು, ಹೊರಗಡೆ ವಾರ್ಡರುಗಳ ಹೊರತಾಗಿ ಬೇರೆ ಯಾರೂ ಇಲ್ಲದಿರುವಾಗ ಕಳುವಾಗಿ ಹೋಗುತ್ತವೆ. ಕಳ್ಳರೆಲ್ಲ ವಾರ್ಡುಗಳ ಒಳಗೆ ಕೂಡಿ ಹಾಕಲ್ಪಟ್ಟಿರುತ್ತಾರೆ, ಆಗಲೂ ಕಳ್ಳತನವಾಗುತ್ತಲ್ಲ ಹೇಗೆ?

ಈ ವಾರ್ಡರನ ಉದಾರತೆ ನನ್ನನ್ನ ತಬ್ಬಿಬ್ಬು ಮಾಡಿಬಿಟ್ಟಿತು. ಇದು ಸಾಲದೆಂಬಂತೆ, ನನ್ನ ಕುರ್ತಾ ಮತ್ತು ಇಜಾರಗಳೆರಡನ್ನೂ ಹುಚ್ಚು ಖೈದಿಯ ಕೈಯಿಂದ ಒಗೆಸಿ ಕೊಟ್ಟಾಗಂತೂ ಇನ್ನೂ ಆಶ್ಚರ್ಯವಾಗಿ ಹೋಯಿತು. ಸ್ನಾನ

ಮಾಡಿಬಿಟ್ಟು ಒಗೆದು ಒಣಗಿ ಹಾಕಿದ್ದ ಇಜಾರವನ್ನು ತೊಟ್ಟಿದ್ದೇನೆ. ಹಾಗೇ ಇದ್ದಕ್ಕಿದ್ದ ಹಾಗೆ ನನ್ನನ್ನು ಸ್ವಲ್ಪ ಬಲವಂತವಾಗೇ ಸೆಲ್ಲಿನೊಳಗೆ ನೂಕಿದ. ನಾನು ಆಕ್ಷೇಪಣೆ ಮಾಡುವುದಕ್ಕೂ ಅವಕಾಶ ಕೊಡಲಿಲ್ಲ. ಆಮೇಲೆ ತನ್ನ ಚಡ್ಡಿಯ ಬೆಲ್ಟನ್ನು ಸ್ವಲ್ಪ ಸಡಿಲ ಮಾಡಿಕೊಂಡು ಸೊಂಟದಿಂದ ಒಂದು ಬೀಡಿ ಹೊರಗೆ ತೆಗೆದ. ಬೀಡಿಯನ್ನು ಆ ಹುಚ್ಚು ಖೈದಿಗೆ ಕೊಟ್ಟು ಸ್ವಂತ ದೀಪದ ಪೆಟ್ಟಿಗೆಯಿಂದ ಅದನ್ನು ಹೊತ್ತಿಸಿಕೊಟ್ಟ. ಇದು ಅವನು ಬಟ್ಟೆ ಒಗೆದಿದ್ದಕ್ಕಾಗಿ ಕೊಟ್ಟ ಪುರಸ್ಕಾರ ಎಂದು ತಿಳಿದುಕೊಂಡೆ. ಯಾರಾದರೂ ಏನೂ ಕೇಳಿಸಿಕೊಳ್ಳದೆಯೇ ಇಂತಹ ಉಪಕಾರವೇನಾದರೂ ಮಾಡಿದರೆ ಅದನ್ನ ನಿರಾಕರಿಸುವುದು ಕಷ್ಟ. ಈ ಸಿಪಾಯಿಯು ನನ್ನ ದೇಶಪ್ರೇಮ ಮತ್ತು ತ್ಯಾಗದ ಬಗೆಗೆ ಹೀಗೆ ಮೆಚ್ಚುಗೆ ತೋರುತ್ತಿರುವಂತಿದೆ. ಇತರ ಸಿಪಾಯಿಗಳಂತೆ ಅಲ್ಲ.... ತಿಳಿದು ಮನಸ್ಸೇನೋ ಬಹಳವಾಗಿ ಹಗುರವಾಗಿದೆ. ಅವತ್ತಿನ ದಿನದಿಂದ ಈಚೆಗೆ ಕೆಲವು ದಿನಗಳಿಂದಲೂ ಹಗಲು ಹೊತ್ತು ಈ ಸಿಪಾಯಿಯೇ ಡ್ಯೂಟಿ ಮಾಡುತ್ತಿದ್ದಾನೆ.

ನಮ್ಮ ಪಾರ್ಟಿಗೆ ಸೇರಿದ ಚಂದ್ರಿಮನು ತಲೆಗೆ ಎಣ್ಣೆಯನ್ನೇ ಹಚ್ಚುವುದಿಲ್ಲ. ಎಣ್ಣೆ ಹಚ್ಚಿದರೆ ತಲೆ ಬಿಸಿಯಾಗುವುದು ಎನ್ನುತ್ತಾನೆ. ಕುಳ್ಳನೆಯ, ಸಣ್ಣ ದೇಹದ ಆಳು. ಅತಿ ಸರಳ ಸ್ವಭಾವದವನು. ಮಾತೇ ಕಡಮೆ. ಆದರೆ ಸ್ವಲ್ಪವೂ ಆಯಾಸವಿಲ್ಲದೆ, ಬಿಡುವಿಲ್ಲದೆ ಕೆಲಸ ಮಾಡುತ್ತಾನೆ. ಬೇರೆಯವರಿಗೆ ಯಾವ ಕೆಲಸದಲ್ಲಾದರೂ ಅವನಿಂದ ಸಹಾಯವಾಗುವ ಹಾಗಿದ್ದರೆ ಬಲು ತೃಪ್ತಿ ಅವನಿಗೆ. ಎರಡನೆಯ ನಂಬರು ವಾರ್ಡಿನಲ್ಲಿ ಹಗಲು ರಾತ್ರಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಮ್ಮನೆ ಸುತ್ತುತ್ತಾ ಇರುತ್ತಾನೆ. ತಲೆಯ ಮೇಲಿನ ಗುಂಗುರು ಕೂದಲ ರಾಶಿಗೆ ಎಣ್ಣೆಯೇ ಹಚ್ಚಿಲ್ಲ. ಸಾವಿರದ ಒಂಬೈನೂರ ಮೂವತ್ತೆರಡರಲ್ಲಿ ಮಿಲಿಕ್ ಗಂಜ್ ಕಾಂಗ್ರೆಸ್ ಆಶ್ರಮದ 'ಜಪ್ತೀ'ಗೆ ವಿರುದ್ಧವಾಗಿ ಸತ್ಯಾಗ್ರಹ ಹೂಡಿದಾಗ ಪೊಲೀಸರು ಅವನ ಕಿವಿಯಲ್ಲಿ ಬೈಸಿಕಲ್ ಪಂಪನ್ನು ತೂರಿ ಗಾಳಿ ಪಂಪ್ ಮಾಡಿದ್ದರ ಸಲುವಾಗಿ ಅಂದಿನಿಂದ ಅವನಿಗೆ ಕಿವಿಯೇ ಕೇಳುವುದಿಲ್ಲ. ಈಗ ಅವನೇನು ಮಾಡುತ್ತಿದ್ದಾನೋ ನಾನು ಊಹೆ ಮಾಡಬಲ್ಲೆ.... ಕಣ್ಣು ಮುಂದೆ ಚಿತ್ರಿಸಿಕೊಳ್ಳುತ್ತೇನೆ. ಇಂದು ಬೆಳಗ್ಗೆ ಚಂದ್ರಿಮನು ಎರಡನೆಯ ನಂಬರು ವಾರ್ಡಿನ ಒಳಗಡೆಯೇ ಶೋಕ ಸಭೆಯನ್ನು ಏರ್ಪಾಡು ಮಾಡಿದ್ದಾನೆ. ಮೌನದ ಶೋಕ ಸಭೆ. ರಾಮಭಜನ ಬಾಬು ಸಭಾಧ್ಯಕ್ಷ. ಎಲ್ಲರೂ ಸಭಾಧ್ಯಕ್ಷರ ಜೊತೆಗೆ ಎದ್ದು ನಿಂತು ಒಂದು ನಿಮಿಷ ಮೌನವನ್ನು ಆಚರಿಸಿದರು. ಆಮೇಲೆ ಮೆಲ್ಲ ಮೆಲ್ಲಗೆ ತಮ್ಮ ತಮ್ಮ ಜಾಗಗಳಲ್ಲಿ ಕೂತರು. ಚಂದ್ರಿಮನು ನಿಂತುಕೊಂಡಿದ್ದಾನೆ. ಆಕಡ ಈ ಕಡೆ ಚದರಿ ಹೋಗಿರುವ ಬಾಚದೇ ಇರುವ ಕೂದಲನ್ನು ಎರಡು ಕೈಗಳಿಂದಲೂ ಕಿವಿಯ ಮಗ್ಗುಲಲ್ಲಿ ಸರಿಸುತ್ತಾ (ಸಿಂಹದ ಕೇಸರದಂತಿರುತ್ತದೆ ಅವನ ತಲೆ ಕೂದಲು) ಎರಡೂ ಕೈಗಳನ್ನೂ, ಬೇಡಿಗಳನ್ನು ತೊಡಿಸಿ ನಿಲ್ಲಿಸಿದರೆ ಖೈದಿ ಹೇಗೆ ನಿಲ್ಲುತ್ತಾನೋ ಆ ಭಂಗಿಯಲ್ಲಿ ಮಡಿಸಿ ನಿಂತು ಭಾಷಣ ಶುರು ಮಾಡುತ್ತಾನೆ. "ನನ್ನ ಗುಲಾಮ ಬಂಧುಗಳೇ ಇವತ್ತು...." ನಾಲ್ಕೂ ದಿಕ್ಕುಗಳಿಂದ ಮರ್ಮರ ದನಿ ಕೇಳಬರುತ್ತದೆ. ಎಲ್ಲರೂ ಚಂದ್ರಿಮನನ್ನು ನಿಲ್ಲಿಸೆಂದು ಹೇಳುತ್ತಿದ್ದಾರೆ. ಈಗಲೇ ಬಹುಶಃ ಜೈಲಿನ ಅಧಿಕಾರಿಗಳ ಬಳಿ ಈ ಮೀಟಿಂಗನ್ನು

ಕುರಿತು ಸುದ್ದಿ ಹೋಗಿರುತ್ತದೆ. "ನಮ್ಮ ಜನರ ಮಧ್ಯೆಯೇ ಎಷ್ಟೋ ಮಂದಿ ಸಿ.ಐ.ಡಿಗಳು ಇರುತ್ತಾರೆ. ಶೋಕ ಸಭೆಯಲ್ಲಿ ಎಲ್ಲಾದರೂ ಭಾಷಣಗಳು ಆಗುತ್ತವೆಯೆ ? ಮನುಷ್ಯ ಮೊದಲೇ ಕಿವುಡ. ಅವನಿಗೆಲ್ಲಿ ಕೇಳುತ್ತೆ" ಹೀಗೇ ಏನೇನೋ ಮಾತುಗಳು ಕೇಳಬರುತ್ತವೆ. ಈ ಕಡೆ ಚಂದ್ರಿಮನು ಯಾವುದರ ಪರಿವೆಯೂ ಇಲ್ಲದೆ ಮಾತಾಡುತ್ತ ಹೋಗುತ್ತಾನೆ. ನನ್ನ ಗುಣ ವರ್ಣನೆ ಮಾಡುತ್ತಾನೆ. ನನ್ನ ದೇಶಭಕ್ತಿಯನ್ನು ಕುರಿತು, ನನ್ನ ತ್ಯಾಗವನ್ನು ಕುರಿತು ನನ್ನೊಂದಿಗೆ ಅವನಿಗಿರುವ ಬಾಂಧವ್ಯವನ್ನು ಕುರಿತು ಮೇಲು ದರ್ಜೆಯ ವಾರ್ಡಿನಲ್ಲಿ ಸದ್ಯದಲ್ಲಿ ಬಂಧಿತರಾಗಿರುವ ನಮ್ಮ ತಂದೆ, "ಮಾಸ್ಟರ್ ಸಾಹೇಬ"ರ ಪ್ರತಿ ಸಹಾನುಭೂತಿಯನ್ನು ಕುರಿತು, ಹೆಂಗಸರ ವಾರ್ಡಿನಲ್ಲಿರುವ "ಖೈದಿ ದೇವಿಜಿ ಬಿಲೂ ಬಾಬುವಿನ ತಾಯಿ"ಯನ್ನು ಕುರಿತು ಆಕೆ ಈ ಘೋರವಾದ ವೇದನೆಯನ್ನು ಧೈರ್ಯದಿಂದ ಸಹಿಸಿಕೊಳ್ಳಲು ಶಕ್ತಿಪಡೆಯುವಂತೆ ಪ್ರಾರ್ಥನೆ, ಈ ರಾಷ್ಟ್ರಭಕ್ತರ ಕುಟುಂಬವು ಭಾರತದ ಜನತೆಯ ಮುಂದೆ ಎಂಥ ಉಜ್ವಲವಾದ ಮೇಲು ಪಂಕ್ತಿಯಾಗಿದೆ ಎನ್ನುವುದನ್ನು ಕುರಿತು ಸಭಿಕರೆಲ್ಲರ ಆಗಿನ ಕರ್ತವ್ಯವೇನು ಎಂಬುದನ್ನು ಕುರಿತು ಇನ್ನೂ ಏನೇನೋ ಮಾತಿನ ಮೇಲೆ ಮಾತನ್ನು ಪೋಣಿಸುತ್ತ ತಡೆಯೇ ಇಲ್ಲದೆ ಹೇಳುತ್ತ ಹೋಗುತ್ತಾನೆ.... ಅರೆ ಮುಚ್ಚಿರುವ ಕಣ್ಣುಗಳಿಂದ ನೀರು ಸುಮ್ಮನೆ ಸೋರುತ್ತಿದೆ.... ಎಲ್ಲರೂ ಹೋಗಿ ಹಿಡಿದು ಚಂದ್ರಿಮನನ್ನು ಬಲವಂತವಾಗಿ ಕೂಡಿಸುವರು. ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ವೀರನ ಆತ್ಮಕ್ಕೆ ಶ್ರದ್ಧಾಂಜಲಿಯನ್ನು ಅರ್ಪಿಸುವ ಠರಾವೊಂದು ಅನುಮೋದಿಸಲ್ಪಡುತ್ತದೆ. ಅದರ ಸಲುವಾಗಿ ಎಲ್ಲರೂ ಇಡೀ ದಿನ ಉಪವಾಸವಿರಬೇಕೆಂದು ನಿರ್ಣಯವಾಗುತ್ತದೆ. ಉಪವಾಸವನ್ನು ಕುರಿತು ಚಂದ್ರಿಮನು ಮೊದಲಿಂದಲೂ ವಿರೋಧ ತೋರಿಸುತ್ತಿದ್ದ. ಅವನ ಪಾರ್ಟಿ ಮುಂದಾಳುಗಳು ರಾಜಕೀಯ ಕ್ಷೇತ್ರದಲ್ಲಿ ಉಪವಾಸದಿಂದ ಯಾವ ಪ್ರಯೋಜನವಾದರೂ ಆಗುತ್ತದೆಂಬುದನ್ನು ಒಪ್ಪಿಕೊಳ್ಳುವುದಿಲ್ಲ. ಚಂದ್ರಿಮನು ಸಂಶಯಗ್ರಸ್ತರಾದ ತನ್ನ ಬಂಧುಗಳಿಗೆ ಎಚ್ಚರಿಕೆ ಕೊಡುತ್ತಾನೆ. ಈ ಉಪವಾಸ ಯಾರ ಪಾಪಕ್ಕಾಗಿ ಆಗಲಿ ಮಾಡುವ ಪ್ರಾಯಶ್ಚಿತ್ತವಲ್ಲ ಅಥವಾ ಶತ್ರುವಿನ ಹೃದಯ ಪರಿವರ್ತನೆಗಾಗಿ ಅಲ್ಲ. ಆದರೆ "ಬಿಲೂ ಬಾಬುವಿನ ಸ್ಮರಣೆಗಾಗಿ ದೇಶಸೇವಕರಾದ ನಾವುಗಳು ಉಪವಾಸ ಮಾಡುವುದು ಉಚಿತ."

ಆಮೇಲೆ ಎರಡನೆಯ ನಂಬರು ವಾರ್ಡಿನ ಅಂಗಳದಲ್ಲಿರುವ ಅರಳೀಮರದ ತಳಗಡೆ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯ ಮೆಂಬರುಗಳಾದ ಖೈದಿಗಳ ಮೀಟಿಂಗು ಸೇರುತ್ತದೆ. ಗೋರೇ ಸಿಂಗ್ ಭಾಷಣ ಕೊಡುತ್ತಾನೆ. "ಎಲ್ಲಾ ವಿಷಯುಗಳನ್ನು ವಸ್ತುನಿಷ್ಠವಾಗಿ ನೋಡಬೇಕಾಗುತ್ತದೆ. ಅದು ಪ್ರತಿಯೊಬ್ಬ ಮಾರ್ಕ್ಸ್‌ವಾದಿಯ ಕರ್ತವ್ಯ." ಹೀಗೇ ಇನ್ನೂ ಏನೇನೋ. ವರ್ಗ ಸಂಘರ್ಷದಲ್ಲಿ ತಮ್ಮ ಪಾರ್ಟಿಯ ದಾನದ ಬಗೆಗೆ ತಮಗೆಲ್ಲ ಹೆಮ್ಮೆಯೇ. ಆದರೆ ತಮ್ಮ ಕಾಮ್ರೇಡ್ ಒಬ್ಬನ ಮೃತ್ಯುವಿಗಾಗಿ ಮಾತ್ರ ತಾವು ದುಃಖದಲ್ಲಿ ಮುಳುಗುವುದಿಲ್ಲ. ಪಾರ್ಟಿಗೆ ಒಬ್ಬ ಸದಸ್ಯನ ಸಾವಿನಿಂದ ಆಗುವ ನಷ್ಟ ಸಹ ಅಷ್ಟು ಗೋಳಾಡುವ ವಿಷಯುವಲ್ಲ. ಎಷ್ಟು ಜನ ಬರುತ್ತಾರೆ, ಹೋಗುತ್ತಾರೆ. ಎಷ್ಟು ವಿಧವಾದ ಸಾಮಾಜಿಕ ಬಂಧನಗಳನ್ನು

ಮತ್ತು ಕೌಟುಂಬಿಕ ಶೃಂಖಲೆಗಳನ್ನೂ ಕಿತ್ತುಹಾಕಿ ತಾವೆಲ್ಲ ರಾಜಕೀಯ ಕ್ಷೇತ್ರದಲ್ಲಿ ಇಳಿದುಬಂದಿದ್ದಾರೆ - ಎಲ್ಲರೂ ಅಲ್ಲದಿದ್ದರೂ, ಅನೇಕ ಮಂದಿಯಾದರೂ ತಮ್ಮೆಲ್ಲರ ಆದರ್ಶಕ್ಕಾಗಿ ತಮ್ಮಲ್ಲಿ ಯಾರೂ ಪ್ರಾಣತ್ಯಾಗ ಮಾಡುವುದಕ್ಕೆ ಹಿಂಜರಿಯುವುದಿಲ್ಲ. ತಮ್ಮ ಪ್ರಾಣವನ್ನು ಅಷ್ಟು ಬೆಲೆಯುಳ್ಳ ವಸ್ತುವೆಂದು ಅವರು ಗಣಿಸುವುದಿಲ್ಲ. ಇತರರ ಪ್ರಾಣದ ಬಗೆಗೂ ಅವರುಗಳ ಸಂವೇದನೆ ಕಡಮೆಯೇ. ಕಾಮ್ರೇಡ್ ಭೋಲಾ ಹಿಂದುಗಡೆ ಕೂತು ನಗುತ್ತಾ ಇರುತ್ತಾನೆ. ಒಂದು ಆಶ್ಚರ್ಯದ ವಿಷಯ ಈ ರಾಜಕೀಯ ಖೈದಿಗಳಲ್ಲಿ ಕಂಡು ಬರುತ್ತದೆ ನನಗೆ. ಏನೆಂದರೆ, ದೇಶಕ್ಕಾಗಿ ಸ್ವಾರ್ಥ ಮತ್ತು ತನ್ನ ಭವಿಷ್ಯತ್ತನ್ನೇ ಕಡೆಗಣಿಸಿರತಕ್ಕ ಒಬ್ಬ ಖೈದಿ, ಮಾತೃಭೂಮಿಗಾಗಿ ನಗುನಗುತ್ತ ಸಾವನ್ನು ಬರಮಾಡಿಕೊಳ್ಳಲು ತಯಾರಿರುವ ಖೈದಿ ಸಹ ಜೈಲಿನೊಳಗಡೆ ಇರುವಾಗ ಸಾಮಾನ್ಯ ಸ್ವಾರ್ಥಕ್ಕಾಗಿ ಅತಿ ಕೀಳಾಗಿ ವರ್ತಿಸುವುದನ್ನು ನಾನು ಕಂಡಿದ್ದೇನೆ. ಕಾಮ್ರೇಡ್ ಭೋಲಾ ಫಾಸಿಯ ಶಿಕ್ಷೆಯಿಂದ ಹೇಗೋ ತಪ್ಪಿಸಿಕೊಂಡಿದ್ದಾನೆ. ಆದರೂ ಅನೇಕ ಮೊಕದ್ದಮೆಗಳಲ್ಲಿ ಬೇರೆ ಬೇರೆ ಕಾರಾಗೃಹ ವಾಸದ ಶಿಕ್ಷೆಗಳೆಲ್ಲ ಸೇರಿ ಒಟ್ಟಿನಲ್ಲಿ ಮೂವತ್ತುಮೂರು ವರುಷಗಳ ಸಜಾ ಅನುಭವಿಸುತ್ತಿದ್ದಾನೆ. ಅಸಾಧಾರಣ ಖುಷಿ ಮನುಷ್ಯ, ಸದಾ ನಗು ಮುಖದಿಂದ ಇರುವಂತೆ, ಫಾಸಿ ಶಿಕ್ಷೆ ಆಗಿದ್ದಿದ್ದರೂ ಸಹ ಬಹುಶಃ ನಗು ಮುಖದಿಂದಲೇ ಅದನ್ನು ಎದುರಿಸಲು ತಯಾರಿದ್ದವನು. ಮಾಡುವ ಕೆಲಸ ಎಷ್ಟೇ ಅಪಾಯಕರವಿದ್ದರೂ ಅಷ್ಟು ಆನಂದ ಅನುಭವಿಸುತ್ತಿದ್ದ ಈ ಮನುಷ್ಯನಿಗೆ ಯೋಚನಾ ಶಕ್ತಿ ಅಷ್ಟೇನೂ ಇಲ್ಲದಿದ್ದರೂ ಯಾರ ಹುಕುಮನ್ನಾದರೂ ನೆರವೇರಿಸಲು ಹಿಂಜರಿಯುತ್ತಿರಲಿಲ್ಲ. ಇಂಥ ಎಳೇ ಹುಡುಗನಂತೆ ಸರಳ ಮನಸ್ಸಿರುವ ಏಕನಿಷ್ಠ ದೇಶಭಕ್ತನು ಒಮ್ಮೆ ಎರಡನೆಯ ನಂಬರ ವಾರ್ಡಿನಲ್ಲಿ ಇರುತ್ತಿದ್ದಾಗ ತೊವ್ವೆಯಲ್ಲಿ ಹಾಕಿದ್ದ ಮೆಣಸಿನ ಕಾಯಿಯ ಸಂಬಂಧವಾಗಿ ಕಾಳೇಶ್ವರ ಪ್ರಸಾದನೊಡನೆ ಜಗಳವಾದಿ ತಲೆ ಒಡೆಯುವುದಕ್ಕೂ ಹೋಗಿದ್ದನ್ನು ನಾನು ಗಮನಿಸಿದ್ದೇನೆ.

ರಾಜಕೀಯ ಖೈದಿಗಳಲ್ಲಿರುವ ಇಂಥವೆಷ್ಟೋ ದುರ್ಬಲತೆಯ ನಿದರ್ಶನಗಳು ಪ್ರತಿದಿನವೂ ಜೈಲು ಕೆಲಸಗಾರರ ದೃಷ್ಟಿಗೆ ಬೀಳುತ್ತ ಇರುತ್ತವೆ. ಹೊರಗಿನ ಜನ ರಾಜಕೀಯ ಖೈದಿಗಳನ್ನು ಯಾವ ಗೌರವದಿಂದ ನೋಡುತ್ತಾರೋ, ಜೈಲಿನ ಅಧಿಕಾರಿಗಳೂ ಸಹ ಅವರನ್ನು ಅದೇ ಗೌರವದಿಂದ ನೋಡಬೇಕೆಂದರೆ ಹೇಗೆ ಸಾಧ್ಯ? ಅದಕ್ಕೇ ಏನೋ, ಬಹುಶಃ, ದೇಶದ ಜನರ ಕಡೆಯಿಂದ ಬರುವ ಗೌರವಕ್ಕಿಂತಲೂ ಇವರುಗಳ ಕಡೆಯಿಂದ ಬರುವ ಪ್ರಶಂಸೆಗಾಗಿ ಹಾತೊರೆಯುತ್ತೇನೆ. ಒಂದು ದಿನ ಜೈಲರು ಸೂಪರಿಂಟೆಂಡೆಂಟ್ ಸಾಹೇಬನ ಮುಂದೆ ಒಂಬತ್ತನೆಯ ಮತ್ತು ಹತ್ತನೆಯ ವಾರ್ಡುಗಳಲ್ಲಿನ ಖೈದಿಗಳನ್ನು ಕುರಿತು ಪ್ರಶಂಸೆ ಮಾಡುತ್ತಿದ್ದನ್ನು ಕೇಳಿದೆ. "ಅವರು ಕಿರಿಕಿರಿ ಮಾಡುವುದಿಲ್ಲ ಗೊಣಗುವುದಿಲ್ಲ" ಇದೇ ಈ ಅಧಿಕಾರಿಗಳ ಮೆಚ್ಚುಗೆಯ ಅಳತೆಗೋಲು.... ಅವತ್ತು ಸೂಪರಿಂಟೆಂಡೆಂಟರು ನನ್ನನ್ನು ನಿನಗೇನು ಬೇಕಾದರೂ ಕೇಳು ಎಂದಾಗ ಜೈಲರ್ ಬಾಬು ಮಗ್ಗುಲಲ್ಲೇ ನಿಂತಿದ್ದು ಕೂಡಲೇ ಪಾಕೆಟ್ ಬುಕ್ ತೆಗೆದು ಫೌಂಟನ್

ಪೆನ್ನಿನಲ್ಲಿ ನಾನು ಕೇಳುವುದನ್ನೆಲ್ಲ ಪಟ್ಟಿ ಬರೆದುಕೊಳ್ಳಲು ತಯಾರಿದ್ದ.... ಪಾಪ, ಆ ದೊಡ್ಡ ಮನುಷ್ಯನನ್ನ ನಿರಾಸೆಗೊಳಿಸಿಬಿಟ್ಟೆ..... ಸೆಲ್ಲಿನ ಹೊರಗಡೆ ಕುಡಿಯುವ ನೀರಿನ ಹೂಜಿ ಇಟ್ಟಿದೆಯಲ್ಲ, ಸರಿಯಾಗಿ ಅದೇ ಜಾಗದಲ್ಲೇ ಜೈಲರ್ ಬಾಬು ಅವತ್ತು ನಿಂತಿದ್ದದ್ದು. ಹೇಳುವುದು ಮರೆತಿದ್ದೆ. ಈ ನೀರಿನ ಹೂಜಿ ಸೆಲ್ಲಿನ ಹೊರಗಡೆ ಏಕೆ ಇಟ್ಟಿದ್ದಾರೆ. ಒಳಗಡೆ ಏಕೆ ಇಡಬಾರದಾಗಿತ್ತು? ಖಂಡಿತವಾಗಿ, ನನ್ನನ್ನು ಆತ್ಮಹತ್ಯೆಯ ಪ್ರೇರೇಪಣೆಯಿಂದ ಕಾಪಾಡಬೇಕೆಂಬ ಉದ್ದೇಶ್ಯವಂತೂ ಅಲ್ಲವೇ ಅಲ್ಲ. ಬೇರೆಲ್ಲ ಸೆಲ್ಲುಗಳಲ್ಲಿರುವ ಖೈದಿಗಳೆಲ್ಲರಿಗೂ ಈ ಹೂಜಿಯಿಂದಲೇ ನೀರು ಸರಬರಾಜು ಆಗುವುದು. ಒಂಬತ್ತು ಮತ್ತು ಹತ್ತನೆಯ ನಂಬರುಗಳ ಹೊರತಾಗಿ. ಸೆಲ್ಲಿನ ಖೈದಿಗಳಲ್ಲಿ ಯಾರಿಗಾದರೂ ನೀರಡಿಕೆಯಾದಾಗ ಸಿಪಾಯಿಯನ್ನು ಕೂಗುವರು ಅಥವಾ ಸೆಲ್ಲಿನೊಳಗಣ ಗಂಟೆಯನ್ನು ಬಾರಿಸುವರು. ಸಿಪಾಯಿ ತನ್ನ ಇಷ್ಟಬಂದರೆ, ಅಥವಾ ಅವಕಾಶ ಸಿಕ್ಕಿದಾಗ ಎದ್ದು ಹೋಗಿ ನೀರು ಕೊಡುವನು. ಸಾಮಾನ್ಯವಾಗಿ ಕೇಳಿದೊಡನೆಯೇ ಯಾರಿಗೂ ನೀರು ಸಿಗಲಾರದು. ಅನೇಕರು ನೀರಡಿಕೆ ತಡೆಯಲಾರದೆ ಒಟ್ಟಿಗೇ ತಗಾದೆ ಮಾಡತೊಡಗಿದಾಗ ಮಾತ್ರ ಸಿಪಾಯಿ ಎದ್ದು ಹೋಗಿ ಹೂಜಿಯಿಂದ ನೀರು ತಂದುಕೊಂಡುವನು. ಮೊದಲನೆಯ ನಂಬರ ಸೆಲ್ಲಿನ ಕಡೆ ಹೆಚ್ಚು ಗಮನ. ಅದರ ಸಲುವಾಗೇ ಏನೋ ನೀರಿನ ಹೂಜಿ ನನ್ನ ಸೆಲ್ಲಿನ ಮುಂದುಗಡೆ ಇಟ್ಟಿರುವುದು. ಹೂಜಿಯ ಕೊಳಾಯಿಯನ್ನು ಸಲಾಕೆಗಳ ನಡುವೆ ಕೈಹಾಕಿ ಚಾಚಿ ಎಳೆದುಕೊಂಡು ಗ್ಲಾಸಿನಲ್ಲಿ ನೀರು ತುಂಬಿಸಿಕೊಂಡೆ. ಸಾಧ್ಯವಾದಷ್ಟು ಮಟ್ಟಿಗೆ ನೀರು ಒಳಗೆ ಬೀಳದೆ ಹೊರಗೇ ಬೀಳುವ ಹಾಗೆ ಮುಖ, ಕೈ ಚೆನ್ನಾಗಿ ತೊಳೆದುಕೊಂಡೆ. ಮುಖದಿಂದ, ಕಣ್ಣುಗಳಿಂದ ಬೆಂಕಿಯ ಕಾವಿನಂತೆ ಕಾವು ಹೊರಗೆ ಬರತೊಡಗಿತು. ಸೆಲ್ಲಿನೊಳಗಡೆ ಮೋರಿಯಿಲ್ಲ. ಬಾಗಿಲ ಹೊರಗಡೆಯಿಂದಲೇ ನೀರು ಹರಿದು ಹೋಗಬೇಕು. ಮುಖ, ಕಣ್ಣು ತೊಳೆದುಕೊಳ್ಳುವಾಗ ಎಷ್ಟೋ ನೀರು ಸೆಲ್ಲಿನೊಳಗಡೆ ಬೀಳದೆ ಇರಲಿಲ್ಲ. ಆದಷ್ಟು ಅಂಗೈಯಲ್ಲಿ ನೀರನ್ನು ಬಾಚಿ ಹೊರಗಡೆಗೆ ಜೈಲಿನ ಬಾಗಿಲಿಗೂ ನೆಲಕ್ಕೂ ನಡುವೆ ಹುಟ್ಟಿ, ಬೆಳೆದು ಬಂದಿರುವ ಗಿಡಕ್ಕೆ ಬೀಳುವಂತೆ ಚೆಲ್ಲಿದೆ. ಇದೇ ರೀತಿಯಾಗೇ ನಾನು ನಿತ್ಯವೂ ಆ ಗಿಡಕ್ಕೆ ನೀರು ಹಾಕುತ್ತಿದ್ದೇನೆ. ಪ್ರತಿದಿನ ನಾನು ನೀರನ್ನು ಕೈಯಲ್ಲಿ ಬಾಚಿ ಹೊರಗೆ ಎಸೆಯುವಾಗ ಎಷ್ಟೆಷ್ಟು ದೂರ ಎಸೆಯಬಲ್ಲೆನೆಂದು ಪರೀಕ್ಷೆ ಮಾಡುತ್ತೇನೆ. ಎಷ್ಟು ದೂರ ಸಾಧ್ಯವೋ ಅಷ್ಟು ದೂರ ಎಸೆಯಲು ಹವಣಿಸುತ್ತೇನೆ... ಮಧ್ಯಾಹ್ನದ ವೇಳೆ ಹೊರಗಡೆ ಸಿಮೆಂಟಿನ ನೆಲ ಕಾದು ಕೆಂಡವಾಗಿರುವಾಗ ಆಗಲೂ ಅದರ ಮೇಲೆ ನೀರನ್ನು ಎಸೆಯುತ್ತೇನೆ. ಆಮೇಲೆ ಒಂದು, ಎರಡು, ಮೂರು.... ಎಂದು ಹೀಗೆ ಗಳಿಗೆಗಳನ್ನು ಎಣಿಸುತ್ತ ಎಷ್ಟು ಗಳಿಗೆಗಳಾದ ಮೇಲೆ ಆ ನೀರು ಒಣಗಿ ಹೋಗುತ್ತದೋ ಪರೀಕ್ಷಿಸುತ್ತೇನೆ. ಆ ಗಿಡದ ಹೆಸರೇನೋ ತಿಳಿಯದು. ತಾಮ್ರದ ಬಣ್ಣದ ಎಲೆಗಳು. ನೋಡುವುದಕ್ಕೆ ನಿಂಬೇ ಗಿಡದ ಎಲೆಗಳಂತಿವೆ. ಲಾಂದ್ರವು ಹತ್ತಿರ ಇರುವುದರಿಂದ ಚೆನ್ನಾಗಿ ಕಾಣಬರುತ್ತಿದೆ. ಬಳ್ಳಿಯ ಗಾತ್ರವಿರುವ ಗಿಡ.... ಬಳ್ಳಿಯಂತೆ ಗೋಡೆಗೆ ಅಂಟಿಕೊಂಡು ಬೆಳೆದಿದೆ. ಲಾಂದ್ರದ ಬೆಳಕಿನಲ್ಲಿ ಸಣ್ಣ ಸಣ್ಣ ಹಳದೀ ಬಣ್ಣದ ಹೂಗಳು ಕಾಣಬರುತ್ತಿಲ್ಲ. ಬದುಕಿರಬೇಕೆಂದು ಅದೇನು ಆಕಾಂಕ್ಷೆಯೋ

ಗಿಡಕ್ಕೆ! ಇಟ್ಟಿಗೆ, ಸಿಮೆಂಟುಗಳ ನಡುವೆ ಸಹ ಒಡೆದು ಈಚೆಗೆ ಬಂದಿದೆ! ಅವುಗಳಿಂದಲೇ ತನಗೆ ಬೇಕಾಗಿರುವ ಜೀವನ ಶಕ್ತಿಯನ್ನು ಎಳೆದು ಹೀರಿಕೊಂಡಿದೆ. ನಾನು ಹೋದಮೇಲೆ ಸಹ ಹೀರಿಕೊಳ್ಳುತ್ತ ಹೋಗುತ್ತದೆ. ನಾನು ಎರಚುವ ನೀರಿಗಾಗಿ ಅದೇನು ಕಾಯುವುದಿಲ್ಲ. ಗಿಡದ ಕಡೆ ನೋಡುತ್ತ ಇದ್ದರೆ ಅದರ ಪುಟ್ಟ ರೆಂಬೆಯನ್ನು ಮುರಿದರೆ ಬೆಳ್ಳಗೆ ದಪ್ಪನಾಗಿರುವ ಹಾಲು ಹೊರಗೆ ಬರಬಹುದು ಎನ್ನಿಸುತ್ತದೆ. ಎಕ್ಕದ ಗಿಡದ ಹಾಲಿನಂತೆ. ಎಕ್ಕದ ಗಿಡದ ಹಾಲಿನ ತೊಟ್ಟನ್ನು ಒಮ್ಮೆ ನನ್ನ ದೊಡ್ಡಮ್ಮ ನನ್ನ ಕತ್ತಿನಲ್ಲಿ ಬೆಳೆದಿದ್ದ ಕೀವು ಗುಳ್ಳೆಯ ಮೇಲೆ ಬಳಿದಿದ್ದಳು - ಗುಳ್ಳೆ ಒಡೆಯಲೆಂದು. ಅದಾದ ಅನಂತರ ದುರ್ಗಾದೀದಿಯ ಆಟದ ಮನೆಗೊಂದು ಹಣತೆಗೋಸ್ಕರ ನಾನು ಮತ್ತು ನೀಲು ಎಷ್ಟೋ ದಿನ ಈ ಎಕ್ಕದ ಹಾಲನ್ನು ತಂದು ಕೊಡುತ್ತಿದ್ದೆವು.

ದುರ್ಗಾದೀದಿಯ ತಂಗಿ ಟೇಪಿಯ ನೆನಪು ಬರುತ್ತದೆ. ಸ್ವಲ್ಪ ಕೊಳೆಯಾಗಿರುವ ಫ್ರಾಕ್ ತೊಟ್ಟು, ತಲೆಯ ಮೇಲೆ ಜಡೆ ಸುತ್ತಿಕೊಂಡಿರುತ್ತಿದ್ದಳು. ಒಮ್ಮೆ ನಾನು ಮತ್ತು ನೀಲು ಅವಳನ್ನು ತಮ್ಮ ತಂದೆಯ ಆಶ್ರಮದ ಬಳಿ ಗಂಗಾ - ಡಾರ್ಜಿಲಿಂಗ್ ರೋಡಿನಲ್ಲಿರುವ ರಬ್ಬರ್ ಗಿಡ ತೋರಿಸಲು ಕರೆದುಕೊಂಡು ಹೋಗಿದ್ದೆವು. ರಬ್ಬರ್ ಗಿಡದಿಂದ ಹಾಲು ತೆಗೆದು ರಬ್ಬರ್ ಹೇಗೆ ಮಾಡಬಹುದೆಂಬುದನ್ನು ತೋರಿಸಲು ಕೊಂಡು ಹೋಗಿದ್ದವು. ನಾನು ಮರ ಹತ್ತಿ ಚಾಕುವಿನಿಂದ ಒಂದು ರೆಂಬೆಯನ್ನು ಕೊಚ್ಚಿದೆ. ಟಪ್ ಟಪ್ ಎಂದು ಹಾಲಿನಂತಹ ರಸ ತೊಟ್ಟಿಕ್ಕಲು ಶುರುವಾಯಿತು. ನೀಲು ಟೇಪಿಯನ್ನು ಮರದ ಕೆಳಗೆ ನಿಲ್ಲಿಸಿ, "ತಲೆ ಎತ್ತ ಬೇಡ, ಹುಷಾರ್, ನಿನ್ನ ತಲೆ ಮೇಲೆ ಇರೇಜರ್ (ಅಳಿಸುವ ರಬ್ಬರು) ತಯಾರು ಮಾಡಿಕೊಡುತ್ತೇನೆ" ಎಂದ. ಆಮೇಲೆ ಪಾಪ, ಟೇಪಿಯು ಅದೆಷ್ಟು ಅತ್ತಿದ್ದಳು. ರಬ್ಬರಿನ ರಸ ಬಿದ್ದು ಬಿದ್ದು ಅವಳ ತಲೆಗೂದಲೆಲ್ಲ ಅಂಟಂಟಾಗಿ ತಲೆಯೆಲ್ಲ ತುರಿಸಲು ತೊಡಗಿತು. ಅಮ್ಮನ ಬಳಿ ದೂರು ಹೋಗಿ ನಮ್ಮಿಬ್ಬರನ್ನು ಅಮ್ಮ ಅದೆಷ್ಟು ಬೈದು ಹೊಡೆದಿದ್ದಳು! ಪುಣ್ಯಕ್ಕೆ ಅಪ್ಪ ಊರಿನಲ್ಲಿರಲಿಲ್ಲ.... ಅದಾದ ಎರಡು ಮೂರು ತಿಂಗಳಾದ ಮೇಲೆ ಟೇಪಿ ಏನೋ ಕಾಯಿಲೆ ಬಂದು ಸತ್ತೂ ಹೋದಳು. ಆಗ ನಾನೂ, ನೀಲುವೂ ಮನಸ್ಸಿನಲ್ಲಿ ಎಷ್ಟು ದುಃಖಿಸಿದವೋ! ನಾವಿಬ್ಬರೂ ಆಶ್ರಮದ ಎಳೆಯ ಗಿಡವೊಂದರ ಬಳಿ ಕೂತು ರಬ್ಬರಿನ ರಸ ತಲೆಯ ಮೇಲೆ ಬಿದ್ದಿದ್ದರಿಂದಲೇ ಟೇಪಿಗೆ ಡಿಫ್ತೀರಿಯಾ ಬಂದದ್ದು, ಅವಳ ಪ್ರಾಣ ಹೋದದ್ದು ನಮ್ಮ ತಪ್ಪಿಂದಲೇ ಎಂದು ಒಪ್ಪಿಕೊಂಡೆವು. ನೀಲು ಇದಕ್ಕ ಮೊದಲೇ ಹೋಗಿ ಸುದ್ದಿ ತಂದಿದ್ದ. ಕಾರ್ತೀಕ ಡಾಕ್ಟರು ಟೇಪಿಯ ಕತ್ತು ಕುಯಿದು ಅದರೊಳಗಿಂದ ರಬ್ಬರ ರಸ ಹೊರಗೆ ತೆಗೆದರಂತೆ! ಅವರ ಮನೆಯ ಮಕ್ಕಳನ್ನೆಲ್ಲ ಅಮ್ಮ ನಮ್ಮ ಆಶ್ರಮದ ಮನೆಗೆ ಕರೆತಂದು ಮಲಗಿಸಿದ್ದಳು. ಟೇಪಿಯ ತಮ್ಮ ಭೋಂದಾ (ಈ ವರುಷ ಅವನು 'ಲಾ' ಪಾಸು ಮಾಡಿ ವಕೀಲನಾಗಿದ್ದಾನೆ) ಆಗ ಎಷ್ಟು ಸಣ್ಣವನೋ. ನಮ್ಮಮ್ಮ ಹತ್ತಿರ ಮಲಗಿಸಿಕೊಂಡಿದ್ದಳು. ರಾತ್ರಿ ಎಚ್ಚೆತ್ತು ಮನೆಗ ಹೋಗಬೇಕು, ಮನೆಗೆ ಹೋಗಬೇಕು ಎಂದು ಅದೇನು ಅಳು, ಏನು ರಗಳೆ!...

ಬಾಗಿಲ ಬಳಿ ಕೂತುಕೊಳ್ಳುವ ಹಾಗಿಲ್ಲ. ನೆಲ ಎಲ್ಲ ಒದ್ದೆಯಾಗಿ ಹೋಗಿದೆ.

ನನ್ನ ಇಜಾರದಿಂದಲೇ ನೀರನ್ನು ಒರೆಸಿ ಹಾಕಿದೆ. ಇಜಾರ ಕೊಳೆಯಾದರೂ ಚಿಂತೆಯಿಲ್ಲ. ನಾಳೆಯಾದ ಮೇಲೆ ನಾನೆಲ್ಲಿ ತೊಡುತ್ತೇನೆ? ಒಂಬತ್ತು ವರುಷಗಳ ಹಿಂದೆ ಭೂಕಂಪವಾಯಿತಲ್ಲ.... ಆಗ ಈ ಜಾಗದಲ್ಲೇ ನೆಲದಲ್ಲಿ ದೊಡ್ಡ ಬಿಲ ಆಗಿಹೋಗಿತ್ತು. ಅವತ್ತಿನಿಂದ ಇವತ್ತಿನವರೆಗೂ ಅದೇ ರೀತಿ ಇದ್ದು ಪಿ.ಡಬ್ಲ್ಯೂ.ಡಿ.ಯವರ ದಕ್ಷತೆಗೆ ರುಜುವಾತಾಗಿದೆ. ಅಂತೂ ನನ್ನ ಯೋಚನೆಗಳೇ ವಿಚಿತ್ರ! ಒಂದನೆಯ ನಂಬರ ಸೆಲ್ಲಿನಲ್ಲಿರುವವನಿಗೆ ಇಷ್ಟು ವಿವೇಚನಾ ಜ್ಞಾನ! ಗಲ್ಲು ಕಂಬದಿಂದ ಬೇರೆಲ್ಲ ಸೆಲ್ಲುಗಳಿಗಿಂತ ಹೆಚ್ಚು ಹತ್ತಿರವಿರುವುದು ನನ್ನ ಸೆಲ್ಲು ಮತ್ತು ಬೇರೆಲ್ಲ ಖೈದಿಗಳಿಗಿಂತಲೂ ಫಾಸಿಯಾಗುವ ದಿನ ಹೆಚ್ಚು ಹತ್ತಿರವಿರುವ 'ಆಸಾಮಿ'ಯದೇ ಈ ಒಂದನೆಯ ನಂಬರು ಸೆಲ್ಲಿನ ಮೇಲಿನ ಹಕ್ಕು! ಪಿ.ಡಬ್ಲ್ಯೂ.ಡಿ. ಜನ ಸರಿಯಾಗೇ ಯೋಚಿಸಿದ್ದಾರೆ. ಒದ್ದೆ ನೆಲದ ಮೇಲೆ ಕೂತು ಕೂತು ವಾತರೋಗ ಹಿಡಿಯುವುದಕ್ಕೆ ಎಷ್ಟು ದಿನ ಆಗುತ್ತದೋ ಅಷ್ಟು ದಿನ ಈ ಸೆಲ್ಲಿನ 'ಆಸಾಮಿ' ಬದುಕೇ ಇರುವುದಿಲ್ಲವಲ್ಲ! ಯೋಚನೆಯೇ ಇಲ್ಲ.... ಆದರೂ ಅದೃಷ್ಟ ತಿರುಗಿ "ಮರ್ಸಿ ಪೆಟಿಷನ್" (ಆಳರಸರಿಂದ ಮಾಫಿ) ಮಂಜೂರಾಗಿ 'ಫಾಸಿ' ತಪ್ಪಿಹೋದರಂತೂ, ಈ ಸಾಮಾನ್ಯ ವಾತರೋಗ ಲೆಕ್ಕಕ್ಕೆ ತೆಗೆದುಕೊಳ್ಳುವಂಥದೇ ಅಲ್ಲ!... ಇವತ್ತಿನ ದಿನ ಈ ಒದ್ದೆ ನೆಲದ ಮೇಲೆ ಕೂತಿದ್ದರೆ, ಕಾಯಿಲೆ ಬರುವುದು ಸಾಧ್ಯ ಎನ್ನಿಸುತ್ತದೆ. ಈ ಸಮಯದಲ್ಲಿ ನನಗೊಂದು ಕತೆ ಜ್ಞಾಪಕಕ್ಕೆ ಬರುತ್ತದೆ. ಯಾರೋ ಒಬ್ಬ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ವಿಷದ ಬಟ್ಟಲನ್ನು ಹಿಡಿದು ಬಾಯ ಹತ್ತಿರ ತರುತ್ತಿದ್ದಾನೆ. ಆ ಸಮಯಕ್ಕೆ ಸರಿಯಾಗಿ ಹಠಾತ್ತಾಗಿ ಅವನ ಗೆಳೆಯ ಬಂದು ಹೊರಗಿನಿಂದ ಪಿಸ್ತೂಲು ತೋರಿಸಿ ಅವನ ಕಡೆ ಗುರಿಯಿಟ್ಟು, "ಬಟ್ಟಲು ಬಿಸಾಡು ಈಗಲೇ. ಇಲ್ಲ ಅಂದರೆ ಗೋಲಿ ಹಾರಿಸಿದೆ ನೋಡು" ಎಂದೊಡನೆ ಬಟ್ಟಲು 'ಫಳಾರ್' ಎಂದು ಹಾಗೇ ಬಿದ್ದುಬಿಡಬೇಕೆ? ಅಲ್ಲ, ಮನಸ್ಸಿನ ಗತಿ ಹೀಗೆ ಎಂದು ಹೇಳುವವರು ಯಾರಿದ್ದಾರೆ?

ಬಹುಶಃ ಬಾಗಿಲ ಮುಂದೆ ಇರುವ ಬಿಲವನ್ನು ಭೂಕಂಪವಾದ ಮೇಲೆ ರಿಪೇರಿಗಳಾಗುವ ಸಮಯದಲ್ಲಿ ಯಾರೂ ಗಮನಿಸಲೇ ಇಲ್ಲವೇನೋ! ಇಂಜನಿಯರದೂ ಅಷ್ಟೇನೂ ತಪ್ಪಲ್ಲ. ಹಠಾತ್ತಾಗಿ ದೃಷ್ಟಿಗೆ ಬೀಳುವುದಿಲ್ಲ. ಸುತ್ತಮುತ್ತ ನೀರು ಬಿದ್ದರೆ ಆ ನೀರೆಲ್ಲ ಈ ಜಾಗದಲ್ಲಿ ಶೇಖರಿಸುತ್ತದೆ. ಆಗ ಇಲ್ಲೊಂದು ಬಿಲ ಇರಬೇಕು ಅಂತ ಅನ್ನಿಸುತ್ತದೆ. ಭೂಕಂಪ ಅಂದರೆ ನೆನಪಾಗುತ್ತೆ.... ಅಬ್ಬ, ಏನು ಅನಾಹುತ ಆಗ! ಸಾವಿರದ ಒಂಬೈನೂರ ಮೂವತ್ತನಾಲ್ಕರಲ್ಲಿ ಬಿಹಾರಲ್ಲಿ ಆದ ಭೂಕಂಪದ ಮಾತು ಹೇಳುತ್ತ ಇದ್ದೇನೆ. ಪಾಟನಾ ಕ್ಯಾಂಪ್ ಜೈಲಿನಿಂದ ಉತ್ತರ ಬಿಹಾರಿನ ರಾಜಕೀಯ ಖೈದಿಗಳನ್ನೆಲ್ಲ ಸರ್ಕಾರವು ಬಿಡುಗಡೆ ಮಾಡಿಬಿಟ್ಟಿತು. ಭೂಕಂಪದಿಂದ ಪೀಡಿತರಾದ ಜನರ ಸೇವೆಗೆಂದು ನೀಲು 1932ರ ಕೊನೆಯ ಭಾಗದಲ್ಲಿ ಬಿಡುಗಡೆಯಾಗಿಬಿಟ್ಟಿದ್ದ. ಅಪ್ಪ, ಅಮ್ಮ ಇಬ್ಬರೂ ಜೈಲಿನಲ್ಲೇ. ನೀಲು ದೊಡ್ಡಮ್ಮನ ಮನೆಯಲ್ಲಿ ಹೋಗಿ ಇಳಿದುಕೊಂಡ. ನಾವು ಬಿ.ಎನ್.ಡಬ್ಲ್ಯೂ (ಬೆಂಗಾಲ್ ನಾರ್ಥ್ ವೆಸ್ಟರ್ನ್ ರೈಲ್ವೆ) ಲೈನಿನಲ್ಲಿ ಬರುತ್ತ ಇದ್ದೇವೆ. ಆಗ ನೋಡುತ್ತೇವೆ. ಪ್ರತಿಯೊಂದು ಸ್ಟೇಷನ್ನಿನಲ್ಲೂ

ಅಬ್ಬ... ಅದೇನು ಕರುಳುಕಿತ್ತು ಬರುವಂತೆ ಮಾಡುವ ನೋಟಗಳು. ಭೂಕಂಪದ ಧ್ವಂಸ ಲೀಲೆಗೆ ತುತ್ತಾದ ಸಂಸಾರಗಳು! 'ಫಥ್‌ಹಾರಾ' ಅಥವಾ ಇನ್ಯಾವುದೋ ಒಂದು ಸ್ಟೇಷನ್ನಿನಲ್ಲಿ ನಾವು ಇಳಿದುಕೊಂಡೆವು. ರೈಲ್ ಸೇತುವೆ ಮುರಿದುಬಿದ್ದಿತ್ತು. ದೋಣಿಗಳಲ್ಲಿ ಜನರನ್ನು ಸಾಗಿಸುವ ಏರ್ಪಾಡಾಗಿತ್ತು. ಸರ್ಕಾರದ ಕಡೆಯಿಂದ ಪ್ರತಿಯೊಬ್ಬ ಆಳಿಗೂ ಮೂರಾಣೆಯಂತೆ ಭತ್ಯ ಮಂಜೂರಾಗಿತ್ತು. ಅದೇ ನದೀ ತೀರದ ಸಂತೆಯಲ್ಲಿ ಮೊಸರು ಮಾರುವವನಿಂದ ಸೇರಿಗೆ ನಾಲ್ಕು ಪೈಸಾ ಪ್ರಕಾರ ಮೊಸರುಕೊಂಡು ಕುಡಿದದ್ದಾಯಿತು. ನಾಗೇಂದರ್ ಸಿಂಗನು ಪಂದ್ಯ ಕಟ್ಟಿ ನಾಲ್ಕೈದು ಸೇರಿನಷ್ಟು ಮೊಸರನ್ನ ಹೊಡೆದ. ಸ್ವಲ್ಪ ಕೆಂಪು ಬಣ್ಣಕ್ಕೆ ತಿರುಗಿದ್ದ ಕೆನೆ ಮೊಸರು. ಕೈಯಲ್ಲಿ ಕಾಸಿಲ್ಲ.... ಕಾರಾಗೋಲಾ ಸ್ಟೇಷನ್ನಿನಿಂದ ಪೂರ್ಣಿಯಾ ಸ್ಟೇಷನ್ನಿನವರೆಗೂ ನಡೆದುಕೊಂಡು ಹೋಗಬೇಕಾಗಿತ್ತು. ಗ್ಯಾಂಜಿಸ್ - ಡಾರ್ಜಿಲಿಂಗ್ ರೋಡಿನಲ್ಲಿ ಉದ್ದಕ್ಕೂ ಅದೇನು ಭೂಕಂಪದ ಹಾವಳಿ! ಎಲ್ಲಿ ನೋಡಿದರೂ ದೊಡ್ಡ ದೊಡ್ಡ ರಂಧ್ರಗಳು ಬಿರುಕುಗಳು! ಹರದಾ ಎಂಬಲ್ಲಿದ್ದ ದೊಡ್ಡ ಸೇತುವೆ ಗುರುತಿಲ್ಲದ ಹಾಗೆ ಮುರಿದುಬಿದ್ದಿತ್ತು. ಹರದಾ ಬಜಾರಿನ ಬಳಿ ಹೋದ ಮೇಲೆ ಕಾಲು ಮುಂದೆ ಇಡಲಿಕ್ಕೆ ಸಾಧ್ಯವಾಗಲಿಲ್ಲ. ದುಬೇಜಿ ಎಂಬ ಒಬ್ಬ ಕಾಂಗ್ರೆಸ್ ಕೆಲಸಗಾರರು ಅಲ್ಲಿದ್ದರು. ಅವರ ಅಂಗಡಿಗೆ ಹೋಗಿ ಹಾಜರಾದೊಡನೆ ಅವರ ಹೆಂಡತಿಯು ನಮ್ಮನ್ನು ನೋಡಿ ಒಳಗಡೆ ಓಡಿ ಹೋದಳು. ಮರುಗಳಿಗೆಯಲ್ಲಿ "ಪರ್‌ಣಾಮ್" (ಪ್ರಣಾಮಗಳು) ಎನ್ನುತ್ತ ಹೊರಗಡೆ ಬಂದಳು. ನೋಡಿದರೆ ಮೊದಲು ಉಟ್ಟಿದ್ದ ಮಿಲ್ ಸೀರೆಯನ್ನು ಬದಲಾಯಿಸಿ ಹಸಿರು ಬಾರ್ಡರಿರುವ ಖದ್ದರ್ ಸೀರೆಯನ್ನುಟ್ಟು ಬಂದಿದ್ದಳು. ನಮ್ಮನ್ನ ನೋಡಿ ಓಡಿ ಹೋದುದರ ಕಾರಣ ಗೊತ್ತಾಯಿತು. ಆಕೆಗೆ ವಯಸ್ಸಾಗಿದ್ದರೂ ಮೈಬಣ್ಣ ಬಹು ಸುಂದರವಾಗಿತ್ತು. ನೇರವಾದ ಮೈಕಟ್ಟು, ಸ್ವಲ್ಪ ಗಿಣಿಯ ಮೂಗು. ಒಟ್ಟಿನಲ್ಲಿ ಕಣ್ಣು, ಮುಖಗಳಲ್ಲಿ ತೋರಿಬರುವ ಗಂಭೀರವಾದ ಆತ್ಮಗೌರವದ ಭಾವ ಮುದುಕಿಯ ರೂಪಕ್ಕೆ ಇನ್ನೂ ಹೆಚ್ಚು ಸೊಂಪನ್ನು ನೀಡಿತ್ತು. ದುಬೇಜಿ ಮತ್ತು ಆತನ ಹೆಂಡತಿ ನಮ್ಮನ್ನು ಎಷ್ಟು ಉಪಚಾರದಿಂದ ನೋಡಿಕೊಂಡರೋ. ಹಾಲಿನಲ್ಲಿ ಅವಲಕ್ಕಿ ಬೇಯಿಸಿಕೊಟ್ಟರು. ಅದಕ್ಕೆ ನಾವು ಬಂಗಾಳಿಗಳ ಪದ್ಧತಿಯಂತೆ ಮೊಸರನ್ನು ಕಲಸಿ ತಿಂದೆವು. ನಾವೆಲ್ಲ ದುಬೇಜಿಯವರ ಭೋಜಪುರಿ ಭಾಷೆಯನ್ನು ಅನುಕರಣ ಮಾಡಿ ಮಾತಾಡಲು ಪ್ರಯತ್ನಿಸಿದೆವು. ದುಬೇಜಿ "ಥಾಂಥಾಯಿಲಾವಾ" (ತಲುಪಿದೆವು) ಎಂಬುವುದಕ್ಕೆ "ಚೌಂಪಲೋ" ಎನ್ನುತ್ತಾರೆ. ಅದನ್ನು ಆಡಿಕೊಂಡು ನಾವೆಲ್ಲ ಎಷ್ಟು ನಕ್ಕೆವೋ. ಮುದಿ ದಂಪತಿ ಇಬ್ಬರೂ ನಮ್ಮ ನಗು, ಕೇಕೆಗಳಲ್ಲಿ ಭಾಗವಹಿಸಿದರು. ಚಳಿಯಲ್ಲಿ ಮೈ ಕಾಸಿಕೊಳ್ಳಲು ಹಾಕಿದ್ದ ಬೆಂಕಿಯ ಕುಂಡದ ಅಂಚಿನಲ್ಲಿ ರಾತ್ರಿ ಬಹಳ ಹೊತ್ತಿನವರೆಗೂ ಆ ದಂಪತಿಯ ಸಂಗಡ ಮಾತು, ಕತೆ ಆಯಿತು. ಶ್ರೀಮತಿ ದುಬೇ ಅಮ್ಮನ ಮಾತು ಎತ್ತಿದರು. ನನ್ನನ್ನು ಕುರಿತು, "ಈ ಸಲ ನೀನು ಮದುವೆ ಮಾಡಿಕೊಳ್ಳಬೇಕು" ಅಂದರು. ಇನ್ನೂ ಏನೇನೋ ಮಾತು ಈಗ ಜ್ಞಾಪಕಕ್ಕೆ ಬರುವುದಿಲ್ಲ. ಕಳೆದ "ಉಪ್ಪಿನ ಸತ್ಯಾಗ್ರಹ"ದ ಸಮಯದಲ್ಲಿ ದುಬೇ ದಂಪತಿ ಭಾಗವಹಿಸಿದ್ದರು. ಶ್ರೀಮತಿ ದುಬೆ ದಸ್ತಗಿರಿಯಾಗಿ ಜೈಲುವಾಸ ಅನುಭವಿಸಿದ್ದರು. ದುಬೇಜಿಯನ್ನು ಮಾತ್ರ

ಪೊಲೀಸರು ದಸ್ತಗಿರಿ ಮಾಡಲಿಲ್ಲ. ಏಕೋ ಗೊತ್ತಿಲ್ಲ. ಬಹುಶಃ ವಯಸ್ಸು ಹೆಚ್ಚಾಗಿದೆಯೆಂದೋ ಏನೋ! ಅದಾದ ಮೇಲಿಂದ ಶ್ರೀಮತಿ ದುಬೇ ತಮಗಿಂತಲೂ 'ದೊಡ್ಡ'ವರೆಂದು ಮೆರೆಯುತ್ತಾರೆ ಎಂಬುದಾಗಿ ದುಬೇಜಿಯವರ ದೂರು. ಅತ್ಯಂತ ಸರಳ ಮನಸ್ಸಿನ ಈ ದಂಪತಿಯ ಸಂಪರ್ಕ ಸ್ಮರಣೀಯವಾಗಿದೆ. ತಮಗಿದ್ದ ಅಲ್ಪ ಸ್ವಲ್ಪ ಜಮೀನನ್ನು ಕಾಂಗ್ರೆಸ್ಸಿಗೆ ದಾನ ಮಾಡಿಬಿಟ್ಟಿದ್ದಾರೆ. ಅವರ ಮನೆ ಕೋಣೆಯಲ್ಲಿ ರಾತ್ರಿ ಮಲಗಿದ್ದೇವೆ. ನಮ್ಮ ನಿದ್ದೆಗೆ ಚಳಿಯಿಂದ ತಡೆ ಬರಬಾರದೆಂದು ನಾವು ಹೊದ್ದಿದ್ದ ಕಂಬಳಿಗಳ ಮೇಲೆ ಇನ್ನೂ ಒಂದೊಂದು ಕಂಬಳಿ ಹೊದಿಸಿ ದಂಪತಿ ಇಬ್ಬರೂ ಒಳಗೆ ಹೋದರು. ಮಾರನೆಯ ದಿನ ಅವರ ಸ್ಥಳ ಬಿಟ್ಟು ಹೊರಡುವ ಮೊದಲು ನನ್ನನ್ನು ಅಲ್ಲಿನ ಪ್ರೈಮರಿ ಸ್ಕೂಲಿನ ಬಳಿ ಏಕಾಂತವಾಗಿ ಕರೆದು ಹೇಳಿದರು, "ನೋಡು, ನಮ್ಮದೊಂದು ಆಸೆ ನಡೆಸಿಕೊಡಬೇಕು ನೀನು. ನಮಗೆ ಮಕ್ಕಳಿಲ್ಲ. ನೀನು ಇಷ್ಟು ಸಣ್ಣವನಿರುವಾಗಲಿಂದಲೂ ನೋಡುತ್ತ ಇದ್ದೇವೆ. ಮಾಸ್ಟರ್ ಸಾಹೇಬರ ಮಗ ಅಂದರೆ ನಮ್ಮ ಮಗು ಇದ್ದ ಹಾಗೇ. ನಾವೋ ಬಡವರು. ನೀವು ಬಂಗಾಳಿಗಳು ಬಿಲೂ ಬಾಬು. ಆದರೂ ನಮ್ಮದೊಂದು ಕೆಲಸ ಬಾಕಿ ಇದೆ. ಅದನ್ನ ಪೂರೈಸುವ ಜವಾಬುದಾರಿ ನಿನ್ನ ಹೆಗಲ ಮೇಲೆ ಇದೆ. ಏನಿಲ್ಲ.... ಇಷ್ಟೆ.... ನಮ್ಮ ಹೆಸರಿನಲ್ಲಿ ಇರುವ ಈ ಒಂದೆರಡು ಬಿಘಾ ಜಮೀನಿನ ಆದಾಯದಲ್ಲೇ ಕಾಂಗ್ರೆಸ್ ಕೆಲಸ ಮಾಡಿಕೊಂಡು ಬಂದಿದ್ದೇವೆ. ಇದನ್ನೇ ಒಂದು ಕಾಗದ ಪತ್ರ ಬರೆಸಿ ಕಾಂಗ್ರೆಸಿಗೇ ಬಿಟ್ಟು ಹೋಗಬೇಕು ಅಂತ ಇದೆ. ನಾವು ಈ ಲೋಕ ಬಿಟ್ಟುಹೋದ ಮೇಲೆ ನೀನು ಇದರ ಜವಾಬುದಾರಿ ತೆಗೆದುಕೊಂಡು ಇದನ್ನು ಕಾಂಗ್ರೆಸ್ಸಿನ ಕೆಲಸಕ್ಕೆ, ಮಹಾತ್ಮಾಜಿಯವರ ಕೆಲಸಕ್ಕೆ ಉಪಯೋಗಿಸಬೇಕು. ಇನ್ನೆಷ್ಟು ದಿನ ಇದ್ದೇವು ನಾವು ?" ಎಂದರು. ಹಾಗೇ ಆಗಲಿ ಎಂದು ಮಾತುಕೊಟ್ಟೆ.... ಅನ್ನಿಸತ್ತೆ. ಬಹುಶಃ ನನ್ನ ಮನಸ್ಸಿನಲ್ಲಿ ಈಗಲೂ ಶ್ರೀಮತಿ ದುಬೇ ಅದೇ ಬಣ್ಣದ ಕಾಗದದಲ್ಲಿ ಮಾಡಿರುವ ರಥದಲ್ಲಿ ಕೂಡಿಸಿದ ಶ್ರೀರಾಮನ ಮೂರ್ತಿಯ ಸಮ್ಮುಖದಲ್ಲಿ ಕೂತು 'ತಕಲಿ'ಯಲ್ಲಿ ದೇವರ ದೀಪಕ್ಕೆ ಬತ್ತಿಯ ದಾರವನ್ನು ತೆಗೆಯುತ್ತಿರುತ್ತಾರೆ.

ಹರದಾ ಬಜಾರಿನಿಂದ ಹೊರಟು ನಾವು ಮಾರನೆಯ ದಿನ ಮಧ್ಯಾಹ್ನ ಪೂರ್ಣಿಯಾ ತಲಪಿದೆವು. ನಮ್ಮ 'ಗಾಂಧೀ ಆಶ್ರಮ'ವನ್ನು ಸರ್ಕಾರವು ಜಪ್ತು ಮಾಡಿಕೊಂಡಿದೆ.... ಆದರೂ ಆ ಕಡೆಯೇ ಹೋದೆ ದೂರದಿಂದ. ನನ್ನ ಕಣ್ಣಿಗೆ ಬಿದ್ದದ್ದು ಜಿಲ್ಲಾ ಕಾಂಗ್ರೆಸ್ ಆಫೀಸಿನ ಕೋಣೆಯ ಮುಂಭಾಗದಲ್ಲಿರುವ ಸಣ್ಣ ತೇಗದ ಗಿಡವು ಹಳದೀ ಬಣ್ಣದ 'ಬಿಗ್ನೋನಿಯಾ' ಹೂಗಳಿಂದ ತುಂಬಿ ಹೋಗಿದೆ. ನಾನೇ ಹಿಂದೆ ಈ ಹೂವಿನ ಬಳ್ಳಿಯನ್ನು ಈ ಗಿಡಕ್ಕೆ ಹಬ್ಬಿಸಿದ್ದೆ.... ಹಿಂದೆ ಧ್ವಜ ಸ್ತಂಭದ ಮೇಲುಗಡೆಯಿಂದ ನಮ್ಮ ಪಾರ್ಟಿಯ ತ್ರಿವರ್ಣ ಧ್ವಜವು ಬಹು ದೂರದಿಂದ ಕಾಣಬರುತ್ತಿತ್ತು. ಈಗ ಅದಿಲ್ಲ.... ಆದರೆ ಅದಕ್ಕೆ ಬದಲಾಗಿ ಈಗ ದೂರದಿಂದ ಹೊಳೆಯುತ್ತಿರುವ ಬಿಳೀ ಮೋಡಗಳ ಹಿನ್ನೆಲೆಯಲ್ಲಿ ಹಳದಿ "ಬಿಗ್ನೋನಿಯಾ" ಹೂಗಳಿಂದ ತುಂಬಿರುವ ಹಸಿರು ತೇಗದ ಗಿಡವು ರಾಷ್ಟ್ರ ಧ್ವಜದ "ತ್ರಿವರ್ಣ"ಕ್ಕೆ ಪ್ರತೀಕವಾಗಿ ಕಾಣಬರುತ್ತಿದೆ ನನ್ನ ಕಣ್ಣಿಗೆ "ಬಿಳೀ ಹಳದಿ ಹಸಿರು!"

'ಆಶ್ರಮ'ದ ಛಾವಣಿ ಜೊಂಡು ಹುಲ್ಲಿನದು; ನಮ್ಮ ಮನೆಯ ಸುತ್ತಲಿದ್ದ ಬೇಲಿ ಮುರಿದು ಬಿದ್ದಿದೆ. 'ಟ್ಯೂಬ್‌ವೆಲ್' ಇತ್ತಲ್ಲ. ಅದರ ಮೇಲು ಭಾಗ ಕಾಣುತ್ತಿಲ್ಲ. ಏನಾಯಿತೋ ಏನೋ ಎಸ್.ಡಿ.ಓ. ಸಾಹೇಬರ ಸೀಲು ಮಾಡಿದ ಬಾಗಿಲು ಮಾತ್ರ. ಬೀಗದ ಗುರುತು ಸಹ ಇಲ್ಲ. ಕೊಠಡಿಯೊಳಗೆ ಹೋಗಿ ನೋಡಿದರೆ ಮರದ ಮಂಚ, ದೊಡ್ಡ ಅಲಮಾರು ಹೊರತಾಗಿ ಬೇರೆ ಯಾವ ಸಾಮಾನೂ ಕಾಣುತ್ತಿಲ್ಲ. ಸಣ್ಣ, ಪುಟ್ಟ ಸಾಮಾನುಗಳೇನೇನಿದ್ದುವೋ ಎಲ್ಲವನ್ನೂ ಯಾರು ಯಾರೋ ಎತ್ತಿಕೊಂಡು ಹೋಗಿದ್ದಾರೆ. ಅಡಿಗೆಮನೆ ಬಾಗಿಲ ಬಳಿ ಇದ್ದ ಎರಡು 'ಕಪಾಟು'ಗಳನ್ನೂ ಯಾರೋ ಕಿತ್ತುಕೊಂಡು ತೆಗೆದುಕೊಂಡು ಹೋಗಿದ್ದಾರೆ. ಗಾಂಧಿಜೀಯ ಚಿತ್ರಪಟವನ್ನೂ ಕದ್ದುಕೊಂಡು ಹೋಗಿದ್ದಾರೆ.

ನವದೀದಿ ಜಾಣತನದಿಂದ ತಯಾರು ಮಾಡಿ ಕಟ್ಟು ಹಾಕಿ ತೂಗು ಹಾಕಿದ್ದ ಹತ್ತಿಯ ಕಸೂತಿ ಪಟ ಸಹ ಕಾಣುತ್ತಿಲ್ಲ. ಸಹದೇವನ ತಂಗಿ ಸರಸ್ವತಿಯು ಚಿಕ್ಕ ವಯಸ್ಸಿನಲ್ಲಿ ಕಾರ್ಪೆಟಿನ ಮೇಲೆ "UNTOUCHABILITY IS A SIN" ('S' ಎನ್ನುವುದು 'Z' ಎನ್ನುವ ಹಾಗೆ ಕಾಣುತ್ತಿತ್ತು) ಎಂಬುದನ್ನು ಹೆಣೆದಿದ್ದಳು. ಅದು ಕೂಡ ಇಲ್ಲ. ನಾನು ಬರೆದ ಕವಿತೆಯೊಂದನ್ನು ನೀಲು ಪೇಸ್ಟ್ ಹಾಕಿ ಬೋರ್ಡಿನ ಮೇಲೆ ಅಂಟಿಸಿ ತೂಗುಹಾಕಿದ್ದ. ಅದು ಮಾತ್ರ ಇದೆ. ಬರಹ ಅಸ್ಪಷ್ಟವಾಗಿ ಕಾಣುತ್ತಿದೆ. ಮತ್ತು ನಾನೇ ಚಿತ್ರಿಸಿದ ಕವಿ ರವೀಂದ್ರರ ಚಿತ್ರ - ರಟ್ಟಿನ ಮೇಲೆ ಅಂಟಿಸಿದ್ದದ್ದು – ಅದನ್ನೂ ಕೊಂಡುಹೋಗಲು ಯೋಗ್ಯವಲ್ಲವೆಂದು ಬಿಟ್ಟುಹೋಗಿದ್ದಾರೆ. ಬಹುಶಃ ಫ್ರೇಮು ಹಾಕಿಲ್ಲವೆಂದೇನೋ. ಹೂ ಗಿಡಗಳಿದ್ದ ಪಾಟುಗಳನ್ನೆಲ್ಲ ಕದ್ದುಕೊಂಡು ಹೋಗಿದ್ದಾರೆ. ಆದರೆ ನೆಲದ ಮೇಲೆ ಬೆಳೆಸಿದ್ದ ಗುಲಾಬಿ ಮತ್ತು ಬಿಳೀ ಬಣ್ಣದ 'ಭಿನಕಾ' ಹೂಗಳಿಂದ ಅಂಗಳ ಇನ್ನೂ ತುಂಬಿ ಹೋಗಿದೆ. ಬಹುಶಃ ಆಡುಗಳಿಗೆ ಈ ಗಿಡಗಳು ಆಹಾರವಲ್ಲ ಎಂದು ತೋರುತ್ತದೆ. ಅಲ್ಲಲ್ಲಿ ಒಂದೆರಡು 'ವ್ಯಾರೆಂಡರ್' ಗಿಡಗಳು ತಲೆ ಎತ್ತಿ ನಿಂತುಕೊಂಡಿವೆ. ಕೀಳು ಜಾತಿಯ 'ಭಿನಕಾ' ಗಿಡಗಳ ಕಡೆ ನಿಕೃಷ್ಟ ಭಾವ ತೋರಲಿಕ್ಕೇನೋ! ರೇಷ್ಮೆ ಹುಳುಗಳನ್ನು ವ್ಯವಸಾಯ ಮಾಡುತ್ತಿದ್ದ ಕೋಣೆ ಹಾಳು ಬಿದ್ದಿದೆ. ಎತ್ತಿನ ಗಾಡಿಯ ಎರಡು ಚಕ್ರಗಳನ್ನೂ ಯಾರೋ ಕಿತ್ತುಕೊಂಡು ಹೋಗಿದ್ದಾರೆ. ಗಾಣದ ಮನೆ ಹಾಗೇ ಇದೆ. ಆದರೆ ಮನೆಯೊಳಗೆಲ್ಲ ಯಾವ ಯಾವುದೋ ಕುರುಚಲು ಗಿಡಗಳಂಥವು ಬೆಳೆದು ಕಾಲಿಡುವ ಹಾಗೇ ಇಲ್ಲ. ಆಶ್ರಮದ ಲೈಬ್ರರಿಯಲ್ಲಿ ಒಂದು ಪುಸ್ತಕ ಸಹ ಇಲ್ಲ. ಹಾಲಿನಲ್ಲಿ ಏನೇನೋ ಕಸದ ರಾಶಿ.... ಹೊಲಸು ನಾತ ಹೊಡೆಯುತ್ತದೆ. ಬಹುಮಟ್ಟಿಗೆ ಆಡು, ಆಕಳುಗಳನ್ನು ಅಲ್ಲಿ ಕಟ್ಟಿಹಾಕಿದ್ದ ಗುರುತುಗಳು ಬೇಕಾದಷ್ಟು ಕಾಣುತ್ತವೆ. ನೆರೆಹೊರೆಯವರು ಬಹುಶಃ ಕಾಂಗ್ರೆಸಿನ ಈ ದುರ್ದಿನಗಳಲ್ಲಿ ಆಶ್ರಮವನ್ನು ಮರೆತಿಲ್ಲ!

ಮನಸ್ಸೇಕೋ ವ್ಯಾಕುಲದಿಂದ ತುಂಬಿಹೋಗಿತ್ತು. ಆಶ್ರಮವನ್ನು ಬಿಟ್ಟದ್ದೇ ದೊಡ್ಡಮ್ಮನ ಮನೆಗೆ ಹೋದೆ. ಇದು ನಮ್ಮ ತಂದೆಯ ಆತ್ಮೀಯ ಬಂಧುಗಳ ಮನೆ. ಮನೆಯ ಮುಂದುಗಡೆಯೇ ಒಂದು ಡೇರೆ. ಅದರ ಬಾಗಿಲ ಬಳಿ ಒಂದು ಬಿಳೀ ಆಡು ಕತ್ತನ್ನು ಮೇಲಕ್ಕೆ ಚಾಚಿ ಒಂದು ಟೇಬಲ್ ಕ್ಲಾತಿನ ಮೇಲೆ ಕಸೂತಿ ಮಾಡಿರುವ

ಬಳ್ಳಿ, ಎಲೆಗಳನ್ನು ತಿನ್ನಲು ಹೋಗಿ ಬಟ್ಟೆಯನ್ನೇ ಆಗಿಯುತ್ತಿದೆ. ನನೀ ದೀದಿಯ ಮಗಳು ಬುಡಿಯಾ ಮತ್ತು ಅವಳ ಒಡನಾಡಿ ಹುಡುಗಿಯರು ಮನೆಯ ಮುಂದಿನ ಬಯಲಲ್ಲಿ ಭೂಕಂಪದಿಂದ ಆಗಿರುವ ದೊಡ್ಡ ಕೊರಕಲ ಕಡೆ ನಟ್ಟ ನೋಟದಿಂದ ನೋಡುತ್ತ ಸ್ವಲ್ಪ ದೂರದಲ್ಲಿ ನೆಲದ ಮೇಲೆ ಅಂಗತ್ತನಾಗಿ ಮಲಗಿದ್ದಾರೆ. ನನ್ನನ್ನು ನೋಡಿದೊಡನೆ ಎಲ್ಲರೂ ಓಡಿಬಂದರು. ನಾನವರನ್ನು, "ಇಲ್ಲೇನು ಮಾಡುತ್ತ ಇದ್ದಿರಿ ?" ಎಂದು ಕೇಳಿದರೆ ಅವರು "ಚಿಕ್ಕ ಮಾವ ಏನು ಹೇಳಿದರು ಗೊತ್ತಾ... ಆ ತೂತಿನಲ್ಲಿ ನೋಡಿದರೆ ಕೆಳಗಡೆ ಅಮೆರಿಕ ಕಾಣುತ್ತದಂತೆ!" ಎಂದರು. ಬುಡಿಯಾ ಹೊರಗಿನಿಂದಲೇ ಕೂಗುತ್ತ ಒಳಗೆ ನುಗ್ಗಿದಳು - "ದೊಡ್ಡಮ್ಮಾ ನೋಡು, ಯಾರು ಬಂದಿದ್ದಾರೋ!" ದೊಡ್ಡಮ್ಮನೂ ನವದೀದಿಯೂ ಹವಿಷ್ಯದ ಮನೆಯಲ್ಲಿ ಊಟಕ್ಕೆ ಕೂತಿದ್ದರು. "ಎಲ್ಲೀ ನವದೀದೀ ?" ಎನ್ನುತ್ತ ಒಳಗೆ ಪ್ರವೇಶಿಸುತ್ತಲೂ ಇಬ್ಬರೂ ತಟಕ್ಕನೆ ಊಟ ಮಾಡುವುದನ್ನು ಬಿಟ್ಟು ಎದ್ದು ಹೊರಗೆ ಬಂದರು. ದೊಡ್ಡಮ್ಮನ ಬಲಗೈ ಎಂಜಲಾಗಿತ್ತು. ಎಡಗೈಯಿಂದಲೇ ನನ್ನನ್ನು ತನ್ನ ಕಡೆ ಎಳೆದುಕೊಂಡಳು. ನೀಲು ಆಗ ಮನೆಯೊಳಗಡೆ ಎಲ್ಲೋ ಇದ್ದವನು ಕಣ್ಣುಜ್ಜಿಕೊಳ್ಳುತ್ತಲೇ ಹೊರಗಡೆ ಬಂದ. "ನೋಡು, ದೊಡ್ಡಮ್ಮನ ಊಟ ಎಲ್ಲ ಹಾಳು ಮಾಡಿಬಿಟ್ಟೆ. ಈಗ ನೀನು ದೊಡ್ಡಮ್ಮನ ಎಲೆಯಲ್ಲಿ ಕೂತು ಇದನ್ನೆಲ್ಲ ತಿಂದು ಬಿಡು" ಎಂದು ಹೇಳಿ ಗಟ್ಟಿಯಾಗಿ ನಕ್ಕ. ಆಗ ನವದೀದಿಯೂ ನಗುತ್ತ, "ನೋಡು, ನೋಡು, ನಮ್ಮದೆಲ್ಲಾ ಊಟ ಮಾಡಿ ಆಗಿಹೋಗಿತ್ತು ಆಗಲೇ" ಎಂದಳು. ನವದೀದಿಯ ಕಣ್ಣುಗಳಲ್ಲಿ ಕಪಟ ಕೋಪ ಕಾಣುತ್ತಿತ್ತು. ದೊಡ್ಡಮ್ಮ ನೀಲುವನ್ನು ಗದರುತ್ತ, "ನೀನು ಮತ್ತೆ ಆ ಮುರಿದ ಕೋಣೆಯಲ್ಲಿ ಮಲಗಿದ್ದೆಯಾ ಬೇಡ ಅಂದರೂ ? ಛಾವಣಿ ತಲೆ ಮೇಲೆ ಬಿದ್ದಿದ್ದರೆ ಏನು ಗತಿ ? ನಿನ್ನನ್ನು ಸುಧಾರಿಸಲಿಕ್ಕೆ ನನ್ನಿಂದಂತೂ ಆಗೋದಿಲ್ಲಪ್ಪಾ ? ಇಲ್ಲ, ಇನ್ನು ಮೇಲಿಂದ ನಿನ್ನನ್ನು ನಾನಿಲ್ಲಿ ಇರಿಸಿಕೊಳ್ಳುವುದಿಲ್ಲ, ನಿಮ್ಮ ಮಾವನ ಮನೆಗೇ ಕಳಿಸಿಬಿಡುತ್ತೇನೆ ಹೋಗು, ಏನು ಪುಂಡ, ಏನು ಪುಂಡನಪ್ಪಾ.... ನಿನ್ನೆ ರಾತ್ರಿಯೂ ಆ ಅರ್ಧಮುರಿದ ರೂಮಿನಲ್ಲಿ ಮಲಗಿದ್ದ. ಏನು ಮಾಡೋಣ ಹೇಳು!" ಎಂದು ದಂಡಿಸಿದಳು. ಆಮೇಲೆ ಏನು ಮಾತು, ಏನು ನಗು, ಕೇಕೆಗಳು! ನೀಲುವಿನ ಮಾತೇ ಗೆದ್ದ ಹಾಗಾಯಿತು. ನಾನು ಅದೇ ಎಲೆಯಲ್ಲೇ ಕೂತು ಊಟ ಮಾಡಿದೆ. ನಾವು ಮೊದಲಿಂದಲೂ ದೊಡ್ಡಮ್ಮನ ಮನೆಯನ್ನು ನಮ್ಮ ಮನೆಯೆಂತಲೇ ತಿಳಿದುಕೊಂಡು ಬಂದಿದ್ದೆವು. ಬಹಳ ಕಾಲದಿಂದಲೂ ದೊಡಮ್ಮನ ಮನೆ ನಮಗೆ 'ಆಮನೆ'ಯಾಗಿತ್ತು.

ದೊಡ್ಡಮ್ಮನ ಆಕಾರ ಕಣ್ಣ ಮುಂದೆ ನಿಲ್ಲುತ್ತದೆ. ಎರಡು ದೊಡ್ಡ ಹಲ್ಲುಗಳು ತುಟಿಗಳಾಚೆ ಚಾಚಿಕೊಂಡಿವೆ. ಹಣೆಯ ಮೇಲೆ ಎರಡು ಹುಬ್ಬುಗಳ ನಡುವೆ ನೀಲಿಯದೊಂದು ಹಚ್ಚೆಯ ಗುರುತು. ತಲೆಯ ಮೇಲೆ ಅರೆ ನರೆತ ಕೂದಲು. ಚಿಕ್ಕ ಮುಖ. ತುಟಿಯ ಮೇಲೆ ಸದಾ ಮುಗುಳ್ನಗೆ. ನಕ್ಕರೆ ಬಾಯಲ್ಲಿ ಹಲ್ಲುಗಳ ಕೆಳ ಸಾಲಿನಲ್ಲಿ ಎರಡು ಬಿದ್ದು ಹೋಗಿವೆ. ಉಟ್ಟಿರುವುದು ಒರಟು ರೇಶಿಮೆಯ ವಸ್ತ್ರ. ದೊಡ್ಡಮ್ಮನ ಕಣ್ಣಲ್ಲಿ, ಮುಖದಲ್ಲಿ, ಮಾತುಕತೆಗಳಲ್ಲಿ ಹರಿದು ಬರುವ ತಾಯ್ತನ ಇಡೀ ಪ್ರಪಂಚದಲ್ಲೆಲ್ಲೂ ಕಾಣಬರುವುದಿಲ್ಲ. ರ್‍ಯಾಫೇಲ ಮಡೊನ್ನಾ

ಚಿತ್ರದಲ್ಲಿರುವ ತಾಯಿಯ ಮೂರ್ತಿ ತುಂಬ ಗಂಭೀರ... ಅಲ್ಲಲ್ಲೇ ತಡೆದಿಟ್ಟುಕೊಂಡಿರುವ ಭಾವ. ಮೈಯಲ್ಲೇನೋ ಸ್ವಚ್ಛಂದಗತಿಯ ಅಭಾವವಿದ್ದಂತೆ ತೋರುವುದು. ಆಸ್ಪತ್ರೆಯ ನರ್ಸುಗಳ ಮೇಟ್ರನ್ನಿನಲ್ಲಿರುವಂತೆ ಏನೋ ಕಪಟ ಗಾಂಭೀರ್ಯದ ಭಾವ. ಆದರೆ ದೊಡ್ಡಮ್ಮನ ಮುಖ ಹಾಗಲ್ಲ. ಅದು ನಮ್ಮ ದೇಶದ ಕಲಾಕಾರನೊಬ್ಬ ಚಿತ್ರಿಸಿರುವ ಯಶೋಮತಿಯ ಮುಖ. ಹೊರಗೆ ಬೆಡಗಿಲ್ಲ. ಆದರೆ ನೇರವಾಗಿ ಎದೆಯೊಳಗೆ ಮುಟ್ಟಿ ಮಿಡಿಸುತ್ತದೆ. ನಮ್ಮಮ್ಮನ ಕಣ್ಣಲ್ಲಿ ನಾನೂ ಮತ್ತು ನೀಲೂ ಹೇಗೋ ಹಾಗೆ ದೊಡ್ಡಮ್ಮನ ಕಣ್ಣಲ್ಲಿ ಆ ಕೇರಿಯ ಮಕ್ಕಳೆಲ್ಲ! ಎಲ್ಲರಿಗೂ ಇಲ್ಲಿ ತಡೆಯಿಲ್ಲದ ಪ್ರವೇಶ. ಆದರೆ ನನ್ನ ಸ್ಥಾನ ಮಾತ್ರ ಬೇರೆಲ್ಲರಿಗಿಂತಲೂ ದೊಡ್ಡದು.... ಇದು ನನ್ನ ಹೆಮ್ಮೆಯ ವಿಷಯ. ದೊಡ್ಡಮ್ಮನು ನನ್ನ ಮೇಲೆ ಹೆಚ್ಚು ಪಕ್ಷಪಾತ ತೋರಿಸುತ್ತಾಳೆಂದು ನೀಲು ಸದಾ ದೊಡ್ಡಮ್ಮನನ್ನ ದೂರುತ್ತ ಇರುತ್ತಾನೆ. ಬೇರೆ ಯಾರಿಗೂ ಕೊಡದ ತಿಂಡಿ ಪದಾರ್ಥಗಳನ್ನು ಮರೆಯಾಗಿ ನನಗೆ ಕೊಡುವಳೆಂಬುದಾಗಿ ಅವನ ಕೋಪ. ನಾನು ಜೈಲಿನಲ್ಲಿದ್ದಾಗ ದೊಡ್ಡಮ್ಮನಿಗೆ ಒಮ್ಮೆ ಬಹಳ ಕಾಯಿಲೆಯಾಗಿತ್ತು. ಆಗ ತನ್ನ ಆಸ್ತಿಪಾಸ್ತಿಯನ್ನೆಲ್ಲ ನನ್ನ ಹೆಸರಿಗೆ ಬರೆದಿಟ್ಟು ಹೋಗಬೇಕೆಂದು ಇಷ್ಟ ಪ್ರಕಟಮಾಡಿದ್ದಳಂತೆ. ಆಕೆಯ ಆಸ್ತಿಯಲ್ಲಿರುವುದು, ಯಾವುದೋ ಹಳೆಯದೊಂದು ತಲೆದಿಂಬಿನ ಅಂಚಿನಲ್ಲಿ ಅಡಗಿಸಿಟ್ಟಿದ್ದ ಇಪ್ಪತ್ತು ರೂಪಾಯಿಗಳು ಮತ್ತು ಒಂದು ಸಣ್ಣ ಜಾಡಿಯಲ್ಲಿ ಎಷ್ಟೋ ತಿಂಗಳಿಂದ ಕೂಡಿಸಿಟ್ಟಿದ್ದ ಹಳೆಯ ತುಪ್ಪ. ನೀಲು ಇವನ್ನೆಲ್ಲ ಉತ್ಪ್ರೇಕ್ಷೆ ಮಾಡಿ ಬೇಕಂತಲೇ ಆಗಾಗ ದೊಡ್ಡಮ್ಮನನ್ನು ರೇಗಿಸುತ್ತ ಇರುತ್ತಾನೆ.

ಒಮ್ಮೆ ದೊಡ್ಡಮ್ಮನ ಅಣ್ಣನ ಮೊಮ್ಮಗಳ ಮದುವೆಗೆಂದು ದೊಡ್ಡಮ್ಮನನ್ನು ಕರೆದುಕೊಂಡು ಅವರ ಊರಿಗೆ ಹೋಗಿದ್ದೆ. ಪಾಬನಾ ಜಿಲ್ಲೆಯ ಸಣ್ಣದೊಂದು ಗ್ರಾಮ. ಯಮುನಾ ನದಿಯ ತೀರದಲ್ಲಿದೆ. ದೊಡ್ಡಮ್ಮನ ಸಂಗಡ ಅವರ ಗ್ರಾಮವೆಲ್ಲ ಸುತ್ತಾಡಿ ನೋಡಿಕೊಂಡು ಬಂದೆ. ಅವರ ಮನೆತನದ ವೈದ್ಯರ ಮನೆ, ಗ್ರಾಮದ ಹಳೆಯ ಜಮೀನ್ದಾರರ ಮುರಿದುಬಿದ್ದಿರುವ ದೇವಾಲಯ, ಭೈರವ ಭೂಂಇಯಾ ಆತನ ಹೆಸರು ಹೇಳಿದರೆ ಒಣಗಿದ ಗಿಡ ಫಲಿಸುವುದಂತೆ. ಹುಲಿ, ಹಸು ಒಂದೇ ಘಾಟಿನಲ್ಲಿ ನೀರು ಕುಡಿಯುವವಂತೆ - ಆತನ ಹಳೆಯ ವಾಸದ ಮಹಲು ಇನ್ನೂ ಏನೇನೋ ನೋಡಿಕೊಂಡು ಬಂದೆ. ದೊಡ್ಡಮ್ಮನ ಬಾಯಲ್ಲಿ ಚಿಕ್ಕ ವಯಸ್ಸಿನಿಂದಲೂ ಇವುಗಳೆಲ್ಲದರ ವರ್ಣನೆಯನ್ನು ಕೇಳಿಬಿಟ್ಟಿದ್ದೆನಾದುದರಿಂದ ಇವು ಯಾವುವೂ ಹೊಸದೆಂಬಂತೆ ಅನ್ನಿಸಲಿಲ್ಲ. ಆಮೇಲೆ ಜಾಮಾಯ್‌ದಿಘಿ (ಅಳಿಯಂದಿರ ಕೆರೆ)ಯ ದಂಡೆಯ ಮೇಲೆ ಹೋಗುತ್ತಾ ಇದ್ದೆವು. ದೊಡ್ಡಮ್ಮ ಕೈಚಾಚಿ ತೋರಿಸುತ್ತ, "ಇಕೋ ನೋಡು, ಇದೇ ಸ್ಥಳದಿಂದಲೇ ನವದ್ವೀಪ ಡಾಕ್ಟರು ಸೈಕಲ್ಲಿನ ಮೇಲಿಂದ ಬಿದ್ದು ಹೋಗಿದ್ದರು. ಆಗ ಈ ಪ್ರಾಂತದಲ್ಲೆಲ್ಲಾ ಅವರದೊಂದೇ ಸೈಕಲ್. ಅದನ್ನು ನೋಡಲು ನಮ್ಮ ಕೇರಿಯವರೆಲ್ಲ ಬಂದು ನಿಂತಿದ್ದೆವು. ಪಾಪ, ತಲೆ ಕೆಳಗಾಗಿ ಬಿದ್ದುಬಿಟ್ಟರು, ಸೀದಾ ನೀರಿನೊಳಗೇ! ಅವರ ಜೊತೆಯಲ್ಲಿ ಸೈಕಲ್ಲು ಕೂಡ" ಎಂದು ಕಣ್ಣರಳಿಸಿ ವರ್ಣನೆ ಮಾಡಿದಳು. ಆಗ ನಾನು, "ಅದಿರಲಿ, ದೊಡ್ಡಮ್ಮ ನೀವು ಮೊದಲು ಹೇಳಿದ್ದು ಇಲ್ಲಲ್ಲ ಯಾವುದೋ ಫೆರಿಮೆಂಟಿನ ರಸ್ತೆಯಲ್ಲಿ ಬಿದ್ದದ್ದು

ಅಂತ ?" (ಫೆರಿ ಫಂಡ್ ರೋಡ್ ಎಂಬುದು ದೊಡ್ಡಮ್ಮನ ಬಾಯಲ್ಲಿ ಫೆರಿಮೆಂಟ್ ಆಗಿತ್ತು) ಎಂದವ್ವಕ್ಕೆ ದೊಡ್ಡಮ್ಮ "ಅರ್ ಅದೇನೋ ಇದು. ಈ ಕಟ್ಟೆಯಿದೆಯಲ್ಲ ? ಇದರ ಮೇಲೆ ಹೋಗುವ ರಸ್ತೆಯೇ ಫೆರಿಮೆಂಟ್ ರಸ್ತೆ. ಆಮೇಲೆ ಇನ್ನೊಂದು ಮಾತು ಕೇಳಿಲ್ಲಿ ನಿನಗೊಂದು ಮಾತು ಹೇಳ್ತೀನಿ... ಕೂತುಕೋ ಇಲ್ಲಿ" ಅಂದದ್ದೇ ಮೆಲ್ಲಗೆ ಹೇಳಿದಳು, "ನೀನು ಇನ್ನು ಮೇಲಿಂದ ದೊಡ್ಡಮ್ಮಾ ದೊಡ್ಡಮ್ಮಾ ಅಂತ ಕರೀ ಬೇಡಪ್ಪಾ, ನನಗ್ಯಾಕೋ ಸರಿ ಬೀಳುವುದಿಲ್ಲ. ಅಮ್ಮ ಅಂತ ಕರೆಯುವುದಕ್ಕೇನೋ ನಿನಗೆ ?" ಇದನ್ನು ಕೇಳಿ ನನಗೆ ಏನು ಹೇಳಬೇಕೆಂದು ತೋಚಲಿಲ್ಲ. ಆಕೆಯ ಮುಖದ ಕಡೆ ತಿರುಗಿ ನೋಡಿದರೆ ಅತ್ಯಂತ ಕಾತರತೆಯ ಭಾವದಲ್ಲಿ ಪ್ರಶ್ನೆ ಮಾಡುವ ಕಣ್ಣುಗಳಿಂದ ನನ್ನ ಉತ್ತರವನ್ನು ನಿರೀಕ್ಷಿಸುತ್ತ ಇದ್ದಾಳೆ! ಗಾಢವಾದ ತಾಯ್ತನದ ಹೊಳಪಿನಿಂದ ಮುಖ ಕೆಂಪಡರಿದೆ. ಆಕೆಯ ಪ್ರಶ್ನೆಗೆ ಯಾವ ಉತ್ತರ ಕೊಡೋಣ ಎಂದು ಯೋಚಿಸಲು ಒಂದೆರಡು ಗಳಿಗೆಗಳು ಸುಮ್ಮನಿದ್ದೆ. ಆಮೇಲೆ ಮೃದುವಾಗಿ ಹೇಳಿದೆ, "ನೋಡಿ, ದೊಡ್ಡಮ್ಮಾ ಅಮ್ಮ ಅಂದರೇನು, ದೊಡ್ಡಮ್ಮ ಅಂದರೇನು ? ಎರಡೂ ಒಂದೇ ಅಲ್ಲವೇ ದೊಡ್ಡಮ್ಮಾ" ಈ ಉತ್ತರದಿಂದ ಆಕೆಗೇನೂ ಸಮಾಧಾನವಾದಂತೆ ತೋರಲಿಲ್ಲ. ಅದಕ್ಕೆ ಬದಲಾಗಿ ಆಕೆಯ ಮುಖದಲ್ಲಿ ಏನೋ ಒಂದು ಖೇದ ತೋರಿಬಂತು. ಏನೋ ತಪ್ಪು ಮಾಡಿದವಳಂತೆ ಭಾವ - ಅದೇ ಭಾವದ ದನಿಯಲ್ಲಿ, "ಹೌದು ಕಣೋ ನೀನು ಅನ್ನುವುದು ಸರಿಯೇ. ನಿನಗೆ ಒಬ್ಬ ತಾಯಿ ಇದ್ದಾಳೆ ಆಗಲೇ. ಅದನ್ನು ತಿಳಿದೂ ನಿನ್ನನ್ನು ಹಾಗೇ ಕೇಳಿದ್ದು ಅನ್ಯಾಯವಾಯಿತು. ಹೂ. ಅನ್ಯಾಯವೇ!" ಹೀಗೆ ಹೇಳುತ್ತ ಆಕೆಯು ಕೆರೆಯ ಆಚೆಯ ದಂಡೆಯ ಕಡೆ ಏನೋ ನೋಡುತ್ತಿರುವಂತೆ ಕಂಡರೂ ನಿಜವಾಗಿ ಆಕೆಯ ದೃಷ್ಟಿ ಯಾವುದೊಂದು ನಿರ್ದಿಷ್ಟ ದಿಶೆಯ ಕಡೆ ಇರಲಿಲ್ಲ.

ಅವತ್ತಿನ ದಿನದಿಂದ ನಾನು ಆಕೆಯನ್ನು ಬೇರೆ ಯಾರೂ ಸಂಗಡ ಇಲ್ಲದಿರುವಾಗ 'ಅಮ್ಮ' ಎಂತಲೇ ಕರೆಯಲು ಆರಂಭಿಸಿದೆ. ಇತರರ ಎದುರಿಗೆ ಸಾಧ್ಯವೇಕೆ ಆಗಲಿಲ್ಲ ಎಂದರೆ ನಾನು ಚಿಕ್ಕಂದಿನಿಂದಲೂ ಆಕೆಯನ್ನು 'ದೊಡ್ಡಮ್ಮ' ಎಂದು ಕರೆಯುವುದು ಅಭ್ಯಾಸವಾಗಿದೆ ಎನ್ನುವುದು ಎಲ್ಲರಿಗೂ ಗೊತ್ತಿರುವಾಗ ಹಠಾತ್ತಾಗಿ ಈಗ ಅವರ ಮುಂದೆ 'ಅಮ್ಮ' ಎಂದು ಕರೆಯುವುದು ತುಂಬಾ ಸಂಕೋಚವಾಗುತ್ತಿತ್ತು, ಅದಕ್ಕೇ. ನವದ್ವೀಪ ಡಾಕ್ಟರು ಸೈಕಲ್ ಮೇಲಿಂದ ಕೆರೆಯಲ್ಲಿ ಬಿದ್ದು ಹೋದರು ಎಂದು ವರ್ಣಿಸುತ್ತಿರುವ ಸಂದರ್ಭದಲ್ಲೇ ದೊಡ್ಡಮ್ಮ ನನ್ನನ್ನು "ಅಮ್ಮ" ಎಂದು ಕರಿ ಎಂದು ಕೇಳಿದಳಲ್ಲ, ಹಠಾತ್ತಾಗಿ ಆ ಆಸೆ ಹೇಗೆ ಹುಟ್ಟಿತು ಆಕೆಯಲ್ಲಿ ಅನ್ನುವುದು ಇವತ್ತಿನವರೆಗೂ ನನಗೆ ಗೊತ್ತಾಗಿಲ್ಲ.

ಇದಾದ ಮೇಲೆ ಇನ್ನೊಂದು ಸಂಗತಿ ಜರುಗಿತು. ಹೇಗೆ ಆದೀತೆಂದು ಹೆದರಿದ್ದೆನೋ ಹಾಗೇ ಆಯಿತು. ನಾನು ದೊಡ್ಡಮ್ಮನನ್ನು 'ಅಮ್ಮ' ಎಂದು ಕರೆಯಲಾರಂಭಿಸಿದುದು ನಮ್ಮ ಅಮ್ಮನಿಗೆ ಸರಿ ಹೋಗಲಿಲ್ಲ. ಒಂದು ದಿನ ನಾನೂ ಮತ್ತು ನೀಲು ಅಡಿಗೆಮನೆಯಲ್ಲಿ ಊಟಕ್ಕೆ ಕೂತಿದ್ದೇವೆ. ಅಮ್ಮ ಬಡಿಸುತ್ತಿದ್ದಾಳೆ. ಬಡಿಸಿದ ಮೇಲೆ ಅಮ್ಮ ನಮ್ಮ ಜತೆಯಲ್ಲೇ ಊಟಕ್ಕೆ ಕೂತಳು. ಆಗ ನಾನು

ಹಠಾತ್ತಾಗಿ, "ಅಮ್ಮ ಗೊತ್ತಾ ನಿನಗೆ, ದೊಡ್ಡಮ್ಮ ಇದಾಳಲ್ಲ, ಎಳ್ಳನ್ನು ತಿರುವಿ ಹಾಕಿ ನೆಲಗಡಲೆ ಬೀಜದ ಹುಳಿ ಮಾಡತಾಳೆ. ಅದೆಷ್ಟು ರುಚಿಯಾಗಿರತ್ತೆ ಗೊತ್ತಾ ?" ಎಂದೆ. ಅಷ್ಟಕ್ಕೇ ಅಮ್ಮ "ಹಾಗಾದರೆ ಅಲ್ಲೇ ಊಟ ಮಾಡೋ ಹೋಗಿ.... ಇಲ್ಲಿ ಯಾಕೆ ಬರತೀಯ ಕೆಲಸವಿಲ್ಲದೆ" ಎಂದು ತಟಕ್ಕನೆ ಅಂದು ಬಿಡುವುದೇ ? ಯಾವ ಮಾತಿಗೆ ಯಾವ ಜವಾಬು ? ಅಮ್ಮ ಸಾಧಾರಣವಾಗಿ ಸವಿಮಾತನ್ನೇ ಆಡುವುದು. ಈಗ ಅಕಸ್ಮಾತ್ತಾಗಿ ಅವಳ ಬಾಯಿಂದ ಈ ತರಹ ಮಾತು ಬಂದಿದ್ದು ನನ್ನನ್ನ ತಬ್ಬಿಬ್ಬು ಮಾಡಿಬಿಟ್ಟಿತು. ಆಗ ನೀಲು ಇದ್ದವನು ಇದರ ವಿವರ ತಿಳಿಸಿದ. "ಹ್ಞಾ ಇವತ್ತು ಅಮ್ಮನಿಗೆ ಹೇಳಿದೆ ನಾನು. ನೀನು ದೊಡ್ಡಮ್ಮನ್ನ 'ಅಮ್ಮ' ಅಂತ ಕರೆಯುವುದಕ್ಕೆ ಶುರು ಮಾಡಿದ್ದೀಯ ಅಂತ. ಅಮ್ಮನಿಗೆ ತುಂಬಾ ನೋವಾಯಿತು ಗೊತ್ತಾ ? ಆ ಕೋಪಕ್ಕೇ ನಿನ್ನನ್ನ ಹಾಗಂದದ್ದು ನೋಡಿದೆಯಲ್ಲ ? ಅಲ್ಲದೆ ನಿನ್ನನ್ನ 'ತುಯಿ'* ಅಂದಳು ಗೊತ್ತಾಗಲಿಲ್ಲ ?" ಅವನು ಹೇಳಿದುದು ನಿಜ. ಅಮ್ಮನಿಗೆ ಹೆಚ್ಚು ಕೋಪ ಬಂದಾಗ ನಮ್ಮನ್ನ 'ತುಯಿ' ಅನ್ನುವುದಿಲ್ಲ. ಈ ನೀಲು ಸಹ ಏಕೋ ಇಂಥ ಮುಠ್ಠಾಳ! ಈ ಮಾತನ್ನು ಅವನು ಅಮ್ಮ ಇಲ್ಲದೆ ಇದ್ದಾಗ ಹೇಳಬಾರದಾಗಿತ್ತೆ ? ಅಮ್ಮನ ಕಣ್ಣಲ್ಲಿ ನೀರು ತುಂಬಿದ್ದನ್ನ ಕಂಡೆ. ಅದನ್ನ ಮರೆಮಾಡಲೆಂದು ಅಮ್ಮ ಹೊರಗಡೆ ಹೊರಟುಹೋದಳು. ಆಗ ನಾನು ದೊಡ್ಡದೊಂದು ತಪ್ಪು ಮಾಡಿದ್ದೇನೆಂದುಕೊಂಡೆ.... ಈಗಲೂ ಹಾಗೇ ಅಂದುಕೊಳ್ಳುತ್ತೇನೆ.

ಅಂದ ಹಾಗೆ, ಅಮ್ಮ ಇರುವ ವಾರ್ಡನ್ನು "ಔರತ್ ಕಿತಾ" ಅನ್ನುತ್ತಾರೆ. ಇವತ್ತು ಖಂಡಿತ ಅಮ್ಮ ನಿದ್ದೆ ಮಾಡುವುದೇ ಇಲ್ಲ. ಹೇಗೆ ಮಾಡುತ್ತಾಳೆ ? ಬಹುಶಃ ಈಗ, ಸೊಳ್ಳೇ ಪರದೆ ತೆಗೆದುಹಾಕಿ ಜಪಕ್ಕೆ ಕೂತಿರುತ್ತಾಳೆ. ಯಾವಾಗಲಾದರೂ ಮನಸ್ಸು ಕೆಟ್ಟು ಹೋದಾಗ ಅಮ್ಮ ಸಾಧಾರಣವಾಗಿ ಜಪಕ್ಕೆ ಕೂಡುವಳು. ಒಂದು ಸಲ, ನೀಲು ದೇವುಲಿಯಲ್ಲಿದ್ದಾಗ ಹೋದ ವರುಷದ ಮೊದಲಲ್ಲಿ ಅವನಿಗೆ ಅಪೆಂಡಿಸೈಟಿಸ್ ಆಪರೇಷನ್ ಆಯಿತು. ಆಜ್ಮೀರದ ಆಸ್ಪತ್ರೆಯಲ್ಲಿ ಅವತ್ತಿನ ದಿನ ಇಡೀ ರಾತ್ರಿ ಅಮ್ಮ ಪೂಜೆಯ ಕೋಣೆಯಲ್ಲೇ ಕಾಲ ಕಳೆದಳು. ರಾತ್ರಿ ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಒಂದೇ ಒಂದು ಸಲ ನನ್ನ ಕೋಣೆಗೆ ಬಂದು ಕನ್ನಡಿಯ ಬಳಿ ಮತ್ತು ಮಾಡದ ಮೇಲೆ ಇಟ್ಟಿದ್ದ ಸೀಸೆಗಳಲ್ಲಿ ಏನೋ ಹುಡುಕಲು ತೊಡಗಿದಳು. ನೀಲುವಿನ ಕಾಯಿಲೆ ವಿಷಯವಾಗಿ ಅಮ್ಮ ನನ್ನೊಡನೆ ಏನೋ ಹೇಳಬೇಕೆಂದು ಬಂದಿದ್ದಾಳೆ, ಖಂಡಿತ ಎಂದುಕೊಂಡೆ. ಆದರೂ ಮಾತೆತ್ತಲು ಸಾಹಸ ಬರಲಿಲ್ಲ. ನಾನೆಲ್ಲಾದರೂ ಕಾಯಿಲೆಯ ಅಪಾಯಕರವಾಗಿರುವುದನ್ನು ಕುರಿತಾಗಲಿ, ವಾಸಿಯಾಗುವ ಸಂಭವವನ್ನು ಕುರಿತಾಗಲಿ ಏನಾದರೂ ಹೇಳಿಬಿಡುತ್ತೇನೇನೋ ಎಂಬ ಭಯ ಅವಳಿಗೆ. ಜಪ ಮಾಡುವುದರಿಂದ ಸಾಕಷ್ಟು ಧೈರ್ಯ ಬಂದಹಾಗೆ ತೋರಲಿಲ್ಲ..... ನಾನು ಓದುವುದರಲ್ಲಿ ಮಗ್ನನಾಗಿದ್ದೇನೆಂದು ತಿಳಿದಳು. ಅದಕ್ಕೇ ನಾನು ಅವಳು ಒಳಗೆ ಬಂದುದನ್ನು ಗಮನಿಸಲಿಲ್ಲ ಎಂದು ಅವಳ ಎಣಿಕೆಯಿರಬಹುದು. ಆಮೇಲೆ ಅತಿ ಭಕ್ತಿಯಿಂದ, ಗೋಡೆಗೆ ತಗುಲಿಹಾಕಿದ್ದ

---

* ಬಂಗಾಳಿಯಲ್ಲಿ ತಾಯಿ ಮಕ್ಕಳಿಗೆ 'ತುಯಿ' (ನೀನು) ಅಂತಲೇ ಸಂಬೋಧಿಸುವುದು. 'ತುಮಿ' (ನೀವು) ಅನ್ನುವುದು ಬೇರೆಯವರಿಗೆ.

ಗಾಂಧಿಜಿಯ ಪಟಕ್ಕೆ ಕೈ ಮುಗಿದು ನಮಸ್ಕಾರ ಮಾಡಿದಳು ಮತ್ತು ಗೂಟಕ್ಕೆ ತಗುಲಿ ಹಾಕಿದ್ದ ತನ್ನ ಬಟ್ಟೆ, ಬರೆಗಳನ್ನು ಮತ್ತೆ ಮತ್ತೆ ಜೋಡಿಸಲು ತೊಡಗಿದಳು. ಆಗ ನಾನು ಸುಮ್ಮನಿರಲಾರದೆ, "ಗೊತ್ತಾ ಅಮ್ಮ? ಅಪೆಂಡಿಸೈಟಿಸ್ ಆಪರೇಷನ್ ಅತಿ ಸಾಮಾನ್ಯವಾದದ್ದು. ಎಂಥವರಿಗೂ ವಾಸಿಯಾಗಿ ಹೋಗುತ್ತದೆ. ಈಚೆಗೆ ವಿಲಾಯಿತಿಯಲ್ಲಿ ಆರೋಗ್ಯವಾಗಿರುವವರೂ ಈ ಆಪರೇಷನನ್ನು ತಾವಾಗಿ ಮಾಡಿಸಿಕೊಳ್ಳುತ್ತಾರೆ" ಎಂದು ಹೇಳಿದಾಗ ಅಮ್ಮ ತಾನು ಅದನ್ನೇನೂ ಅಷ್ಟಾಗಿ ಹಚ್ಚಿಕೊಳ್ಳಲಿಲ್ಲವೆಂಬಂತೆ ತೋರಿಸಿಕೊಳ್ಳುತ್ತ ಹಾಗೇ, "ಅಲ್ಲ, ದೇವುಲಿಯಿಂದ ಅಜ್‌ಮೀರಿಗೆ ಎಷ್ಟು ದೂರವೋ ?" ಎಂದು ಕೇಳಿದಳು. ಆಮೇಲೆ ತನ್ನ ಕೋಣೆಗೆ ಹೋಗಿ ರಾತ್ರಿಯೆಲ್ಲ ಜಪ ಮಾಡುತ್ತ ಕಳೆದಳು.

ಸೆಂಟ್ರಲ್ ಟವರಿನ ಮೇಲಿಂದ ವಾರ್ಡರನೊಬ್ಬ ಒಂದೇ ಸಮನಾಗಿ ಕಿರುಚುತ್ತಿದ್ದಾನೆ - "ಬೋಲೋರೇ ನಯಾಗೋಲ್. ಬೋಲೋರೆ ಜೂಭಲಿನ್, ಸಣ್ಣ ವಯಸ್ಸಿನವರ ವಾರ್ಡು." ಹೀಗೇ. ರಾತ್ರಿ ಹೆಚ್ಚು ಹೊತ್ತೇನೂ ಆಗಿಲ್ಲ ಇನ್ನೂ. ಆದರೂ ಇಷ್ಟರೊಳಗೇ ಬಹುಮಂದಿ ವಾರ್ಡರುಗಳು ತಮ್ಮ ತಮ್ಮ ವಾರ್ಡುಗಳಿಂದ ಯಾವುದೋ ತೀಟೆಗೆ ಹೇಳುವಂತೆ ಜವಾಬು ಹೇಳುತ್ತ ಬರುತ್ತಿದ್ದಾರೆ. ಗೋಪುರದ ವಾರ್ಡರು ರಾಗವಾಗಿ ಕೂಗುತ್ತಾನೆ.... "ಬೋ.... ಲೋ... ರೇ ಬೋ... ಲೋ... ರೇ... ಪಾಂ.... ಚ್.... ನಂ...ಬರ್" ಇಷ್ಟು ಹೇಳುವಷ್ಟರಲ್ಲಿ ನಾನು ಹದಿನಾರರವರೆಗೆ ಎಣಿಸುತ್ತೇನೆ. ಒಬ್ಬ ವಾರ್ಡರು ನನಗೆ ಇದರ ವಿವರ ಹೇಳಿದ. ಹೀಗೆ ರಾಗವಾಗಿ ಹಾಡುವುದರಿಂದ ಕೂಗುವ ಕಷ್ಟ ಕಡಮೆಯಾಗುತ್ತದೆ ಮತ್ತು ಗಂಟಲು ಒಡೆಯುವ ಸಂಭವವಿರುವುದಿಲ್ಲ. ಪ್ರತಿ ವಾರ್ಡಿನಲ್ಲೂ ನಾಲ್ಕು ದೊಡ್ಡ ಹಾಲುಗಳಿರುತ್ತವೆ. ಎರಡು ಮೇಲೆ, ಎರಡು ಕೆಳಗೆ. ಜೈಲಿನ ಭಾಷೆಯಲ್ಲಿ ಈ ಹಾಲುಗಳಿಗೆ "ಖಾಟಾಲ್" ಎನ್ನುತ್ತಾರೆ. ಐದನೆಯ ನಂಬರ ವಾರ್ಡಿನ ಹಾಲಿನಿಂದ ಮೊದಲು ಜವಾಬು ಬಂತು.... ಒಡೆದ ಗಂಟಲು, ಪ್ರತಿಧ್ವನಿ ಕೊಡುವಂಥ ದನಿಯಲ್ಲಿ, "ನೂರಐವತ್ತೇಳು ಆಸಾಮೀ ದೀಪಗಳು ಸರಿಯಾಗಿದೆ!" ಕೂಗುವವನ ದನಿಯಿಂದ ಅವನ ಮುಖ ಚಹರೆ ಊಹಿಸಿಕೊಳ್ಳುತ್ತೇನೆ... ತುಟಿಯ ಮೇಲೆ ಉದ್ದನೆಯ ಅರೆನರೆತ ಮೀಸೆಗಳಿವೆ ಇವನಿಗೆ.... ತುಂಬ ಕರ್ತವ್ಯನಿಷ್ಠನಾದ ಆಳು. ತಲೆಯ ಮೇಲೆ ನೀಲಿಯ ಟೋಪಿ ಅಂದರೆ ಅವನು ಬರೇ ಪಹರೆಯ ವಾರ್ಡರು. ತಿಂಗಳಿಗೆ ನಾಲ್ಕಾಣೆಯಂತೆ ಸಂಬಳ ಸರ್ಕಾರದ ಕಡೆಯಿಂದ ಅವನ ಹೆಸರಲ್ಲಿ ಜಮಾ ಆಗುತ್ತದೆ. ಅದರ ಪ್ರತಿಯಾಗಿ ನಿತ್ಯವೂ ರಾತ್ರಿ ಎರಡು ಗಂಟೆ ಹೊತ್ತು ಎಚ್ಚರವಾಗಿದ್ದು ಈ ಪಹರೆ ಕೊಡುವ ಕೆಲಸ ಮಾಡುತ್ತಾನೆ. ಸರ್ಕಾರದ ಉಪ್ಪು ತಿನ್ನುತ್ತಾನಲ್ಲ? ಅವನೇಕೆ ಕೆಲಸಕ್ಕೆ ಕಳ್ಳನಾಗಬೇಕು? ಐದನೆಯ ನಂಬರಿನ ಇತರ ಮೂರು ಹಾಲುಗಳಿಂದ ಬಂದ ಜವಾಬುಗಳು ಇಷ್ಟು ಸ್ಪಷ್ಟವಾಗಿರುವುದಿಲ್ಲ. ಅವರುಗಳು ಎಲ್ಲಾ ಮಾತುಗಳನ್ನೂ ಹೇಳುವುದಿಲ್ಲ. ಕೇವಲ "ಹೋ ಹೈ!" ಎಂಬ ಕೂಗು ಮಾತ್ರ ಕೇಳಬರುತ್ತದೆ. ಗ್ರಾಮದ ರಾತ್ರಿಯ ಕಾವಲುಗಾರನು ಸಾಧಾರಣವಾಗಿ ಕೂಗಿಕೊಂಡು ಹೋಗುತ್ತಾನಲ್ಲ, ಆ ರೀತಿಯಾಗಿ ರಾಗವಾಗಿ ಶ್ರಾವ್ಯವಾಗಿ ಹೇಳುವ ಪ್ರಯತ್ನವಿಲ್ಲ. ಕೇವಲ ಏನೋ ತೀಟೆಗಾಗಿ ಹೇಳುವ ರೀತಿ. ಇವರುಗಳು ನಿಜವಾಗಿ ಬಿಳೀ ಟೋಪಿ

ಧರಿಸಿರುವ "ಮೇಟ್" ಅಂದರೆ ಪಹರಾ ಕೊಡುವ ಖೈದಿಗಿಂತ ಹಳೆಯ ಖೈದಿಗಳು. ತಿಂಗಳಿಗೆ ಎಂಟಾಣೆಯಂತೆ ಸಂಬಳ ತಿನ್ನುತ್ತಾರೆ, ನಿಜ.... ಆದರೆ ಇವರುಗಳು ಅನೇಕ ವರುಷಗಳಿಂದ ಜೈಲಿನಲ್ಲಿದ್ದವರು. ಎಷ್ಟೋ ಕೇಳಿದ್ದಾರೆ, ನೋಡಿದ್ದಾರೆ. ಅವರಿಗೆ ಚೆನ್ನಾಗಿ ಗೊತ್ತು. ಈ ಕೆಲಸದಲ್ಲಿ ಮುತುವರ್ಜಿ ವಹಿಸುವುದರಿಂದಲೇ ಅವರ ಕಾರಾಗೃಹ ವಾಸದಲ್ಲಿ Remission (ಅವಧಿ ತಗ್ಗಿಸುವಿಕೆ) ಆಗುವುದಿಲ್ಲ ಮತ್ತು ಹೆಡ್ ಜಮೇದಾರನನ್ನು ಯಾವ ರೀತಿ ಪ್ರಸನ್ನನಾಗಿಟ್ಟಿರಬೇಕು ಎಂದು ಗೊತ್ತು ಅವರಿಗೆ. ಒಬ್ಬ ಮೇಟ್ ಅಂತೂ ಅಂತಹ ಕೆಲಸಕ್ಕೆ ಬಾರದವನಲ್ಲ. ಅವನ ಕೈಕೆಳಗೆ ಎಷ್ಟೋ ಮಂದಿ ಖೈದಿಗಳಿದ್ದಾರೆ. ಅವರುಗಳನ್ನು ಅಂಕೆಯಲ್ಲಿ ಇಟ್ಟುಕೊಳ್ಳಬೇಕಾದರೆ ಜೈಲಿನ ಅಧಿಕಾರಿಗಳ ಕಡೆಗೆ ನಿಯಮ, ಕಾನೂನುಗಳ ಕಡೆಗೆ ಹೆಚ್ಚು ಲಕ್ಷ್ಯ ತೋರಿಸದಿದ್ದರೆ ಒಳ್ಳೆಯದು.

"ಬೋಲೋರೇ ನಯಾಗೋಲ್" ಈ ಬೋಲೋರೇ ಭಜನೆ ನಡೆಯುತ್ತ ಇರುವಷ್ಟು ಕಾಲವೂ ನಾನು ಸ್ವಲ್ಪ ಕಿವಿಗೊಟ್ಟು ಕೇಳುತ್ತ ಬಂದೆ - ವಾರ್ಡರು ಐದನೆಯ ನಂಬರು ಕೂಗಿದ ಮೇಲೆ ಆರನೆಯ ನಂಬರು ಕೂಗುತ್ತಾನಾ ಅಥವಾ "ನಯಾಗೋಲ್" ಕೂಗುತ್ತಾನಾ ಎಂದು ತಿಳಿದುಕೊಳ್ಳುವುದಕ್ಕೆ. ಆರನೆಯ ನಂಬರು ಕೂಗಿದರೆ ಅವನು ಹೊಸ ವಾರ್ಡರಿರಬೇಕು ಎಂದು ಗೊತ್ತಾಗುತ್ತಿತ್ತು. ಆರನೆಯ ನಂಬರ ವಾರ್ಡಿಗೆ "ದಾಮಲೀ ಕಿತಾ" ಎಂಬ ಇನ್ನೊಂದು ಹೆಸರಿದೆ. ಯಾವಜ್ಜೀವ ಕಾರಾಗೃಹ ವಾಸದ ಸಜಾ ಇರುವ ಖೈದಿಗಳಿರುವ ವಾರ್ಡು ಅದು. ಈ ವಾರ್ಡಿನ ಖೈದಿಗಳು ಇತರ ವಾರ್ಡುಗಳಲ್ಲಿರುವವರನ್ನು "ಕದ್ದೂ ಚೋರ್" ಎಂದು ಬಹು ನಿಕೃಷ್ಟವಾಗಿ ಹಾಸ್ಯ ಮಾಡುತ್ತಾರೆ. "ಕದ್ದೂ ಚೋರ್" ಅಂದರೆ ಕುಂಬಳ ಕಾಯಿ ಕದ್ದು ಜೈಲಿಗೆ ಬಂದಿದ್ದಾರೆ ಎಂದು ಅರ್ಥ. ಈ ಜೀವಾವಧಿ ಖೈದಿಗಳ ವಿಷಯದಲ್ಲಿ ವಾರ್ಡರುಗಳೆಲ್ಲ ಸ್ವಲ್ಪ ದಾಕ್ಷಿಣ್ಯ ತೋರಿಸುತ್ತಾರೆ. ಹಳೇ ವಾರ್ಡರುಗಳೊಡನೆ ಈ ಖೈದಿಗಳು ಒಂದು ಏರ್ಪಾಡು ಮಾಡಿಕೊಂಡಿದ್ದಾರೆ. ಅವರಲ್ಲಿ ಯಾರಾದರೂ ಗೋಪುರದ ಮೇಲೆ ಡ್ಯೂಟಿ ಮಾಡುತ್ತಿದ್ದರೆ "ದಾಮೂಲಿ" ವಾರ್ಡಿನ ಖೈದಿಗಳು ನೆಮ್ಮದಿಯಿಂದ ನಿದ್ದೆ ಮಾಡಬಹುದು. ಮೇಟ್ ಪಹರೆಯವನು ಖೈದಿಗಳನ್ನು ಲೆಕ್ಕ ಮಾಡುತ್ತ ಗೋಪುರದವನ ಕೂಗಿಗೆ ಉತ್ತರವಾಗಿ ದೊಡ್ಡದಾಗಿ ಕಿರುಚುತ್ತಿದ್ದರೆ ಇವರಿಗೆ ತುಂಬಾ ಹಿಂಸೆಯಾಗುತ್ತದೆ. ಇವರುಗಳು ಪಾಪ, ಇಡೀ ದಿನ ಜೈಲಿನ ಕಾರ್ಖಾನೆಯಲ್ಲಿ ದುಡಿಯುತ್ತ ಇರುತ್ತಾರೆ. ರಾತ್ರಿಯಾದರೂ ನಿರ್ವಿಘ್ನವಾಗಿ ಮೈಮರೆಯುವಂತೆ ನಿದ್ದೆ ಮಾಡದೆ ಹೋದರೆ ಎಷ್ಟು ವರುಷಗಳಾದರೂ ಮೈಮುರಿಯುವಂತೆ ದುಡಿಮೆ ಹೇಗೆತಾನೇ ಮಾಡಬಲ್ಲರು? ಹೊಸ ವಾರ್ಡರಿಗೆ ಇದು ಗೊತ್ತಿರುವುದಿಲ್ಲ. ಅದಕ್ಕೇ ಐದನೆಯ ನಂಬರಾದ ಮೇಲೆ ಆರನೆಯ ನಂಬರನ್ನು ಖಂಡಿತ ಕೂಗುತ್ತಿದ್ದ. ಎರಡನೆಯ ನಂಬರ ವಾರ್ಡಿನಿಂದ ಆರನೆಯ ನಂಬರ ವಾರ್ಡ್ ಕಡೆ ನೋಡುತ್ತಿದ್ದರೆ ಯಾವುದೋ ದೊಡ್ಡದೊಂದು ರೈಲ್ವೆ ಜಂಕ್ಷನ್ ಪ್ಲಾಟ್ ಫಾರಮ್ಮಿನಲ್ಲಿ ನಿಂತಿರುವಂತೆ ಅನ್ನಿಸುತ್ತದೆ. ಈ ವಾರ್ಡು ಯಾರೋ ರಾಜಾ ಬಹಾದ್ದೂರನೊಬ್ಬನ ದಾನ. ತನ್ನ ಈ ಅಮೋಘ ದಾನಕ್ಕೆ ಯೋಗ್ಯವಾದ ಪಾತ್ರ, ಸಂಪತ್ತಿನ ವಸ್ತು ಮತ್ತು ಉದ್ದೇಶ್ಯಗಳನ್ನು ಆರಿಸುವುದರಲ್ಲಿ

ರಾಜಾಬಹಾದ್ದೂರನಿಗಿದ್ದ ಪ್ರತಿಭೆಯಂತೂ ಅಸಾಧಾರಣವೆಂದೇ ಹೇಳಬೇಕು. ಏನಾದರಾಗಲಿ, ಈ ದಾನದ ಮೂಲಕ, ರಾಜಾ ಬಹಾದ್ದೂರನ ಮನಸ್ಸಲ್ಲಿ ಯಾವ ಗಾಢ ಆಕಾಂಕ್ಷೆಯಿತ್ತೋ, ಅದರ ಸಿದ್ಧಿಯಾಯ್ತಿತೋ ಇಲ್ಲವೋ ಗೊತ್ತಿಲ್ಲ. ಆದರೆ ಜೀವಾವಧಿ ಕಾರಾಗೃಹವಾಸ ಮಾಡುವಂಥ ನಿರ್ಭಾಗ್ಯರು ಮಾತ್ರ ಈ ರಾಜನಿಗೆ ತಮ್ಮ ಆಂತರಿಕವಾದ ಧನ್ಯವಾದಗಳನ್ನು ಅರ್ಪಿಸುತ್ತಾರೆಂದರೆ ಯಾರೂ ಅಲ್ಲವೆನ್ನುವುದಿಲ್ಲ. ಜೀವಾವಧಿ ಖೈದಿಗಳಲ್ಲಿ ಬಹು ಮಂದಿ ಎಷ್ಟೋ ಒಳ್ಳೆಯವರು. ಹುಟ್ಟು ಕಳ್ಳರು, ದುಷ್ಕೃತ್ಯಗಳನ್ನು ಮಾಡುವವರು ಇಂಥವರಲ್ಲಿ ಕಾಣುವ ಕ್ರೌರ್ಯ, ಕೀಳ್ತನ ಈ ಖೈದಿಗಳಲ್ಲಿ ಕಾಣುವುದಿಲ್ಲ. ಜೈಲನ್ನೇ ತಮ್ಮ ವಾಸದ ಮನೆಯಂತೆ ಬಳಕೆ ಮಾಡಿಕೊಂಡುಬಿಟ್ಟಿದ್ದಾರೆ. ಕೆಲವರಂತೂ ವಾರ್ಡಿನ ಅಂಗಳದಲ್ಲಿ ತುಳಸೀಗಿಡ ತರಿಸಿಕೊಂಡು ಬೆಳೆಸುತ್ತಿದ್ದಾರೆ. ಇನ್ನು ಕೆಲವರು ಇರುವ ಅಲ್ಪ ಜಾಗವನ್ನೇ ಚೊಕ್ಕವಾಗಿ ಮಾಡಿಕೊಂಡು ಕೂತು ವಿಶ್ರಮಿಸಿಕೊಳ್ಳಲು ಯೋಗ್ಯವಾಗಿ ಮಾಡಿಕೊಂಡಿದ್ದಾರೆ. ಎಷ್ಟೋ ಮಂದಿ ಸ್ವಂತವಾಗಿ ಮೆಣಸಿನ ಕಾಯಿ, ಕೊತ್ತುಂಬರಿ, ಪುದೀನಾ ಸೊಪ್ಪು ಬೆಳೆಸಿಕೊಂಡು ಉಪಯೋಗಿಸಿಕೊಳ್ಳುತ್ತಾರೆ. ಈ ಸಣ್ಣ ಗಿಡಗಳ ಮೇಲೆ ಅವರಿಗೆ ಅದೇನು ಮಮತೆಯೋ! ಅವರ ಸ್ನೇಹ, ಪ್ರೀತಿ, ಮಕ್ಕಳ ಮೇಲೆ ಇರಬೇಕಾದ ಸ್ವಾಭಾವಿಕ ವಾತ್ಸಲ್ಯ - ಎಲ್ಲಾ ಈ ಗಿಡಗಳನ್ನು ಪೋಷಿಸುವುದರಲ್ಲಿ ತೋರಿಸುವರು.

ಹಜಾರಿಬಾಗ್ ಜೈಲಿನಲ್ಲಿದ್ದ ಪಾಶ್ಚಾತ್ಯ ಖೈದಿ ವಿಲಿಯಮ್ಸ್ ಬಿಡುಗಡೆಯಾದ ದಿನ ನೋಡಬೇಕಾದಂಥ ದೃಶ್ಯ! ಹದಿನಾಲ್ಕು ವರುಷಗಳು ಜೈಲಲ್ಲಿ ಕಳೆದಿದ್ದ ವಿಲಿಯಮ್ಸ್! ಅವನು ನೆಟ್ಟಿದ್ದ ಸೀಬೆ (ಪೇರಲ) ಗಿಡ ಎಷ್ಟು ದೊಡ್ಡದಾಗಿ ಹೋಗಿತ್ತು. ಅವನೇ ಬೆಳೆಸಿದ್ದ ಪನ್ನೀರು ನೇರಳೆ ಗಿಡದ ತುಂಬಾ ಈಗ ಪೌಡರ್ ಪಫ್ಫನ್ನು ಹೋಲುವ ಬಿಳಿಯ ಹೂಗಳು ತುಂಬಿ ಹೋಗಿವೆ. ಅರಳೀಮರದ ಅಡಿಯಲ್ಲಿ ಕೂತುಕೊಳ್ಳಲು ಯೋಗ್ಯವಾಗಿರುವಂತೆ ಸೊಗಸಾದ ಎತ್ತರವಾದ (ಕಟ್ಟೆ) ವೇದಿಕೆಯನ್ನು ತಯಾರು ಮಾಡಿದ್ದ ಈ ವಿಲಿಯಮ್ಸ್. ಅದನ್ನು ಕುರಿತು ಸೂಪರಿಂಟೆಂಡೆಂಟರಿಗೂ ಪಿ.ಡಬ್ಲ್ಯೂ.ಡಿ. ಇಂಜಿನೀಯರ್ ಸಾಹೇಬರನಿಗೂ ಬಹಳ ಮನಸ್ತಾಪ ಉಂಟಾಗಿತ್ತು. ಇವೆಲ್ಲ ಬಿಟ್ಟು ಹೋಗುವಾಗ ಅವನ ಮನಸ್ಸು ಹೇಗಾಗಿರಬೇಕು? ಎಲ್ಲವನ್ನೂ ಒಂದಾದ ಮೇಲೆ ಒಂದು ನೋಡುವನು, ಮುಟ್ಟುವನು ಮತ್ತೆ ನೋಡುವನು, ಸುಮ್ಮನೆ ಕಂಬನಿ ಸುರಿಸುವನು. ಇವನ ಹಾಗೆ ದುಃಖಿಸುವ ವಯಸ್ಕರನ್ನು ನಾನು ಹೆಚ್ಚು ಮಂದಿ ನೋಡಿಲ್ಲ. ಇಷ್ಟು ವರುಷಗಳಾದ ಮೇಲೆ ಮನೆಗೆ ಹಿಂದಿರುಗಿ ಹೋಗುವ ಆನಂದಕ್ಕಿಂತಲೂ, ಬಂಧು, ಬಾಂಧವರನ್ನು ನೋಡುವ ಉತ್ಸಾಹಕ್ಕಿಂತಲೂ ಜೈಲಿನ ಈ ಆತ್ಮೀಯರನ್ನು ಅಗಲಿ ಹೋಗುವ ದುಃಖವೇ ಅವನಿಗೆ ಹೆಚ್ಚಾಗಿ ಅನುಭವವಾಗುತ್ತಿದ್ದುದು.

ಸುಮ್ಮನೆ ಒಂದೇ ರೀತಿ ಕೂತುಕೂತು ಬಲಗಾಲು ಜೋಮು ಹಿಡಿದುಬಿಟ್ಟಿದೆ. ಹಾಗೇ ಕಷ್ಟದಿಂದ ಎದ್ದು ನಿಂತು ಸೆಲ್ಲಿನೊಳಗಡೆ ಅನೇಕ ಸಲ ಅಡ್ಡಾಡಿದೆ, ಜೋಮು ಹೋಗಲೆಂದು. ಎಷ್ಟೋ ಸಲ ಸಲಾಕೆಗಳನ್ನು ಹಿಡಿದುಕೊಂಡು ಅಡ್ಡಡ್ಡವಾಗಿ ಕೂತಾಗ ನನಗೇ ತಿಳಿಯದ ಹಾಗೆ ಬಲದ ಕಡೆ ಭಾರ ಬಿಟ್ಟಿರುತ್ತೇನೆ ಮತ್ತು

ಬಲಗೈಯಿಂದಲೇ ಸಲಾಕೆ ಹಿಡಿದುಕೊಂಡಿರುತ್ತೇನೆ. ಎಂದೂ ಮರೆತೂ ಸಹ ಎಡಭುಜ ಸಲಾಕೆಗೆ ತಗುಲಿಸಿ ಎಡಗಡೆ ಭಾರಬಿಟ್ಟು ಕೂತಿಲ್ಲ. ಆಶ್ಚರ್ಯ.

ಅಂದ ಹಾಗೆ ಮತ್ತೆ ಚಿಕ್ಕಂದಿನ ನೆನಪು. ಅಂದರೆ ತುಂಬಾ ಚಿಕ್ಕವನಾಗಿದ್ದಾಗ ಇನ್ನೂ ಶಾಲೆಗೇ ಹೋಗುತ್ತಾ ಇರಲಿಲ್ಲ. ಬೋರ್ಡಿಂಗ್ ಸ್ಕೂಲಿನ ಬಳಿಯೇ ಹೆಡ್‌ಮಾಸ್ಟರ ಮನೆ. ಅಪ್ಪ ಸ್ಕೂಲಿಗೆ ಹೋಗಿದ್ದಾರೆ. ಅಮ್ಮ ಮನೆಯೊಳಗೇ ಕೂತು ಅಡಿಕೆ ಕತ್ತರಿಸುತ್ತ ಇದ್ದಾಳೆ. ನನಗೂ ನೀಲುವಿಗೂ ಪರಸ್ಪರ ಮಾತಿನ ಜಗಳ ನಡೆಯುತ್ತ ಇದೆ. ನೀಲು ಅಮ್ಮನ ಬಲ ತೊಡೆಯ ಮೇಲೆ ತಾನು ಕೂಡಬೇಕು ಅದು ತನಗೆ ಸೇರಿದ್ದು ಅಂತ ಇದ್ದಾನೆ. ಎಡತೊಡೆ ನನಗೆ ಇಷ್ಟವಾದರೆ ಕೂಡಬಹುದು. ಯಾಕೋ ಗೊತ್ತಿಲ್ಲ. ಎಡತೊಡೆಯ ಮೇಲೆ ಕೂತರೆ ಏನೋ ಅವಮಾನವಾದಂತೆ ಅನ್ನಿಸುತ್ತಿತ್ತು. ಕಡೆಗೆ ಇಬ್ಬರೂ ಒಂದೇ ಸಲ ಅಮ್ಮನ ಬಲತೊಡೆ ಮೇಲೆ ಕೈ ಊರುತ್ತಿದ್ದೆವು. ನಮ್ಮ ನಮ್ಮ ಹಕ್ಕನ್ನು ಸ್ಥಾಪಿಸಲು ಯತ್ನಿಸುತ್ತಿದ್ದೆವು. ಈ ಕಿತ್ತಾಟದ ಫಲವಾಗಿ ಹಠಾತ್ತಾಗಿ ನೀಲುವಿನ ಕಾಲು ತಗಲಿ ಕತ್ತರಿಸಿದ ಅಡಿಕೆ ಚೂರುಗಳನ್ನು ಇಡುವ ಬೆತ್ತದ ತಟ್ಟೆ ಬೋರಲಾಗಿ ಬಿದ್ದುಹೋಯಿತು. ಅಮ್ಮ ಉರಿದುಬಿದ್ದು ಬುಸುಗುಟ್ಟುತ್ತ ನನ್ನ ಬೆನ್ನಮೇಲೆ ಎರಡು ಪೆಟ್ಟು ಬಲವಾಗಿ ಹೊಡೆದಳು. "ಪೀಡೆಗಳಿರಾ, ಬೆಳೀತಾ ಬೆಳೀತಾ ನಿಮ್ಮ ಉಪದ್ರ ಹೆಚ್ಚಾಗತಾ ಇದೆ. ವಯಸ್ಸು ಆಗತಾ ಇದೆ. ನಾಚಿಗೇನೇ ಇಲ್ಲ ಮುಂಡೇದಕ್ಕೆ" ಎಂದು ಬೈದಳು. ನಾನು ಸುಮ್ಮನೆ ಇರದೆ, "ನಾನಾ, ಅಡಿಕೆ ಚೆಲ್ಲಿದ್ದು ಹಾಗಾದರೆ ?" ಎಂದು ಮೂದಲಿಸಿದೆ.

"ಮತ್ತೆ ಎದುರು ಮಾತು ನೋಡಲಿಲ್ಲ! ಅವನು ಚಿಕ್ಕವನು ಬಲತೊಡೆ ಬೇಕು ಅಂತಾನೆ ಅಂತ ನಿನಗೂ ಅದೇ ಬೇಕೇನೋ! ನಾಚಿಗೆ ಇಲ್ಲದವನೆ ? ಇನ್ನು ಸ್ವಲ್ಪ ಆಗಿದ್ದಿದ್ದರೆ ಅಡಿಕೆ ಕತ್ತರಿ ಇಂದ ನನ್ನ ಕೈಯೇ ಹೋಗತಾಯಿತ್ತು!" ಎಂದು ಅಬ್ಬರಿಸಿದಳು ಅಮ್ಮ.

ಕೋಪದಿಂದ, ನಾಚಿಕೆಯಿಂದ, ಅವಮಾನದಿಂದ ನನಗೆ ಕಣ್ಣಲ್ಲಿ ನೀರು ತುಂಬ ಹರಿಯತೊಡಗಿತು. ಸ್ವಲ್ಪ ದೂರ ಹೋಗಿ ಸಿಡುಕು ಮುಖ ಹಾಕಿಕೊಂಡು ಸುಮ್ಮನೆ ಕೂತಿದ್ದೆ. ನೀಲು ಒಂದೆರಡು ಗಳಿಗೆಗಳಾದ ಮೇಲೆ ಎದ್ದು ಹೊರಗಡೆ ಹೊರಟುಹೋದ. ಬಹುಶಃ ಅವನಿಗೀಗ ಪೈಪೋಟಿ ಮಾಡುವವರು ಯಾರೂ ಇಲ್ಲವೆಂಬ ಅವನ ಛಲವೂ ಮಾಯವಾಗಿತ್ತು. ಎಷ್ಟೋ ಹೊತ್ತು, ಅಮ್ಮ ತನ್ನ ಕೆಲಸದ ನಡುವೆಯೂ ಆಗಾಗ ಓರೆಗಣ್ಣಿಂದ ನಾನೇನು ಮಾಡುತ್ತಿರುವೆನೆಂಬುದನ್ನು ನೋಡುತ್ತ ಇರುವುದು ಗಮನಕ್ಕೆ ಬಂತು. ಅಡಿಕೆ ಕತ್ತರಿಸುವ ಕೆಲಸ ಪೂರೈಸಿದೊಡನೆ ತಟ್ಟೆ ಅಡಕತ್ತು ಎಲ್ಲ ಗೂಡಿನಲ್ಲಿಟ್ಟು ನನ್ನ ಬಳಿ ಬಂದು, "ಅಲ್ಲೋ, ಅಷ್ಟು ಬುದ್ಧಿ ಇಲ್ಲವಲ್ಲೋ ನಿನಗೆ ? ಎಡತೊಡೆಯೇ ಇನ್ನೂ ಚೆನ್ನ ನಿನಗೆ... ನೋಡಿಲ್ಲ ನೀನು ? ಬಿನೂಗೆ ಹಾಲು ಕುಡಿಸುವಾಗ ಕೂಸು ಎಡತೊಡೆ ಮೇಲೆ ತಲೆ ಇಟ್ಟು ಮಲಗಿರತ್ತೆ.... ನಾನು ಬಲಗೈಯಿಂದ ಹಾಲು ಕುಡಿಸತೇನೆ. ನೀನು ಮೊದಲಲ್ಲಿ ಬಲತೊಡೆ ಮೇಲೆ ತಲೆ ಇಟ್ಟು ಮಲಗತಾಯಿದ್ದೆ. ಈಗ ಬೆಳೆದಿದ್ದೀಯ. ಈಗ ಎಡೆತೊಡೆ ನಿನಗೆ, ಏಳು ಜಾಣನಂತೆ ನೀನು... ಹೋಗಿ ಆ ಘಟಿಂಗ ಹುಡುಗ ಎಲ್ಲಿ

ಹೋದ ನೋಡಿಕೊಂಡು ಬಾ!" ಎಂದಳು. ಅಮ್ಮ ಹೇಳಿದ ಕಾರಣಕ್ಕೆ ಆಗ ಬದಲು ಹೇಳುವ ಹಾಗೆ ಇರಲಿಲ್ಲ.

ಬಲಗಾಲಿನ ಜೋಮು ಈಗ ಕಳೆದುಹೋಯಿತು. ಸೆಲ್ಲಿನೊಳಗಡೆ ಅತ್ತಿತ್ತ ಅಡ್ಡಾಡುತ್ತಿದ್ದುದನ್ನು ಕಂಡು ವಾರ್ಡರನು ಹೊರಗಡೆ ಬಾಗಿಲ ಬಳಿ ಬಂದ. ನಾನು ಏನು ಮಾಡುತ್ತಿದ್ದೇನೆಂದು ನೋಡಲಿಕ್ಕೇನೋ ಅಥವಾ ನಡುರಾತ್ರಿಯಲ್ಲಿ ನಿದ್ದೆ ಮಾಡದೆ ಹೀಗೆ ಯಾಕೆ ಸೆಲ್ಲಿನೊಳಗಡೆ ಓಡಾಡುತ್ತಿದ್ದೇನೆ ಎಂದು ತಿಳಿದುಕೊಳ್ಳುವುದಕ್ಕೇನೋ! ಈ ಬಾಬುವಿನ ಮನಸ್ಸೇಕೋ ಸರಿಯಾಗಿಲ್ಲ ಎಂದು ಅನ್ನಿಸಿರಬೇಕು. ಅದೂ ಇಂಥ ದಿನ ಹೇಗೆ ಸರಿಯಾಗಿದ್ದೀತು? ಸಲಾಕೆಗಳ ಹೊರಗಣಿಂದ ವಾರ್ಡರು ನೋಡುತ್ತಿದ್ದ. ಮೃಗಾಲಯದಲ್ಲಿ ಬೋನಿನ ಒಳಗೆ ಇರುವ ಯಾವುದೋ ಕಾಡು ಜಂತುವನ್ನು ಯಾರೋ ನೋಟಕ ಕಂಬಿಯ ಹೊರಗಡೆಯಿಂದ ನೋಡುತ್ತಿರುವಂತೆ ಅನ್ನಿಸಿತು.

ಮೃಗಾಲಯವೆಂದರೆ ತಟಕ್ಕನೆ ನಮ್ಮ ನೀರೇಶನ ಚಿಕ್ಕಜ್ಜಿಯ ಮಾತು ನೆನಪಿಗೆ ಬರುತ್ತದೆ. ಯಾವುದೋ ದೂರ ಸಂಬಂಧದ ಚಿಕ್ಕಜ್ಜಿ. ಮುದಿ ಜಮೀನುದಾರನೊಬ್ಬನ ಸಂಗಡ (ಎರಡನೆ ಮದುವೆ) ಲಗ್ನವಾಗಿತ್ತು. ಲಗ್ನವಾದ ಒಂದೆರಡು ತಿಂಗಳಿಗೇ ವಿಧವೆಯಾದಳು. ಆಕೆ ಒಮ್ಮೆ ಕಾಶಿಗೆ ತನ್ನ ತಂದೆ, ತಾಯಿಯರ ಸಂಗಡ ಬಂದಿದ್ದಳು. ಹೆಸರೇನೋ ಚಿಕ್ಕಜ್ಜಿ.... ಆದರೆ ವಯಸ್ಸಲ್ಲಿ ಎಷ್ಟು ಚಿಕ್ಕವಳೋ ನೋಡಿ ಆಶ್ಚರ್ಯಪಟ್ಟಿದ್ದೆ. ನಾನೂ ನೀರೇಶನೂ ಅವಳನ್ನು ಅತಿ ಉತ್ಸಾಹದಿಂದ ಕಾಶಿಯಲ್ಲೆಲ್ಲ ಸುತ್ತಾಡಿಸಿದ್ದವು. ನೋಡತಕ್ಕ ಸ್ಥಳಗಳಿಗೆಲ್ಲ ಕರೆದುಕೊಂಡು ಹೋದೆವು. ಕಾಶೀರಾಜನ ಮೃಗಾಲಯ ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದೇವೆ. ಹಾಗೇ ನೋಡುತ್ತ ನೋಡುತ್ತ ಹುಲಿಯ ಬೋನಿನ ಬಳಿ ಬಂದು ನಿಂತೆವು. ಆಗ ಹುಲಿ ಮುಂದಿನ ಪಾದಗಳನ್ನು ನೆಲದ ಮೇಲೆ ಚಾಚಿ ಒಂದು ಕರ್ಕಶವಾದ ದನಿ ಮಾಡಿತು. ಬಹುಶಃ, ಅದು ಒಂದು ಬಗೆಯಾದ ಆಕಳಿಕೆಯಿರಬೇಕು. ಹುಲಿಯ ಮುಖ ನೋಡಿದರೆ ಹಾಗೆ ಹೇಳಬಹುದಾಗಿತ್ತು. ಆದರೆ ನಮ್ಮ ನೀರೇಶನ ಚಿಕ್ಕಜ್ಜಿ "ಅಯ್ಯಮ್ಮಾ!" ಎಂದು ಹೆದರಿ ಪಕ್ಕದಲ್ಲೇ ನಿಂತಿದ್ದ ನನ್ನನ್ನ ಬಿಗಿಯಾಗಿ ಅಪ್ಪಿಕೊಂಡುಬಿಟ್ಟಳು. ಕೆಲವೇ ಕೆಲವು ಸೆಕೆಂಡುಗಳಲ್ಲಿ ಇದು ನಡೆದುಹೋಯಿತು. ಇದು ಅವಳ ತಂದೆ, ತಾಯಿ ಮತ್ತು ನೀರೇಶ ಇವರಲ್ಲಿ ಯಾರ ಕಣ್ಣಿಗೂ ಬಿದ್ದಿರಲಿಕ್ಕಿಲ್ಲ. ಒಂದು ಪಕ್ಷ ಬಿದ್ದಿದ್ದರೂ ವಿಶೇಷವೇನೂ ಅವರು ಅಂದುಕೊಳ್ಳುತ್ತ ಇರಲಿಲ್ಲ. ಆದರೆ ಈ ಅತಿ ಅಲ್ಪ ಸಂಗತಿಯನ್ನು, ಈ ಸಾಮಾನ್ಯ ಗಳಿಗೆಯನ್ನು ನನ್ನ ಮನಸ್ಸಲ್ಲೇ ಅವೆಷ್ಟು ಹೊಂಗನಸುಗಳಿಂದ ಹೆಣೆದಿಟ್ಟುಕೊಂಡು ನನ್ನ ಅಂತರ್ಯದಲ್ಲೇ ಸುಖಪಟ್ಟಿದ್ದೇನೋ! ನೀರೇಶನ ಸಲಹೆಯಂತೆ ನಾನು ಈ ಚಿಕ್ಕಜ್ಜಿಯ ತಾಯಿಯನ್ನು 'ಅತ್ತೆ' ಎಂದು ಸಂಬೋಧಿಸುತ್ತಿದ್ದೆ. ಕಾಶಿಯಲ್ಲಿ ಇವರು ಇಳಿದುಕೊಂಡಿದ್ದ ಮನೆಗೆ ಆಗಾಗ ಹೋಗುತ್ತಿದ್ದೆ. ಒಂದು ಸಲ ಅಡಿಗೆ ಮನೆಯಲ್ಲಿ ಅಡಿಗೆ ಮಾಡುತ್ತಿದ್ದಳು. ಈ 'ಅತ್ತೆ' ತುಂಬಾ ಒಳ್ಳೇ ಹೆಂಗಸು. ಹೆಚ್ಚಾಗಿ ಮಾತುಕತೆ ಆಡುವುದಿಲ್ಲ. ಷಹರಿನ ವಿದ್ಯಾವಂತ ಹುಡುಗರೊಂದಿಗೆ ಏನೋ ಹೇಳಲು ಹೋಗಿ ಇನ್ನೇನೋ ಹೇಳಿಬಿಡಬಹುದೇನೋ ಎಂಬ ಭಯ. ನಾನು ಅಡಿಗೆ ಮನೆಯನ್ನು

ಹೊಕ್ಕೊಡನೆ, "ನನ್ನ ಮುರುಕು ಮನೆಯಲ್ಲಿ ಚಂದ್ರನ ಬೆಳಕು" ಎಂದಳು. ಏನನ್ನು ಯೋಚಿಸಿ ಈ ಮಾತನ್ನು ಅಂದಳೋ ನಾನು ಹೇಳಲಾರೆ. ಆಮೇಲೆ ಇದ್ದಕ್ಕಿದ್ದ ಹಾಗೆ ಆಕೆಗೇ ಏನನ್ನಿಸಿತೋ ಏನೋ. ಹಾಗೇ ಸಂಕುಚಿತಳಾಗಿ ಮುಖದ ಮೇಲೆ ಅರ್ಥವಿಲ್ಲದ ನಗು ಸೂಸುತ್ತ ನಿಂತಳು. ಇದಾದ ಮೇಲೆ ಕೆಲವು ದಿನಗಳು ನಾವು ಇವರಿಗೋಸ್ಕರ ಎಷ್ಟು ಪರದಾಡಿದ್ದೇವೋ, ಚಿಕ್ಕಜ್ಜಿಯ ತಂದೆಗೆ ಬೇಕಾಗಿದ್ದ ನಾಲ್ಕು ನಮೂನೆಯ ನಾಲ್ಕು ಟಾರ್ಚುಗಳನ್ನು ಕೊಂಡು ತರಬೇಕಾದರೆ ಎಷ್ಟು ಅಂಗಡಿಗಳನ್ನು ಹುಡುಕಿ ಅಲೆಯಬೇಕಾಯಿತೋ. ಪೇಟೆಯ ಕಡೆ ಹೊರಹೊರಟರೆ ಸಾಕು, ಅವರಿಗೆ ಯಾವುದಾದರೊಂದು ಸಾಮಾನು ಕೊಳ್ಳಬೇಕೆಂಬ ಯೋಚನೆ ಹುಟ್ಟುವುದು. ಆತನ ಮಾತುಕತೆಗಳೆಲ್ಲ ಹಳ್ಳಿಗಾಡಿನವರಂತೆ, ಸ್ವಲ್ಪ ಒರಟು. ಸದ್ಯಕ್ಕೆ ಈತನೇ ಮಗಳ ಪಾಲಕ. ಅಳಿಯನ ಆಸ್ತಿಯ ಮೇಲ್ವಿಚಾರಕನೂ ಈತನೇ. ಇರುವ ಒಬ್ಬಳೇ ಮಗಳು ವಿಧವೆಯಾದದ್ದರಿಂದ ಈತನಿಗೆ ಅಷ್ಟೇನೂ ದುಃಖವಾದಂತೆ ತೋರುವುದಿಲ್ಲ. ಅದಕ್ಕೆ ಬದಲು, ತನ್ನ ಹಿಂದಿನ ಬಡತನದ ಬದುಕಿನಲ್ಲಿ ತೃಪ್ತಿ ಮಾಡಿಕೊಳ್ಳಲು ಆಗದಿದ್ದ ಅನೇಕ ಆಸೆ, ಚಪಲಗಳನ್ನು ಈಗ ನೀಗಿಸಿಕೊಳ್ಳುವ ಸುಯೋಗ ಬಂದಿದೆಯಲ್ಲ, ಆದರಿಂದ ಸ್ವಲ್ಪ 'ಬಡಾಯಿ' ತೋರಿಕೆ ಕಾಣಬರುತ್ತಿವೆ. ಕೇವಲ ಮಗಳಿಗೆ ಮಾತ್ರ ಹೆದರುತ್ತಾನೆ. ಕಾಶಿಯಲ್ಲಿ ಈಕೆಯ ತಾಯಿಗೆ ಕಾಯಿಲೆ ಬಂತು. ಆ ಸಮಯದಲ್ಲಿ ಆಕೆಗೆ ರೋಗಿಯ ಚಪಲಗಳು ಆಗುತ್ತಿದ್ದುವು. ಆಗ ನನ್ನ ಕೈಯಲ್ಲಲ್ಲದೆ ಬೇರೆ ಯಾರ ಕೈಲೂ ಔಷಧಿ ಕುಡಿಯುತ್ತಿರಲಿಲ್ಲ. ಪ್ರತಿ ದಿನ ನಾನು ಕಾಶೀ ವಿಶ್ವನಾಥನ ದೇವಸ್ಥಾನದ ಪಂಡಾ* ಮನೆಯಿಂದ ಆಕೆಯ ಔಷಧಿಗಾಗಿ ಎಳನೀರು ತಂದುಕೊಡುತ್ತಿದ್ದೆ. ಆಗ ಚಿಕ್ಕಜ್ಜಿ, "ಇಕೋ, ಇನ್ನೇನು ಸಂನ್ಯಾಸಿ ಠಾಕೂರ್ ಬಂದು ಬಿಟ್ಟರು. ಇನ್ನು ಅಮ್ಮನಿಗೆ ನಿಶ್ಚಿಂತೆ" ಎಂದು ತಮಾಷೆ ಮಾಡಿದಳು. ಆಗ ನನಗೊಂದು ಬಗೆಯ ವ್ರತ ಸಾಧನೆಯ ಗೀಳು ಹುಟ್ಟಿಕೊಂಡಿತ್ತು. ಕೂದಲನ್ನು ಕುತ್ತಿಗೆಯವರೆಗೂ ಬೆಳೆಸಿದ್ದೆ. ಗಡ್ಡ, ಮೀಸೆ ಬೆಳೆಯತೊಡಗಿದ್ದುವು. ಆದರೆ ಅದನ್ನು ಕತ್ತರಿಸುತ್ತಿರಲಿಲ್ಲ. ಅದಕ್ಕಾಗೇ ಚಿಕ್ಕಜ್ಜಿ ನನಗೆ 'ಸಂನ್ಯಾಸಿ ಠಾಕೂರ್' ಎಂದು ಹೆಸರಿಟ್ಟಿದ್ದು. ಆಕೆಯ ನೆನಪಾದೊಡನೆ ಆಕೆಯ ಆಕಾರ ಕಣ್ಣ ಮುಂದೆ ನಿಲ್ಲುವುದು. ಉಟ್ಟಿರುವುದು ನೀಲಾಂಬರಿ ಸೀರೆ, ಕೈಗಳಲ್ಲಿ ಬೊಂಬಾಯಿ ವಂಕಿ ಬಳೆಗಳು, ಕೊರಳಲ್ಲಿ ದಪ್ಪನೆಯ ಚಿನ್ನದ ಚೈನು. ಬಹುಶಃ ಆಕೆಯ ತಾಯಿಗೆ ಇಷ್ಟು ಸಣ್ಣ ವಯಸ್ಸಿನ ಒಬ್ಬಳೇ ಮಗಳನ್ನು ವಿಧವೆಯ ವೇಷದಲ್ಲಿ ನೋಡಲು ಇಷ್ಟವಿಲ್ಲವೆಂದು ಕಾಣುತ್ತದೆ.

ಮೈ ಬಣ್ಣ ಕಪ್ಪೇ. ಅದಲ್ಲದೆ ಇಸ್ಪೀಟು ಎಲೆಗಳ 'ಕಳಾವರ್' ಅಂಚಿರುವ ನೀಲಾಂಬರಿ ಸೀರೆ ಆ ಬಣ್ಣಕ್ಕೆ ಸ್ವಲ್ಪವೂ ಒಪ್ಪುವುದಿಲ್ಲ. ಒಟ್ಟಿನಲ್ಲಿ ಸಾಧಾರಣ ಹಳ್ಳಿಯ ಮನೆತನಸ್ಥರ ಹುಡುಗಿ 'ಚಿಕ್ಕಜ್ಜಿ'. ಹೇಳತಕ್ಕಂಥ ರೂಪವಾಗಲಿ, ಗುಣವಾಗಲಿ ಇಲ್ಲ. ಆದರೂ ನನ್ನನ್ನ ಆಕರ್ಷಿಸಿದ್ದುದು ಅವಳ ಯೌವನದ ಕೋಮಲತೆ, ಬಹುಬೇಗ ತನ್ನವರನ್ನಾಗಿ ಮಾಡಿಕೊಳ್ಳುವ ಸರಳ ಮಾತುಕತೆ ಮತ್ತು ನಿಷ್ಕಪಟವಾದ ಸಲಿಗೆ. ಅವರೆಲ್ಲ ತಮ್ಮ ಊರಿಗೆ ಹಿಂತಿರುಗುವಾಗ ನಾನೂ,

---

* ದೇವಸ್ಥಾನದಲ್ಲಿ ಪೂಜೆ ಮುಂತಾದುವನ್ನು ಮಾಡಿಸಿಕೊಡುವ ದಳ್ಳಾಳಿಗಳು.

ನೀರೇಶನೂ ಅವರನ್ನು ರೈಲು ಹತ್ತಿಸಲು ಹೋಗಿದ್ದೆವು. ನೀರೇಶ ಮತ್ತು ಚಿಕ್ಕಜ್ಜಿಯ ತಂದೆ, ಇಬ್ಬರೂ ಕಡೆಯ ಗಳಿಗೆಯಲ್ಲಿ ಆತನಿಗೆ ಆಸೆಯಾದ ಕಾಶಿಯ ಪ್ರಸಿದ್ಧ ಹೊಗೇಸೊಪ್ಪಿನ ಪುಡಿಯನ್ನು ಕೊಳ್ಳಲು ವಿಳ್ಳೇದೆಲೆ ಅಂಗಡಿಯವನ ಬಳಿ ಹೋಗಿದ್ದರು. ನಾನು ಪ್ಲಾಟ್‌ಫಾರಮ್ಮಿನಲ್ಲಿ ನಿಂತು ಎರಡು ಕೈಗಳನ್ನು ಗಾಡಿಯ ಕಿಟಕಿಯ ಮೇಲೆ ಊರಿದ್ದೇನೆ. ಗಾಡಿಯೊಳಗೆ ಕಿಟಕಿಯ ಪಕ್ಕದಲ್ಲಿ ಚಿಕ್ಕಜ್ಜಿ ಕೂತಿದ್ದಾಳೆ. ಅವಳ ಒಂದು ಕೈ ನನ್ನ ಕೈಮೇಲೆ. ಕಣ್ಣುಗಳು ನೀರಿನಿಂದ ತುಂಬಿವೆ. ನನಗಂತೂ ಅವಳ ಕಡೆ ನೋಡಲು ಸಾಧ್ಯವಾಗಲಿಲ್ಲ. ಆಗ ಅವಳು ಮೆಲ್ಲಮೆಲ್ಲಗೆ, "ಸಂನ್ಯಾಸಿ ಠಾಕೂರ್, ನಮ್ಮೂರಿಗೆ ಬನ್ನಿ ಒಂದು ಸಲ ಖಂಡಿತ!" ಅಂದಳು. 'ಆಗಲಿ' ಎಂದು ಮಾತುಕೊಟ್ಟೆ. ಹೇಳಿದ ಪ್ರಕಾರ ಹೋಗೋಣವೆಂದೂ ಎಷ್ಟೋ ಸಲ ಅನ್ನಿಸಿತ್ತು. ಚಿಕ್ಕಜ್ಜಿ ಹೊರಟುಹೋದ ಮೇಲಂತೂ ಎಲ್ಲಾ 'ಬಿಕೋ' ಎನ್ನುವಂತಿತ್ತು. ಎಲ್ಲಿ ನೋಡಿದರೂ ಖಾಲಿ ಖಾಲಿ ಭಾವ. ಯಾವುದರಲ್ಲೂ ಮನಸ್ಸು ನಿಲ್ಲುವಂತಿಲ್ಲ. ಮರೆಯೋಣ ಎಂದು ಎಷ್ಟು ಪ್ರಯತ್ನಿಸಿದರೂ ಅದೇ ಮುಖ ನನ್ನ ಕಣ್ಣ ಮುಂದೆ ಬಂದು ನಿಲ್ಲುತ್ತಿತ್ತು. ಕಾಗದವೇನಾದರೂ ಬಂದಿರುತ್ತೇನೋ ಎಂಬ ಆಸೆಯಿಂದ ಎಷ್ಟು ಸಲ ಪೋಸ್ಟಾಫೀಸಿಗೆ ಹೋಗಿ ವಿಚಾರಿಸಿದ್ದೇನೋ!

ಅದೆಲ್ಲಾ ಆದ ಮೇಲೆ ಆ ನೀಲಾಂಬರಿ ಸೀರೆ, ಆ ಬೊಂಬಾಯಿ ವಂಕಿ ಬಳೆ, ಇವೆಲ್ಲ ನನ್ನ ಮನಸ್ಸಿನಿಂದ ಯಾವಾಗ ದೂರ ಸರಿದು ಸರಿದು ಒಂದು ಸಲ ಪೂರ್ತಿಯಾಗಿ ಅಳಿಸಿಹೋಯಿತೋ ಹೇಳಲಾರೆ. ಈಗ್ಗೆ ನಾಲ್ಕೈದು ವರುಷಗಳ ಹಿಂದೆ ಹಳೆಯ ಕಾಗದ ಪತ್ರಗಳನ್ನೆಲ್ಲ ಹರಿದು ಸುಟ್ಟು ಹಾಕುವ ಮುನ್ನ ಒಂದು ನೀಲಿಬಣ್ಣದ ಕಾಗದದಲ್ಲಿ ಬರೆದ ಕೆಲವು ಪಂಕ್ತಿಗಳು ಕಣ್ಣಿಗೆ ಬಿದ್ದು ಓದಿ ನೋಡಿದೆ. ಹಳ್ಳಿಯ ಒರಟು ಭಾಷೆಯಲ್ಲಿ ಬರೆದ ಆ ಒಕ್ಕಣೆ ಓದಿ ಮನಸ್ಸಿಗೆ ಹಿತವಾಗಲಿಲ್ಲ. "ಸಂನ್ಯಾಸಿ ಠಾಕೂರ್ ಹೋಳಿಗೆ ಊಟ ಯಾವಾಗ ಹಾಕಿಸುತ್ತೀರಿ? ನಾಲಗೆ ಚಪ್ಪರಿಸಿಕೊಂಡು ಹೊಟ್ಟೆ ಖಾಲಿ ಮಾಡಿಕೊಂಡು ಕೂತಿದ್ದೇನೆ" ಏನು ಮಾತು! ಹೊಟ್ಟೆ ಖಾಲಿ ಮಾಡಿಕೊಂಡು ಕೂತಿದ್ದಾಳಂತೆ! ಛೆ! ಹೀಗೇ ಕಾಗದದಲ್ಲಿ ಬರೆಯುವುದು? ತುಂಬ ಜುಗುಪ್ಸೆಯಾಯಿತು ಮನಸ್ಸಿಗೆ.

'ಖಟ್.... ಖಟ್.. ಖಟ್! ಭಾರಿ ಮಿಲಿಟರಿ ಬೂಟುಗಳ ಶಬ್ದ, ಅಂಗಳದ ಗಾರೆ ನೆಲದ ಮೇಲೆ. ಯಾರದೋ ಅದು? ಮೂವರು ಹೊಸ ಸಿಪಾಯಿಗಳು ಬಂದರು. ಹಿಂದಿನ ವಾರ್ಡರುಗಳಿಂದ 'ಛಾರ್ಜು' ವಹಿಸಿಕೊಂಡು ಸೆಲ್ಲುಗಳ ಬೀಗ, ಚಿಲಕ ಎಲ್ಲಾ ಭದ್ರವಾಗಿದೆಯೋ ಇಲ್ಲವೋ ಪರೀಕ್ಷೆ ಮಾಡುತ್ತಾರೆ. ಯಾವ ಸೆಲ್ಲಿನ ಮುಂದೆಯೂ ನಿಂತು ಹೆಚ್ಚು ಹೊತ್ತು ಕೂಗಾಟ ಮಾಡಲಿಲ್ಲ. ಸೆಲ್ಲಿನೊಳಗಡೆ ಇರುವ ಆಸಾಮಿಗಳಲ್ಲಿ ಯಾರೂ ಇನ್ನೂ ನಿದ್ದೆ ಮಾಡಿಲ್ಲ. ಅದು ಗಮನಕ್ಕೆ ಬಂತು. ನಿದ್ದೆ ಹೋಗಿಬಿಟ್ಟಿದ್ದರೆ ವಾರ್ಡರುಗಳು ಖಂಡಿತವಾಗಿ ಕೂಗಿ ಎಬ್ಬಿಸುತ್ತಿದ್ದರು. ಯಾಕೆಂದರೆ, ಛಾರ್ಜು ಬದಲಾಯಿಸುವಾಗ ಹೊಸ ವಾರ್ಡರುಗಳು ಪ್ರತಿ ಆಸಾಮಿಯನ್ನು ಎಬ್ಬಿಸಿ ಅವರೆಲ್ಲ ಇನ್ನೂ ಬದುಕಿದ್ದಾರೋ ಇಲ್ಲವೋ ಎಂಬುದನ್ನು ನೋಡಬೇಕು. ಅದು ಪದ್ಧತಿ. ಯಾವ ಆಸಾಮಿಯಾದರೂ ಸೆಲ್ಲಿನ ಬಾಗಿಲ ಬಳಿ ಕೂತಿದ್ದರೆ, ಅಥವಾ ಇನ್ನೆಲ್ಲಿ ಹೇಗೆ ಇದ್ದರೂ ಕೆಮ್ಮಿಯೋ ಇನ್ನು ಯಾವುದಾದರೂ

ಶಬ್ದ ಮಾಡಿಯೋ ತಾನಿನ್ನೂ ಜೀವದಿಂದ ಇದ್ದಾನೆಂಬುದಾಗಿ ಸೂಚನೆ ಕೊಟ್ಟರೆ ಸಾಕು, ಆಗ ವಾರ್ಡರು ಅವನನ್ನು ಕೂಗುವುದಿಲ್ಲ. ಹಾಗೆ ಮಾಡದೆ ನಿದ್ದೆ ಮಾಡಿಬಿಟ್ಟರೆ, ಅವರನ್ನು ಕೂಗಿ ಎಬ್ಬಿಸುವವರೆಗೂ ಬಿಡುವುದಿಲ್ಲ. ಸೆಲ್ಲಿನ ಆಸಾಮಿಗೆ ಎರಡು ಗಂಟೆಗಳಿಗಿಂತ ಹೆಚ್ಚಾಗಿ ಗಾಢ ನಿದ್ರೆ ಯಾಕೆ ಅಂತ. ಆಕ್ಷೇಪಣೆ ಮಾಡಿದರೆ, "ಅದು ರೂಲ್ಸ್ ಇದೆ ಬಾಬು. ಯಾರಿಗಾದರೂ ಜ್ಞಾನ ತಪ್ಪಿದ್ದರೆ, ಜ್ವರ ಬಂದು ಮಾತು ನಿಂತು ಹೋಗಿದ್ದರೆ ನಾವು ತಿಳಿದುಕೊಳ್ಳದೆ ಹೋದರೆ ಹೇಗೆ? ಡಾಕ್ಟರಿಗೆ ಹೇಳಿ ಕರಕೊಂಡು ಬರಬೇಕಾಗತದಲ್ಲ?" ಎಂದು ಜವಾಬು ಹೇಳಿ ಬಾಯಿ ಮುಚ್ಚಿಸುತ್ತಾರೆ.... ಒಂದು ದೃಷ್ಟಿಯಿಂದ, ಸೆಲ್ಲಿನ ಖೈದಿಗಳಿಗೆ ಇದರಿಂದ ಅಂತಹುದೇನೂ ಅನನುಕೂಲವಾಗುವುದಿಲ್ಲ. ಯಾಕೆಂದರೆ ಈ ಸೊಳ್ಳೆ, ತಿಗಣೆ, ಇರುವೆಗಳ ಕಾಟ, ಹಗಲು ರಾತ್ರಿ ಯಾವ ಕೆಲಸವೂ ಇಲ್ಲದೆ ಇರುಪಿಕೆ, ದುಶ್ಚಿಂತೆ ಮುಂತಾದ ನಾನಾ ಕಾರಣಗಳಿಂದ ಬೇರೆ ಜನರಿಗೆ ಲಭ್ಯವಾಗುವ ಗಾಢ ನಿದ್ರೆ ಸೆಲ್ಲಿನ ಆಸಾಮಿಗಳ ಪಾಲಿಗೆ ದೂರವೇ!

ಹತ್ತನೆಯ ನಂಬರು ಸೆಲ್ಲಿನಿಂದ ರಾಗವಾದ ದನಿಯಲ್ಲಿ ಕೂಗು ಕೇಳಿಬರುತ್ತಿದೆ.

**"ಶಹಿದೋಂಕಿ ಟೋಲಿ ನಿಕಲೀ! (ದೇಶಭಕ್ತರ ಪಡೆ ಹೊರಟಿತು)"**

'ಟೋಲಿ' ಎಂಬ ಮಾತು ಕೇಳಿದೊಡನೆ ಪಾಟನಾ ಜೈಲಿನ ಕ್ಯಾಂಪಿನಲ್ಲಿ 1932ರಲ್ಲಿ ನಡೆದ ಸೇವಾದಳದ ತರಬೇತಿನ ಸಂಗತಿ ನೆನಪಿಗೆ ಬರುತ್ತದೆ. ನಾನೂ ಮತ್ತು ನೀಲೂ ಸೇರಿ ಸೇವಾದಳದ ಟ್ರೇನಿಂಗ್ ತೆಗೆದುಕೊಳ್ಳಲು ನಿರ್ಧರಿಸಿದ್ದೆವು. ಮೊದಲ ದಿನದ 'ಡ್ರಿಲ್' ಮುಗಿದ ಮೇಲೆ ನೀಲು ನನ್ನನ್ನು 'ಟೋಲಿ' ಎಂದರೆ ಏನು ಎಂದು ಕೇಳಿದ. ಹಲವು ಜನ ಸಿಪಾಯಿಗಳ ಗುಂಪಿಗೆ 'ಟೋಲಿ' ಎನ್ನುತ್ತಾರೆ ಎಂದೆ. "ಸಿಪಾಯಿಗಳೆಂದರೆ ಇಂಗ್ಲಿಷಿನಲ್ಲಿ 'ಪ್ರೈವೇಟ್ಸ್' ಎನ್ನುತ್ತಾರೆ. 'ಟೋಲಿ'ಯ ನಾಯಕನಿಗೆ ಎನ್.ಸಿ.ಓ. 'ನಾನ್ ಕಮಿಷನ್ಡ್ ಆಫೀಸರ್' ಎನ್ನುತ್ತಾರೆ" ಎಂದು ಹೇಳುತ್ತಿರುವಾಗ ನೀಲೂ ತಾಳ್ಮೆಯಿಲ್ಲದೆ ಮಧ್ಯೆ ಬಾಯಿ ಹಾಕಿ, "ಅದೆಲ್ಲ ಅವತ್ತು ಟೆಂಡೂಲ್ಕರ್ ಚೆನ್ನಾಗಿ ವಿವರಿಸಿದ್ದ ಬಿಡೋ. ಅದಲ್ಲ ನಾನು ಕೇಳಿದ್ದು. 'ಟೋಲಿ' ಅನ್ನುವ ಪದ ಹೇಗೋ ಇಷ್ಟವಾಯಿತು ಇವರುಗಳಿಗೆ? ಅದೇ ನಾನು ಕೇಳುವುದು. ಬೇರೆ ಯಾವ ಒಳ್ಳೇ ಪದವೂ ಸಿಗಲಿಲ್ಲವೆ ಇವರಿಗೆ?" ಎಂದದ್ದೇ "ಟೋಲಿ" ಎಂಬ ಪದವನ್ನು ವಿಕಾರವಾಗಿ ಉಚ್ಚರಿಸುತ್ತ ವ್ಯಂಗ್ಯವಾಗಿ ನಕ್ಕಿದ್ದೂ ನಕ್ಕಿದ್ದೇ! ಅವತ್ತೇ ಸಂಜೆ ಟೆಂಡೂಲ್ಕರ್* "ಕದಮ್ ಖೋಲ್" (Stand-at-ease) ಪದದ ಅರ್ಥ ವಿವರಣೆ ಮಾಡುತ್ತಿದ್ದಾಗ ನೀಲೂ ಇದ್ದಕ್ಕಿದ್ದ ಹಾಗೆ ಗಟ್ಟಿಯಾಗಿ ನಗುವುದಕ್ಕೆ ತೊಡಗಿದ. ಅವನ ನಗು ಕೇಕೆ ಕೇಳಿ ಟೆಂಡೂಲ್ಕರ್ ಬೆಂಕಿಯಾಗಿಬಿಟ್ಟರು. ಅವರು ಹುಬ್ಬಳ್ಳಿಯಲ್ಲಿ ಡಾ. ಹರ್ಡಿಕರ್‌ರ** ಕ್ಯಾಂಪಿನಲ್ಲಿ ಟ್ರೇನಿಂಗ್ ಪಡೆದಿದ್ದವರು. ಬೊಂಬಾಯಿಯಲ್ಲಿ ತಾವೇ ಸೇವಾದಳದ ಕ್ಯಾಂಪ್ ನಡೆಸಿದ್ದರು.

ಬಿಹಾರ್ ಪ್ರಾದೇಶಿಕ ಕಾಂಗ್ರೆಸ್ ಸಮಿತಿಯ ಅನುರೋಧದ ಮೇರೆಗೆ ಅವರು ಮಹಾರಾಷ್ಟ್ರವನ್ನು ಬಿಟ್ಟು ಬಿಹಾರಿನಲ್ಲಿ ಸೇವಾದಳದ ಕ್ಯಾಂಪನ್ನು ನಡೆಸಲು

---

* ಟೆಂಡೂಲ್ಕರ್ ಹೆಸರಾಂತ ದೇಶಭಕ್ತರು. ಗಾಂಧಿಜಿಯ ಜೀವನಚರಿತ್ರೆ ರಚಿಸಿದ್ದಾರೆ.

** ಹಿಂದೂಸ್ಥಾನಿ ಸೇವಾದಳದ ಅಧಿನಾಯಕರು ಡಾ. ಹರ್ಡಿಕರರು.

ಒಪ್ಪಿಕೊಂಡಿದ್ದರು. ಸೇವಾದಳದ ಟ್ರೇನಿಂಗ್ ಸಂಬಂಧದಲ್ಲಿ ಅವರಿಗೆ ವಿಶೇಷ ಅನುಭವವಿತ್ತು. ಆಮೇಲೆ 1932ರಲ್ಲಿ ಸತ್ಯಾಗ್ರಹದಲ್ಲಿ ಕಾನೂನು ಭಂಗ ಮಾಡಿ ಜೈಲುವಾಸವನ್ನು ಅನುಭವಿಸಿದರು. ಪಾಟನಾ ಕ್ಯಾಂಪ್ ಜೈಲಿನಲ್ಲಿ ನಾನೂ, ನೀಲೂ ಇದ್ದಾಗಲೇ ಅವರೂ ಅಲ್ಲಿ ಖೈದಿಯಾಗಿದ್ದರು. ಜೈಲಿನವರ ಅನುಮತಿಯಿಂದ ಅಲ್ಲೂ ಸೇವಾದಳದ ಶಿಬಿರವೊಂದನ್ನು ನಡೆಸುತ್ತಿದ್ದಾಗಲೇ ನಾನೂ, ನೀಲೂ ಅದಕ್ಕೆ ಸೇರಿದ್ದು. ಡ್ರಿಲ್ ನಡೆಯುತ್ತಿರುವಾಗ ಶಿಸ್ತಿಲ್ಲದೆ ನಡೆದುಕೊಳ್ಳುವುದಂತೂ ಅವರಿಗೆ ಹೊಸ ಅನುಭವ. ಕೋಪದಿಂದ ಅವರ ಮುಖ, ಕಣ್ಣು ಕೆಂಪಗಾಗಿ ಹೋದುವು. ಅವರಿಗೆ ಚೆನ್ನಾಗಿ ಹಿಂದಿ ಬರುತ್ತಿರಲಿಲ್ಲ. "ತುಮ್‌ಕೋ ಲಕಡೀ ಮಿಲೇಗಾ" ಎನ್ನುತ್ತ ನೀಲುವಿಗೆ ಲಾಠಿಯಿಂದ ಒಂದು ಪೆಟ್ಟುಕೊಟ್ಟರು. ನೀಲು ಸಹ ಸುಮ್ಮನಿರದೆ ಅವರ ಕೈಯಿಂದ ಲಾಠಿಯನ್ನು ಕಸಿದುಕೊಂಡು ದೊಡ್ಡ ದನಿಯಲ್ಲಿ ಅರಚುತ್ತ "ಲಕಡೀ ಮಿಲೇಗಾ ? ಯೇ ಸಬ್ ಮಹಾರಾಷ್ಟ್ರಮೇ ಕೀಜಿಯೇ! ಯಹಾಂ ಓ ಸಬ್ ನಹೀಂ ನಹೀಂ ಚಲೇಗಾ! ರಾಷ್ಟ್ರಭಾಷಾ ಬೋಲನಾ ನಹೀಂ ಆತಾ ಹೈ. ಪೂನಾ ಷಹರಕೋ ಪುಂಡೇ ಬೋಲತಾ ಹೈ ಔರ್ ಹಿಂದಿ ಮೇ ಬಾತ್ ಕರನೇ ಕೋ ಶೌಕ್ ಹೈಂ" (ಲಾಠೀ ಸಿಗತ್ತಾ ? ಅದೆಲ್ಲ ನಿಮ್ಮ ಮಹಾರಾಷ್ಟ್ರದಲ್ಲಿ ಮಾಡಿ. ಇಲ್ಲೆಲ್ಲ ನಡೆಯೋದಿಲ್ಲ. ರಾಷ್ಟ್ರಭಾಷೆ ಮಾತಾಡುವುದಕ್ಕೆ ಬರೋದಿಲ್ಲ ನಿಮಗೆ! ಪೂನಾ ಶಹರನ್ನು ಪುಂಡೇ ಅನ್ನುತ್ತೀರಿ. ಆದರೂ ಹಿಂದಿಯಲ್ಲಿ ಮಾತಾಡಲಿಕ್ಕೆ ಚಪಲ!") ಎಂದು ಮೂದಲಿಸಿದ. ಹೀಗೆ ಅರಚುತ್ತಲೇ ನೀಲು ಟೆಂಡೂಲ್‌ಕರರ ಕೈಯನ್ನು ಗಟ್ಟಿಯಾಗಿ ಹಿಡಿದುಬಿಟ್ಟ. ನಾಲ್ಕು ಕಡೆಯಿಂದಲೂ ಜನ ನುಗ್ಗಿ ಬಂದು ಅವರನ್ನು ಬಿಡಿಸಿದರು. ಕೂಡಲೇ ಈ ಸುದ್ದಿ ಇಡೀ ಜೈಲಿನಲ್ಲೆಲ್ಲ ಹರಡಿಹೋಯಿತು. ಕ್ಯಾಂಪ್ ಜೈಲಿನಲ್ಲಿ ಆಗ ಸುಮಾರು ಮೂರೂವರೆ ಸಾವಿರ ರಾಜಕೀಯ ಖೈದಿಗಳಿದ್ದರು. ಯಾವ ವಾರ್ಡಿಗೆ ಹೋದರೂ ಅಲ್ಲಲ್ಲಿ ಸಣ್ಣಸಣ್ಣ ಗುಂಪು ಸೇರಿ ಈ ಮಾತೇ ಆಡುತ್ತ ವ್ಯಾಖ್ಯಾನ ಮಾಡುತ್ತ ಇರುವುದು ಕಾಣುತ್ತಿತ್ತು. ಜೈಲಿನ ಮೂಲೆ ಮೂಲೆಯಲ್ಲೂ ಗಾಳಿಯಲ್ಲೂ ಅಂತರಿಕ್ಷದಲ್ಲೂ ಇದೇ ಗುಜುಗುಜು! ಜೈಲಿನ ಕೇಂದ್ರ ಸ್ಥಳವೊಂದಿತ್ತು - ಅದಕ್ಕೆ ನಾವು "ಚೌರ" ಎಂದು ಹೆಸರಿಟ್ಟಿದ್ದೆವು. ಅಲ್ಲೊಂದು ದೊಡ್ಡ ಗುಂಪೇ ಸೇರಿಬಿಟ್ಟಿತ್ತು. ವಾರ್ಡರುಗಳು ಸಹ ರಾಜಕೀಯ ಖೈದಿಗಳ ನಡುವೆ ಸೇರಿಕೊಂಡು ಈ ವಿಷಯ ಚರ್ಚೆ ಮಾಡುತ್ತಿದ್ದರು. ಅವರುಗಳಿಗೆ ಜೈಲಿನ ರಾಜಕೀಯದಲ್ಲಿರುವ ಉತ್ಸಾಹ ಕಡಮೆ ಇಲ್ಲ. ಒಬ್ಬಾಳು ಭಾಷಣ ಕೊಡುತ್ತ ನಿಜವಾದ ಸಂಗತಿಯನ್ನು ವಿವರಿಸುತ್ತಿದ್ದ. ಬಿಹಾರಿನ ಒಳ್ಳೇ ಹೆಸರಿಗೆ ಇದೊಂದು ಕಳಂಕ. ಹೊರ ಪ್ರಾಂತದವರು ಟೆಂಡೂಲ್‌ಕರ್. ಅವರ ಬಗೆಗೆ ತೋರಿಸುವ ಅತಿಥಿ ಸತ್ಕಾರ ಈ ನಮೂನೆಯದೆ ? ಅದು ಸಾಲದೆ, ರಾಷ್ಟ್ರಭಾಷೆಯನ್ನು ಕುರಿತು ಅಪಹಾಸ್ಯ ಬೇರೆ! ಆಮೇಲೆ ಹತ್ತಿರ ಇದ್ದ ಶ್ರೋತೃವೊಬ್ಬನ ಕಿವಿಯಲ್ಲಿ (ಅವರಿಗೆ ಹತ್ತಿರದವನಿರಬೇಕು) "ಬಂಗಾಳಿಯಲ್ಲವೆ ? ಆಶ್ಚರ್ಯವೇನು ?" ಎಂದು ಪಿಸುಮಾತಿನಲ್ಲಿ ಹೇಳುವಾಗ ತುಟಿಗಳಂಚಿನಲ್ಲಿ ವ್ಯಂಗ್ಯವಾದ ನಗೆ ಸೂಸುತ್ತಿದ್ದುದನ್ನು ಕಂಡು ಅಲ್ಲೇ ನಿಂತಿದ್ದ ನನಗೆ ಎಷ್ಟು ನಾಚಿಕೆಯಾಯಿತೋ ಎಷ್ಟು ಅವಮಾನವಾಯಿತೋ! ಇವರಿಗೆಲ್ಲ ನೀಲುವಿನ ಮನಸ್ಸಿನ ಭಾವ ಹೇಗೆನ್ನುವುದೇ ಗೊತ್ತಿಲ್ಲ. ಅವರ ಮನಸ್ಸಿಗೆ ತೋಚಿದ

ಹಾಗೆ ಯಾವುದೋ ಒಂದು ಅರ್ಥವನ್ನು ಮಾಡಿಕೊಂಡು ಟೀಕಿಸುತ್ತಾರೆ. ಅಷ್ಟಕ್ಕೇ ತೃಪ್ತಿ ಅವರಿಗೆ. ಸಂಜೆಯಾದ ಮೇಲೆ ನಾನು ಊಟದ ಸಮಯದಲ್ಲಿ ನೀಲುವನ್ನು ಕಂಡೆ. ಸೂರ್ಯ ಮುಳುಗುವುದಕ್ಕೆ ಮುಂಚೆಯೇ ಊಟ ಮುಗಿದು ಹೋಗುತ್ತದೆ. ಆ ಸಮಯದಲ್ಲಿ ಹಸಿವೆ ಆಗುವುದಿಲ್ಲವಾದುದರಿಂದ ಆಗ ಕೊಡುವ ರೊಟ್ಟಿಯನ್ನು ಇಟ್ಟುಕೊಂಡು ವಾರ್ಡಿನಲ್ಲಿ ರಾತ್ರಿಯಾದ ಮೇಲೆ ತಿನ್ನುವ ಅಭ್ಯಾಸವಿತ್ತು. ನೀಲೂ ತನ್ನ ಪರವಾದ ಮಾತನ್ನು ವಿವರಿಸಿ ಹೇಳಿ ನನ್ನ ಸಂಕೋಚ ನಿವೃತ್ತಿ ಮಾಡಿದ. ಸಂಜೆ ಆದದ್ದನ್ನು ಕುರಿತು ನನಗೆ ತುಂಬ ನಾಚಿಕೆ ಆಗಿತ್ತು. ಆದರ ನೀಲುವಿಗೆ ಏಕೋ ಏನೂ ಅನ್ನಿಸಿರಲಿಲ್ಲ. ಅವನು ಹೀಗೆ ಹೇಳತೊಡಗಿದ. "ಅಲ್ಲ, ಈ ಡ್ರಿಲ್ಲಿನ ಆರ್ಡರುಗಳನ್ನು ಇಂಗ್ಲಿಷಿನಲ್ಲೇ ಇಟ್ಟುಕೊಂಡಿದ್ದರೆ ಏನು ನಷ್ಟ ಆಗುತ್ತಾಯಿತ್ತೋ ಗೊತ್ತಿಲ್ಲ. 'ಕ್ವಿಕ್ ಮಾರ್ಚ್', 'ಸ್ಟಾಂಡ್ ಅಟ್ ಈಸ್', ಅಂತಲ್ಲ ಹೇಳಿಬಿಟ್ಟರೆ ಭಾರತಕ್ಕೆ ಸ್ವರಾಜ್ಯ ಸಿಗುವುದೇ ಇಲ್ಲ ಅಂತಲೇ? ಹಿಂದಿ ಸರಿಯಾಗಿ ಗೊತ್ತಿಲ್ಲ. ಆದರೂ ಹಿಂದಿಯಲ್ಲೇ ಮಾತಾಡಬೇಕು. ಮ್ಯಾನರ್ಸ್ ಸಹ ಗೊತ್ತಿಲ್ಲ. ಹಲ್ಕಾ ಜನ! ಇಂಥ ಮನುಷ್ಯರಿಗೆ ಗೌರವ ಕೊಡಬೇಕಂತೆ!" ಯಾವ ವಿಷಯದಲ್ಲೂ ಕೇಳಿಸಿಕೊಳ್ಳದೆ ನಾನು ನೀಲುವಿಗೆ ಎಂದೂ ಬುದ್ಧಿವಾದ ಹೇಳಿಲ್ಲ. ಈಗಲೂ ನಾನು ಯಾವ ಮಾತನ್ನು ಆಡುವುದಕ್ಕೂ ಇಷ್ಟಪಡಲಿಲ್ಲ. ಅವನೇ ಮಾತು ಎತ್ತದೆ ಹೋದರ ಹೇಳುತ್ತಲೂ ಇರಲಿಲ್ಲ. ಆಮೇಲೆ ಬೇರೆ ಬೇರೆ ಜನ ಅವನ ವರ್ತನೆಯನ್ನು ಕುರಿತು ಏನೇನು ದುರಭಿಪ್ರಾಯಗಳನ್ನು ಹೊಂದಿದ್ದಾರೆಂಬುದನ್ನು ಸಂಕ್ಷೇಪವಾಗಿ ತಿಳಿದುಹೇಳಿದೆ. ನೀಲೂ ಅದಲ್ಲ ಕೇಳಿ ಉರಿದುಬಿದ್ದ. "ಹ್ಹ! ಇವರೆಲ್ಲ ಸ್ವರಾಜ್ಯ ಗೆಲ್ಲುತ್ತಾರಂತೆ!" ಅಂದದ್ದೇ ಇನ್ನೂ ಏನೇನೋ ಅನ್ನುತ್ತ ಹೋದ. ಸ್ವಲ್ಪ ಹೊತ್ತು ಹೀಗೆ ಮಾತಾಡುತ್ತ ಆಡುತ್ತ ಇದ್ದಕ್ಕಿದ್ದ ಹಾಗೆ ಅವನ ಕೋಪ ಯಾರೋ ಒಬ್ಬ ತನ್ನ ಬೆಲ್ಲದ ಚೂರನ್ನು ಕದ್ದ ಖೈದಿಯ ಮೇಲೆ ತಿರುಗಿಬಿಟ್ಟಿತು. ಭಾನುವಾರದ ದಿನ ರಾಜಕೀಯ ಖೈದಿಗಳು ಅನ್ನದ ಬದಲಾಗಿ ರೊಟ್ಟಿ ಮತ್ತು ಬೆಲ್ಲ ಅಥವಾ ಆರು ಪೈಸಾಗಳಿಗ ಯಾವುದಾದರೂ ಹಣ್ಣು ಪಡೆಯುವರು. ನೀಲೂ ರೊಟ್ಟಿಯ ಜೊತೆಗೆ ಬೆಲ್ಲ ತೆಗೆದುಕೊಳ್ಳುವನು. ಆ ದಿನ ನನ್ನ ಪಾಲಿನ ಅನ್ನವನ್ನೇ ನಾವಿಬ್ಬರೂ ಹಂಚಿಕೊಂಡು ತಿನ್ನುತ್ತಿದ್ದೆವು. ಇಷ್ಟು ಮಾತ್ರ ಅನನುಕೂಲವನ್ನು ಹೇಗೋ ಸೈರಿಸಿಕೊಂಡು ಆ ಬೆಲ್ಲವನ್ನು ನಾವು ಇಬ್ಬರೂ ವಾರವೆಲ್ಲ ಸ್ವಲ್ಪ ಸ್ವಲ್ಪವಾಗಿ ತಿನ್ನುತ್ತಿದ್ದೆವು. ಈಗ ಆ ಬೆಲ್ಲವೇ ಕಳುವಾಗಿತ್ತು. ಒಟ್ಟಿನಲ್ಲಿ ನೀಲುವಿನ ಮನಸ್ಸು ಕಟ್ಟು ಹೋಗುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ನೀಲೂ ಅದನ್ನ ಅಷ್ಟು ದೊಡ್ಡದಾಗಿ ಮಾಡಿ ಜೋರಾಗಿ ಅರಚುತ್ತ ರಾಜಕೀಯ ಖೈದಿಗಳನ್ನೆಲ್ಲ ಒಂದೇ ಸಮನಾಗಿ ಬೈದದ್ದು ನನಗೇಕೋ ತುಂಬಾ ಕೆಟ್ಟದೆನ್ನಿಸಿತು. ಅದೂ ಎಲ್ಲರಿಗೂ ಕೇಳುವ ಹಾಗೆ! ಅದರಲ್ಲೂ ಅವನನ್ನು ಕುರಿತು ಅವರೆಲ್ಲರ ಅಭಿಪ್ರಾಯ ಮೊದಲೇ ಕೆಟ್ಟಿರುವಾಗ! ಇಡೀ ಪ್ರಪಂಚವೇ ನೀಲುವಿನ ವಿರುದ್ಧವಾಗಲಿ, ಅವನು ಮಾತ್ರ ತನ್ನ ದಾರಿಬಿಟ್ಟರೆ ಸೈ! ಒಂದು ಸಲ ಅವನು ತನ್ನ ನಿರ್ಣಯ ಮಾಡಿಬಿಟ್ಟರೆ ಸಾಕು, ಯಾರಿಂದಲೂ ಅದನ್ನು ಕದಲಿಸುವುದಕ್ಕಾಗದು. ಇವನು ಹೀಗೇ ಏನೋ ಒಂದು ಅನಾಹುತ ಮಾಡಿಬಿಡುತ್ತಾನೆ ಎಂದು ಯಾವಾಗಲೂ ಹೆದರುತ್ತ ಇರುತ್ತೇನೆ. ರಾಜಕೀಯ

ಬಂದಿಗಳು ಜೈಲಿನಲ್ಲಿ ಹೊತ್ತು ಹೋಗುವುದಕ್ಕಾಗಿ ಏನಾದರೊಂದು ಹುಡುಕುತ್ತ ಇರುತ್ತಾರೆ. ಹೊರಗಡೆ ಇರುವ ಜನರೆಲ್ಲ ಎಡಬಿಡದೆ ಕೆಲಸಗಳಲ್ಲಿ ಮಗ್ನರಾಗಿರುವಾಗ ಜೈಲಿನೊಳಗಡೆ ಇರುವವರು ಯಾವ ಕೆಲಸವೂ ಇಲ್ಲದೆ ಸುಮ್ಮನೆ ಓಡಾಡುತ್ತ ಸಮಯ ಕಳೆಯುವುದು ಹೇಗೆ ? ಅದಕ್ಕಾಗಿ ಅವರೆಲ್ಲ ತಮ್ಮತಮ್ಮೊಳಗೇ ಏನಾದರೂ ಒಂದು ಹವ್ಯಾಸ ಹುಡುಕುವರು - ತಂಡ ಕಟ್ಟುವರು, ಅದರಲ್ಲೇ ಪೈಪೋಟಿ ಹೀಗೇ ತಮ್ಮದೇ ಆದ ಒಂದು ಹೊಸ ರಾಜಕೀಯ ಕಟ್ಟಿಕೊಳ್ಳುವರು. ಆದರೂ ಪ್ರತಿದಿನದ ಕಾರ್ಯಕ್ರಮ ಹೊಸ ಹೊಸದಾಗಿ ಇಲ್ಲದಿದ್ದರೆ ಹೇಗೆ ? ಈ ಮನೋವೃತ್ತಿಯ ಸಲುವಾಗೇ ನೀಲೂ ಅವತ್ತು ಮಾಡಿದ ಗಲಾಟೆ ಹೆಚ್ಚು ಜನರ ಗಮನ ಸೆಳೆಯಲಿಲ್ಲ. ಮಾರನೆಯ ದಿನ ಬೆಳಗ್ಗೆ ಫಲಾರದ ಸಮಯದಲ್ಲಿ ಯಾರೋ ಒಂದು ಮಾತು ಎತ್ತಿದರು. ಏನೆಂದರೆ, ನಿತ್ಯ, ಫಲಾರಕ್ಕೆ ಒಂದೇ ಸಮನಾಗಿ ನೆನೆಸಿದ ಕಡಲೆಯನ್ನು ಕೊಡುತ್ತಾರಲ್ಲ ? ಅದಕ್ಕೆ ಬದಲಾಗಿ ಅವಲಕ್ಕಿ ಕೊಟ್ಟರೆ ಎಷ್ಟೋ ಒಳ್ಳೆಯದು, ರುಚಿಯಾಗೂ ಇರುತ್ತದೆ ಎಂದು. ಹಾಗಂದದ್ದೇ ತಡ, ಉಳಿದವರೆಲ್ಲ ಅದನ್ನೇ ಹಿಡಿದುಬಿಟ್ಟರು. ಕೂಡಲೇ ಒಂದು ಪದ ಕಟ್ಟಿದ್ದೂ ಆಯಿತು. "ಕಡಲೆಗೆ ಬದಲು ಅವಲಕ್ಕಿ. ಕಡಲೆ ಬೇಡ, ಅವಲಕ್ಕಿ ಬೇಕು !" ಇಡೀ ಜೈಲಿಗೆ ಜೈಲೇ ಸೇರಿ ಈ ಪದವನ್ನು ಹೇಳುತ್ತ ಅರಚಲು ತೊಡಗಿತು. ಅದರ ಜತೆಗೆ ತಟ್ಟೆಗಳನ್ನೂ ಗಳಾಸುಗಳನ್ನೂ ಶಬ್ದ ಮಾಡುತ್ತ ತಾಳಬೇರೆ ! ಒಬ್ಬಿಬ್ಬರು ಶಿಳ್ಳು ಕೂಡ ಹೊಡೆದರು. ಕೆಲವರು ತಮ್ಮ ತಟ್ಟೆಗಳನ್ನು ಬಾಗಿಲ ಸಲಾಕೆಗಳ ಮೇಲೆ ಒತ್ತಿ ಎಳೆಯುತ್ತಾರೆ– ಮೇಳಕ್ಕೆ ಒಂದು ಹೊಸ ಶಬ್ದ - ಅದೂ ಕಿವಿ ಚುಚ್ಚುವ ಶಬ್ದ ! ಎಷ್ಟೋ ಮಂದಿ ಕಿಟಕಿಗಳ ಮೇಲೆ ಸಹ ಹತ್ತಿಬಿಟ್ಟರು. ಇಬ್ಬರು ಕಿಟಕಿಯ ಹೊರಗೆ ಬಂದು ಟನ್ನಿನ ಛಾವಣಿಯ ಮೇಲೆ ಹತ್ತಿದ್ದರು. ಗುಲ್ಲೋ ಗುಲ್ಲು ! ಹಠಾತ್ತಾಗಿ ಯಾವ ಮಾಟ, ಯಾವ ಗಾರುಡಿಯ ಸೋಂಕೋ ಕಾಣೆ, ಎಲ್ಲರಿಗೂ ಹುಚ್ಚು ತಿರುಗಿಬಿಟ್ಟಿತ್ತು. ಸದಾ ಧೀರ, ಗಂಭೀರ ಪ್ರಕೃತಿಯವರಂತೆ ತೋರುತ್ತಿದ್ದವರೂ ಸಹ ಆವೇಶದ ಅಮಲನ್ನು ತಡೆದಿಟ್ಟುಕೊಳ್ಳಲು ಆಗಲಿಲ್ಲ. ಆಗ ಕೆಲವರು ಒಂದು ದಿಕ್ಕಿನಿಂದ ಇನ್ನೊಂದು ದಿಕ್ಕಿಗೆ ಓಡುತ್ತಾ 'ಕಂಬಳಿ' 'ಕಂಬಳಿ' ಎಂದು ಅರಚುತ್ತ ಹೋದರು. ಹಠಾತ್ತಾಗಿ ಹೊಸದೊಂದು ಪ್ರೋಗ್ರಾಮು (ಕಾರ್ಯಕ್ರಮ) ಹೊರಬಂದಿತು. ನೋಡನೋಡುತ್ತ ಅನೇಕ ಕಂಬಳಿಗಳು ರಾಶಿರಾಶಿಯಾಗಿ ಬಂದುಬಿದ್ದುವು. ಈ ಕಂಬಳಿಗಳನ್ನು ಒಂದೊಂದಾಗಿ ಹರಿದು ಚಿಂದಿಚಿಂದಿಗಳಾಗಿ ಮಾಡುವ ಪ್ರಯತ್ನ ನಡೆಯಿತು. ಒಬ್ಬ ಹೋಗಿ ಅಡಿಗೆಯ ಮನೆಯಿಂದ ಉರಿಯುತ್ತಿರುವ ಕಲ್ಲಿದ್ದಲೊಂದನ್ನು ತಂದು ಆ ಕಂಬಳಿಗಳ ಮೇಲೆ ಎಸೆದದ್ದೂ ಆಯಿತು. ಅವುಗಳಿಂದ ಕೂಡಲೇ ಸ್ವಲ್ಪ ಸ್ವಲ್ಪವಾಗಿ ಹೊಗೆ ಬರಲು ತೊಡಗಿತು. ತಡೆಯಲಾರದ ಕೆಟ್ಟ ವಾಸನೆ ಬೇರೆ.

ಇಬ್ಬರು ಓಡುತ್ತ ಓಡುತ್ತ ಹೋಗಿ ಆ ನೆನಸಿದ ಕಡಲೆ ಇಟ್ಟಿದ್ದ ದೊಡ್ಡತಪ್ಪಲೆಯನ್ನು ಉರುಳಿಸಿ ಬೋರಲು ಮಾಡಿಬಿಟ್ಟರು. ಹತ್ತಿರದ ಯಾವುದೋ ವಾರ್ಡಿನಿಂದ "ಪಾಗಲೀ" (ಅಲಾರ್ಮ್) ಸಿಗ್ನಲ್ ಕೂಗತೊಡಗಿತು. ಒಂದೇ ಸಮನಾಗಿ ಸಿಗ್ನಲಿನ ಶಿಳ್ಳು ಕಿವಿಗಡಚಿಕ್ಕುವಂತೆ ಕಿರುಚುತ್ತಿದೆ. ಇದನ್ನು ಕೇಳಿ ಜೈಲಿನಲ್ಲಿರುವ ವಾರ್ಡರುಗಳೆಲ್ಲ ತಮ್ಮ ತಮ್ಮ ತುತೂರಿಗಳನ್ನು · ಊದಲು

ತೊಡಗಿದರು. ಇಷ್ಟೆಲ್ಲ ಶಬ್ದಗಳನ್ನು ಕೇಳುತ್ತಿದ್ದರೆ, ಫುಟ್‌ಬಾಲ್ ರೆಫರಿಯ ಶಿಳ್ಳು ಎಂಜಿನ್ ಡ್ರೈವರಿನ ಶಿಳ್ಳಿನೊಂದಿಗೆ ಪೈಪೋಟಿ ಮಾಡುತ್ತಿರುವಂತೆ ಅನ್ನಿಸುತ್ತಿತ್ತು. ಲೆಕ್ಕವಿಲ್ಲದಷ್ಟು ತುತೂರಿಗಳ ಕರ್ಕಶವಾದ ಶಬ್ದಗಳೆಲ್ಲ ಸೇರಿ ಜೈಲಿನ ವಾತಾವರಣಕ್ಕೊಂದು ಹೊಸ ರೂಪ ಬಂದಂತೆ ಆಗಿದೆ. ಸೆಂಟ್ರಲ್ ಟವರಿನ ಗೋಪುರದಿಂದ ದೊಡ್ಡ ಗಂಟೆ "ಟಂಗ್ ಟಂಗ್ ಟಂಗ್" ಎಂದು ಒಂದೇ ಸಮನಾಗಿ ಬಾರಿಸಲು ತೊಡಗಿತು.

ಜೈಲಿನ ದೊಡ್ಡ ಗೇಟಿನಲ್ಲಿದ್ದ ಇನ್ನೊಂದು ಗಂಟೆಯೂ ಬಾರಿಸತೊಡಗಿತ್ತು. ಎಂದೋ ಪುಸ್ತಕದಲ್ಲಿ ಓದಿದ್ದ ಜಹಜು ಮುಳುಗುವ ದೃಶ್ಯವೇ ಈಗ ಕಣ್ಣ ಮುಂದೆ ಬಂದಂತೆ! ಈ ಕಡೆಯೇ ತುಮುಲ ಕೋಲಾಹಲ "ಕಂಬಲ್ ಜಲತೇ ರಹೇ" (ಕಂಬಳಿ ಸುಡುತ್ತಿರಲಿ) "ಥಾಲಿಯಾ ಬಾಜತೇ ರಹೇ!" (ತಟ್ಟೆಗಳು ಶಬ್ದ ಮಾಡುತ್ತಿರಲಿ!) "ನೌಕರ್ ಶಾಹಿ ನಾಶ್ ಹೋ!" (ನೌಕರ ಜಾತಿ ಸತ್ತು ನಾಶವಾಗಲಿ!") ಇನ್ನೂ ಇಂಥವೇ. ಅರ್ಥವೇ ಆಗದಂಥವೂ ಸಹ.... ಕೂಗುಗಳು...... ವಿಕಟ ಸ್ವರಗಳಲ್ಲಿ ನೂರಾರು ಸಾವಿರಾರು ಕೊರಳುಗಳಿಂದ ಬರುವ ಹುಚ್ಚು ಕೂಗುಗಳು. ಜೈಲು ಅಧಿಕಾರಿಗಳು ಎಲ್ಲೆಲ್ಲಿ ಯಾವ ಯಾವ ಅವಸ್ಥೆಯಲ್ಲಿದ್ದರೋ ಅದೇ ಅವಸ್ಥೆಯಲ್ಲೇ ದಿಕ್ಕು ತೋಚದವರಂತೆ ಓಡಿ ಬರುತ್ತಿದ್ದಾರೆ. ಗೋಪುರದ ಮೇಲೆ ಸೈನ್ ಬೋರ್ಡು ತೂಗು ಹಾಕಿದೆ. ಅದರ ಮೇಲೆ "ವಾರ್ಡ್ ನಂ. 17,18,19"ಎಂದು ಬರೆದಿದೆ. ಲಾಠೀ ಹಿಡಿದ ವಾರ್ಡರುಗಳು ಗೇಟಿನ ಕಡೆಯಿಂದ ಗೋಪುರದ ಕಡೆ ಓಡಿ ಬರುತ್ತಿದ್ದಾರೆ. ಅವರಲ್ಲಿ ಅನೇಕರಿಗೆ ತಲೆಯ ಮೇಲೆ ಟೋಪಿಯಿಲ್ಲ, ಮೈಮೇಲೆ ಸರಿಯಾಗಿ ಬಟ್ಟೆಯಿಲ್ಲ, ಕಾಲಿಗೆ ಬೂಟಿಲ್ಲ. ಜೈಲಿನ ಡಾಕ್ಟರು ಪರೇನ್ ಬಾಬು ಬರೇ ಬನಿಯನ್ನು ಹಾಕಿಕೊಂಡು ಓಡಿಬಂದಿದ್ದಾರೆ. ಗೋಪುರದ ಮೇಲಿಂದ ಒಬ್ಬ ವಾರ್ಡರು ಸುಮ್ಮನೆ "ಹದಿನೇಳನೇ ವಾರ್ಡು, ಹದಿನೆಂಟನೇ ವಾರ್ಡು, ಹತ್ತೊಂಬತ್ತನೇ ವಾರ್ಡು" ಎಂದು ಅರಚುತ್ತ ಇದ್ದಾನೆ. ಉಳಿದವರೆಲ್ಲ ಈ ವಾರ್ಡುಗಳ ಕಡೆ ದೌಡಾಯಿಸುತ್ತಿದ್ದಾರೆ. ಈ ಗಲಭೆಯಲ್ಲಿ ಇದ್ದಕ್ಕಿದ್ದ ಹಾಗೆ ದೊಡ್ಡದಾಗಿ ಕೂಗು ಎದ್ದಿತು. "ಮಿಲಿಟರಿ ಸೈನ್ಯ ಬರತಾಯಿದೆ!" ಬಂದೂಕಗಳನ್ನು ಹೆಗಲಿಗೇರಿಸಿರುವ ಒಂದು ಮಿಲಿಟರಿ ಸಿಪಾಯಿಗಳ ತಂಡ ಗೇಟನ್ನು ಹಾದು ಒಳಹೊಕ್ಕಿತ್ತು. ಇವರುಗಳ ಮುಖಭಾವದಲ್ಲಿಯೂ ಇಂಗಿತದಲ್ಲಿಯೂ ಯಾವ ವ್ಯಗ್ರತೆಯೂ ಇಲ್ಲ. ಕ್ವಿಕ್ ಮಾರ್ಚ್ ಮಾಡುತ್ತ ಅವರು ಗೋಪುರದ ಬಳಿ ಬಂದರು. ಆಮೇಲೆ ಮೂರು ವಾರ್ಡುಗಳಿಗೂ ಸಾಮಾನ್ಯವಾಗಿದ್ದ ಗೇಟಿನ ಎದುರಿನಲ್ಲಿ ನಿಂತುಕೊಂಡರು. ವಾರ್ಡಿನ ಒಂದು ಮೂಲೆಯಲ್ಲಿ ಒಂದು ರಾಶಿ ಬೇಲದ ಕಾಯಿಗಳು. ಹಿಂದಿನ ದಿನವೇ ವಾರ್ಡಿನ ಮುಂದುಗಡೆ ಬೆಳೆದಿದ್ದ ಬೇಲದ ಗಿಡವನ್ನು ಕಡಿದುಹಾಕಿದ್ದರು. ಅದು ಇದ್ದಾಗ ಖೈದಿಗಳನೇಕರು ಅದರ ಮೇಲೆ ಹತ್ತಿ "ಗಾಂಧೀಜಿ ಕಿ ಜೈ" ಎಂದು ಕೂಗುತ್ತಿದ್ದರು ಮತ್ತು ಕಾಂಗ್ರೆಸ್ ಪತಾಕೆಯನ್ನು ಅದರ ಮೇಲಿಂದ ಹಾರಿಸುತ್ತಿದ್ದರು. ಜೈಲಿನ ಹೊರಗಡೆ ಬಹುದೂರದಿಂದ ಇದು ಕಾಣಬರುತ್ತಿತ್ತು. ಈ ಕಾರಣದಿಂದ ಈ ಮರವನ್ನು ಕಡಿದು ಹಾಕಬೇಕೆಂದು ಅಪ್ಪಣೆಯಾಗಿತ್ತು. ಮೊದಲು ನಾಲ್ಕು ಜನ

ವಾರ್ಡರುಗಳು ಬಂದು ಈ ಬೇಲದ ಕಾಯಿಗಳ ರಾಶಿಯನ್ನು ಸುತ್ತುವರೆದು ನಿಂತರು. ಲಾಠೀ ಛಾರ್ಜು ಮಾಡುವಾಗ ಖೈದಿಗಳು ಇವುಗಳನ್ನು ಸಿಪಾಯಿಗಳ ಮೇಲೆ ಪ್ರಯೋಗ ಮಾಡದಿರಲಿ ಎಂದೇ ಅವರ ಉದ್ದೇಶ್ಯ. ಮಿಲಿಟರಿ ಪಡೆ ವಾರ್ಡನ್ನು ಸುತ್ತುವರೆದು ನಿಂತಿತು. ಆಮೇಲೆ ಒಂದು ತಂಡ ವಾರ್ಡರುಗಳು, ಅವರ ಸಂಗಡ ಕೆಲವರು "ಮೇಟ್"ಗಳು ಮತ್ತು ಕೆಲವು ಜೈಲಿನ ಕೆಲಸಗಾರರು ವಾರ್ಡಿನ ಒಳಗಡೆ ನುಗ್ಗಿದರು. ಅನಂತರ ಲಾಠೀ ಛಾರ್ಜು ಶುರು ಆಯಿತು. ಸರ್ಕಾರಿ ಭಾಷೆಯಲ್ಲಿ ಮೃದುವಾದ ಲಾಠೀ ಛಾರ್ಜು. ಈ ಪ್ರಹಾರಗಳನ್ನು ಮಾಡುವಾಗ ದೋಷಿಗಳು, ನಿರ್ದೋಷಿಗಳು ಎಂಬುದಾಗಿ ವಿವೇಚನೆ ಮಾಡುವ ಗೋಜೇ ಇಲ್ಲ. ಸಾಧಾರಣವಾಗಿ ನಿರ್ವಿರೋಧಿಗಳೂ ಶಾಂತಿಪ್ರಿಯರೂ ಆಗಿರುವವರೇ ಹೆಚ್ಚು ಏಟುಗಳನ್ನು ತಿನ್ನುವುದು. ಲಾಠಿಗಳನ್ನು ಬೀಸಿ ಹೊಡೆಯುವಾಗ ಸಿಪಾಯಿಗಳು ಬಾಯಿಂದ ಏನೋ ಒಂದು ವಿಧವಾದ ಶಬ್ದ ಮಾಡುವರು. ಅವರಿಗೆ ನಿರ್ದೇಶ ಮಾಡಲು ಕೆಲವು ವಾರ್ಡರುಗಳು ಕೈ ತೋರಿಸುತ್ತ, "ಇಲ್ಲಿ, ಬನ್ನಿ.... ಒಬ್ಬ ಓಡಿ ಹೋಗಿದ್ದಾನೆ ಹೊಡೆಯಿರಿ" ಎಂದು ಅರಚುತ್ತ ಇರುತ್ತಾರೆ. ಯಾವ ಕಡೆ ಜೈಲಿನ ದೊಡ್ಡ ಅಧಿಕಾರಿಗಳು ಸೇರಿರುತ್ತಾರೋ ಆ ಕಡೆ ನಿಂತಿರುವ ಖೈದಿಗಳಿಗೆ ಉಳಿಗಾಲವೇ ಇಲ್ಲ - ಕಾರಣ, ವಾರ್ಡರುಗಳೂ ಸಿಪಾಯಿಗಳೂ ತಮ್ಮ ಕರ್ತವ್ಯ ನಿಷ್ಠೆಯನ್ನು ತೋರಿಸಿಕೊಳ್ಳುವ ಸಲುವಾಗಿ ಆ ಕಡೆ ಹೆಚ್ಚಾಗಿ ಧಾಳಿ ಮಾಡುವರು. ಏಟು ತಿಂದು ಎಷ್ಟೋ ಜನ ಕೆಳಗೆ ಬಿದ್ದು ಬಿಟ್ಟಿದ್ದಾರೆ. ತಲೆಗೆ ಏಟು ಬಿದ್ದೊಡನೆ ಕೆಳಗೆ ಕೂತುಬಿಟ್ಟರು ಕೆಲವರು. ದರ್ಭಂಗಾದ ಸಾಧು ಸ್ವಭಾವದ ರಾಜಕೀಯ ಖೈದಿಯೊಬ್ಬನು ಜಪ ಮಾಡುತ್ತ ಕೂತುಕೊಂಡಿದ್ದ. ಅವನಿಗೂ ಲಾಠಿ ಏಟು ತಪ್ಪಲಿಲ್ಲ. ಸಿಪಾಯಿಗಳು ನಾವು ನಿಂತಿದ್ದ ಕಡೆ ಧಾವಿಸಿದರು. ನನಗಂತೂ ಎದೆಯಲ್ಲಿ 'ಪುಕಪುಕ' ಎನ್ನುತ್ತಿದೆ. ಏಟು ತಿನ್ನುವುದು ಖಂಡಿತ. ತಪ್ಪಿಸಿಕೊಳ್ಳುವ ಹಾಗಿಲ್ಲ ಅದೂ ಗೊತ್ತು ಎದುರಿಸುವ ಹಾಗೂ ಇಲ್ಲ. ಏಟು ಎಲ್ಲಿ ಹೇಗೆ ಬೀಳಬಹುದೆಂದು ಊಹಿಸುತ್ತ ಇದ್ದೆ. ಒಂದು ಲಾಠಿಯು ನನ್ನ ತಲೆ ಮೇಲೆ ಹೊಡೆಯಿತು. ಆದರೆ ಎರಡು ಕೈಗಳಿಂದಲೂ ತಲೆ ಮುಚ್ಚಿಕೊಂಡಿದ್ದೆ. ಯಾವಾಗ ಮುಚ್ಚಿಕೊಂಡೆನೋ ಗೊತ್ತಿಲ್ಲ. ಕೈಗೆ ಲಾಠೀ ಏಟು ಬಿದ್ದಾಗಲೇ ತಿಳಿದದ್ದು. ಲಾಠಿಯ ತುದಿಯಲ್ಲಿ ಕಬ್ಬಿಣದ ಉಂಗುರವೊಂದಿರುತ್ತದೆ. ಅದು ತಗುಲಿ ನನ್ನ ಬೆರಳಿಗೆ ಗಾಯವಾಗಿತ್ತು. ನೀಲೂ ನನ್ನ ಮೈಯನ್ನು ಎರಡು ಕೈಗಳಿಂದಲೂ ಬಿಗಿಯಾಗಿ ಹಿಡಿದು ಮುಚ್ಚಿದ್ದ. ಮತ್ತೆ ತಲೆ ಮುಚ್ಚಿಕೋ.... ತಲೆ ಮುಚ್ಚಿಕೋ ಎಂದು ಕೂಗುತ್ತಲೇ ಇದ್ದ. ಆಗ ಅವನ ಮೈಮೇಲೂ ಬಲವಾಗಿ ಲಾಠೀ ಏಟುಗಳು ಬಿದ್ದುವು. ನನ್ನ ಮೇಲೆ ಇನ್ನೂ ಒಂದು. ನೀಲೂ ತಲೆ ಮೇಲಿಂದ ರಕ್ತ ಸೋರುತ್ತಿದೆ. ವಾರ್ಡರುಗಳು ಆಮೇಲೆ ಬೇರೆ ಕಡೆ ಹೊರಟುಹೋದರು. ಒಂದೇ ಸ್ಥಳದಲ್ಲೇ ಹೆಚ್ಚು ಕಾಲವ್ಯಯ ಮಾಡಲಾಗುವುದಿಲ್ಲ ಅವರಿಗೆ. ಇಡೀ ವಾರ್ಡಿನಲ್ಲೆಲ್ಲ ಏನೋ ಒಂದು ಸ್ತಬ್ಧತೆಯ ಭಾವ. ಎಷ್ಟೋ ಜನ ನೆಲಕ್ಕೆ ಬಿದ್ದಿದ್ದಾರೆ. ಪೆಟ್ಟು ತಿನ್ನದಿರುವ ಅದೃಷ್ಟಶಾಲಿಗಳು ಕೆಲವರು ಗಾಯಗೊಂಡವರಿಗೆ ನೀರು ತರುತ್ತಿದ್ದಾರೆ. ಹೆಚ್ಚು ಪೆಟ್ಟು ಬೀಳದಿರುವವರೂ ಸಹ ತಮಗೆ ತಾವೇ ಪ್ರಾಥಮಿಕ ಚಿಕಿತ್ಸೆ ಮಾಡಿಕೊಳ್ಳುತ್ತಿದ್ದಾರೆ. ಸ್ವಲ್ಪವೂ ಏಟು ತಿನ್ನದೇ

ಇರುವ ಪುಣ್ಯವಂತರು ಎಷ್ಟೋ ಮಂದಿ ಯಾರು ಯಾರಿಗೆ ಎಲ್ಲೆಲ್ಲಿ ಏಟು ಬಿದ್ದಿದೆಯೋ ನೋಡಲು ಜನರಲ್ ಇನ್ಸ್‌ಪೆಕ್ಷನ್ ಮಾಡಲು ಹೊರಗೆ ಬಂದಿದ್ದಾರೆ. ಘೋರವಾದ ಸುಂಟರಗಾಳಿ ಬಂದು ಹೋದಮೇಲೆ ಜನರು ಹೇಗೆ ಗ್ರಾಮದಲ್ಲಿ ಎಷ್ಟರಮಟ್ಟಿಗೆ ಹಾವಳಿಯಾಗಿದೆ ಎಂದು ತನಿಖೆ ಮಾಡಲು ಬರುತ್ತಾರೋ ಹಾಗೆ. ಆಮೇಲೆ ಒಬ್ಬೊಬ್ಬರಾಗಿ ಬಂದರು. ಜೈಲಿನ ಡಾಕ್ಟರು, ಕಾಂಪೌಂಡರುಗಳು ಸ್ಟ್ರೆಚರುಗಳು, ಔಷಧಿ, ಬ್ಯಾಂಡೇಜಿನ ಬಟ್ಟೆ ಮೊದಲಾದವುಗಳು ಸಮೇತ ಹೆಚ್ಚಾಗಿ ಗಾಯಗೊಂಡವರನ್ನು ಆಸ್ಪತ್ರೆಗೆ ಸಾಗಿಸುವ ಏರ್ಪಾಡು ಶುರುವಾಯಿತು.

"ಬೋಲೋರೆ ಅಸ್‌ಪತಾಲ್!" ಆಸ್ಪತ್ರೆಯ ಪಹರೆಯವನ ಕೂಗು ಇಲ್ಲಿಂದಲೇ ಕೇಳಬರುತ್ತಿದೆ. ಆ ಮನುಷ್ಯ ಬಹುಶಃ ತೂಕಡಿಸುತ್ತಿದ್ದನೇನೋ! ತತ್‌ಕ್ಷಣ ಎಚ್ಚರವಾಗಿ ತನ್ನ ಕರ್ತವ್ಯ ಜ್ಞಾನದ ಅರಿವು ಬಂದು ದೊಡ್ಡ ದನಿಯಲ್ಲಿ ಕರ್ಕಶವಾಗಿ ಅರಚತೊಡಗಿದ್ದಾನೆ. ಈ ಅರಚುವಿಕೆಯಿಂದ ಎಷ್ಟು ಜನ ರೋಗಿಗಳು ನಿದ್ದೆಗೆಡಬೇಕೋ. ಮೊದಲೇ ಜೈಲಿನ ಆಸ್ಪತ್ರೆಯಲ್ಲಿ ಸೇವಾ, ಶೂಶ್ರೂಷೆಗಳಿಗೆ ಎಷ್ಟೋ ಕೊರತೆ. ಅದು ಸಾಲದೆಂಬಂತೆ ಈ ಬಗೆಯಾಗಿ ಪ್ರತಿದಿನ ನಿದ್ದೆಗೆಡುವುದೂ ಒಂದು ಸ್ವಾಭಾವಿಕವಾದ ನಿಯಮವೇ. ಇದಕ್ಕೆ ಮೊದಲಿದ್ದ ಸೂಪರಿಂಟೆಂಡೆಂಟರು ಆಸ್ಪತ್ರೆಯ ಪಹರೆಯವರು ರಾತ್ರಿ ಗೋಪುರದಿಂದ ಬರುವ ಕೂಗಿಗೆ ಜವಾಬುಕೊಡುವುದು ಅಗತ್ಯವಿಲ್ಲವೆಂದು ಹುಕುಂ ಮಾಡಿದ್ದರು. ಮೆಡಿಕಲ್ ಗ್ರೌಂಡ್ಸ್ ಪ್ರಕಾರ ಸೂಪರಿಂಟೆಂಡೆಂಟರು ಖೈದಿ ರೋಗಿಗಳಿಗೆ ಎಷ್ಟೋ ಸೌಕರ್ಯಗಳನ್ನು ಒದಗಿಸಬಹುದು. ಈ ವಿರಾಟವಾದ ಅರೆಯುವ ಯಂತ್ರದ ಒಳಗಡೆ, ಈ ವೈದ್ಯಕೀಯ ರಿಯಾಯಿತಿಯ ಸಣ್ಣ ರಂಧ್ರದ ಮೂಲಕ ಸ್ವಲ್ಪವಾದರೂ ಗಾಳಿ, ಬೆಳಕು ಹರಿದು ಬರಲು ಸಾಧ್ಯ. ಮರುಕವುಳ್ಳ ಜೈಲಿನ ಕೆಲಸಗಾರರು ಕೆಲವರು ಈ ನೆಪದಲ್ಲಿ ರೋಗಿಷ್ಟ ಖೈದಿಗಳಿಗೆ ಕೆಲವು, ಸುಖ, ಸೌಕರ್ಯಗಳನ್ನು ಒದಗಿಸಬಹುದು. ಈಗ ಹೊಸ ಸೂಪರಿಂಟೆಂಡೆಂಟರು ಬಂದು ಹಳೆಯ ಪಹರೆಯ ಕೂಗಿನ ಪದ್ಧತಿಯನ್ನು ಮತ್ತೆ ಜಾರಿಗೆ ತಂದುಬಿಟ್ಟಿದ್ದಾರೆ.

ಒಂದಿಷ್ಟು ಕರುಣೆ, ಸೇವೆಗಳಿಗಾಗಿ ಹಾತೊರೆಯುವ ರೋಗಿಷ್ಟ ಖೈದಿಗಳು ಆಸ್ಪತ್ರೆಯ ಹಾಸಿಗೆ ಮೇಲೆ ಮಲಗಿರುವಾಗ ತಮ್ಮ ತಮ್ಮ ಹೆಂಡತಿ, ಮಕ್ಕಳನ್ನೋ ತಂದೆ ತಾಯಿಯರನ್ನೋ ನೆನೆಸಿಕೊಳ್ಳುವುದಿಲ್ಲವೆ? ಜೈಲಿನಲ್ಲಿ ರೋಗ ಬಂದಾಗಲೇ ಹೆಚ್ಚಾಗಿ ಮನೆಯ ನೆನಪು ಬರುವುದು. ಸಾಧಾರಣ ಖೈದಿಗಳಿಗೆ ಜೈಲಿನ ಹೊರಗಡೆ ಇದ್ದರೆ ಎರಡು ಹೊತ್ತೂ ಕೂಳು ಸಿಗುವ ಸಂಭವ ಇಲ್ಲದಿರಬಹುದು. ಜೈಲಿನಲ್ಲಿದ್ದರೆ, ಬೇರೇನೂ ಇಲ್ಲದಿದ್ದರೂ ಎರಡು ಹೊತ್ತೂ ಎರಡು ಹಿಡಿ ಅನ್ನ ಸಿಗುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ರೋಗ ಬಂದಾಗ ಅಂಥವರೂ ಸಹ ಪೂರ್ತಿಯಾಗಿ ಎಲ್ಲರಿಂದಲೂ ಕೈಬಿಡಲ್ಪಟ್ಟವರಂತೆ ತಿಳಿಯುವರು. ಈ ರೋಗಿಷ್ಟ ಖೈದಿಗಳಲ್ಲಿ ಸಹ ಯಾರೂ ಅವರಿಗೆ ಬರುವ ನೂರಾರು ಯೋಚನೆಗಳ ನಡುವೆಯೂ ನನ್ನ ವಿಚಾರವಾಗಿ ಸ್ವಲ್ಪವೂ ಒಮ್ಮೆಯೂ ಯೋಚಿಸಲಾರರೆ? ಸಹಾನುಭೂತಿಯಿಂದ ಅಲ್ಲದಿದ್ದರೂ ಆತಂಕದಲ್ಲಾದರೂ ಅವರು ಇವತ್ತು ನನ್ನ ಫಾಸಿಯ ವಿಷಯವಾಗಿ ಖಂಡಿತ ಯೋಚಿಸುತ್ತಾರೆ - ಸರಿಯಾಗಿ ನನ್ನ ವಿಷಯವೇ

ಇಲ್ಲದಿರಬಹುದು. ಒಬ್ಬ ಗುರುತಿಲ್ಲದ ಆಸಾಮಿ, ಒಂದನೇ ನಂಬರು ಸೆಲ್ಲಿನಲ್ಲಿ ಇರುವವನು ಇವತ್ತು ಫಾಸಿಯಾಗುತ್ತಾನ. ಪಾಪ ಎಂದು ಯೋಚಿಸದೆ ಇರುತ್ತಾರೆಯೆ ?

ಆಸ್ಪತ್ರೆಯ ಎರಡನೆಯ ಮಾಳಿಗೆಯ ಮೇಲೆ ಒಂದು ವರಾಂಡದಲ್ಲಿ ಟಿ.ಬಿ. ಕ್ಷಯ ರೋಗಿಗಳು ಇರುತ್ತಾರೆ. ಅಲ್ಲಿಂದ ಫಾಸಿಯ ಕಂಬ ಚೆನ್ನಾಗಿ ಕಾಣಬರುತ್ತದೆ. ಇವತ್ತು ಕಂಬದ ನಾಲ್ಕೂ ದಿಕ್ಕುಗಳು ಉಜ್ವಲ ಬೆಳಕಿನಿಂದ ಹೊಳೆಯುತ್ತಿವೆ. ಕಾವಲುಗಾರರು ಕಂಬದ ಸುತ್ತಲೂ ಸುತ್ತುವರೆದು ಪಹರೆ ಕೊಡುತ್ತಿದ್ದಾರೆ. ಯಾರಿಗೆ ಗೊತ್ತು.... ಮತ್ತೆ ಯಾರಾದರೂ ವಾರ್ಡರುಗಳಿಗೆ ಲಂಚ ಕೊಟ್ಟು ಕಂಬವನ್ನು ಕೆಲಸಕ್ಕೆ ಬಾರದಿರುವ ಹಾಗೆ ಕೆಡಿಸಿಬಿಟ್ಟರೂ ಬಿಡಬಹುದು ಎಂಬ ಜಾಗರೂಕತೆ ಯಿಂದೇನೋ! ಈ ಕಡೆ ಟಿ.ಬಿ. ವಾರ್ಡಿನಲ್ಲಿರುವ ರೋಗಿಗಳು ಈ ದೀಪಗಳ ಉತ್ಸವ (ದೀಪಾವಳಿ)ವನ್ನು ನೋಡುವರು. ಬಹುಶಃ ಹಾಗೆಯೇ ಅವರ ಹೃದಯವೂ ಒಣಗಿ ಹೋದಂತೆ ಅನ್ನಿಸುತ್ತದೆ. ಬದುಕಬೇಕೆಂಬ ಆಸೆಯಿದ್ದರೂ ಸಹ ಅವರು ಸ್ವಲ್ಪ ಸ್ವಲ್ಪವಾಗಿ ಸಾಯುತ್ತ ಇದ್ದಾರ. ಆದರೂ ಸಹ ಅವರು ಫಾಸಿಯಾಗುವ ಆಸಾಮಿಗಿಂತಲೂ ತಾವೆಷ್ಟೋ ಭಾಗ್ಯವಂತರು ಎಂದುಕೊಳ್ಳುವರು, ಖಂಡಿತ. ಅವರುಗಳ ನಿಟ್ಟುಸಿರನ್ನೂ, ಮರುಕವನ್ನೂ ಪಡೆದು ಸಾಯಬೇಕಾಗಿದೆ ನಾನು. ಆದರೂ ನನ್ನ ಫಾಸಿಯು ಜೈಲಿನ ಒಳಗಡೆ ಒಂದು ಸಮಯಕ್ಕೆ ತಕ್ಕ ಚಾಂಚಲ್ಯವನ್ನೂ ವಿಷಾದವನ್ನು ತರುತ್ತದೆ. ಆದರೆ ಈ ರೋಗಿಗಳ ಸಾವಂತೂ ಯಾರಿಗೂ ತಿಳಿಯದೆ ಆಗಿಹೋಗುತ್ತದೆ. ಅವರ ಹತ್ತಿರದ ಬಂಧುಗಳಿಗೆ ಜೈಲಿನ ಕಡೆಯಿಂದ ಒಂದು ಸರ್ವಿಸ್ ಪೋಸ್ಟ್ ಕಾರ್ಡು ಮಾತ್ರ ತಲಪಿಸಲಾಗುತ್ತದೆ ಮತ್ತು ಜೈಲಿನ ಆಸ್ಪತ್ರೆಯಲ್ಲಿ ಸತ್ತವರ ಸಂಖ್ಯೆಗೆ ಒಂದು ಹೆಚ್ಚಾಗಿ ಸೇರಿಸಲ್ಪಡುತ್ತದೆ. ಇವರು ಸಾಯುವ ರಾತ್ರಿ ನೈಟ್‌ಡ್ಯೂಟಿ ಇರುವ ಡಾಕ್ಟರು ಬಹುಶಃ ತನ್ನ ಹೊದಿಕೆಯೊಳಗಿಂದ ಈಚೆ ಸಹ ಬರಲಿಕ್ಕಿಲ್ಲ. ಆಸ್ಪತ್ರೆಯ ಪಹರೆಯವನು ಮಾತ್ರ ಕೇವಲ ರಾತ್ರಿ ಹೊತ್ತು ಕೂಗುಹಾಕುವಾಗ ಒಳಗಿರುವ ರೋಗಿಗಳ ಸಂಖ್ಯೆಯಲ್ಲಿ ಒಂದನ್ನು ಕಳೆದು ಕೂಗು ಹಾಕುತ್ತಾನೆ. ಮತ್ತು ಗೋಪುರದಲ್ಲಿ ಕೂಗು ಹಾಕುವ ವಾರ್ಡರನು ಅದನ್ನೇ ಕುರಿತು ತಮಾಷೆ ಮಾಡುತ್ತ "ಏಕ್ ಆಸಾಮೀ ಏಕ್‌ದಮ್ ರಿಹಾ!" (ಒಬ್ಬ ಆಸಾಮಿಗ ಒಂದೇ ಸಾರಿಗೆ ಬಿಡುಗಡೆ ಆಗಿಹೋಗಿದೆ) ಎಂದು ನಗುತ್ತ ಕೂಗುತ್ತಾನೆ.

ಹಠಾತ್ತಾಗಿ ರೈಲು ಗಾಡಿಯ ಶಿಳ್ಳು ಕೇಳಬರುತ್ತಿದೆ. ಹನ್ನೆರಡು ಯಾವಾಗ ಹೊಡೆದಾಯಿತು ? ಈಗ ಟ್ರೈನ್ ಬಿಟ್ಟಿದೆ. ಸ್ಟೇಷನ್ನು ಎಷ್ಟೋ ದೂರ ಇದೆ. ಆದರೂ ಪ್ಲಾಟ್‌ಫಾರಮ್ಮಿನಲ್ಲಿ ಆಗುತ್ತಿರುವ ಕೋಲಾಹಲ ಕಿವಿಗೆ ಕೇಳಬರುವಂತಿದೆ. ಪ್ರಯಾಣಿಕರ ಗಡಿಬಿಡಿ, "ಕೂಲಿ, ಕೂಲಿ, ಏಯ್ ಕೂಲಿ.... ಇಧರ್" (ಕೂಲಿ, ಕೂಲಿ ಇಲ್ಲೀ ಇಲ್ಲೀ) ರಾಯತಾರಾ ಸ್ಟೇಷನ್ನಿನ ಸ್ಟೇಷನ್ ಮಾಸ್ಟರು "ಗಂಟೇ ಗಂಟೇ ಹೊಡೆಯೋ" ಎಂದು ಸಿಗ್ನಲರನ್ನು ಕೂಗುವಿಕೆ, ಸಿಗ್ನಲರ್ 'ಟಣ್ ಟಣ್' ಎಂದು ಗಂಟೆ ಹೊಡೆಯುವಿಕೆ...... ಎಲ್ಲಾ!

ಈ ಇಂಜನ್ನಿನ ಶಿಳ್ಳಿನಲ್ಲಿ ಎಂಥ ಮೋಡಿಯಿದೆ! ಇದು ಈ ಜೈಲಿನ ಪರಿಮಿತ ಲೋಕದೊಂದಿಗೆ ಹೊರಗಿನ ವಿಶಾಲ, ಮುಕ್ತ ಭೂಮಂಡಲವನ್ನೇ ಹೊಸೆಯುವ

ಸೂತ್ರ. ಹೃದಯವನ್ನೇ ಪಾರಿಸಿಕೊಂಡು ಹೋಗುವ, ಮನಸ್ಸನ್ನು ತಳಮಳಗೊಳಿಸುವ ಇಂಥ ಕೊಳಲದನಿಗೆ ಸಾಟಿಯಾಗುವುದನ್ನು ಹಿಂದಿನ ವೈಷ್ಣವ ಕವಿ ಯಾರೂ ಕಲ್ಪನೆ ಮಾಡಿಲ್ಲ. ಇವತ್ತು "ಕಾನೇರ್ ಭೀತರ್ ದಿಯಾ ಮರಮೇ ಪಶಿಲ ಗೋ!" (ಕಿವಿಯ ಒಳಹೊಕ್ಕು ಎದೆಯಾಳವನೇ ತಾಕಿತ್ತೆ!) ಎಂಬ ಕವಿಯ ಪಂಕ್ತಿ ಬರೇ ಛಂದೋಬದ್ಧವಾದ ಪದವಿನ್ಯಾಸ ಮಾತ್ರ ಅಲ್ಲ. ಯಾವ ಅಜ್ಞಾತ ಈತರಿನ ಕಂಪನವು ಮನಸ್ಸಿನಲ್ಲಿ ತುಳಿದಿಟ್ಟಿರುವ ತಂತಿಗಳನ್ನು ಈ ಬಗೆಯಾಗಿ ಮಿಡಿಯುವಂತೆ ಮಾಡುತ್ತದೆ? ಸೆಣಬಿನ ಕಾರ್ಖಾನೆಯ ಸೈರನ್ ಬೆಳಗಿನ ಜಾವದಲ್ಲಿ ಕೂಗುವಾಗ ಕೆಲಸಗಾರರ ಗುಡಿಸಲುಗಳಲ್ಲಿ ಗಡಿಬಿಡಿಯುಂಟುಮಾಡುತ್ತದೆ. ಆದರೆ ರೈಲಿನ ಶಿಳ್ಳು ಹಾಗಲ್ಲ. ಜೈಲಿನಲ್ಲಿರುವ ಪ್ರತಿಯೊಬ್ಬ ಖೈದಿಯ ಹೃದಯದಲ್ಲೂ ವೇಗವಾದ ಸ್ಪಂದನವುಂಟುಮಾಡುತ್ತದೆ. ಮನಸ್ಸಿನಲ್ಲಿ ಸುಪ್ತವಾಗಿರುವ ಎಷ್ಟು ಸವಿ ನೆನಪುಗಳನ್ನು ಎಚ್ಚರಿಸುತ್ತದೆ. ಎಷ್ಟು ಅನಿಶ್ಚಿತ ಆಸೆ, ಆಕಾಂಕ್ಷೆಗಳಿಗೆ ಒಂದು ನಿರ್ದಿಷ್ಟ ರೂಪ ಕೊಡುತ್ತದೆ. ರೈಲುಗಾಡಿಯು ಓಡುವ ಶಬ್ದ ಕೇಳಬರುತ್ತಿದೆ. ದೂರದಲ್ಲಿ, ಎಷ್ಟೋ ದೂರದಲ್ಲಿ ಓಡುತ್ತಿದೆ. ಕತ್ತಲಲ್ಲಿ, ಎರಡು ಕಡೆಯೂ ಏನೂ ಕಾಣುವುದಿಲ್ಲ. ಕೇವಲ ಒಂದು ಸೀಮಾಹೀನತೆಯನ್ನು ಮಾತ್ರ ಅನುಭವ ಮಾಡಿಕೊಳ್ಳಬಹುದು. ಯಾವುದೊಂದು ಅಡ್ಡಿ, ತಡೆಯೂ ಇಲ್ಲದ ಸೀಮಾಹೀನತೆ!

ಬಿ.ಎನ್.ಡಬ್ಲ್ಯು ಎಂಬ ಸಂಕೇತ ಬಲಾಯಿಸಿದಂತೆ ಕಾಣುತ್ತದೆ. ಈಗ ಎಲ್ಲಾ ಗಾಡಿಗಳ ಮೇಲೂ ಓ.ಟಿ.ಆರ್ ಅವಧ್-ತಿರ್‌ಹಟ್ ರೈಲ್ವೆ ಎಂದು ಬರೆಯಲ್ಪಟ್ಟಿದೆ. ಬಿ.ಎನ್.ಡಬ್ಲ್ಯು ಎಂಬ ಅಕ್ಷರಗಳು ಯಾವ ಕಾಲದಲ್ಲಾದರೂ ಬದಲಾವಣೆಯಾದೀತೆಂಬ ಯೋಚನೆ ಸಹ ಏನೋ ಒಂದು ಅಸಮಾಧಾನ ಭಾವತರುತ್ತದೆ. ಇದೊಂದು ಆಶ್ಚರ್ಯವೇ. ಪ್ರಪಂಚದಲ್ಲಿ ದಿಕ್ಕು ದಿಕ್ಕುಗಳಲ್ಲೂ ಎಷ್ಟು ಬದಲಾವಣೆಗಳು ಗಳಿಗೆ ಗಳಿಗೆಗೂ ಆಗುತ್ತಿರುತ್ತವೆ. ಆದರೂ ಅವುಗಳ ನಡುವೆಯೂ ನಾವು ಕೆಲವು ಪರಿಚಿತ ವಸ್ತುಗಳದೊಂದು ಸ್ಥಿರವಾದ, ಬದಲಾವಣೆಯಾಗದಿರುವ ರೂಪದ ಬದಲು ಬೇರೊಂದನ್ನು ಕಲ್ಪನೆ ಸಹ ಮಾಡಲಾಗುವುದಿಲ್ಲ.

ಉದಾಹರಣೆಗೆ, ನನ್ನ ತಂದೆಯ ಮೀಸೆ, ದಾಡಿಗಳನ್ನು ಬೋಳಿಸಿದ ಮುಖವನ್ನು ನಾನು ಎಂದಿಗೂ ಕಲ್ಪನೆ ಮಾಡಿಕೊಳ್ಳಲಾರೆ. ಯೋಚಿಸಿದರೆ ನಗು ಬರುತ್ತದೆ ಛೇ.... ಎಲ್ಲಾದರೂ ಉಂಟೆ? ಕೇವಲ ರೈಲ್ ಗಾಡಿಯ ಶಬ್ದವೊಂದೇ ಅಲ್ಲ.... ಹೊರಗಡೆಯ ಯಾವ ಶಬ್ದವಾಗಲಿ, ಜೈಲ್ ಕ್ವಾರ್ಟರ್ಸಿನ ನಾಯಿ ಬೊಗಳುವ ಶಬ್ದ ಸಹ ಕೇಳಲು ಇಂಪಾಗಿರುತ್ತದೆ. ಅವತ್ತೊಂದು ದಿನ ಜೈಲಿನ ಹೊರಗಡೆಯ ರಸ್ತೆಯಲ್ಲಿ ಹುಡುಗರ ಗುಂಪೊಂದು "ಪಿ, ಪಿ, ಹುರ್ರೇ!" ಎಂದು ಕೇಕೆ ಹಾಕುತ್ತ ಹೋದರು. ಈ ಧ್ವನಿಯು ಎಷ್ಟು ಹಳೆಯ ನೆನಪುಗಳ ಸಂಪರ್ಕವನ್ನು ಮನಸ್ಸಿಗೆ ತರುತ್ತದೆ! ಚಿಕ್ಕ ಹುಡುಗರನ್ನು, ಹುಡುಗಿಯರನ್ನು ನೋಡಿ ಎಷ್ಟು ದಿನಗಳಾದುವೋ! ಹಾಫ್ ಪ್ಯಾಂಟನ್ನು ಧರಿಸಿರುವ ಒಂಬತ್ತು, ಹತ್ತು ವರುಷ ವಯಸ್ಸಿನ ಕ್ಯಾಪ್ಟನ್ .ನೀಲೂ ಯಾವುದೋ ಒಂದು ಟೋರ್ನಮೆಂಟಿನ ಕಪ್ಪನ್ನು

ಎತ್ತಿಹಿಡಿದು ಧ್ವನಿ ಒಡೆಯುವಂತೆ "ಹಿಪ್, ಹಿಪ್, ಹುರ್ರೇ" ಎಂದು ಕಿರಿಚುತ್ತ ಇದ್ದಾನೆ. ಸೆಕೆಯಿಂದ, ದೇಹಶ್ರಮದಿಂದ ಮತ್ತು ಉಸಿರೆತ್ತಿ ಅರಚುವುದರಿಂದ ಮುಖ ಕೆಂಪಗಾಗಿ ಹೋಗಿದೆ. ಮಧ್ಯಾಹ್ನ ಮೂರುಗಂಟೆಗೆ, ಮತ್ತು ರಾತ್ರಿ ಹನ್ನೆರಡೂವರೆ ಗಂಟೆಗೆ ಕೂಗುತ್ತದೆ ರೈಲ್ ಗಾಡಿಯ ಶಿಳ್ಳು, ಬೆಳಗ್ಗೆ ಐದು ಗಂಟೆಗೆ ಮತ್ತು ಸಂಜೆ ಆರೂವರೆ ಗಂಟೆಗೆ ಸ್ಟೀಮರಿನ ಸ್ವರನ್ನು ಕೂಗುತ್ತದೆ. ಇದು ನನ್ನ ಗಡಿಯಾರ. ಸೆಲ್ಲಿನ ಎದುರುಗಡೆ ಬೀಳುವ ನೆರಳಿಗಿಂತಲೂ ಎಷ್ಟೋ ಮಟ್ಟಿಗೆ ನಿಶ್ಚಿತವಾದ ನನ್ನ ಗಡಿಯಾರ. ಇದು ನನ್ನ ಕಲ್ಪನಾ ವಿಲಾಸದ ಸಂಗಡಿಗ. ಆಗಾಗ ಏರೋಪ್ಲೇನಿನ ಶಬ್ದ ಕೂಡ ಕೇಳಬರುತ್ತದೆ ನನಗೆ. ರಾತ್ರಿಯಲ್ಲಿ ಅಂತೂ ಪ್ರತಿ ಎರಡು ಗಂಟೆಗೊಂದು ಹಾರಿ ಹೋಗುತ್ತದೆ. ಬಹುಶಃ ಅಸ್ಸಾಮ್, ಯುದ್ಧರಂಗಕ್ಕೆ ಟಪಾಲು ತೆಗೆದುಕೊಂಡು ಹೋಗುತ್ತದೆಂದು ತೋರುತ್ತದೆ. ಆದರೆ ಈ ಶಬ್ದ ಮಾತ್ರ ಮನಸ್ಸಿನಲ್ಲಿ ಯಾವ ನೆನಪಿನ ನರುಗಂಪನ್ನೂ ಎಚ್ಚರ ಮಾಡುವುದಿಲ್ಲ. ಏನೋ ಒಂದಿಷ್ಟು, ಒಂದು ಗಳಿಗೆಯ ಕುತೂಹಲ ಮಾತ್ರ. ಪ್ರತಿ ನಿತ್ಯ ಎಲ್ಲಿಗೆ ಹೋಗುತ್ತದೆ. ಹೋಗುವ ದಾರಿಯನ್ನು ಹೇಗೆ ತಿಳಿದುಕೊಂಡು ಹೋಗುತ್ತದೆ. ಕಂಪಾಸ್ ಮ್ಯಾಪ್, ರೈಲ್ವೆ ಲೈನ್ ಮತ್ತು ಗಂಗಾ ನದಿ ಇವಲ್ಲದೆ ಬೇರೇನು, ದಾರಿ ತೋರಿಸಲಿಕ್ಕೆ? ಹಗಲು ವೇಳೆ ಅವತ್ತೊಂದು ದಿನ ಅನೇಕ ಏರೋಪ್ಲೇನ್ ಒಟ್ಟಿಗೇ ಹಾರಿ ಹೋಗುತ್ತಿದ್ದುವು. ನಾನು ಸೆಲ್ಲಿನ ಒಳಗಡೆ ಕೂತು, ಒಂಬತ್ತು ಮತ್ತು ಹತ್ತನೆಯ ನಂಬರ ಸೆಲ್ಲುಗಳಲ್ಲಿರುವ ಬಾಂಬ್ ಕೇಸಿನ ಇಬ್ಬರು ಖೈದಿಗಳು ನನಗೆ ತಿಳಿಯಲೆಂದು "ಒಂದು.... ಎರಡೂ.... ಮೂರು.... ನಾಲ್ಕು" ಎಂದು ಗಟ್ಟಿಯಾಗಿ ಕೂಗಿದುದನ್ನು ಕೇಳಿದೆ. ಆದರೂ ಯಾಕೋ ಏನೋ ಹೇಳಲಾರೆ. ಈ ಏರೋಪ್ಲೇನ್ ಶಬ್ದ ನನ್ನ ಮನಸ್ಸಿನಲ್ಲಿ ಯಾವ ಪ್ರತಿಕ್ರಿಯೆಯನ್ನೂ ಹುಟ್ಟಿಸುವುದಿಲ್ಲ. ನನಗೆ ಗುರುತಿರುವ ಜಗತ್ತಿನ ನಡುವೆ ಇದಕ್ಕೆ ಸ್ಥಳವಿಲ್ಲ. ಇದಕ್ಕೆ ಕಾರಣ, ಮಣ್ಣಿನ ಸಂಗಡ ಇದಕ್ಕೆ ಇರುವ ಸಂಬಂಧ ತುಂಬ ಅಲ್ಪ. ಇದೇ ಕಾರಣದಿಂದ ಎಂದು ಕಾಣುತ್ತದೆ, ಆಕಾಶದಲ್ಲಿ ಹಾರಾಡುವ ರಣಹದ್ದು, ಕಾಗೆ, ಡೇಗೆ, ಮುಂತಾದ ಹಕ್ಕಿಗಳು ನನ್ನ ನೋಟವನ್ನೇನೋ ಸೆಳೆಯಬಹುದು. ಆದರೆ ಮನಸ್ಸಿನಲ್ಲಿ ಯಾವ ಭಾವನೆಯನ್ನು ಉಂಟುಮಾಡುವುಲ್ಲ. ಇವುಗಳನ್ನು ನೋಡುತ್ತಿದ್ದರೆ ಜೈಲಿನಲ್ಲಿ ಒಂದೇ ಸಮನಾಗಿ ಕೂತು ಇರುವ ಬೇಸರವೇನೋ ಕಳೆಯಬಹುದು. ಆದರೆ ಅದಕ್ಕೆ ಮೇಲೆ ಇಲ್ಲ. ವಿರಹಿಯಾದ ಯಕ್ಷ ಯಾವುದೋ ಮೋಡವನ್ನು ದೂತನಾಗಿ ಮಾಡಿಕೊಂಡದ್ದೂ, ವಿರಹಣಿಯಾದ ರಾಧೆ ಹಾರುತ್ತಿರುವ ಹಂಸವನ್ನು ದೂತನಾಗಿ ಮಾಡಿಕೊಂಡದ್ದೂ ಕೇವಲ ಕವಿಗಳ ಕಲ್ಪನೆ. ವಾಸ್ತವ ಜಗತ್ತಿನ ಜೀವಂತ ಮನುಷ್ಯರ ನಿಜವಾದ ಅನುಭವದ ಮುದ್ರೆ ಇವುಗಳ ಮೇಲೆ ಕಾಣಬರುವುದಿಲ್ಲ.

ವಾರ್ಡರುಗಳು ಕೂತುಕೂತು ತೂಕಡಿಸುತ್ತಿದ್ದಾರೆ. ನಿತ್ಯ ಬರುವ ಆ ಬೆಕ್ಕು ಮೆಲ್ಲ ಮೆಲ್ಲಗೆ ನನ್ನ ಕಡೆ ಬರುತ್ತಿದೆ. ಇದ್ದಕ್ಕಿದ್ದ ಹಾಗೆ ಗಾಬರಿಗೊಂಡು ಮಧ್ಯ ನಿಂತುಬಿಟ್ಟಿದೆ. ಬಹುಶಃ ನಾನು ಬಾಗಿಲ ಬಳಿ ಕೂತಿರುವುದನ್ನು ಕಂಡು ಮುಂದೆ ಬರಲು ಧೈರ್ಯವಿಲ್ಲ. ಪ್ರತಿದಿನ ಮತ್ತು ರಾತ್ರಿ ತಟ್ಟೆ ನೆಕ್ಕುವುದಕ್ಕೆ ಬರುತ್ತದೆ. ಆದರೆ ಏನು ಸಿಗುತ್ತದ ಅದಕ್ಕೆ? ವಾರಕ್ಕೆ ಒಂದು ಸಲ ಅಲ್ಪಸ್ವಲ್ಪ ಮೊಸರಿರಬಹುದು.

ಆದರೆ ಬೇರೆ ದಿನಗಳಲ್ಲಿ ಏನಿರುತ್ತದೆ? ಜೈಲಿನಲ್ಲಿರುವುದರಿಂದ ಆಗಾಗ ಸ್ವಲ್ಪ ಮಾಂಸ, ಮೀನು ಇಂಥಾದ್ದು ಸಿಗಬಹುದು. ಆಶ್ರಮದಲ್ಲಿ ನಮ್ಮ ಸಹದೇವನ ನಾಯಿ ಒಂದಿತ್ತು. ಅದಕ್ಕೂ ಮಾಂಸಾಹಾರವೇ ಇಷ್ಟ ಎಂಬುದನ್ನು ಗಮನಿಸಿದ್ದೆ. ಈಗ ಎಲ್ಲಿದೆಯೋ ಆ ನಾಯಿ? ಬಹುಶಃ ಸಹದೇವನ ಅಣ್ಣ ಅದನ್ನು ತನ್ನ ಮನೆಗೆ ಕೊಂಡುಹೋಗಿರುತ್ತಾನೆ. ಲಾಟೀನಿನ ಬೆಳಕಿನಲ್ಲಿ ಈ ಬೆಕ್ಕಿನ ಮೈಬಣ್ಣ ಹೊಳೆಯುತ್ತಿದೆ. ಹುಲಿಯ ಚರ್ಮದಂತೆ ಹಳದಿ, ಕಪ್ಪು, ಕಂದು ಬಣ್ಣಗಳ ಪಟ್ಟೆಗಳಿವೆ ಅದರ ಮೈಮೇಲೆ. ನೋಡಲಿಕ್ಕೆ ಚೆನ್ನಾಗಿದೆ ಬೆಕ್ಕು. ಅವತ್ತಿನ ದಿನ ಜೈಲರ್ ಸಾಹೇಬ ಅದನ್ನು ನೋಡಿ ತಮಾಷೆ ಮಾಡಿದ... "ಓಹೋ, ಬೆಕ್ಕಿನ ಜತೆ ಸಲಿಗೆ ಬೆಳಿಸಿಕೊಂಡಿದ್ದೀರೋ.... ಏನು ಹೆಸರಿಟ್ಟಿದ್ದೀರಿ ಅದಕ್ಕೆ?" ಎಂದರು. "ಇಲ್ಲ.... ಹೀಗೇ ಬಂದಿದೆ, ಅಷ್ಟೆ!" ಎಂದೆ.... "ಓಹೋ... ಹಾಗಾ? ಟೋಜೋ ಅಂತ ಹೆಸರಿಟ್ಟುಬಿಡಿ" ಎಂದು ತನ್ನ ಬುದ್ಧಿವಂತಿಕೆಗೆ ತಾನೇ "ಹೋ ಹೋ" ಎಂದು ನಗತೊಡಗಿದರು ಜೈಲರು. ಆತನು ನಕ್ಕರೆ ಫಳಫಳ ಹೊಳೆಯುವ ಬಿಳೀ ಹಲ್ಲುಗಳು ಕಾಣಬರುತ್ತವೆ– ಟೂತ್‌ಪೇಸ್ಟಿನ ಜಾಹೀರಾತಿನಂತೆ!

ನಾನು ಬೆಕ್ಕಿಗೆ ದಾರಿಬಿಡೋಣವೆಂದು ಎದ್ದು ಒಂದು ಪಕ್ಕಕ್ಕೆ ಸರಿದು ನಿಂತೆ. ನನ್ನನ್ನು ನೋಡಿ ಬೆಕ್ಕು ಒಮ್ಮೆ "ಮಿಯಾವ್" ಎಂದಿತು. ನನಗೆ ನಂಬುವುದಕ್ಕೇ ಸಾಧ್ಯವಾಗಲಿಲ್ಲ. ಅನ್ನದ ತಟ್ಟೆಯ ಒಳಗಿಂದ ಒಂದು ತರಕಾರಿ ಹೋಳನ್ನು ಕೈಯಲ್ಲಿ ತೆಗೆದುಕೊಂಡೆ. ಬೆಕ್ಕು ನುಗ್ಗೇಕಾಯಿ ತಿನ್ನುತ್ತೇನು? ಒಂದು ಚೂರನ್ನು ಬೆಕ್ಕಿನ ಕಡೆ ಎಸೆದೆ. ಅದು "ಮಿಯಾವ್" ಎನ್ನುತ್ತ ಓಡಿಹೋಯಿತು. ತರಕಾರಿ ಹೋಳು ಸಲಾಕೆಗೆ ಅಂಟಿಕೊಂಡುಬಿಟ್ಟಿತ್ತು ಬಾಗಿಲ ಹೊರಗಡೆ ಹೋಗಲಿಲ್ಲ.

ಒಮ್ಮೆ ನಾನೂ, ನೀಲೂ ಆಶ್ರಮದಲ್ಲಿ ಅಮ್ಮನ ಮಂಚದ ಮೇಲೆ ಕೂತು ಕಿತ್ತಳೇ ಹಣ್ಣು ಸುಲಿದುಕೊಂಡು ತಿನ್ನುತ್ತಿದ್ದೆವು. ಕಿತ್ತಳೆಹಣ್ಣಿನ ಸಿಪ್ಪೆಯನ್ನು ಕಿಟಕಿಯ ಹೊರಗೆ, ಸಲಾಕೆಗಳಿಗೆ ತಗುಲದಂತೆ ಎಸೆಯಬೇಕೆಂಬ ಪೈಪೋಟಿ ಮಾಡಿಕೊಂಡೆವು, ನಾವಿಬ್ಬರೂ. ಆದರೆ ಆಶ್ಚರ್ಯ ನಾವು ಎಸೆದದ್ದೆಲ್ಲ ಹೆಚ್ಚಾಗಿ ಕಿಟಕಿಯ ಕಂಬಿಗಳಿಗೇ ತಗಲುತ್ತವೆ. ಕಿಟಕಿಗೆ ಇರುವ ಕಂಬಿಗಳು ತಾನೇ ಎಷ್ಟು, ಅವುಗಳು ಆಕ್ರಮಿಸಿರುವ ಜಾಗ ತಾನೇ ಎಷ್ಟು? ಆದರೂ ಏಕೋ ಏನೋ ಈ ಸಿಪ್ಪೆಗಳು ಅವಕ್ಕೆ ತಗುಲದೆ ಹೋಗುವ ಹಾಗೇ ಇಲ್ಲ.

ಎಲ್ಲೆಲ್ಲೋ ಸುತ್ತಿಕೊಂಡು ಅಂತೂ ನೀಲುವಿನ ನೆನಪೇ ಹೆಚ್ಚಾಗಿ ಬರುತ್ತಿದೆ. ಯಾಕೋ? ಬಹುಶಃ ಯಾವುದನ್ನು ಹೆಚ್ಚಾಗಿ ಮರೆಯಬೇಕೆಂದು ಪ್ರಯತ್ನಿಸುತ್ತೇವೋ ಅದೇ ಮತ್ತೆ ಮತ್ತೆ ನೆನಪಿಗೆ ಬರುತ್ತೇನೋ! ಪೂರ್ತಿಯಾಗಿ ತಿಳುವಳಿಕೆಯಿಂದಲೇ ಯಾವುದನ್ನು ನಾನು ಇದುವರೆಗೆ ಪದೇ ಪದೇ ಮನಸ್ಸಿನಲ್ಲಿ ಹೇಳಿಕೊಂಡು ಬಂದಿದ್ದೇನೋ ಅದನ್ನೇ ನನ್ನ ಅವಚೇತನವು (sub-conscious) ಏಕೆ ಸ್ವೀಕರಿಸಬಾರದು? ಖಂಡಿತವಾಗಿಯೂ ನಮ್ಮ ನೀಲೂ ತನ್ನ ಪಾರ್ಟಿಗೆ ಕರ್ತವ್ಯನಿಷ್ಠನಾಗಿರಬೇಕೆಂದೇ ನನ್ನ ವಿರುದ್ಧವಾಗಿ ಸಾಕ್ಷ್ಯ ಹೇಳಿರುವುದು ಎಂದು ನನಗೆ ಗೊತ್ತು. ಬೇರೆ ಯಾವ ಸತ್ಯಸಂಧನಾದ ಮತ್ತು ಕರ್ತವ್ಯಜ್ಞಾನವುಳ್ಳ ರಾಜಕೀಯ ಕೆಲಸಗಾರನಿಗಾದರೂ ಈ ದಾರಿ ಬಿಟ್ಟರೆ ಬೇರೆ ಇಲ್ಲ.... ನಿಜ. ಆದರೆ

ಇದು ಬರೇ ತರ್ಕಕ್ಕೆ ಒಪ್ಪುವ ಮಾತು ಮಾತ್ರ. ಆದರೆ ಅವಚೇತನ ಎಂದು ಯಾವುದಕ್ಕೆ ಅನ್ನುತ್ತಾರೋ ಅದು ಏನೆನ್ನುತ್ತದೆಂದರೆ ಈ ತರ್ಕ ಕೋರ್ಟಿನಲ್ಲಿ ಒಪ್ಪಿಗೆ ಪಡೆಯಬಹುದು. ಪುಸ್ತಕದಲ್ಲಿ ಮುದ್ರಿತವಾದರೆ ಓದುವುದಕ್ಕೆ ಚೆನ್ನಾಗಿರಬಹುದು, ಆದರೆ ಬೇರೆ ಎಲ್ಲೂ ಇದಕ್ಕೆ ಬೆಲೆಯಿಲ್ಲ. ಅದು ಹಾಗಾಗದೇ ಹೋದರೆ ನೀಲುವಿನ ಮಾತೇ ಎಲ್ಲೆಲ್ಲೋ ಸುತ್ತಿಕೊಂಡು ಮತ್ತೆ ಮತ್ತೆ ಏಕೆ ನೆನಪಿನಲ್ಲಿ ಬರುತ್ತಾ ಇರುತ್ತದೆ ? ತನ್ನ ಸ್ವಂತ ಪಾರ್ಟಿಯ ಕಡೆ ಏಕನಿಷ್ಠತೆಯನ್ನು ತೋರುವ ಸಲುವಾಗಿ ಒಡಹುಟ್ಟಿದವನಾದ ಸ್ವಂತ ಅಣ್ಣನಿಗೇ ಫಾಸಿಯಾಗುವಂತೆ ಮಾಡುವುದು ಅವನ ಹೃದಯದ ಸತ್ಯದ ಪ್ರಮಾಣವೇ ಅಥವಾ ರೋಗಗ್ರಸ್ತವಾದ ಮನಸ್ಸಿನ ಮಡಿವಂತಿಕೆಯ ಆಡಂಬರವೆ ? ಬಹುಶಃ ನೀಲೂ ಮಾಡಿದ ಕೆಲಸವನ್ನು ನಾನು, ಅಂದರೆ ನನ್ನ ಅಂತರಾಳದ ನಿಜವಾದ "ನಾನು" ಏನಾದರೂ ಸರಿ, ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಅದಕ್ಕಾಗೇ ಬಹುಶಃ ಹೊರಗಿನ "ನಾನು" ಹಳೆಯ ಅನುಭವಗಳ ನೆನಪಿನ ಜೇನುತುಪ್ಪದಿಂದ ಈ ಚಿತೆಯ ಉರಿಯನ್ನು ಸ್ವಲ್ಪವಾದರೂ ತಣ್ಣಗೆ ಮಾಡಲು ಯತ್ನಿಸುತ್ತಿದ್ದೇನೆ.

ಮತ್ತೆ ಎದ್ದು ಬಾಗಿಲ ಪಕ್ಕದಲ್ಲಿ ಕೂಡುತ್ತೇನೆ. ಈ ಸಲ ಎಡಭಾಗದಲ್ಲಿ ಭಾರ ಊರುತ್ತೇನೆ. ಎಡಗೈಯಿಂದ ಸಲಾಕೆಗಳನ್ನು ಹಿಡಿದು ಕೂಡುವುದು ಎಷ್ಟು ಸ್ವಾಭಾವಿಕ, ಎಷ್ಟು ಹಾಯಾಗಿರುತ್ತದೋ ಅಷ್ಟು, ಬಲಗಡೆ ಭಾರ ಊರಿ ಕೂತರೆ ಆಗುವುದಿಲ್ಲ. ಬಹಳ ಆಳವಾದ ಸ್ಥಳದಲ್ಲಿ ಕೂತಿದ್ದೇನೆ.... ಹೇಗೆಂದರ ದೊಡ್ಡ ಮುಂದಿ ಆನೆಯ ಬೆನ್ನ ಮೇಲೆ ಮಾವುತನ ಹಿಂದುಗಡೆಯೇ ಕೂತಿರುವ ಹಾಗೆ ಅನ್ನಿಸುತ್ತದೆ. ಎಂಥ ವಿಚಿತ್ರ ಭಾವನೆ ಬರುತ್ತದೆ ನನಗೆ ? ಈ ವಿಚಿತ್ರ ಭಾವನೆ ಹೇಗೆ ಬಂತು ?

ಹ್ಞಾ..... ಈಗ ಜ್ಞಾಪಕಕ್ಕೆ ಬಂತು. ಹಿಂದೆ ಒಂದು ಸಲ, ಕಾರಹಾಗೋಲಾದ ಧನಿಕ ಗೃಹಸ್ಥ ಧನಪತ್ ಜಾದವನ ಊರಿಗೆ ಹೋಗಿದ್ದೆ. ಪೋಲೀಸರು ಅವನೊಬ್ಬ ಡಕಾಯಿತ ದಳದ ಮುಖ್ಯಸ್ಥನೆಂದು ಅನುಮಾನಪಟ್ಟಿದ್ದರು. ಅವನ ಮೇಲೆ ಕೇಸು ನಡೆಸಬೇಕೆಂದೂ ಅಭಿಪ್ರಾಯಪಟ್ಟಿದ್ದರು. ಬಿಹಾರಿನಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರದಲ್ಲಿರುವ ಕಾಲ, ಅದು. ಆ ಮನುಷ್ಯ ನಮ್ಮನ್ನು ತನ್ನ ಗ್ರಾಮದಲ್ಲಿ ಸಭೆ ಸೇರಿಸಬೇಕೆಂಬ ನೆಪದಿಂದ ಕರೆದುಕೊಂಡುಹೋಗಿದ್ದ. ಆದರೆ ಉದ್ದೇಶ್ಯ, ಅಲ್ಲಿನ ಪೋಲೀಸ್ ಇನ್‌ಸ್ಪೆಕ್ಟರನ್ನು ಹೆದರಿಸಬೇಕೆಂದು. ಆಗ ಪೋಲೀಸರಿಗೆ ತಾನೊಬ್ಬ ಕಾಂಗ್ರೆಸ್ ಪಕ್ಷದವನೆಂದು ಗೊತ್ತಾಗುತ್ತದಲ್ಲ. ಅದಕ್ಕಾಗಿ ಸಭೆ ತುಂಬ ಜೋರಾಗೇ ನಡೆಯಿತು. ಗಡತ್ತಾದ ಊಟ-ತಿಂಡಿಗಳೆಲ್ಲ ಆದಮೇಲೆ ಜಾದವನು "ನಡೀರಿ, ಶಿಕಾರಿಯ ಏರ್ಪಾಡು ಮಾಡಿದ್ದೇನೆ" ಅಂದ. ಜಾಲಿ ಮತ್ತು ಕಾಡು ಗುಲಾಬಿ ಗಿಡಗಳ ಅಡವಿ ಅದು. ಆನೆಯ ಮೇಲೆ ಸವಾರಿ ಮಾಡಿಕೊಂಡು ಹೊರಟೆದ್ದೇನೆ. ನಾನು ಮಾವುತನ ಹಿಂದೆಯೇ ಕೂತಿದ್ದ. ಮುದಿ ಆನೆ ಅದು. ಅದರ ಕುತ್ತಿಗೆಯ ಬಳಿ ದೊಡ್ಡದೊಂದು ಹಳ್ಳದ ಹಾಗೆ ಆಗಿಹೋಗಿದೆ. ನಾನು ಅದರಲ್ಲಿ ಚೆನ್ನಾಗಿ ಪದ್ಮಾಸನ ಹಾಕಿಕೊಂಡು ಆರಾಮವಾಗಿ ಕೂತಿದ್ದೆ. ಜಂಗಲು ಶುರು ಆಯಿತು. ಹಾಗೇ ಸ್ವಲ್ಪ ದೂರ ಮುಂದೆ ಹೋದೆವು. ಎದುರಿಗೆ ಬಲು ದೊಡ್ಡದಾದ ಅರಳೀಮರ. ಪಠಾತ್ತಾಗಿ ನಮ್ಮ ಆನೆಗೆ

ಈ ಅರಳೀಮರದ ಎಲೆಗಳನ್ನು ತಿನ್ನಬೇಕೆಂದು ಆಸೆಯಾಯಿತು. ಸೊಂಡಿಲನ್ನ ಎತ್ತಿ ಒಂದು ಸಣ್ಣ ರೆಂಬೆಯನ್ನು ಮುರಿಯಲು ಯತ್ನಿಸಿತು. ಒಂದೇ ಒಂದು ನಿಮಿಷದಲ್ಲಿ ನನಗೇನಾಗಿಹೋಯಿತು ಎಂದು ಯೋಚಿಸುತ್ತ ತಬ್ಬಿಬ್ಬಾಗಿ ಬಿಟ್ಟೆ. ಒರಳು ಕಲ್ಲಿನಲ್ಲಿ ನನ್ನನ್ನ ತುರುಕಿ ಯಾರೋ ಪುಡಿ ಪುಡಿ ಮಾಡತೊಡಗಿದ್ದಾರೆ ಅನ್ನಿಸಿತು. ಹಳ್ಳದಂತೆ ಇದ್ದ ಕಡೆ ಕೂತಿದ್ದೆನಲ್ಲ; ಆನೆ ತಲೆಯನ್ನು ಮೇಲೆ ಎತ್ತಿದೊಡನೆ, ಅದು ಸಂಕುಚಿತವಾಗಿ ನನ್ನ ಮೈಯ ತಳಭಾಗ ಜಜ್ಜಿದಂತಾಗಿ ಹೋಗಿತ್ತು. ನಾನು ನೋವಿನಿಂದ ಕಿರುಚಿದೆ. ಮಾವುತನು ಕೂಡಲೇ ನನ್ನ ಅವಸ್ಥೆ ನೋಡಿದ್ದೇ ಆನೆಯ ಸೊಂಡಿಲನ್ನು ಇಳಿಸಿಬಿಟ್ಟ. ಸದ್ಯ ಬದುಕಿದೆನಲ್ಲ ಎನ್ನುತ್ತ ನಾನೂ ಆನೆಯ ಬೆನ್ನಿಂದ ಇಳಿದುಬಿಟ್ಟೆ. ನನ್ನ ಕಾಲುಗಳು ಎರಡೂ ಸ್ವಾಧೀನ ತಪ್ಪಿದಂತೆ ಆಗಿಬಿಟ್ಟಿದ್ದುವು.

ನನ್ನ ಸೆಲ್ಲಿನ ವಾರ್ಡರು ಹೊರಗಡೆ ಗೋಡೆಗೆ ಒರಗಿಕೊಂಡು ತೂಕಡಿಸುತ್ತ ಇದ್ದಾನೆ. ಅವನ ಪಗಡಿ (ರುಮಾಲು)ಯನ್ನು ತೆಗೆದು ಪಕ್ಕದಲ್ಲಿ ಇಟ್ಟುಕೊಂಡಿದ್ದಾನೆ. ಮೂರನೆಯ ನಂಬರ ಸೆಲ್ಲಿನ ವಾರ್ಡರನು ಸಹ ಬಹುಶಃ ನಿದ್ದೆ ಮಾಡುತ್ತಿರಬೇಕು. ಹೊರಗಡೆಯ ವಾರ್ಡರು ಓಡಾಡುತ್ತಿರುವುದು ಕೇಳಬರುತ್ತಿದೆ. ಎಲ್ಲ ಸೆಲ್ಲುಗಳೂ ನಿಶ್ಶಬ್ದ. ಎಲ್ಲರೂ ನಿದ್ದೆ ಮಾಡುತ್ತಿರಬೇಕು. ಹುಚ್ಚನೂ ನಿದ್ದೆ ಮಾಡುತ್ತಿದ್ದಾನೇನು ? ಬಾಂಬು ಕೇಸಿನ ಖೈದಿಗಳಿಬ್ಬರು ದೀಪ ಹತ್ತಿಸಿಕೊಂಡು ಓದುತ್ತಿದ್ದಾರೆಂದು ಕೊಂಡಿದ್ದೇನೆ. ಯಾವುದೋ ಶಬ್ದ... ಜೀರುದುಂಬಿಯದಿರಬೇಕು. ಆದರೆ ನಮ್ಮ ಆಶ್ರಮದಲ್ಲಿ ಕೇಳಬರುತ್ತಿತ್ತಲ್ಲ, ಅದರಂತೆ ಏಕತಾನ ಸಜೀವವಾಗಿಲ್ಲ. ಮಾಗಿಯ ಕಾಲದ ರಾತ್ರಿ, ಚಿಕ್ಕವನಾಗಿದ್ದಾಗ ನಿದ್ದೆಗೆ ಭಂಗವಾಗದೆ ಜೀರುದುಂಬಿಗಳ 'ಜೀ' ಎಂಬ ದನಿ ಯಾವುದೋ ಒಂದು ರಹಸ್ಯದ ರಂಗಮಹಲನ್ನು ತೆರೆಯುತ್ತಿತ್ತು. ಈ ಶಬ್ದ ಅಂಥದಲ್ಲ. ಅಷ್ಟು ಶಕ್ತಿಯಿಲ್ಲ ಇದಕ್ಕೆ. ನೀಲೂ ಇದೊಂದು ಬಗೆಯ ಇರುವೆಗಳ ಕೂಗು ಎಂದು ಹೇಳುತ್ತಿದ್ದ. ಅವನೊಂದಿಗೆ ತರ್ಕ ಮಾಡುವವರು ಯಾರು ? ಜೈಲಿನ ವಾತಾವರಣಕ್ಕೆ ಜೀರುದುಂಬಿಯ ಕೂಗು ಹೊಂದಿಕೊಳ್ಳುವುದಿಲ್ಲ. ಜೈಲಿನ ನಿತ್ಯಗಟ್ಟಲೆ ಖೈದಿಗಳ ಸಂಖ್ಯೆ ಎಣಿಸಿ ಕೂಗುವಿಕೆ, ಪೌಳೀಗೋಡೆ, ಬೇಡಿ ಸಂಕೋಲೆಗಳು ಇಂಥವುಗಳ ನಡುವೆ ವಿಲಾಸದ ವಸ್ತು ಜೀರುದುಂಬಿಯ ಕೂಗು ಎಷ್ಟು ಸಾಧಾರಣ ವಿಲಾಸವಾದರೂ ಹೊಂದಿಕೊಳ್ಳುವುದು ಹೇಗೆ ?

ದಡಬಡವೆಂದು ಶಬ್ದ ಮಾಡುತ್ತ ಹೊಸ ವಾರ್ಡರುಗಳ ದಳ ಒಳಗೆ ಬಂತು. ಅಂದರೆ ಈಗ ಒಂದುಗಂಟೆ ಹೊಡೆದಿರಬೇಕು. ಇವರು ಖಂಡಿತ ಮೂರು ಮಂದಿ ಇರುತ್ತಾರೆ, ಒಬ್ಬ ನನ್ನ ಸೆಲ್ಲಿಗೆ, ಇನ್ನೊಬ್ಬ ಎರಡನೆಯ ನಂಬರ ಸೆಲ್ಲಿಗೆ, ಮೂರನೆಯುವನು ಈ ವಾರ್ಡಿಗೆಲ್ಲಕ್ಕೂ. ಒಬ್ಬ ನನ್ನ ಸೆಲ್ಲಿನ ಅಂಗಳದೊಳಗೆ ಹೊಕ್ಕ. ನಿದ್ದೆ ಮಾಡುತ್ತ ಇದ್ದ ವಾರ್ಡರು ಪಗಡಿಯನ್ನು ಪಕ್ಕದಲ್ಲಿಟ್ಟುಕೊಂಡಿದ್ದನಲ್ಲ. ಆ ಪಗಡಿಯನ್ನು ಈ ವಾರ್ಡರು ಎತ್ತಿ ಹೊರಗಡೆ ಇಟ್ಟು ಬಂದ. ಆಮೇಲೆ ನಿದ್ರಿಸುತ್ತಿದ್ದವನನ್ನು ಕೂಗಿ ಎಬ್ಬಿಸಿದ, "ಏ ಹೈದರ್, ಇವತ್ತು ಏನು ಇಲ್ಲೇ ನಿದ್ದೆ ಮಾಡಬೇಕು ಅಂತ ಇದ್ದೀಯಾ ?" ಅವನು ಆಗ ತಟಕ್ಕನೆ ಎದ್ದು ನಿಂತ. "ಜೈಲರ್ ಸಾಹೇಬರು ಬಂದಿಲ್ಲವಲ್ಲಾ, ಯಾರು ಕಿಸನ್‌ಚಂದನಲ್ಲ ? ಹೊಸದಳ ಬಂದು

ಹೋಯಿತಲ್ಲ? ಹೇ, ಭಾಯಿ, ತಮಾಷೆ ಮಾಡಬೇಡ. ನನ್ನ ಪಗಡಿ ಎಲ್ಲಿ ಇಟ್ಟಿದ್ದೀಯ, ಹೇಳು" ಎಂದು ಕೇಳಿದ. ಹೊಸ ಸಿಪಾಯಿ, "ಅರೇ, ನನಗೇನು ಗೊತ್ತೈತೆ ಹೋಗ್! ವಾರೇವ್ವಾ! ನಾನು ಈಗ ತಾನೇ ಬಂದೆ." ಎಂದು ಕಪಟ ಕೋಪ ತೋರಿಸಿದ. ಹೈದರನು ಮೊದಲಲ್ಲಿ ನಂಬಲಿಲ್ಲ. ಆಮೇಲೆ ಗಾಬರಿಯಿಂದ ಅವನ ಮುಖ ಬಣ್ಣಗೆಡುತ್ತದೆ. ಅವನು ಹೊಸಬ. ಮೊನ್ನೆ ಮೊನ್ನೆ ಅವನಿಗೆ ಈ ಹೊಸ ಚಾಕರಿಯಲ್ಲಿ ಸ್ವಲ್ಪ ಅನುಭವ ಬಂದಂತೆ ಆಗಿದೆ. ನೌಕರಿಗೆ ಸೇರಿದಾಗಲೇ ಅವರಿವರಿಂದ ತಿಳಿದು ಬಂದಿದೆ ಅವನಿಗೆ. ಏನೆಂದರೆ ಜೈಲರ್ ಸಾಹೇಬರು ಗಸ್ತಿ ಹೊಡೆಯಲು ಬರುವಾಗ ಯಾರಾದರೂ ವಾರ್ಡರು ನಿದ್ದೆ ಮಾಡುತ್ತಿದ್ದರೆ ಆಗ ಏನೂ ಹೇಳುವುದಿಲ್ಲ. ಸುಮ್ಮನೆ ಅವನ ಪಗಡಿಯನ್ನು ತೆಗೆದಿಟ್ಟುಬಿಟ್ಟು ಆಮೇಲೆ ಅವನನ್ನ ಕರೆದು ಜುಲ್ಮಾನೆ ಹಾಕುತ್ತಾರಂತೆ. ಹೋದ ವಾರವೇ ಹರೇ ಕಿಸನ್ ವಾರ್ಡರಿಗೆ ಹೀಗೇ ಗ್ರಹಚಾರ ಒದಗಿತ್ತು. ಅವನು ಆಗ ಬಟ್ಟೆಗಳ ಗುದಾಮಿನ ಮುತ್ಸದ್ದಿ ಖೈದಿಯಾದ ಬಿರ್ಜಾ ಬಿಲಾಸನಿಗೆ ಒಂದೂವರೆ ರೂಪಾಯಿ ಲಂಚಕೊಟ್ಟು ಬದಲಿ ಪಗಡಿಯೊಂದನ್ನು ಹವಣಿಸಿಕೊಂಡಿದ್ದ. ಮರುದಿನ ಪೆರೇಡಿನಲ್ಲಿ ಜೈಲರ್ ಸಾಹೇಬರು ಅವನ ಹೊಸ ಪಗಡಿಯನ್ನು ಕಂಡು ಪಗಡಿ ಎಲ್ಲಿಂದ ಬಂತು ಎಂದು ಕೇಳಿದರು. ಮೊದಲಲ್ಲಿ ಹರೇ ಕಿಸನ್ ತನ್ನದೇನೂ ತಪ್ಪಿಲ್ಲವೆಂದುಬಿಟ್ಟ. ಆಮೇಲೆ ವಿಚಾರಣೆ ಬಂದಾಗ ಜೈಲರ್ ಸಾಹೇಬರ ಮುಂದೆ ಎಲ್ಲಾ ಒಪ್ಪಿಕೊಂಡುಬಿಟ್ಟ. ಜೈಲರ್ ಸಾಹೇಬರ ಮುಂದೆ ತಾನು ಒಬ್ಬನೇ ಹೋಗಲಿಲ್ಲ. ಬಿರ್ಜಾ ಬಿಲಾಸನನ್ನೂ ಕರೆದುಕೊಂಡು ಹೋಗಿ ಅವನಿಂದಲೂ ತಪ್ಪನ್ನು ಒಪ್ಪಿಸಿಬಿಟ್ಟ. 'ಲಿಯೇ ದಿಯೇ ಸಬ್' ಎಂದು ಮುಖಭಂಗಿ ಮಾಡುತ್ತ ಒಂದು ಚಿಟಿಕೆ ಹೊಡೆದು ತನ್ನ ಕತೆ ಮುಗಿಸಿದ, ಕಿಸನ್ ಚಂದ್! ಕಿಸನ್ ಚಂದನ ಕತೆ ಕೇಳುತ್ತ ಕೇಳುತ್ತಲೆ ಹೈದರನು ಸಂಗತಿಯನ್ನು ಚೆನ್ನಾಗಿ ತಿಳಿದುಕೊಂಡುಬಿಟ್ಟ. ಅವನು ಕಿಸನ್ ಚಂದನನ್ನ ಪ್ರಸನ್ನಗೊಳಿಸುತ್ತ ಪಗಡಿಯನ್ನು ವಾಪಸು ಕೊಡೆಂದು ಕೇಳಿದ. ಮನೆಗೆ ಹೊರಟಿದ್ದ ಇಬ್ಬರು ಹಿಂದಿನ ವಾರ್ಡರುಗಳೂ ಅಲ್ಲಿ ಹಾಜರಾದರು. ಎಲ್ಲರೂ ಬಂದು ನನ್ನ ಸೆಲ್ಲಿನ ಎದುರುಗಡೆ ಸೇರಿದ್ದರು. ಹೈದರನು ತನ್ನ ಪಗಡಿಯನ್ನು ವಾಪಸು ಪಡೆದ. ಎಲ್ಲರೂ ಸೇರಿ ಅವನಿಗೆ ಪಗಡಿ ಕೊಡಿಸಿದರು. ಅದರ ಬದಲಾಗಿ, ನಾಳೆ ಮಧ್ಯಾಹ್ನ ಮೇಲು ದರ್ಜೆಯ ವಾರ್ಡಿಗೆ ಡ್ಯೂಟಿ ಮೇಲೆ ಹೋಗುವ ಹೈದರನು ನಾಳೆಯಿಂದ ಒಂದು ಗ್ಲಾಸು ಹಾಲನ್ನು ಕಿಸನ್ ಚಂದನಿಗೆ ಒದಗಿಸಬೇಕೆಂದು ಒಪ್ಪಿಕೊಳ್ಳ ಬೇಕಾಯಿತು. ಇಷ್ಟು ತೀರ್ಮಾನ ಮಾಡಿ ವಾರ್ಡರುಗಳೆಲ್ಲ ನಗುತ್ತ ನಗುತ್ತ ಅಲ್ಲಿಂದ ಕಾಲ್ತೆಗೆದರು. ಈ ಜನರ ಸದಾ ದುಡಿತದ ಜೀವನದಲ್ಲೂ ಏನೋ ಒಂದು ಸುಖ ಇದೆ.... ನಿಯಮಿತ ಸಂಬಳ... ಹೆಂಡತಿ, ಮಕ್ಕಳು ಪರಿವಾರ.

ಪ್ರವಾಸ ಮಾಡಿ ಆಗತಾನೆ ಹಿಂತಿರುಗಿದ್ದೇನೆ. ಮನೆ ತಲಪುತ್ತಲೂ ಸರಸ್ವತಿ ಹೊಸ್ತಿಲಲ್ಲಿ ನಿಂತು ಸ್ವಾಗತಿಸುತ್ತಾಳೆ. ಅವಳ ಬೈತಲೆಯಲ್ಲಿ ಕುಂಕುಮ. ಕೈಯಲ್ಲಿ ಶಂಖದ ಬಳೆ. ಮಂದಹಾಸ ಬೀರುತ್ತಿರುವ ಮುಖ. ನಸುನಾಚುತ್ತ, 'ಬನ್ನಿ, ಸುಧಾರಿಸಿಕೊಳ್ಳಿ, ಒಂದು ನಿಮಿಷದಲ್ಲಿ ಚಹಾ ಮಾಡಿ ತರುತ್ತೇನೆ' ಎಂದು ಅಡಿಗೆ ಮನೆಯ ಕಡೆ ಕಾಲಿಡುತ್ತಾಳೆ ನಾನು ಉತ್ತರ ಕೊಡುವುದಿಲ್ಲ. ನಗುನಗುತ್ತಲೇ ಅವಳ

ಹಿಂದೆ ಹೋಗಿ ಅಡಿಗೆ ಮನೆಯಲ್ಲಿ ಒಂದು ಮಣೆ ಎಳೆದುಕೊಂಡು ಕೂಡುತ್ತೇನೆ. ಅವಳು ಒಲೆಯಲ್ಲಿ ಹಾಕಿದ ಹಸೀಸೌದೆಯನ್ನು "ಉಫ್ ಉಫ್" ಎಂದು ಊದಿ ಉರಿಸುತ್ತ ಇರುವಾಗ ಅವಳ ಕೆಂಪಡರಿದ, ಬೆವರು ಹನಿಗೂಡಿದ ಅಂದವಾದ ಮುಖವನ್ನು ಅವಳ ಕಡುಗಪ್ಪಾದ ಕೂದಲ ರಾಶಿ ಅರ್ಧ ಮುಚ್ಚಿರುತ್ತದೆ. ಎಂಥ ಚೆಲುವಾದ ಕನಸು! ಆದರೇನು.... ಇದು ಆಗಬಹುದಾಗಿತ್ತು! ಆದರೆ ನನ್ನ ಜೀವನವೋ ಯಾವುದೋ ಕಟ್ಟುನಿಟ್ಟಿನ ಆದರ್ಶಗಳಿಂದ ಪ್ರಭಾವಿತ ವಾಗಿರುವಂಥದು.

ಅದು ಹಾಗಾಗದೆ ನನ್ನ ಮನಸ್ಸಿನ ಆಕಾಂಕ್ಷೆಗಳು ಬೇರೆ ಕಡೆ ಇದ್ದಿದ್ದರೆ ಅದೇ ಬೇರೆ ಕತೆಯಾಗುತ್ತಿತ್ತು. ಬಹುಕಾಲದಿಂದಲೂ ನಮ್ಮ ನೆರೆಹೊರೆಯವರೆಲ್ಲರ ಬಾಯಿಂದಲೂ "ನಮ್ಮ ಬಿಲೂ ಅಂಥ ಹುಡುಗನ್ನ ಬೇರೆಲ್ಲೂ ನೋಡಲಿಕ್ಕಾಗೋದಿಲ್ಲ" ಎಂಬ ಮಾತು ಕೇಳುತ್ತ ಬಂದಿದ್ದೇನೆ ಮತ್ತು ಈ ಪ್ರಶಂಸೆಯನ್ನು ಸಫಲವಾಗಿಟ್ಟುಕೊಳ್ಳುವ ಆಕಾಂಕ್ಷೆಯು, ನನ್ನನ್ನು ಈ ನಿವೃತ್ತಿಯ ಪಥದಿಂದ ಯಾವತ್ತಿಗೂ ದೂರ ಹೋಗುವುದಕ್ಕೆ ಬಿಟ್ಟಿಲ್ಲ.... ಮನಸ್ಸಿನ ಎಷ್ಟೋ ಅಣಗಿಸಲಾರದ ವಾಸನೆಗಳನ್ನು ಚಾಟಿಯೇಟುಗಳಿಂದ ತಡೆಮಾಡಿಟ್ಟಿದ್ದೇನೆ. ಆದರೆ ಅವುಗಳನ್ನು ಭವ್ಯತೆಗೆ ಏರಿಸುವ ಮೂಲಕ ಯಾವುದಾದರೊಂದು ಉದಾತ್ತವಾದ ಮಟ್ಟಕ್ಕೆ ಮನಸ್ಸನ್ನು ತರಲು ಸಾಧ್ಯವಾಗಿದೆಯೆ ನನಗೆ? ಅದೆಲ್ಲಿ? ಹಾಗಾಗಿದ್ದರೆ ಇವತ್ತೇಕೆ ನನ್ನಲ್ಲಿ ಈ ಸಂಶಯ ಹುಟ್ಟುತ್ತಿತ್ತು? ಎಷ್ಟು ವಿಧವಾದ ಭೋಗದ ಆಸೆಗಳು ಬಯಕೆಗಳು ಏಕೆ ನನ್ನ ಮನಸ್ಸಿನ ಮೂಲೆ ಮೂಲೆಗಳಲ್ಲಿ ಹಣಿಕಿ ನೋಡುತ್ತಿರುತ್ತವೆ! ಏನೂ ಮಾಡಲಿಕ್ಕಾಗಲಿಲ್ಲ ನನಗೆ! ನನ್ನ ಹೆಸರು ಇತಿಹಾಸದಲ್ಲಿ ಶಾಶ್ವತವಾಗಿರುವಂತೆ ಏನೂ ಮಾಡಲಿಲ್ಲ. ಏನು ಸಾಧನೆ ಮಾಡಿದ್ದೇನೆ ಇದುವರೆಗೆ? ಕೇವಲ ಫುಟ್‌ಬಾಲ್ ಮ್ಯಾಚನ್ನು ನೋಡಲು ಟಿಕೆಟ್ಟು ಕೊಳ್ಳುವವರು ಸರ್ಪಾಕಾರದ ಉದ್ದನೆಯ ಲೈನಿನಲ್ಲಿ ನಿಂತಿರುವ ಹಾಗೆ ರಾಷ್ಟ್ರೀಯ ಸ್ವಯಂಸೇವಕ ದಳದ ಲೈನಿನಲ್ಲಿ ನನ್ನ ಸ್ಥಳವನ್ನು ಭದ್ರಗೊಳಿಸಿಕೊಳ್ಳಲು ಸುಯೋಗ ಮಾತ್ರ ಪಡೆದಿದ್ದೇನೆ ಅಷ್ಟೇ. ನನ್ನನ್ನು ಯಾರು ನೆನೆಸಿಕೊಳ್ಳುತ್ತಾರೆ? ನನ್ನ ನೆರೆಹೊರೆಯವರು ಸಹ ಮುಂದಿನ ವಾರದಷ್ಟು ಹೊತ್ತಿಗೆ ನನ್ನ ಹೆಸರನ್ನು ಮರೆತುಹೋಗಿರುತ್ತಾರೆ. ಈಗಲೂ ಅವರಿಗೆ ಜ್ಞಾಪಕವಿದೆಯೋ ಇಲ್ಲವೋ! ಆದರೆ ಇಷ್ಟು ದಿನ ಏನು ಮಾಡುತ್ತಿದ್ದೆ? ನಾನೇನು ಅಂಥ ಮಹಾಪುರುಷನೇ. ಅತಿಮಾನವನೇ ಛೇ, ಅತಿ ಸಾಮಾನ್ಯ ಮನುಷ್ಯ. ಸಾಧಾರಣ ರಕ್ತ, ಮಾಂಸಗಳ ಮನುಷ್ಯರಲ್ಲಿ ಇರುವಂತೆಯೇ ನನ್ನಲ್ಲಿ ಎಷ್ಟೋ ದೋಷಗಳೂ, ಭ್ರಾಂತಿಗಳೂ, ದುರ್ಬಲತೆಗಳು ಇಲ್ಲದೆ ಇಲ್ಲ. ಕೀಟ್ಸ್ ಕವಿಯು ಇಪ್ಪತ್ತೈದು ವರುಷಗಳ ಕಾಲ ಬದುಕಿದ್ದ. ಶೆಲ್ಲಿಯು ಮೂವತ್ತು ವರುಷಗಳು ಮತ್ತು ನಾನಾದರೋ ಆಗಲೇ ಮೂವತ್ತು ಮೂರು ವರುಷಗಳವರೆಗೆ ಬದುಕಿ ಆಗಿದೆ. ವಿಲಿಯಂ ಪಿಟ್ಟ್ ನನ್ನ ವಯಸ್ಸಿನಲ್ಲಿ ಬ್ರಿಟನ್ನಿನ ಪ್ರಧಾನ ಮಂತ್ರಿಯಾಗಿದ್ದನಲ್ಲ? ನಾನು ಅದೇ ಮೂವತ್ತ ಮೂರನೆಯ ವಯಸ್ಸಿನಲ್ಲಿ ನಾಯಿ, ಬೆಕ್ಕುಗಳ ಹಾಗೆ ಸಾಯುತ್ತೇನೆ. ಯಾರಿಗೂ ಗೊತ್ತಾಗುವುದಿಲ್ಲ. ಯಾರ ಕಿವಿಗೂ ಬೀಳುವುದಿಲ್ಲ. ಯಾರೂ ನನಗಾಗಿ ಎರಡು ಹನಿ ಬಿಸಿಯಾದ ಕಣ್ಣೀರು ಸುರಿಸುವುದಿಲ್ಲ. ಇದುವರೆಗೆ

ನಾನು ಅಲ್ಪಸ್ವಲ್ಪ ಏನಾದರೂ ಮಾಡಲು ಪ್ರಯತ್ನಿಸಿದ್ದರೂ ಅದೆಲ್ಲ ವ್ಯರ್ಥವಾಗಿದೆ. ಈ ನಿಷ್ಫಲವಾದ ಪ್ರಯಾಸಕ್ಕೆ ಯಾವ ಬೆಲೆ ಇದೆ? ಪೃಥ್ವಿಯಲ್ಲಿ ಯಾವುದೂ ವ್ಯರ್ಥವಾಗದು, ಮರಳುಗಾಡಿನಲ್ಲಿ ಹರಿದು ಒಣಗಿಹೋಗುವ ನದಿಯೂ ಸಹ ಎಂದು ಕವಿಯಾದವನು ಸುಮ್ಮನೆ ಪ್ರಾಸ ಕಟ್ಟಿ ಹಾಡಬಹುದು. ಆದರೆ ಈ ಮಾತುಗಳಿಗೆಲ್ಲ ಅರ್ಥವೇ ಇಲ್ಲ. ವ್ಯರ್ಥತೆಯ ಅನುಭವವೇ ಇಲ್ಲದಂಥ ಕವಿಯೊಬ್ಬನ ಕಲ್ಪನೆಯ ವಿಲಾಸ, ಭ್ರಮೆ; ಅಷ್ಟೆ.

ಛೇ, ಇಲ್ಲ ಹಾಗೆನ್ನಲಾಗದು. ಇದು ಪೂರ್ತಿಯಾಗಿ ನಿರರ್ಥಕವೂ ಅಲ್ಲ. ನನ್ನ ಜೀವನಕ್ಕಾಗಲಿ, ನನ್ನಂಥ ಇನ್ನೂ ಒಬ್ಬಿಬ್ಬರ ಜೀವನಕ್ಕಾಗಲಿ ಏನು ಬೆಲೆ? ಕಳೆದ ಆಗಸ್ಟ್ ತಿಂಗಳಲ್ಲಿ ಯಾವುದೊಂದು ಜನಶಕ್ತಿಯ ಸ್ವರೂಪ ನಾನು ನೋಡಿದ್ದೇನೋ ಅದೇನು ಸಾಮಾನ್ಯವೆ? ಅದರಲ್ಲಿ ನಾನು, ಕಲ್ಲು ಬಂಡೆಗಳ ತಳಗಡೆ ಹರಿಯುವ ಯುಗಯುಗಗಳಿಂದ ಸಂಚಿತವಾದ ನೀರಿನ ಕಾರಂಜಿಯಂತೆ ಸುಪ್ತವಾಗಿ ಹರಿಯುತ್ತಿರುವ ಶಕ್ತಿಯೊಂದರ ಜಾಡನ್ನು ಕಂಡುಹಿಡಿದಿದ್ದೇನೆ. ಅದೇನಾದರೂ ಸಚೇತನವಾದರೆ ಏನೇನು ಮಾಡಬಹುದು ಎಂಬುದರ ಮುನ್ಸೂಚನೆಯನ್ನು ಜನತೆಗೆ ತಿಳಿಯ ಹೇಳುವ ಕೆಲಸದಲ್ಲಿ ನನ್ನಂಥವನ ತ್ಯಾಗವೂ ತೆಗೆದು ಹಾಕುವಂಥದಲ್ಲ. ರಾಜಕೀಯ ಕೆಲಸಗಾರನ ದಾರಿ ಬಲು ಕಠಿಣ - ಬಲು ಏರುಪೇರುಗಳಿರುವಂಥ ದಾರಿ. "ತಖತ್ ಯಾ ತಖ್ತಾ" (ಸಿಂಹಾಸನ ಅಥವಾ ಗಲ್ಲು) ಎಂದು ಉರ್ದುವಿನಲ್ಲಿ ಹೇಳುವಂತೆ ಫಾಸಿಯ ಹಗ್ಗವೇ ನನ್ನ ಪಾಲಿಗೆ ಎಂದು ಮುನ್ನುಗ್ಗುವವನಿಗೆ, ಅದು ತಪ್ಪಿ ಗೌರವದ ಗದ್ದುಗೆಯೇ ದೊರೆಯಬಹುದು. ಕೊನೆಯಿಲ್ಲದ ಕ್ಲೇಶದ ಜೀವನ ಅವನದು. ದಿನ ದಿನಕ್ಕೂ ಸ್ವಲ್ಪ ಸ್ವಲ್ಪವಾಗಿ ಜೀವನ ಶಕ್ತಿಯೂ, ಉತ್ಸಾಹವೂ ಕ್ಷಯಿಸಿಹೋಗುತ್ತಿರುವುದನ್ನು ನೋಡಬೇಕಾಗುತ್ತದೆ. ಸ್ವಂತ ಮನಸ್ಸಿಗಾಗುವ ತೃಪ್ತಿಯೊಂದನ್ನು ಬಿಟ್ಟು ಬೇರೆಯಾದ ಆಸೆಯನ್ನಿಟ್ಟುಕೊಂಡರೂ ನಿರಾಶನಾಗುವುದು ಖಂಡಿತ. ಹೊರಗಡೆ ಎಲ್ಲಿ ನೋಡಿದರೂ ರಾಶಿರಾಶಿ ಕಾಣುವ ಜನರ ಉದಾಸೀನ ಮತ್ತು ಉಪೇಕ್ಷೆಗಳನ್ನು ಸಹಿಸಲಾರದೆ ಬದುಕೇ ಬೇಡವೆನ್ನಿಸುತ್ತದೆ. ಒಂದೇ ಒಂದು ಅಡಿ ಮುಂದೆ ಇಟ್ಟುಹೋಗಿ, ಎಷ್ಟು ಮಂದಿಯ ಸ್ವಾರ್ಥಕ್ಕೆ ಪೆಟ್ಟು ಬೀಳುತ್ತದೋ ನೋಡಿ. ಅವರಲ್ಲಿ ಪ್ರತಿಯೊಬ್ಬನೂ ನಿಮ್ಮ ಶತ್ರುವಾಗಿ ನಿಲ್ಲುವನು. ಒಬ್ಬ ಮನುಷ್ಯನ ಗೌರವವನ್ನು ಸಂಪಾದಿಸಬಲ್ಲವರಾದರೆ, ಆಮೇಲೆ ನೀವು ಹತ್ತು ಜನರ ಉಪೇಕ್ಷೆಗೂ ನಿಂದೆಗೂ ಪಾತ್ರರಾಗಿರುವಿರೆಂದು ಅಡಿ ಅಡಿಗೂ ಅನುಭವ ಮಾಡುವಿರಿ. ಇಂತಹ ಹಾಳು ಜೀವನ ತಪ್ಪಿಸಿಕೊಂಡು ಜೈಲಿನಲ್ಲಿ ಬಂದು ಸೇರಿಕೊಳ್ಳುವುದು ಸಹ ಸದ್ಯ ಬದುಕಿದೆವಲ್ಲ ಎಂದು ಹಾಯಾಗಿ ಉಸಿರುಬಿಡುವಂತೆ ಇರುತ್ತದೆ. ಮರಣ ದಂಡನೆಯಂಥ ಶಾಪವೂ ವರವಾಗುತ್ತದೆ. ಎಷ್ಟು ಮಂದಿ ಯುದ್ಧದಲ್ಲಿ ಸಾಯುತ್ತಾರೆ, ಯಾವ ತಪ್ಪೂ ಮಾಡದೆಯೇ! ಯಾಕೆ? ಅದು ಅವರಿಗೆ ತಿಳಿಯುವುದೇ ಇಲ್ಲ. ಎಷ್ಟು ಜನ ಅನ್ನ ಇಲ್ಲದೆ ಸಾಯುತ್ತಾರೆ. ಚಿಕಿತ್ಸೆ ಇಲ್ಲದೆ ಸಾಯುತ್ತಾರೆ.

ಅಪರಾಧ ? ಯಾವ ಜನ್ಮದ ಮೇಲೆ ಅವರ ಕೈ ಸ್ವಲ್ಪವೂ ಇರಲಿಲ್ಲವೋ ಅದರದೇ ಗಾಢ ನಿರ್ದೇಶ! ಬೀದಿಯಲ್ಲಿ ಗಾಡಿಯ ಚಕ್ರದ ಕೆಳಗೆ ಸಿಕ್ಕಿ ಸಾಯುವಂತೆ, ಬಯಲಲ್ಲಿ ಹಾವು ಕಡಿದು ಸಾಯುವಂತೆ, ರಾಜಕೀಯ ಕ್ಷೇತ್ರದಲ್ಲೂ ಮರಣ ದಂಡನೆಯೂ ಒಂದು ಸಾಮಾನ್ಯ ಆಕಸ್ಮಿಕ ಅಪಘಾತ ಮಾತ್ರ. ಅದಕ್ಕೆ ಹೆಚ್ಚೇನೂ ಇಲ್ಲ. ದಳದ ಹೊರಗಡೆ ಪ್ರಪಂಚದೊಂದಿಗೆ ತಿಕ್ಕಾಟ, ಎಷ್ಟು ಪ್ರತಿಕ್ರಿಯಾಶೀಲ (ಪ್ರಗತಿ ವಿರೋಧಿ) ಶಕ್ತಿಗಳೊಂದಿಗೆ ಹೋರಾಟ. ಅದರ ಸಲುವಾಗಿ ಅಂತೂ ರಾಜಕೀಯ ಕೆಲಸಗಾರರೆಲ್ಲ ಸಿದ್ಧರಾಗೇ ಇರುತ್ತಾರೆ. ಆದರೆ ಪಾರ್ಟಿಯ ಒಳಗಡೆ ? ಒಳಗಡೆಯ ಹೋರಾಟಗಳಂತೂ ಇನ್ನೂ ಹೆಚ್ಚು ಭಯಾನಕ. ಉಪದಳಗಳ ನಡುವೆ ಪರಸ್ಪರ ಕದನ, ವ್ಯಕ್ತಿಗಳ ನಡುವಣ ಹೋರಾಟ, ಜಾತಿಜಾತಿಗಳ ಬಡಿದಾಟ, ಪ್ರಾಂತ್ಯಪ್ರಾಂತ್ಯಗಳ ಘರ್ಷಣ: ಉಸಿರು ಕಟ್ಟಿದಂತಾಗಿ ಹೋಗುತ್ತದೆ ವಾತಾವರಣ! ಇವೆಲ್ಲ ರಾಜಕೀಯ ಕ್ಷೇತ್ರದ ಆಟದ ನಿಯಮಗಳಂತೆ! ನಿಷ್ಠುರ, ನಿಷ್ಕರುಣ ನಿಯಮಗಳು. ದುರ್ಬಲರಿಗೆ ಇಲ್ಲಿ ಸ್ಥಾನವಿಲ್ಲ. ಎಲ್ಲರೂ ಮುನ್ನಡೆಯುತ್ತಿರುತ್ತಾರೆ. ಹಿಂದೆ ಬರುವವರು ಬಿದ್ದರೋ, ಸತ್ತರೋ, ಯಾರೂ ತಿರುಗಿ ನೋಡುವುದಿಲ್ಲ. ನೋಡಬೇಕೆಂಬ ಅಗತ್ಯವೂ ಇಲ್ಲ.

"ಬಾಬೂ... ಸೊಳ್ಳೆ ಬಹಳ ಕಡೀತದೆ, ಅಲ್ಲವಾ ?" - ವಾರ್ಡರನ ಪ್ರಶ್ನೆ.

"ಹ್ಹಾ.... ಹೌದು ಯಾಕೆ ?"

"ಏನಿಲ್ಲ, ಸ್ವಲ್ಪವೇ ಸ್ವಲ್ಪ ಮಣ್ಣೆಣ್ಣೆ (ಕೆರೋಸಿನ್) ಮೈಗೆ ಹಚ್ಚಿಕೊಳ್ಳುತ್ತೀರಾ ? ಸಾಸುವೆ ಎಣ್ಣೆ ಈಗ ಸಿಗುವ ಹಾಗಿಲ್ಲ... ಆಗುವ ಹಾಗಿದ್ದರೆ ತಂದು ಕೊಡತಾಯಿದ್ದೆ"

"ಸರಿ ಹಾಗಿದ್ದರೆ ಕೊಡಿ"

ಸದ್ಯ, ಸಾಸುವೆ ಎಣ್ಣೆ ಸಿಗದೇ ಹೋದದ್ದೇ ಒಳ್ಳೆಯದು. ಅವತ್ತೊಂದು ದಿನ ಸಾಸುವೆ ಎಣ್ಣೆ ಸವರಿಕೊಂಡು ಮಲಗಿದ್ದೆ. ನಿದ್ದೆಯೊಡೆದು ಎದ್ದು ನೋಡಿದರೆ ಮೈ ಮೇಲೆಲ್ಲ ಇರುವೆಗಳು. ಈ ಸಣ್ಣ, ಕೆಂಪು ಇರುವೆಗಳಿಗೆ ಎಣ್ಣೆ ತುಂಬಾ 'ಇಷ್ಟವಾದ ಆಹಾರವೆಂದು ತೋರುತ್ತದೆ. ವಾರ್ಡರನು ಲಾಟೀನಿಗೆ ಹಾಕಿದ್ದ ಕಾಗದದ ಬಿರಡೆಯನ್ನು ಈಚೆಗೆ ತೆಗೆದು, ಅದರಲ್ಲಿ ಒಂದು ಚೂರಷ್ಟನ್ನು ಹರಿದು ಸ್ವಲ್ಪ ಉದ್ದವಾಗಿ ಹೊಸೆದು ಎಣ್ಣೆಯಲ್ಲಿ ಅದ್ದಿ ಒಂದೊಂದು ತೊಟ್ಟಾಗಿ ನನ್ನ ಅಂಗೈಯಲ್ಲಿ ಬಿಡುವನು. ನಾನು ಅದನ್ನೇ ಮೈಮೇಲೆಲ್ಲ ಬಳಿದುಕೊಳ್ಳುತ್ತೇನೆ. ಏನೋ ಒಂದು ಬಗೆಯಾಗಿ ತಂಪಾದಂತೆ ಅನ್ನಿಸುತ್ತದೆ. ಯೂಡಿಕೊಲೋನ್ ಬಳಿದುಕೊಂಡಂತೆ. ಡಿಗ್‌ಬಾಯಿ*ಯಲ್ಲಿ ಬಹುಶಃ ಸೊಳ್ಳೆಗಳೇ ಇಲ್ಲವೇನೋ!

ಪಾಟನಾ ಕ್ಯಾಂಪ್ ಜೈಲಿನಲ್ಲಿ ಮೇಜರ್ ಗೋಮೆಸ್ ಸೀಮೆಎಣ್ಣೆಯಿಂದ ಒಂದು ಎಮಲ್ಷನ್ ತಯಾರು ಮಾಡಿದ್ದ. ಅದರ ಬಲದಿಂದಲೇ ಅಷ್ಟು ದೊಡ್ಡ ಜೈಲಿನಲ್ಲಿ ಒಂದು ಸೊಳ್ಳೆ ಸಹ ಇಲ್ಲದಿರುವ ಹಾಗೆ ಮಾಡಿದ. ಗೋಮೆಸ್ ಸಾಹೇಬ ಸ್ವಲ್ಪ ತಿಕ್ಕಲು ಸ್ವಭಾವದವನಾದರೆ ಏನೀಗ, ಉಪಕಾರಿಯಾದ ಮನುಷ್ಯ. ಕಪ್ಪನೆಯ ಎತ್ತರದ ಆಳು. "ನಾನು ಇಂಡಿಯನ್!" ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ. ಒಂದು ದಿನ ಗಯಾ ನಗರದ ಒಬ್ಬ ರಾಜಕೀಯ ಖೈದಿಗೆ "ಜವಾನ್! ತುಮ್ ಭಿ

*ಅಸ್ಸಾಮಿನ ಡಿಗ್‌ಬಾಯಿಯಲ್ಲಿ ಸೀಮೆಎಣ್ಣೆ ಬಾವಿಗಳಿವೆ.

ಸಾಲಾ, ಹಮ್ ಭಿ ಸಾಲಾ! ಮೈ ಸಬ್ ಸಾಲಾಸೆ ಮಾಫಿ ಮಾಂಗ್‌ತಾ ಹೂಂ!" ಎಂದು ಹೇಳಿದ್ದ. ಆತನು ಎಲ್ಲ ಖೈದಿಗಳನ್ನೂ "ಜವಾನ್"* (ಯುವಕ) ಎಂದು ಕೂಗುತ್ತಿದ್ದ.

"ಹೈಯೋ ಜವಾನ್.... ಹೈಯೋ!" ಎಂದು ಕೂಗು ಹಾಕುತ್ತ ಕಬೈಯಾ ಗ್ರಾಮದ ನೂರಾರು ಮಂದಿ ರೈತ ಜನ ದೊಡ್ಡ ದೊಡ್ಡ ಮರಗಳ ಬುಡಗಳನ್ನು ಕತ್ತರಿಸಿ ಹೊತ್ತುಕೊಂಡು ಬಂದು ರಸ್ತೆಯ ಮಧ್ಯೆ ರಾಶಿ ಹಾಕುತ್ತಿದ್ದಾರೆ. ಕೂಗುತ್ತ, ನಗುತ್ತ, ಕೇಕೆ ಹಾಕುತ್ತ ಕಣ್ಣು ಮುಚ್ಚುವುದರೊಳಗಾಗಿ ಖಾಮದಾಹಾ-ಪೂರ್ಣಿಯಾ ರೋಡಿನ ಮಧ್ಯೆ ಮರದ ಬುಡಗಳ 'ಬ್ಯಾರಿಕೇಡ್' ತಯಾರು ಮಾಡಿಬಿಟ್ಟರು. ತಡೆಯಲಾರದ ಉತ್ಸಾಹದಿಂದ ಅಸಂಭವವನ್ನೇ ಸಂಭವವಾಗುವಂತೆ ಮಾಡಿಬಿಟ್ಟರು ಜನ. ಈ ಬಡರೈತರ ತಂಡ, ಬಾಳುವೆಯಲ್ಲಿ ಯಾವತ್ತೂ ಎದೆ ತುಂಬಿ ನಗುವುದಕ್ಕೆ ಅವಕಾಶ ಪಡೆಯದಿದ್ದವರು.... ಇವತ್ತು ಏನಾಯಿತು ಇವರಿಗೆ? ಪ್ರತಿಯೊಬ್ಬನೂ ತನ್ನ ತನ್ನ ಮಾತು ಹೇಳತೊಡಗಿದ್ದಾನೆ.... ತನ್ನ ಸುಖ, ದುಃಖ, ಆಸೆ, ನಿರಾಸೆಯ ಕತೆ.... ಈ ಕೆಲವು ದಿನಗಳಿಂದ ಹೇಳುವುದಕ್ಕೆ ತೊಡಗಿದ್ದಾರೆ. ಆದರೆ ಕೇಳುವವರೇ ಅಭಾವ! ಕೆಲವರು ತಾವು ನೋಡಿದ, ಕೇಳಿದ ಸುದ್ದಿಗಳನ್ನು ಹುಮ್ಮಸ್ಸಿನಿಂದ ಹೇಳುತ್ತಿದ್ದಾರೆ. ವೀರಗಾವ್ ಥಾನಾದಲ್ಲಿ ತುಪಾಕಿ ಹಾರಿಸಿದರಂತೆ, ನಲವತ್ತೇಳು ಜನ ಸತ್ತರಂತೆ. ಗಾಯಗೊಂಡವರು ಲೆಕ್ಕವಿಲ್ಲದಷ್ಟು! ದರೋಗಾ ಸಾಹೇಬನ ಹೆಂಡತಿ ಗಂಡನನ್ನು ಕೆಲಸಕ್ಕೆ ರಾಜೀನಾಮೆ ಕೊಡೆಂದು ಒತ್ತಾಯ ಮಾಡುತ್ತ ಒಲ್ಲೆನೆಂದರೆ ಊಟಕ್ಕೇ ಹಾಕುವುದಿಲ್ಲವೆಂದು ಹೆದರಿಸಿದಳಂತೆ! ಗ್ರಾಮದ ಪಂಚಾಯತರು ಹರಖೂ ಹಜಾಮನಿಗೆ ಜುಲ್ಮಾನೆ ಹಾಕಿದ್ದಾರೆ - ಏಕೆಂದರೆ ಅವನು ದರೋಗ ಸಾಹೇಬನಿಗೆ ಹಜಾಮತ್ ಮಾಡಿದ ತಪ್ಪಿಗೆ ಹರಖೂ ಎಲ್ಲರ ಸಮಕ್ಷಮದಲ್ಲಿ ತಪ್ಪನ್ನು ಒಪ್ಪಿಕೊಂಡುಬಿಟ್ಟ. ಅವನೇನೆಂದ ಗೊತ್ತೇ? ಅಂತಾನೆ "ಏನು ಮಾಡೋದು ಗೊತ್ತಾಗಲಿಲ್ಲ. ಗಾಂಧಿ ಟೋಪಿ ಹಾಕಿಕೊಂಡಿದ್ದರು. ಮಹಾತ್ಮಾಜೀಮೆ** ಹೆಸರು ಬರೆಸಿಕೊಂಡಿದ್ದಾರೆ ಅಂದುಕೊಂಡು ತಪ್ಪು ತಿಳಿದುಕೊಂಡು ಬಿಟ್ಟೆ. ಏನು ಸಜಾ ಕೊಟ್ಟರೂ ಕೊಡಿ. ಆದರೆ ಬೆರಳು ಮಾತ್ರ ಕತ್ತರಿಸಬೇಡಿ" - 'ಟಾಮಿ ಔರ್ ಪಲ್ಟನ್ ಸಾಬ್' (ಆಂಗ್ಲ ಸಿಪಾಯಿಗಳು ಮತ್ತು ಕ್ಯಾಪ್ಟನ್) ಖುಷೀ ನದಿಯ ಮಧ್ಯೆ ಸ್ಟೀಮರಿನಲ್ಲೇ ಇದ್ದಾರೆ. ದಡಕ್ಕೆ ಬಂದು ಕ್ಯಾಂಪ್ ಮಾಡಲಿಕ್ಕೆ ಧೈರ್ಯ ಇಲ್ಲವಂತೆ! ಇನ್ನೂ ಹೀಗೇ ಏನೇನೋ ಕತೆಗಳು, ಸುದ್ದಿಗಳು.

ಮರದ ತುಂಡುಗಳ, ಬುಡಗಳ ರಾಶಿ ಬೆಟ್ಟದ ಹಾಗೆ ಬೆಳೆಯುತ್ತಿದೆ. ಇನ್ನು ಎಷ್ಟು ದೊಡ್ಡ ಮಿಲಿಟರಿ ಲಾರಿಯಾದರೂ ಪಾರಾಗಿ ಹೋಗುವ ಹಾಗಿಲ್ಲ. ರಹುಯಾ ಗ್ರಾಮದ ಸಮೀಪದಲ್ಲಿ ರಸ್ತೆಯ ಅಂಚಿನಲ್ಲೇ ದೊಡ್ಡ ದೊಡ್ಡ ಆಲದ ಮರಗಳು.... "ಚಲೋ.... ಓ.... ಚಲೋ ಓ..." ಕೊಡಲಿ, ಕುಡಗೋಲು, ಮಚ್ಚುಗತ್ತಿ, ಕೈಗೆ ಸಿಕ್ಕಿದ್ದನ್ನು ಹಿಡಿದು ಹೊರಟಿದ್ದಾರೆ ಜನ. ವಾಲಂಟೀರುಗಳು ಮಾಡುವ ಕ್ವಿಕ್

* ಜವಾನ್ ಎಂದರೆ ಸೈನಿಕನೆಂದೂ ಅರ್ಥವಾಗುತ್ತದೆ.

** ಕಾಂಗ್ರೆಸಲ್ಲಿ ಕೆಲಸ ಮಾಡುವುದನ್ನು ಗ್ರಾಮದ ಮೂಢಜನ "ಮಹಾತ್ಮಾಜಿ ಮೇ ನಾಮ್ ಲಿಖನಾ" ಎನ್ನುತ್ತಾರೆ.

ಮಾರ್ಚ್ ಅಲ್ಲ. ಓಡುತ್ತ, ನೆಗೆಯುತ್ತ ಮುಂದೆ ನುಗ್ಗುತ್ತಿದೆ ಆವೇಶಭರಿತ ಜನರ ಗುಂಪು. ಎಷ್ಟೇ ಆಯಾಸವಾಗಿದ್ದರೂ ನಿಲ್ಲುವುದಕ್ಕೆ ಇಷ್ಟವಿಲ್ಲ. ಹರೇಶ್ವರನ ಕೈಲಿ ಚಿಕ್ಕದೊಂದು ಕಾಂಗ್ರೆಸ್ ಧ್ವಜ. ಅವನು ಆಗತಾನೇ ಕಾಂಗ್ರೆಸ್ ಸೇವಾದಳದಲ್ಲಿ ತರಬೇತು ಪಡೆದಿದ್ದಾನೆ. ಜಿಲ್ಲಾ ಕಾಂಗ್ರೆಸ್ ಸಮಿತಿಯು ಗ್ರಾಮ ರಕ್ಷಕರ ಸಲುವಾಗಿ ಒಂದು ಟ್ರೇನಿಂಗ್ ಕ್ಯಾಂಪನ್ನು ನಡೆಸಿದ್ದರು, ಅದರಲ್ಲಿ ಸೇರಿದ್ದ ಅವನು. ಈಗ ಗ್ರಾಮದಲ್ಲಿ ಅವನಿಗಿರುವ ಗೌರವ ನೋಡಬೇಕು. ಈಚೆಗೆ ಕೆಲವು ದಿನಗಳಿಂದ ಅವನು ಗ್ರಾಮದಲ್ಲಿ ತಾನು ಹೊಸದಾಗಿ ಕಲಿತ ಯುುಯುತ್ಸುವಿನ ತಿರುವು, ಲಾಠಿ ವರಸೆ ಮತ್ತು ಸೈಕಲ್ ಸವಾರಿ - ಇಂಥವುಗಳನ್ನೆಲ್ಲ ಪ್ರದರ್ಶನ ಮಾಡುತ್ತ ಬಂದಿದ್ದ. ಅವನು ಕೈಲಿ ಬಾವುಟ ಹಿಡಿದು ಹಾಡು ಹೇಳುತ್ತ ಹೊರಟಿದ್ದಾನೆ: "ನೌ ಜವಾನೇ ನಿಕಲೇ!" (ನವ ಯುವಕರ ದಂಡು ಹೊರಟಿತು). ಏದುತ್ತ ಏದುತ್ತ ಆಬಾಲ ವೃದ್ಧರಾದಿಯಾಗಿ ಎಲ್ಲರೂ ಇದನ್ನು ಅವನೊಟ್ಟಿಗೆ ಹಾಡಲು ತೊಡಗಿದ್ದಾರೆ.

ರಹುಯಾ ಗ್ರಾಮ! ಈ ಗ್ರಾಮದ ಜನರೂ ಬಂದು ಸೇರಿಕೊಂಡರು. ಎರಡು ಗಂಟೆಗಳೊಳಗಾಗಿ ರಹುಯಾ ಗ್ರಾಮದಲ್ಲಿ ಮಾಡುವ ಕಾರ್ಯಕ್ರಮ ಮುಗಿಯಿತು. ಮತ್ತೆ "ಚಲೋ...ಓ..... ಚಲೋ ಓ" ಕೃತ್ಯಾನಂದ ನಗರದ ರೈಲ್ವೆ ಸ್ಟೇಷನ್ನಿನ ಕಡೆ. ಈಗ ರಸ್ತೆ ಬಂದ್ ಮಾಡುವ ಕೆಲಸದ ಕಡೆ ಅಷ್ಟಾಗಿ ಹುಮ್ಮಸ್ಸಿನಲ್ಲ. ಠಾಣೆಯನ್ನು ಸುಟ್ಟು ಬಂದ ಮೇಲೆ ಅದೆಲ್ಲ ಈಗ ಸಪ್ಪೆಯಾಗಿ ತೋರುತ್ತದೆ. ಈಗಲಂತೂ ಕಬೈಯಾ, ರಹುಯಾ - ಇವೆರಡೂ ಗ್ರಾಮಗಳ ಜನತೆ ಒಂದಾಗಿ ಸೇರಿರುವ ಕೂಟ. ಈಗ ಅವರನ್ನು ಹಿಡಿದಿಡುವುದೇ ಕಷ್ಟ. ಮೈಯಲ್ಲಿ ಭೂತ ಹೊಕ್ಕವರಂತೆ ಸಾರಾಯಿಯ ಅಮಲೇರಿದವರಂತೆ ಆಗಿಬಿಟ್ಟಿದ್ದಾರೆ. ನನ್ನನ್ನು ಸೈಕಲಿನಿಂದ ಇಳಿಯುವುದಕ್ಕೆ ಬಿಡುವುದಿಲ್ಲ. ಎಲ್ಲರೂ ಸೇರಿ ಸೈಕಲನ್ನು ಎಳೆದುಕೊಂಡು ಹೋಗುತ್ತೇವೆ ಎನ್ನುತ್ತಾರೆ. ಅಷ್ಟು ಜನಗಳ ನಡುವೆ ನಾನೊಬ್ಬ ಸೈಕಲ ಮೇಲೆ ಸವಾರಿ ಮಾಡಿಕೊಂಡು ಹೋಗುವುದು ಹೇಗೆ? ಆದರೆ ನನ್ನ ಮಾತು ಕೇಳುವವರು ಯಾರು? "ಗಾಂಧೀಜೀಕಿ ಜೈ.... ಬೋಲೋ ಗಾಂಧೀಜೀಕಿ ಜೈ" ಹೋಗುತ್ತ ಹೋಗುತ್ತ ಎದುರಿಗೆ ಕೆಸರು ತುಂಬಿದ ರಸ್ತೆ.... "ಕುಛ್ ಪರವಾನಹೀ" (ಏನೂ ಪರವಾಯಿಲ್ಲ) "ಬೋಲೋ ಭಾರತ್ ಮಾತಾಕಿ ಜೈ". ಈ ಕೊಚ್ಚೆಯಲ್ಲೇ ಸೈಕಲ್ ಮುಂದೆ ಹೋಗುತ್ತದೆ. "ಬೊಂಬಾಯ್ ಸೇ ತಾಜಾತಾಜಾ ಖಬರ್" (ಬೊಂಬಾಯಿಂದ ಬಿಸಿ ಬಿಸಿ ಸುದ್ದಿ!) ಎಷ್ಟು ಹೊಸ ಹೊಸ ಸುದ್ದಿಗಳು. ರಹುಯಾಗ್ರಾಮದ ವಿದ್ಯಾರ್ಥಿಯೊಬ್ಬನು ಕಿಸೆಯಿಂದ ಒಂದು ಲಿಥೋ ಮುದ್ರಣ ಮಾಡಿದ ಕಾಗದವನ್ನು ಹೊರಕ್ಕೆ ತೆಗೆದು ದೊಡ್ಡ ದನಿಯಲ್ಲಿ ಎಲ್ಲರಿಗೂ ಕೇಳುವಂತೆ ಓದುವುದಕ್ಕೆ ತೊಡಗುತ್ತಾನೆ. ಕಾಗದದ ಮೇಲುಭಾಗದಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ "ನಾಡಿನ ಕರೆ" ಎಂದು ಬರೆದಿದೆ. "ಜಿನ್ನಾ ಸಾಹೇಬರು ದಸ್ತಗಿರಿಯಾದರು", "ವಿಜಯಲಕ್ಷ್ಮಿ ಪಂಡಿತರ ಮೇಲೆ ಗೋಲಿ ಹಾರಿಸಲಾಯಿತು", "ಮಾಂಘಿರ್ ಜಿಲ್ಲಾದಲ್ಲಿ ಸ್ವರಾಜ್ಯ ಘೋಷಣೆಯಾಯಿತು" ಇನ್ನೂ ಅನೇಕ ರೋಮಾಂಚಕರವಾದ ಸುದ್ದಿಗಳು. ಇವತ್ತು ಸಂಭವ, ಅಸಂಭವಗಳನ್ನು ಕುರಿತು ಜಿಜ್ಞಾಸೆ ಮಾಡುವುದಕ್ಕೆ ಅವರಿಗೆ ಸಾಧ್ಯವಿಲ್ಲ. ಹೇಗೆತಾನೇ ಸಾಧ್ಯ? ಈಚೆಗೆ ಕೆಲವು

ದಿನಗಳಿಂದ ಅವರು ಎಷ್ಟು ಅಸಂಭವವೆನ್ನಿಸಿಕೊಳ್ಳುವಂಥವು ಸಂಭವವಾಗಿರುವುದನ್ನು ಕಣ್ಣಾರ ನೋಡಿದ್ದಾರೆ!

ಯಾವ ಮಾತನ್ನೂ ಸುಳ್ಳೆಂದು ಯೋಚಿಸುವುದಕ್ಕೆ ಅವರಿಗೆ ಭರವಸೆಯಾಗುವುದಿಲ್ಲ. ತಾಲ್ಲೂಕಿನ ಕಲೆಕ್ಟರ ಆಫೀಸನ್ನು ಮುತ್ತಿಗೆ ಹಾಕಿ ಕೈವಶ ಮಾಡಿಕೊಳ್ಳುವ ದಿನ ರಹುಯಾ ಮತ್ತು ಕಬೈಯಾ ಗ್ರಾಮಗಳ ಸಮ್ಮಿಳಿತ "ಜಾಥಾ" (ದಳ) ಅದಕ್ಕೆ ಮುಂದಾಳು ಯಾರಾಗಿರಬೇಕು ಎಂಬುದನ್ನು ಕುರಿತು ಜೋರಾಗೇ ಚರ್ಚೆಯಾಗುತ್ತ ಇದೆ. ಹರೇಶ್ವರನಿಗೆ ಸೇವಾದಳದ ಟ್ರೇನಿಂಗ್ ಆಗಿದ್ದರೇನಂತೆ ಅವನಿಗಿನ್ನೂ ಚೆನ್ನಾಗಿ ಮೀಸೆಯೇ ಬೆಳೆದಿಲ್ಲ. ಕಬೈಯಾ ಗ್ರಾಮದ ಜನರು "ಓತೋ ಬುತ್‌ರು!*" ಅನ್ನುತ್ತಾರೆ. ಮತ್ತೆ ಇನ್ನೊಬ್ಬ ಉಮೇದುವಾರನಾದ ತಿಲಕ್‌ಧಾರಿಯಾದರೋ 1932ನೆಯ ಇಸವಿಯ ಸತ್ಯಾಗ್ರಹದಲ್ಲಿ ಜೈಲಿಗೆ ಹೋಗಿ ಬಂದಿದ್ದ. ಅದಕ್ಕೇ ಬಹುಶಃ ನನ್ನನ್ನ ಸಾಲೀಶ್ ಅನ್ನುವುದು.

ರಹುಯಾ ಗ್ರಾಮದೊಳಗಣ ಬೀದಿಯಲ್ಲಿ ಒಬ್ಬ ಮುದಿ ಹೆಂಗಸು ನಿಂತಿದ್ದಾಳೆ. ಅವಳ ಸುತ್ತ ಕೆಲವರು ಅರೆಬೆತ್ತಲೆಯ ಹುಡುಗ, ಹುಡುಗಿಯರು. ಆಕೆ ಬಾದರ್ ಬಾಹರ್ ಗಾಮಿಯಾ ಎಂಬವನ ತಾಯಿ ಎಂದು ಜನ ಹೇಳಿದರು. ಜಾತಿಯಲ್ಲಿ ಮೋಚಿ. ಅವರು ಗ್ರಾಮದೊಳಗಡೆ ವಾಸ ಮಾಡುವುದಕ್ಕೆ ಅನರ್ಹರು. ಅದಕ್ಕೇ ಅವರನ್ನ "ಬಾಹರ್ ಗಾಮಿಯಾ" (ಊರ ಹೊರಗೆ ಇರುವವರು) ಎನ್ನುವುದು. ಒಬ್ಬ ಹುಡುಗನ ಕೈಲಿ ಚೆಂಡುಮಲ್ಲಿಗೆ ಹೂಗಳ ಮಾಲೆ. ಬಾದರನ ತಾಯಿಯೂ ಮತ್ತು ಮಕ್ಕಳ ಗುಂಪೂ ಒಟ್ಟಿಗೇ "ಪರ್‌ಣಾಮ್" ಎಂದು ಹೇಳುತ್ತಾರೆ. ಬಹುಶಃ ಮೊದಲೇ ಹೇಳಿಕೊಟ್ಟಿರುತ್ತಾರೆ. ಮುದುಕಿ ಬಹಳ ಸಂಕೋಚದಿಂದಲೇ ನನ್ನನ್ನ ಕುರಿತು, "ಅಪನಾಕೆ ತೋ ಖಾತಿರ್ ದಾರ್" "ತಮಗೇ ಅಲ್ಲವೇ ಸನ್ಮಾನ" ಎನ್ನುತ್ತಾಳೆ. ನಾನೇನೂ ಮಾಡಲಾಗಲಿಲ್ಲ. ಏನು ತಾನೇ ಮಾಡಿದ್ದೇನೆ ಇವರಿಗೆ? ನನಗೇಕೆ ಸನ್ಮಾನ? "ತಾವು ಮಂಜೂರು ಮಾಡಿಸಿದ ಬಾವಿ ಇರುವುದರಿಂದಲೇ ನಾವು ಸುಖವಾಗಿ ದಿನ ಕಳೆಯುತ್ತಾ ಇದ್ದೇವೆ. ಎರಡು ವರುಷಗಳಿಂದ ಸ್ವಲ್ಪ ಸ್ವಲ್ಪ 'ಜವೆ' (ಬಾರ್ಲಿ) ಬೆಳೆಸುತ್ತ ಇದ್ದೇವೆ" - ಮುದುಕಿಗೆ ಮಾತಾಡಲು ತುಂಬ ಇಷ್ಟವೆಂದು ತೋರುತ್ತದೆ. 'ಅರ್ತ್‌ಕ್ವೇಕ್ ರಿಲೀಫ್" ಭೂಕಂಪದಿಂದ ನೊಂದವರಿಗೆ ಪರಿಹಾರದ ಸಂಬಂಧವಾಗಿ ತೋಡಿಸಿದ ಬಾವಿಯ ವಿಷಯ ಮುದುಕಿ ಹೇಳುತ್ತಿರುವುದು. ಈಗ ಜ್ಞಾಪಕಕ್ಕೆ ಬರುತ್ತದೆ. ಕಾಂಗ್ರೆಸ್ ವಾಲಂಟಿಯರ್ ವಿರಿಂಚಿಯು ಮಧುಸೂದನ ಸಿಂಗನ ಕೈಯಿಂದ ಐದು ರೂಪಾಯಿ ಲಂಚ ಪಡೆದು ರಿಲೀಫ್ ಬಾವಿಯನ್ನು ಅವನ ಸ್ವಂತ ಜಮೀನಿನಲ್ಲಿ ತೋಡಿಸಿಕೊಡುವುದಾಗಿ ಮಾತುಕೊಟ್ಟಿದ್ದನಂತೆ. ಆಮೇಲೆ ನಾನು ಆ ಕಡೆ ತನಿಖೆಗೆ ಬಂದಿದ್ದಾಗ ಬಾವಿಯನ್ನು ಬಾಹರ್ ಗಾಮಿಯಾರ ಗುಡಿಸಲ ಮುಂದೆ ತೋಡಿಸಲು ಏರ್ಪಾಡು ಮಾಡಿ ಹೋದ.

ನಾನು ಮುದುಕಿಗೆ, "ಒಂದು ಲೋಟ ನೀರು ಕುಡಿಯಲಿಕ್ಕೆ ಕೊಡಿ ಅಮ್ಮ... ತಣ್ಣಗಿರುವ ನೀರು. ನೋಡೋಣ ನಿಮ್ಮ ಬಾವಿಯ ನೀರು ಹೇಗಿದೆ ಅಂತ" ಎಂದೆ.

*"ಅವನೊಬ್ಬ ಮಗು"

ಈ ಮಾತು ಕೇಳಿ ಮುದುಕಿ ತಬ್ಬಿಬ್ಬಾಗಿಬಿಟ್ಟಳು. ಇಂಥ ಅನುರೋಧಕ್ಕೆ ಏನು ಹೇಳುವುದು ಎಂದು ತೋಚಲಿಲ್ಲ ಅವಳಿಗೆ. ಆಗ ಅವಳ ಮುಖದಲ್ಲಿ 'ಸನ್ಮಾನ'ಕ್ಕಿಂತಲೂ ಹೆಚ್ಚಾಗಿ ಭಯ ಕಾಣುತ್ತಿತ್ತು. ಸುತ್ತಲೂ ಸೇರಿದ್ದ ಗುಂಪಿನಲ್ಲಿ ತನ್ನ ಗ್ರಾಮದವರು ಯಾರಿದ್ದರೋ ಅವರ ಮುಖಗಳ ಕಡೆ ಪ್ರಶ್ನಾರ್ಥಕವಾಗಿ ನೋಡಿದಳು. ಈಕೆಯ ಮನೆಯ ಮುಂದಿನ ಬಾವಿಯ ನೀರನ್ನು ಮಾಸ್ಟರ್ ಬಾಬುಗಳ ಮಗ ಕುಡಿಯುತ್ತಾರೇನು ? ಏನು ವಿಚಿತ್ರ ? ಗ್ರಾಮದ ಬೇರೆ ಯಾವ ಜನರೂ ಈ ಬಾವಿಯ ನೀರನ್ನು ಬಹುಶಃ ಕುಡಿಯರು.... ಹಾಗಿರುವಾಗ ಇವರಿಗೆ ತಾನು ಹೇಗೆ ನೀರು ತಂದುಕೊಡುವುದು ? ಆಕಾಶವೇ ಹರಿದು ತಲೆಯ ಮೇಲೆ ಬೀಳುವ ಹಾಗಿದೆ ಎನ್ನುವ ಭಾವದಲ್ಲಿ ಮುದುಕಿ ಬೆಪ್ಪು ಬೆಪ್ಪಾಗಿ ನೋಡತೊಡಗಿದಳು. ಆಗ ತಿಲಕಧಾರಿ ಸಿಂಗನು ಆಕೆಗೆ ಧೈರ್ಯ ಹೇಳುತ್ತ, "ಲೋಟ ಚೆನ್ನಾಗಿ ಉಜ್ಜಿ ತೊಳೆದು ನೀರು ತುಂಬಿಸಿ ತಾ ಮುದಿಕೀ ಬಿಲೂ ಬಾಬು ಕೇಳುತ್ತ ಇದ್ದಾರೆ" ಎಂದ. ಲೋಟದಲ್ಲಿ ನೀರು ತರಲಾಯಿತು. ಮುಖದ ತುಂಬ ಮುಸುಗು ಹಾಕಿಕೊಂಡು ಬಾದರನ ಹೆಂಡತಿ ನೀರಿನ ಜತೆಗೆ ಸಾಲದ ಮರದ ಎಲೆಯಲ್ಲಿ ಬಹಳ ದಿನದಿಂದ ಶೇಖರಿಸಿ ಇಟ್ಟಿದ್ದ ಧೂಳು ಬಡಿದ ಸ್ವಲ್ಪ ಬೆಲ್ಲವನ್ನೂ ತಂದುಕೊಟ್ಟಳು. ಸುತ್ತಲಿದ್ದ ಹುಡುಗ, ಹುಡುಗಿಯರು ನಾಚುತ್ತ 'ಬೇಡ' ಎನ್ನುತ್ತಿದ್ದರೂ ಅವರಿಗೆಲ್ಲ ಸ್ವಲ್ಪ ಬೆಲ್ಲ ಮುರಿದುಕೊಟ್ಟೆ. ನಾನೂ ಬೆಲ್ಲ ತಿಂದು ನೀರು ಕುಡಿದೆ. ಬಾದರನ ತಾಯಿ ನೆಟ್ಟ ನೋಟದಿಂದ ನನ್ನ ಕಡೆಯೇ ನೋಡುತ್ತಿದ್ದಾಳೆ. ಆ ನೋಟ ನನಗೆ ಬಹಳ ಪರಿಚಿತವಾಗಿರುವುದೇ! ನಾನು ಊಟಕ್ಕೆ ಕೂತಾಗೆಲ್ಲ ಹತ್ತಿರ ಕೂತು ಗಾಳಿ ಹಾಕುತ್ತ ನೋಡುತ್ತಾಳಲ್ಲ ನಮ್ಮಮ್ಮ.... ಅದೇ ನೋಟ. ನನಗೆ ಊಟಕ್ಕೆ ಬಡಿಸುವಾಗೆಲ್ಲ.... ಅಮ್ಮ ಒಬ್ಬಳೇ ಅಲ್ಲ, ದೊಡ್ಡಮ್ಮ, ನವದೀದಿ, ಸಹದೇವನ ತಾಯಿ, ದುದೇಜಾಯವರ ಹೆಂಡತಿ ಮತ್ತು ಸರಸ್ವತಿ ಇವರೆಲ್ಲರದೂ ಇಂಥದೇ ನೋಟ. ಇದ್ದಕ್ಕಿದ್ದ ಹಾಗೆ ಧ್ವನಿ ಏಳುತ್ತದೆ – "ಬೋಲೋ ಮಹಾತ್ಮಾ ಗಾಂಧೀಕಿ ಜೈ!" ಆಗ ಹರೇಶ್ವರನೂ ಬಾಯಿಬಿಟ್ಟು ಕೇಳುತ್ತಾನೆ – "ಬಾದರನ ತಾಯಿ, ನನಗೂ ಒಂದಿಷ್ಟು ನೀರು ಕೊಡುತ್ತೀಯಾ ಕುಡಿಯಲಿಕ್ಕೆ ?" ದೊಡ್ಡ ತಪ್ಪಲೆಯಲ್ಲಿ ನೀರು ತರಲಾಗುತ್ತದೆ. ನೆರೆದಿದ್ದವರೆಲ್ಲ ನಾನು ತಾನು ಎಂದು ಮುಂದೆಬಂದು ನೀರು ಕೇಳುತ್ತಾರೆ. ಆ ಮೋಚಿಯ ಹೆಂಗಸು ಮುಟ್ಟಿರುವ ನೀರು ಕೇಳಿ ಕೇಳಿ ಕುಡಿಯುತ್ತಾರೆ. ಆಶ್ಚರ್ಯ. ಇಡೀ ಗ್ರಾಮದ ಜನರೆದುರಿಗೆ, ಸಮಾಜದ ಕಣ್ಣು ಮುಂದೆಯೇ ಇಂಥ, ಎಂದೂ ಮಾಡಲಾರದ ಕೆಲಸ ಮಾಡಿಬಿಟ್ಟರಲ್ಲ.... ಇವರಿಗೆ ಎಲ್ಲಿಂದ ಬಂತು ಸಾಹಸ ? ಎಲ್ಲರ ಮುಖಗಳಲ್ಲೂ ಯಾವುದೋ ಶೌರ್ಯ ಪ್ರದರ್ಶನದ ಭಾವ ಒಡೆದು ಕಾಣುತ್ತಿದೆ.... "ಗಾಂಧೀಜೀ ಕಿ ಜೈ" "ಮಹಾತ್ಮಾಜೀ ಕಿ ಜೈ!" ಎಂಬ ಎಡಬಿಡದ ಜಯ ಜಯಕಾರಗಳ ಮಧ್ಯೆಯೂ ಎಲ್ಲರೂ ತಮ್ಮ ತಮ್ಮ ಮನಸ್ಸಿನ ಉದಾರತೆಯನ್ನು ನನ್ನ ಮುಂದೆ ತೋರಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆ.

ಇನ್ನು ಇಲ್ಲೇ ನಿಂತುಕೊಂಡಿರಲಿಕ್ಕೆ ಸಮಯವೆಲ್ಲಿದೆ ? ದಳ ಮುಂದಕ್ಕೆ ಅಡಿಯಿಡುತ್ತದೆ. "ನವ್ ಜವಾನ್ ನಿಕಲೇ !" ಮುದುಕಿಯ ಕಣ್ಣಲ್ಲಿ ಇನ್ನೂ ಮಂಜು

ಮಂಜಾಗಿರುವ ಭಾವ. ಬಹುಶಃ ಅತಿಶಯ ಕೃತಜ್ಞತೆಯ ಸೂಚನೆಯೇನೋ. ಇದೇ ಆಕೆಯು ತನ್ನ ಗ್ರಾಮವಾಸಿಗಳ ಉದಾರತೆಗೆ ಬದಲಾಗಿ ನೀಡುತ್ತಿರುವ ಕಾಣಿಕೆ ಬೆಲೆ! ಇದಕ್ಕೆಲ್ಲ ಕಾರಣರಾದ ಗಾಂಧೀಜಿ ಆಕೆಯ ಮನೆ ದೇವತೆಯಾದ "ಗೋಸಾಯಿ"ಗಿಂತಲೂ ಶಕ್ತಿಶಾಲಿಯಾಗಿರುವ ದೇವತೆ. ಇದೇ ಅವಳು ಬಹುಶಃ ಅಂದುಕೊಳ್ಳುತ್ತಿರುವುದು. ಇದೇ ದಾರಿಯಲ್ಲೇ ಭೂಕಂಪವಾದನಂತರ ಮಹಾತ್ಮಾ ಗಾಂಧಿ ಮೋಟಾರು ಬಂಡಿಯಲ್ಲಿ ಕೂತು ಖಾಮದಾಹಾ ಗ್ರಾಮದ ದಿಕ್ಕಿಗೆ ಹೋದದ್ದು. ಮೋಟಾರ್ ಗಾಡಿಯಲ್ಲಿದ್ದ ಅನೇಕ ಜನರ ನಡುವೆ ಗಾಂಧೀಜಿ ಯಾರು ಎಂಬುದನ್ನು ಅವಳು ಗುರುತಿಸಲಾಗಲಿಲ್ಲ. ಕೇವಲ ಮಾಸ್ಟರ್ ಬಾಬುಗಳನ್ನು ಗುರುತಿಸುವುದಕ್ಕೆ ಸಾಧ್ಯವಾಯಿತು. ಬಾದರನು ಹೇಳುತ್ತಿದ್ದ: "ಗಾಂಧೀಜಿ ಮೈಮೇಲಿಂದ ಜ್ಯೋತಿ ಹೊರಗೆ ಬರುತ್ತಿತ್ತು." ಬಹುಶಃ ಮುದುಕಿ ಈಗ ಅದನ್ನ ನೆನಸಿಕೊಂಡು ಗಾಂಧೀಜಿಗೆ ಪ್ರಣಾಮ ಮಾಡಿದಳೇನೋ!

ಜನತೆ ಮುಂದಕ್ಕೆ ಹೊರಟಿದೆ. ಮುಂದೆ ಹೋಗುತ್ತಿರುವಾಗ ಹಿಂದಕ್ಕೆ ಏಕೆ ತಿರುಗಿ ನೋಡಬೇಕು? ಎಷ್ಟು ಮಂದಿ ಬಾದರನ ತಾಯಿಯಂಥವರು ಎಷ್ಟು ಸ್ಥಳಗಳಲ್ಲಿ ಹೀಗೆ ಪ್ರಣಾಮ ಮಾಡುತ್ತಾರೋ! ಅದನ್ನ ನೋಡುವುದಕ್ಕೆ ಇವರಿಗೆ ಸಮಯ ಎಲ್ಲಿದೆ? ಇವರಿಗೀಗ ಎಷ್ಟು ಕೆಲಸಗಳು ಕಾದಿವೆ! ಎಷ್ಟು ಜವಾಬುದಾರಿ ಇವರ ಹೆಗಲ ಮೇಲೆ? "ಜಯ್ ಬಿಲೂ ಬಾಬುಗೆ ಜೈ" ಆಗ ಒಂದು ದಳ ಕೂಗುತ್ತದೆ. "ಬೊಂಬಾಯಿಂದ ಒಂದು ಹೊಸ ಧ್ವನಿ ಬಂದಿದೆ!" ಇನ್ನೊಂದು ದಳ "ಆ ಧ್ವನಿ ಯಾವುದು?" ಎಂದು ಕೇಳುತ್ತದೆ. ಉತ್ತರವಾಗಿ ಎರಡು ದಳಗಳೂ ಒಂದೇ ದನಿಯಲ್ಲಿ "ಇನ್‌ಕಿಲಾಬ್ ಜಿಂದಾಬಾದ್" ಎಂದು ಕೂಗುತ್ತವೆ. ಕಬೈಯಾ ಗ್ರಾಮದ ಅಪ್ಪರ್ ಪ್ರೈಮರಿ ಸ್ಕೂಲ್ ಮಾಸ್ಟರ್ ಜಯಧ್ವನಿ ಕೂಗುವಾಗ ಸಂಕೀರ್ತನೆಯಲ್ಲಿ ಮಾಡುವ ಹಾಗೆ ಕೈತಟ್ಟಿಕೊಂಡು ಕುಣಿಯುತ್ತಾನೆ. ಅವನ ಗಂಟಲು ಒಡೆದಿದೆ. ಗೂರಲು ರೋಗದಿಂದ ನರಳುವವನು ಕೆಮ್ಮಲು ಯತ್ನಿಸುವಾಗ ಗಂಟಲಿಂದ ಯಾವ ನಮೂನೆ ಶಬ್ದ ಹೊರಡುತ್ತದೋ ಅಂಥ ಸ್ವರ ಹೊರಡುತ್ತದೆ ಇವನು ಜಯಜಯಕಾರ ಮಾಡುವಾಗ. ಆದರೂ ಅವನ ಉತ್ಸಾಹಕ್ಕೆ ಯಾವ ಲೋಪವೂ ಇಲ್ಲ ಮತ್ತು ಅವನ ಶಿಷ್ಯವೃಂದ ಎದುರಿಗೇ ಇರುವಾಗಲೂ ಅವರ ಮುಂದೆ ಗಾಂಭೀರ್ಯ ತೋರಿಸಿಕೊಳ್ಳಬೇಕು ಎಂಬ ಪ್ರಯಾಸವೂ ಇಲ್ಲ ಮನುಷ್ಯನಿಗೆ! ಜನತೆ ಮುನ್ನಡೆಯುತ್ತಿದೆ ಎದುರುಗಡೆಯಿಂದ ಕೃತ್ಯಾನಂದನಗರದ ಕಡೆಯಿಂದ ಯಾರೋ ಒಬ್ಬಾಳು ಕುದುರೆ ಸವಾರಿ ಮಾಡಿಕೊಂಡು ಬರುತ್ತಾ ಇದ್ದಾನೆ. ನಮ್ಮನ್ನು ನೋಡಿದ್ದೇ ಕೆಳಗೆ ಇಳಿಯುತ್ತಾನೆ. "ಪ್ರಣಾಮ್."

ಅವನು ನನ್ನ ಬಳಿ ಬಂದು ಸುದ್ದಿ ತಿಳಿಸುತ್ತಾನೆ: "ನಿಮ್ಮ ತಮ್ಮ ಕೃತ್ಯಾನಂದಪುರಕ್ಕೆ ಬಂದಿದ್ದಾರೆ. ಹರಖ್‌ಚಂದ್ ಮಾರವಾಡಿಯ ಗಡಂಗಿನಲ್ಲಿದ್ದಾರೆ. ಅವರು ಬಂದಿರುವುದು ಸೀಮೆಎಣ್ಣೆಯ ಬೆಲೆಯನ್ನು ನಿರ್ಧಾರ ಮಾಡುವುದಕ್ಕಾಗಿ." ಆ ಮನುಷ್ಯ ಇದಿಷ್ಟಲ್ಲದೆ ನನ್ನ ಮುಂದೆ ಬೇರೆ ಏನೂ ಹೇಳುವುದಿಲ್ಲ. ಆದರೆ ಹತ್ತಿರದಲ್ಲೇ ಇರುವ ಒಬ್ಬಿಬ್ಬರ ಕಿವಿಯಲ್ಲಿ ಪಿಸುಮಾತಿನಲ್ಲಿ ಏನೇನೋ ಹೇಳುತ್ತಾನೆ. ಆದರೆ ಇತರ ಜನ ವಿಷಯ ಏನು ಎಂಬುದನ್ನು ಹೊರಗೆಡವಲು ಇಷ್ಟಪಡುವುದಿಲ್ಲ.

ನಾನಾಗ ಹೇಗೋ ತಿಳಿದುಕೊಂಡೆ. ನಮ್ಮ ನೀಲು, "ಪೀಪಲ್ಸ್, ಪ್ರೈಸ್ ಕಂಟ್ರೋಲ್ ಕಮಿಟಿ"ಯ ಸೆಕ್ರೆಟರಿ, ಕೃತ್ಯಾನಂದನಗರದಲ್ಲಿ ಸೀಮೆಎಣ್ಣೆ ಮತ್ತು ಇತರ ಸಾಮಾನುಗಳ ಸ್ಟಾಕನ್ನು ತನಿಖೆ ಮಾಡುವುದಕ್ಕೆ ಅಲ್ಲದೆ, ಕೃತ್ಯಾನಂದನಗರದ ಜನತೆಗೆ ರೈಲ್ ಲೈನ್ ಕಿತ್ತುಹಾಕುವಿಕೆ, ರಸ್ತೆಗಳಿಗೆ ತಡೆಹಾಕುವಿಕೆ ಮತ್ತು ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವಿಕೆ, ಇಂಥ ಕೃತ್ಯಗಳ ವಿರುದ್ಧವಾಗಿ ಏನೇನೋ ಹೇಳಿರುತ್ತಾನೆ. ಬಹುಶಃ ಜನತೆ ಮುಂದೆ ಹೋಗುತ್ತಲೇ ಇದೆ. ಹಿಂದೆ ಎಂದೋ ನಮ್ಮ ಆದಿಪುರುಷರು ಹೊಟ್ಟೆಯ ದರದಿಗಾಗಿ, ಹತಾಶರಾಗಿ, ಅನಿಶ್ಚಿತ ಗುರಿಯಿಂದ ಹೇಗೆ ಹೊರಗೆ ಹೊರಟುಬಿದ್ದಿದ್ದರೋ, ಇದು ಹಾಗೆ ಅಲ್ಲವೇ ಅಲ್ಲ. ಈ ಜನ ಹೊರಟಿರುವುದು ಒಂದು ಹೊಸ ಜಗತ್ತಿನ ಆಸೆಯಿಂದ. ಯಾವುದೋ ಒಂದು ನಿಶ್ಚಿತವಾದ ಗುರಿಯ ಕಡೆ ಹುಮ್ಮಸ್ಸಿನಿಂದ ಮಾಡುತ್ತಿರುವ ಯಾತ್ರೆ ಇದು – ಬೇರೇನೂ ಅಲ್ಲ. ಕೇವಲ 'ಮನುಷ್ಯ ವರ್ಗದವ' ಎಂದು ಕರೆದುಬಿಡುವುದರಿಂದ ಕಬ್ಬೆರಾದ ಮಾಸ್ತರರ ಸಂಪೂರ್ಣ ಪರಿಚಯ ದೊರೆಯುವುದಿಲ್ಲ ಮತ್ತು ಅವಶ್ಯಕತೆ ಎನ್ನುವುದರಿಂದ ಅವನ ಅಡಗಿಸಲಾರದ ಉತ್ಸಾಹವನ್ನು ವ್ಯಾಖ್ಯಾನ ಮಾಡಿದಂತೆ ಆಗುವುದಿಲ್ಲ.

ರೈಲ್ವೆ ಲೈನ್! ದೂರದಲ್ಲಿ ಕೃತ್ಯಾನಂದನಗರದ ಗ್ರಾಮ ಕಾಣಬರುತ್ತಿದೆ. ಕೇವಲ ಅರ್ಧ ಘಂಟೆಯೊಳಗೇ ಸುಮಾರು ಕಾಲು ಮೈಲಿ ಲೈನು ಗುರುತೇ ಇಲ್ಲದಂತೆ ಅಳಿಸಿ ಹಾಕಲ್ಪಟ್ಟಿತು. ಕಬ್ಬಿಣದ ಕಂಬಿಗಳನ್ನೂ ಮತ್ತು ಮರದ ಸ್ಲೀಪರುಗಳನ್ನೂ ಜನ ಹೆಗಲ ಮೇಲೆ ಹೊತ್ತುಕೊಂಡು ಹೋಗಿ ಹತ್ತಿರವಿರುವ ಜೋಳದ ಹೊಲದ ಮಧ್ಯೆಯೇ ಅಥವಾ ರೈಲ್ ಲೈನಿನ ಎರಡೂ ಪಕ್ಕಗಳಲ್ಲಿರುವ ನೀರಿನ ಕಾಲುವೆಗಳಲ್ಲೋ ಒಗೆದುಬಿಟ್ಟರು. ಆ ಸಮಯದಲ್ಲಿ ಕೃತ್ಯಾನಂದನಗರದ ಇಬ್ಬರು ವಯಸ್ಕರು ಆ ಕಡೆ ಬಂದರು. ಅವರು ಬಂದ ಉದ್ದೇಶ್ಯ ಈ ಆವೇಶ ತುಂಬಿದ ಜನರನ್ನು ನಾಶಕಾರಕ ಕೃತ್ಯಗಳಿಂದ ತಡೆಯುವುದಕ್ಕೆಂದು. ಜನ ಕೇಳುತ್ತಾರೆಯೆ? ಅವರಿಬ್ಬರನ್ನೂ ಅಣಕಿಸಿ, ಹಾಸ್ಯ ಮಾಡಿ, "ಹೋಗಿ ನಿಮ್ಮ ದಾರಿ ಹಿಡಿದುಕೊಂಡು" ಎಂದು ಕಳಿಸಿಬಿಟ್ಟರು. ಅಷ್ಟಕ್ಕೇ ಬಿಡಲಿಲ್ಲ. ಒಬ್ಬಾಳು ಜೊಂಡು ಹುಲ್ಲಿನಿಂದ ಎರಡು ದುಂಡನೆಯ ಬಳೆಗಳಂಥವನ್ನು ತಯಾರು ಮಾಡಿದ. ಅವುಗಳನ್ನು ತೆಗೆದುಕೊಂಡು ಕೆಲವರು ಪ್ರಾಯದ ಹುಡುಗರು ಓಡಿಕೊಂಡು ಹೋಗಿ ಅವರಿಬ್ಬರನ್ನು ಹಿಡಿದರು. ಹರಿಶ್ಚಂದ್ರನು ಆ ಹುಲ್ಲಿನ ಬಳೆಗಳನ್ನು ಅವರಿಬ್ಬರ ಕೈಗಳಿಗೆ ಬಲವಂತವಾಗಿ ತೊಡಿಸಿಬಿಟ್ಟ. ಆಮೇಲೆ "ಬಳೆ ತೊಟ್ಟುಕೊಂಡು ಅಡಿಗೆಮನೆಯಲ್ಲಿ ಕೂತುಕೊಂಡಿರಿ ಹೋಗಿ" ಎಂದು ಹಲ್ಲು ಕಿರಿದು ನಕ್ಕ. ಬೇರೊಬ್ಬ ಹುಡುಗನು "ಆಹಾಹಾ! ಎಂಥ ಮೆತ್ತನೆ ಕೈಗಳು....! ಆಹಾ" ಎಂದು ಚೇಷ್ಟೆ ಮಾಡಿದ. ಆಮೇಲೆ ಅವರು ಆ ಮುದುಕರ ಕೈಗೆ ಇನ್ನೊಂದು ಜೋಡಿ ಹುಲ್ಲಿನ ಬಳೆಗಳನ್ನು ಕೊಟ್ಟು "ಹ್ಞೂಂ.... ಇದನ್ನೂ ತಗೊಂಡು ಹೋಗಿ... ನಿಮ್ಮ ಆ ನೀಲೂ ಬಾಬುವಿಗೆ ತೊಡಿಸಿ ಹೋಗಿ.... ಆಮೇಲೆ ಹೇಳಿ ಅವನಿಗೆ 'ಕಲೆಕ್ಟರ್ ಸಾಹೇಬರ ಪೈಸಾ ತಿಂದು ಈ ಸರಹದ್ದಿನಲ್ಲಿ ಕಿತಾಪತಿ ತೋರಿಸಲಿಕ್ಕೆ ಬರಬೇಡ ಹುಷಾರ್' ಅಂತ ನಾವು ಹೇಳಿದರಂತ ಹೇಳಿ. ಕಬ್ಬೆಯಾ ರಹುಯಾ ಜನರಿಗೆ ಇಂಥ ಗೂಢಚಾರಿಗಳಿಗೆ ಹೇಗೆ ಬುದ್ಧಿ ಕಲಿಸಬೇಕು

ಅಂತ ಗೊತ್ತಿದೆ. ಅವರಿಗೆ ಗೊತ್ತಿಲ್ಲದೆ ಹೋದರೆ ವಿಲ್‌ಸನ್ ನೀಲ್‌ಕರ್ ಸಾಹೇಬನಿಗೆ ಎಂಥ ಗತಿ ಆಯಿತು ಅನ್ನೋದನ್ನ ಜ್ಞಾಪಿಸಿ ಕೊಡಿ... ಹೂಂ ಗಾಡಿ ಬಿಡಿ ಇನ್ನು!" ಎಂದು ಅವಮಾನ ಮಾಡಿ ಅವರನ್ನ ಕಳಿಸಿಬಿಟ್ಟರು. ಜನತೆಯ ಸಂಯಮ ಮುರಿದುಬಿದ್ದಿತ್ತು. ಇನ್ನು ಅವರು ನನ್ನ ಮುಂದೆಯೇ ನೀಲುವನ್ನು ಕುರಿತು ಎಂಥ ಮಾತಾಡುವುದಕ್ಕೂ ಹಿಂಜರಿಯರು.

ರೈಲ್ ಲೈನಿನಲ್ಲಿದ್ದ ಮರದ ಸಣ್ಣ ಸೇತುವೆಗಾಗಲೇ ಬೆಂಕಿ ಹತ್ತಿಸಿ ಬಿಟ್ಟಾಯಿತು.. ಅಷ್ಟು ದಪ್ಪನೆಯ ಮರದ ತೊಲೆಗಳಿಗೆ ಎಷ್ಟು ಬೇಗ ಬೆಂಕಿ ಹತ್ತಿಸಿಬಿಟ್ಟರೋ ಆಶ್ಚರ್ಯ! ನಮ್ಮಮ್ಮ ಅಡಿಗೆ ಒಲೆಯ ಕಟ್ಟಿಗೆಗಳನ್ನು ಉರಿಸಲಿಕ್ಕೆ ಎಷ್ಟು ಪ್ರಯಾಸ ಪಡುತ್ತಾಳೋ! ರಹುಯಾ ಗ್ರಾಮದ ಹುಡುಗನೊಬ್ಬ, ಕೆಂಪು ಬನಿಯನ್ ತೊಟ್ಟಿರುವವನು, ಅವರ ಊರಿನ ಪಾದರೀ ಸಾಹೇಬನನ್ನು ಅಣಕ ಮಾಡುತ್ತಾನೆ. ಹಿಂದಿನ ದಿನ ಇವರೆಲ್ಲ ಸಾಹೇಬನನ್ನು ಅವರ ಮನೆಯಲ್ಲೇ "ಘೇರಾವ್" ಮಾಡಿದ್ದರು. ಪಾದರೀ ಸಾಹೇಬನು ಹೇಗೆ ಇವರಿಗೆ ಹೆದರಿ ನಡುಗುತ್ತ ಎರಡು ಕೈಗಳನ್ನೂ ಮೇಲಕ್ಕೆತ್ತಿ "ಗಾಂಧೀಜಿಕಿ ಜೈ" ಎಂದು ಕೂಗಿದನೋ ಅದನ್ನು ಈ ಹುಡುಗ ಅನುಕರಿಸಿದಾಗ ಎಲ್ಲರೂ ಕೇಕೆ ಹಾಕಿದರು. ಹಠಾತ್ತಾಗಿ ರೈಲ್ ಗಾಡಿಯು ಬರುತ್ತಿರುವ ಶಬ್ದ ಕೇಳಬರುತ್ತದೆ. ಅಗೋ ದೂರದಲ್ಲಿ ಎಂಜಿನ್ ಕಂಡುಬರುತ್ತಿದೆ, ಸತ್ಯವಾಗಿ, ಅಗೋ, ಬಂದೇಬಿಟ್ಟಿತು. ಮಿಲಿಟರಿ ದಳದಿಂದ ತುಂಬಿರುವ ರೈಲುಗಾಡಿ! ಸಂಗಡ ರೈಲಿನ ಇಂಜಿನಿಯರೂ ಇದ್ದಾನೆ. ಓಡಿ.... ಓಡಿ ಇನ್ನು ಯಾವ ದಿಕ್ಕಲ್ಲಿ ಸಾಧ್ಯವೋ ಓಡಿ.... ಗೋಲೀಬಾರ್ ಆಗುತ್ತದೆ. ಓಡಿ ತಪ್ಪಿಸಿಕೊಳ್ಳಿ, ಕಾಲುವೆ, ಹಳ್ಳ ಯಾವುದೂ ನೋಡದೆ ಓಡಿ ಕಂಬ ಹತ್ತಿ ಧುಮುಕಿ ಪ್ರಾಣ ಉಳಿಸಿಕೊಳ್ಳಿ, ಓಡಿ! ಒಂದೇ ನಿಮಿಷದಲ್ಲಿ ಜನತೆಯ ಗುಂಪು ಚದುರಿ ಚೆಲ್ಲಾಪಿಲ್ಲಿಯಾಗಿ ಹೋಯಿತು. ಟಾಮಿಗನ್ನಿನ ಕರ್ಕಶ ಶಬ್ದ ಕಿವಿಗೆ ಬಿದ್ದರೆ ಮೈ ನಡುಗುತ್ತದೆ. ಕೃತ್ಯಾನಂದನಗರದ ದಿಕ್ಕಿನಲ್ಲಿರುವ ಒಂದು ಜೋಳದ ಹೊಲದಲ್ಲಿ ನುಗ್ಗಿ ಮೈ ಮರೆಸಿಕೊಂಡೆ ನಾನು. ಕೃತ್ಯಾನಂದನಗರಕ್ಕೆ ಬೇಕೆಂದೇ ಹೋಗಲಿಲ್ಲ. ಅಲ್ಲಿನ ಜನರ ಸಹಾನುಭೂತಿ ಸಿಗಲಿಕ್ಕಿಲ್ಲ ಎಂದು ತಿಳಿದೂ ಸಹ ಹೇಗೆ ಹೋಗಲಿ! ನನ್ನ ಸೈಕಲನ್ನು 'ಹಾಳಾಗಿ ಹೋಗಲಿ' ಎಂದು ರೈಲ್ ಲೈನಿನ ಮೇಲೆ ಅವಸರದಲ್ಲಿ ಒಗೆದು ಬಂದಿದ್ದೆ. ಜೋಳದ ಹೊಲ! ರಹುಯಾಗ್ರಾಮದ ಪಾದರಿಯ ದಾಡಿ ಈ ಮುಸುಕಿನ ಜೋಳದ ಮುಸುಕಿದ್ದ ಹಾಗೇ... ಅದೇ ಬಣ್ಣ! ಜೋಳದ ಕಾಳು ಕೊಯ್ಲಿಗೆ ಬಂದಿದೆ ಆಗಲೇ ಗಿಡಗಳು ಜೋಳದಿಂದ ತುಂಬಿ ಹೋಗಿವೆ. ಜೋಳದ ತೆನೆಗಳ ನರುಗಂಪಿನ ಮಧ್ಯೆ ಕೋವಿಯ ಮದ್ದಿನ ವಾಸನೆ ಮೂಗಿನವರೆಗೆ ಬರುವುದಿಲ್ಲ.

ಕೋರ್ಟಿನಲ್ಲಿ ನನ್ನ ಮೇಲೆ ಮೊಕದ್ದಮೆ ನಡೆಸುತ್ತಿರುವಾಗ ಸರಕಾರೀ ವಕೀಲರು ತಮಾಷೆ ಮಾಡುತ್ತ ವ್ಯಾಖ್ಯಾನ ಮಾಡಿದರು. ಬಿಳೀ ಸಿಪಾಯಿಗಳು ಈ ಜೋಳದ ಹೊಲವನ್ನು ನೋಡಿ, "ಇದು ಭಾರತೀಯ ಕಾಳು ಅಲ್ಲ, ನಾಜಿ ಕಾಳು" ಎಂದು ಉದ್ಗಾರ ಮಾಡಿದ್ದರಂತೆ! ಅದರ ವಿವರವನ್ನು ಕೇಳಿ ಜಜ್ ಸಾಹೇಬರೂ ಗಾಂಭೀರ್ಯವನ್ನು ಮರೆತು ಗಟ್ಟಿಯಾಗಿ ನಕ್ಕಿದ್ದರು. ಕೋರ್ಟು ಗುಮಾಸ್ತೆಯೂ ನಕ್ಕಿದ್ದ. ನನ್ನ ಪರವಾಗಿ ವಾದಿಸುತ್ತಿದ್ದ ಹರೆನ್ ಬಾಬು ಸಹ ಈ ಹಾಸ್ಯದಲ್ಲಿ

ಭಾಗವಹಿಸದೆ ಇರಲಾಗಲಿಲ್ಲ. ಪೆರು ಮತ್ತು ಚಿಲಿ ದೇಶಗಳಲ್ಲಿನ ಸೂರ್ಯ ದೇವಾಲಯಗಳಲ್ಲಿ ಈ ಮುಸುಕಿನ ಜೋಳದ ಗಿಡವನ್ನು ಚಿನ್ನ, ಬೆಳ್ಳಿಗಳಲ್ಲಿ ಮಾಡಿ ಇಟ್ಟಿರುತ್ತಿದ್ದರಂತೆ. ಗಿಡದ ರೆಂಬೆ, ಎಲೆಗಳು ಬೆಳ್ಳಿಯಲ್ಲಿ ಮತ್ತು ಜೋಳದ ಕಾಳುಗಳು ಚಿನ್ನದಲ್ಲಿ!

ಕಣ್ಣವೆಗಳು ಏಕೋ ನಿದ್ದೆಯ ಜೊಂಪಿನಿಂದ ಭಾರವಾಗಿ ತೋರುತ್ತಿವೆ. ಸ್ವಲ್ಪ ಎದ್ದು ಕೈ ಕಾಲು ಝಾಡಿಸಿದರೆ ಹಾಯಾಗಿರುತ್ತದೆ. ಆಹ! ಮೈಕೈ ಎಲ್ಲ ಕೂತುಕೂತು ಸುಮ್ಮನೆ ನೋಯುತ್ತಾ ಇತ್ತು. ಸುಮ್ಮನೆ ಆಕಳಿಕೆ ಬರುತ್ತಾ ಇರುತ್ತದೆ. ಇವತ್ತೂ ಸಹ ನಿದ್ದೆ ಬರುತ್ತದೇನು. ಎಷ್ಟು ಜನ, ಇಂಥ ಫಾಸಿಗೆ ಹೋಗುವವರ ಕತೆಗಳನ್ನು ಕೇಳಿದ್ದೇನೆ. ಫಾಸಿಯ ಹಿಂದಿನ ದಿನ ಅವರ ಕೂದಲೆಲ್ಲ ಬೆಳ್ಳಗಾಗಿ ಹೋಗುತ್ತವಂತೆ. ನನ್ನ ಕೂದಲು ಸಹ ಬೆಳ್ಳಗಾಗುತ್ತಿದೆಯೇನೋ ಹೇಗೆ ಗೊತ್ತು? ಒಂದು ಕನ್ನಡಿಯಾದರೂ ಇದ್ದಿದ್ದರೆ ನೋಡಬಹುದಾಗಿತ್ತು. ಕಾಮ್ರೇಡ್ ಚನರಬಲ್ಲೀ ಫಾಸಿಯಾಗುವುದಕ್ಕೆ ಮೊದಲೇ ಹುಚ್ಚನಾಗಿ ಬಿಟ್ಟಿದ್ದ. ನನಗೋ ನಿದ್ದೆ ಬರುತ್ತಿದೆ. ಆಶ್ಚರ್ಯವೇ!

ನನಗೆ ತುಂಬಾ ಹಣ ಇದ್ದಿದ್ದರೆ ಈಗ ನನ್ನ ಉಯಿಲು ಬರೆದಿಡುತ್ತಿದ್ದೆ. ಕೋಟ್ಯಂತರ ಹಣ ಇರಬೇಕಾಗಿತ್ತು. ಅದರ ಸಹಾಯದಿಂದ ಮಾರ್ಕ್ಸ್‌ವಾದದ ಪ್ರಚಾರ ಮಾಡಿಸಬಹುದಾಗಿತ್ತು. ಭಾರತದ ಗ್ರಾಮಗ್ರಾಮಗಳಲ್ಲೂ ರಷ್ಯದ ಹಾಗೆ ಯುವಕರ ಮತ್ತು ಎಳೇ ಹುಡುಗರ ದಳಗಳನ್ನು ಸಂಘಟನೆ ಮಾಡಿಸಬಹುದಾಗಿತ್ತು. ಆದರೆ ಎಲ್ಲಿಂದ ಬಂದೀತು ಅಷ್ಟು ಹಣ? ಲಾಟರಿಯ ಟಿಕೇಟನ್ನು ಕೊಳ್ಳದೆಯೇ ಲಾಟರಿಯಲ್ಲಿ ಹಣ ಬರುವ ಸುಯೋಗವಿದ್ದಿದ್ದರೆ? ಈ ದೇಶವೇ ನನ್ನ ಆಡಳಿತಕ್ಕೆ ಬಂದು ಬಿಟ್ಟಿದ್ದರೆ! ಆಗ ತೋರಿಸುತ್ತಿದ್ದೆ ಹತ್ತು ವರುಷ.... ಹತ್ತು ವರುಷಗಳಲ್ಲೇ ನಾಡಲ್ಲೆಲ್ಲ ಎಂಥ ಆಶ್ಚರ್ಯಕರ ಬದಲಾವಣೆಯಾಗುವಂತೆ ಮಾಡುತ್ತಿದ್ದೆ! ಕಾಂಗ್ರೆಸ್ ಕೆಲಸಗಾರರು ಮತ್ತೆ ಜೈಲಿನಿಂದ ಹೊರಗೆ ಬಂದ ಮೇಲೆ ನನ್ನ ಹೆಸರಿನಲ್ಲಿ ಖಂಡಿತವಾಗಿಯೂ ಯಾವುದಾದರೊಂದು ಸಂಸ್ಥೆಯನ್ನು ಕೂಡಿಸುತ್ತಾರೆ. ಅಥವಾ ನನ್ನ ಹೆಸರಲ್ಲಿ "ಬಿಲೂ ರೋಡ್!", "ಬಿಲೂ ಆಶ್ರಮ" ಇಂಥವು ಯಾವುದಾದರೂ ಇಲ್ಲ, ನನ್ನ ಪೂರ್ತಿ ಹೆಸರೇ ಉಪಯೋಗಿಸುತ್ತಾರೆ - "ಪೂರ್ಣ ಆಶ್ರಮ" ಎಂಬುದಾಗಿ.

ಆದರೆ ನನ್ನ ನಿಜವಾದ ಹೆಸರು "ಪೂರ್ಣ" ಎಂದು ಯಾರಿಗೂ ಗೊತ್ತಿಲ್ಲವಲ್ಲ! ಎಲ್ಲರಿಗೂ ಬಿಲೂ ಬಾಬು ಗೊತ್ತು. ಒಂದು ಪಕ್ಷ 'ಪೂರ್ಣ' ಎಂಬ ಹೆಸರು ಗೊತ್ತಿದ್ದರೂ ಅದೊಂದರಿಂದ ಏಷ್ಟು ಸಾಧ್ಯವಾಗುತ್ತಾಯಿತ್ತು. ಬಹುಶಃ ಪೂರ್ಣಿಯಾ ಹೆಸರೇ "ಪೂರ್ಣನಗರ"ವೆಂದಾಗಬಹುದು. ಸ್ಟಾಲಿನ್‌ಗ್ರಾಡ್ ಅಥವಾ ಗಾರ್ಕಿಶಹರುಗಳಂತೆ! ದೊಡ್ಡ ಬಜಾರಿನ ಬೀದಿಯಲ್ಲಿ ಬಾಲಮುಕುಂದ ಸಾಹು ಅವರ ಧರ್ಮಶಾಲೆ ಇದೆಯಲ್ಲ? ಅದರ ತಿರುವಿನಲ್ಲಿ ನನ್ನ ಶಿಲಾಮೂರ್ತಿ ಇರುತ್ತದೆ. ಭಾಷಣ ಕೊಡುತ್ತಿರುವ ಭಂಗಿಯಲ್ಲಿ. ಪ್ರತಿ ವರುಷವೂ ಇವತ್ತಿನ ದಿನ ಇದರ ವೇದಿಕೆಯ ತಳಗಡೆ ಜನರ ಕೂಟ ಸೇರುತ್ತದೆ. ನನ್ನ ಸ್ಮೃತಿಗೆಂದು ಶ್ರದ್ಧಾಂಜಲಿಗಳನ್ನು ಜನ ಅರ್ಪಿಸುತ್ತಾರೆ.

ಮುಚ್ಚಿರುವ ರೆಪ್ಪೆಗಳ ಮೇಲೆ ಒಂದು ಹಸಿರು ದೀಪಶಿಖೆ, ನವಿಲುಗರಿಯ ಕಣ್ಣಿರುತ್ತದಲ್ಲ, ಅದರಂತೆ.... ಆದರೆ ಚಂಚಲ ಮತ್ತು ಕಂಪಿಸುತ್ತಿದೆ. ಶಿಖೆಯು ಇದ್ದಕ್ಕಿದ್ದ ಹಾಗೆ ಕೆಂಪಗಾಗಿ ಹೋಯಿತು – ಈಗ ಹಳದಿ ಮತ್ತೆ ಹಸಿರು - ನೀಲಿ ಕಪ್ಪಗೆ ಇನ್ನೂ ಕಪ್ಪಗೆ.... ಶಿಖೆ ಇದೆಯೋ ಇಲ್ಲವೋ.... ಕತ್ತಲು ಬರೇ ಕತ್ತಲು.... ದೊಡ್ಡಮ್ಮನು ತನ್ನ ಅಡಿಗೆ ಮನೆಯ ಜಗುಲಿಯ ಮೇಲೆ ಕೂತು ಮಾವಿನ ಹಣ್ಣು ಹೆಚ್ಚುತ್ತ ಕೂತಿದ್ದಾಳೆ. ಒಂದು ಬುಟ್ಟಿಯ ತುಂಬ ಪನ್ನೀರು ದಾನಿ ಮಾವಿನ ಹಣ್ಣು. ಮುಂದುಗಡೆ ಮಾವಿನ ಹೋಳುಗಳನ್ನು ತುಂಬಿಡುವ ಡಬರಿ. ಓಟೆಗಳನ್ನು ಕುಯಿದು ಹಾಕಿದ ಮೇಲೆ ಹೋಳುಗಳನ್ನು ಡಬರಿಯಲ್ಲಿರುವ ನೀರಲ್ಲಿ ಹಾಕುವಳು. ನಾನೂ ಸರಸ್ವತಿಯೂ ಆಕೆಯ ಎದುರುಗಡೆ ಮಣೆಹಾಕಿಕೊಂಡು ಕೂತಿದ್ದೇವೆ. ಆಗ ದೊಡ್ಡಮ್ಮ "ಒಂದು ತಟ್ಟೆ ತಗೋ ಹೋಳುಗಳನ್ನು ಹಾಕತೇನೆ. ನೀವಿಬ್ಬರೂ ತಿನ್ನುವಿರಂತೆ" ಎನ್ನುವಳು. ತಟ್ಟೆಯಲ್ಲಿ ಮಾವಿನ ಹೋಳುಗಳನ್ನು ಹಾಕಿಕೊಡುವಳು. ಸರಸ್ವತಿ ನಗುತ್ತ, "ಅಲ್ಲ, ಕುಯಿದ ಮಾವಿನ ಹಣ್ಣು ಇವರಿಗೆ ರುಚಿಸುತ್ತದೇನು ? ಅವರಿಗೆ ಉಂಡೆ ಹಣ್ಣನ್ನೇ ಕೊಟ್ಟುಬಿಡು" ಅನ್ನುವಳು. ಆಗ ದೊಡ್ಡಮ್ಮ ತಮಾಷೆ ಮಾಡುತ್ತ, "ಎಲೆ, ಆಗಲೇ ಅಷ್ಟು ಇದೇನೆ, ಅವನ ಮೇಲೆ ?" ಎನ್ನುತ್ತ ನನ್ನ ಕೈಯಲ್ಲಿ ಉಂಡೆಯಾದ ಹಣ್ಣನ್ನೇ ಕೊಡುವಳು. ಚಿನ್ನದಂತೆ ಹಳದೀ ಬಣ್ಣ, ಮೂತಿಯ ಬಳಿ ಕುಂಕುಮದಂತೆ ಕೆಂಪು. ನಾನು ಹಣ್ಣಿನ ಕೆಳಭಾಗದಲ್ಲಿ ಕಚ್ಚಿ ಸಣ್ಣದೊಂದು ತೂತು ಮಾಡುತ್ತೇನೆ. ಕೈಯಲ್ಲಿ ಹಿಸುಕಿ ಹಿಸುಕಿ ಹಣ್ಣನ್ನು ಮೆತ್ತಗೆ ಮಾಡುತ್ತೇನೆ. ಆಮೇಲೆ ನಿಧಾನವಾಗಿ ರಸ ಹೀರಿಕೊಳ್ಳುತ್ತೇನೆ. ಅಮ್ಮ ಮಲಗುವ ಕೋಣೆಯ ವರಾಂಡದಲ್ಲಿ ಕೂತಿದ್ದಾಳೆ. ಇಲ್ಲಿಗೆ ಬರಲು ಇಷ್ಟ, ಆದರೆ ಬರಲಾರಳು. ನಡುವಣ ಅಂಗಳದಲ್ಲಿ ಒಂದು ದೊಡ್ಡ ಹಾವು. ಹೊಳೆಯುವ ಕಪ್ಪುಬಣ್ಣ. ಹೆಡೆ ಎತ್ತಿ ನೆಟ್ಟಗೆ ನಿಂತಿದೆ. ಅಮ್ಮ ಭಯದಿಂದ ಚೀತ್ಕಾರ ಮಾಡುತ್ತಾಳೆ, "ನೀಲೂ, ಏ ನೀಲೂ - ಬೇಗ ಬಂದು ಇದನ್ನ ಹೊಡೆದು ಹಾಕೋ.... ಬಾರೋ ಈಗಲೇ ಹೊಡೆದು ಹಾಕಿಬಿಡೋ" ಎಂದು ಕೂಗುತ್ತಾಳೆ. ಅಪ್ಪ ಎಲ್ಲಿಂದಲೋ ಕೂಗುತ್ತಾರೆ, "ಬೇಡ... ಹೊಡೆಯಬೇಡ, ಕೈ ಚಪ್ಪಾಳೆ ಹೊಡಿ ತನಗೆ ತಾನೇ ಹೊರಟುಹೋಗುತ್ತೆ" ನೀಲೂ ಅಪ್ಪನ ಮಾತು ಕೇಳುತ್ತಾನೇನು ? ಹಾವನ್ನು ಹೊಡೆದು ಹಾಕಲಿಕ್ಕೆಂದು ದೊಡ್ಡದೊಂದು ದೊಣ್ಣೆ ತರುತ್ತಾನೆ. ಹಾವು ಓಡಿಹೋಗುತ್ತದೆ. ಕತ್ತಲಲ್ಲಿ ಬಾವಿಯ ಕಡೆ ಎಲ್ಲೋ ನುಸುಳಿ ಹೊರಟು ಹೋಗುತ್ತದೆ. ಇನ್ನು ಹಾವಿಲ್ಲ ಎಲ್ಲೂ. ಹಾವು ಈಗ ಬಾವಿಯ ಬಳಿ ನೀರು ಸೇದುವ ಬಕೆಟ್ಟಿಗೆ ಕಟ್ಟಿದ ಹಗ್ಗವಾಗಿ ಬಿಟ್ಟಿದೆ. ನೀಲೂ ಕೋಪದಿಂದ ಆ ಬಕೆಟ್ಟಿನ ಮೇಲೆ ದೊಣ್ಣೆಯಿಂದ ಬಲವಾಗಿ ಹೊಡೆಯುತ್ತಾನೆ. ಖನಾನ್ ಎಂದು ಶಬ್ದವಾಯಿತು.

ಎಲ್ಲಿಯದೋ ಈ ಶಬ್ದ.... ನನ್ನ ನಿದ್ದೆ ಭಂಗವಾಗಿ ಹೋಯಿತು. ಬೂಟ್ಸಿನ ಶಬ್ದ. ನನ್ನ ತಲೆಯ ಹತ್ತಿರವೇ. ಆಗಲೇ ನನ್ನನ್ನ ಕೊಂಡೊಯ್ಯಲು ಬಂದಿದ್ದಾರೇನು ? ಈಗ ತಾನೇ ಬಾಗಿಲು ತೆಗೆದು ಪ್ರವೇಶ ಮಾಡಿದರೆಂದು ತೋರುತ್ತದೆ. ಸುಮ್ಮನೆ ಮೈಯೆಲ್ಲ ಬೆವರುತ್ತಿದೆ. ಅಲ್ಲಾಡದೆ ಶಬ್ದ ಮಾಡದೆ ಮಲಗಿದ್ದೇನೆ. ಇಲ್ಲ ಬಾಗಿಲು ತೆಗೆದಿಲ್ಲ. ಹಾಗಾದರೆ ಬಹುಶಃ ಹೊಸ ವಾರ್ಡರು ಬಂದಿದಾನೆ ಎಂದು ಕಾಣುತ್ತದೆ.

ಹೂ... ಹೌದು.... ಅವನೇ! 'ಸದ್ಯಃ' ಎಂದು ನಿಟ್ಟುಸಿರುಬಿಡುತ್ತೇನೆ. ಎಷ್ಟು ಹೊತ್ತು ನಿದ್ದೆ ಮಾಡಿದೆನೋ. ಈ ವಾರ್ಡರು ಬೆಳಗಿನ ಸರದಿಯುವನೇನು? ಹಕ್ಕಿಗಳ ಚಿಲಿಪಿಲಿ ಶಬ್ದ ಕೇಳಬರುತ್ತಿಲ್ಲವಲ್ಲ? ಗಂಟೆ ಎಷ್ಟು ಎಂದು ವಾರ್ಡರನನ್ನೇ ಕೇಳಲೆ? ಬೇಡ ಏನೀಗ? ಸಮಯ ಹತ್ತಿರ ಬಂದಾಗ ತಾನಾಗಿ ತಿಳಿಯುತ್ತದೆ. ಕೇಳಿಬಿಟ್ಟರೆ ನನ್ನ ದುರ್ಬಲತೆ ಗೊತ್ತಾಗಿ ಹೋಗುತ್ತದೆ ಅವನಿಗೆ. ಒಬ್ಬ ಸಾಧಾರಣ ವಾರ್ಡರನ ಮುಂದೆ ಬಾಳುವೆಯ ಈ ಕೊನೆಯ ಗಳಿಗೆಯಲ್ಲಿ ಕೀಳುತನ ತೋರಿಸಿಕೊಳ್ಳಲು ಮನಸ್ಸಿಲ್ಲ. ಹುಚ್ಚು ಖೈದಿಯು ಸಾಮಾನ್ಯವಾಗಿ ಮುಂಜಾನೆ ಸಮೀಪಿಸುವಾಗ ಅರಚಲು ತೊಡಗುತ್ತಾನೆ. ಹಾಗಾದರೆ ಇನ್ನೂ ಬೆಳಗಾಗುವುದಕ್ಕೆ ಹೊತ್ತಿದೆ. ನನಗಿನ್ನು ಈ ಲೋಕದೊಂದಿಗೆ ಎರಡೇ ಗಂಟೆಯ ಸಂಪರ್ಕ. ಜೈಲಿನ ಹೊರಗೆ ಇದ್ದಾಗ ಎಷ್ಟೋ ಅವಕಾಶವಿದ್ದಾಗ್ಯೂ ಜೀವನವನ್ನು ಅನುಭೋಗಿಸಲಿಲ್ಲ. ಈ ದೀರ್ಘ ಮೂವತ್ತು ಮೂರು ವರ್ಷಗಳೂ ಹೇಗೆ ಕಳೆದೆನೋ ಗೊತ್ತಿಲ್ಲ. ನಿರರ್ಥಕವಾದ ಬಾಳುವೆಯ ಕೊನೆಯಿಲ್ಲದ ಮರೆವಿನ ಸ್ತರಸ್ತರಗಳಲ್ಲೂ ಒಂದೋ, ಅರ್ಧವೋ ನೆನಪುಗಳ ಅವಶೇಷ ಸೇರಿಕೊಂಡಿದೆ ಇನ್ನೂ. ಇವುಗಳ ಪರಿಚಯ ನನ್ನ ಹೊರತು ಬೇರೆ ಯಾರಿಗೂ ಇಲ್ಲ. ಇನ್ನೂ ಬದುಕಬೇಕೆಂದು ಆಸೆಯಾಗುತ್ತದೆ. ಉಳಿದಿರುವ ಎರಡು ಗಂಟೆಗಳಲ್ಲೇ ಸವಿಯಾದ ಹಗಲುಗನಸುಗಳ ಮೂಲಕ ಜಗತ್ತಿನ ಭೋಗ್ಯ ವಸ್ತುಗಳನ್ನೆಲ್ಲ ಒಟ್ಟಿಗೇ ಹಿಸುಕಿ ಹಿಸುಕಿ ಹೀರಿಕೊಳ್ಳೋಣವೆನ್ನಿಸುತ್ತದೆ. ಒಂದು ಪಕ್ಷ ಈ ಕೊನೆಯ ಗಳಿಗೆಯಲ್ಲೂ ನನ್ನ ಫಾಸಿಯನ್ನು ರದ್ದು ಮಾಡುವ ಹುಕುಂ ಬಂದರೆ? ಆಗುತ್ತದೆ ಹೀಗೇ ಎಷ್ಟೋ ಸಲ, ಎಷ್ಟೋ ಮಂದಿಗೆ ಆಗಿದೆ. ವಧಕಾರನು ಖಡ್ಗವೆತ್ತಿದಾನೆ ಮೇಲಕ್ಕೆ.... ಕುದುರೆ ಸವಾರನೊಬ್ಬ ದೂರದಿಂದ ವಾಯುವೇಗದಲ್ಲಿ ಓಡಿಬರುತ್ತಿದ್ದಾನೆ. ಕೊಲೆಗಡುಕನೇ, ಕೊಲಗಡುಕನೇ ನಿಲ್ಲಿಸು ನಿಲ್ಲಿಸು.... ವಧೆ ಮಾಡಬೇಡ! ಇಂಥ ಕತೆಗಳನ್ನು ಎಷ್ಟು ಓದಿದೇನೋ! ಫಿಥಿಯಾಸ್ ಮತ್ತು ಡಾಮನ್.

ಸಾವಿರದ ಒಂಬೈನೂರ ಮೂವತ್ತನಾಲ್ಕರಲ್ಲಿ ಆದ ಭಯಂಕರ ಭೂಕಂಪದಂತೆ ಈಗ ಆದರೆ ಜೈಲಿನ ಗೋಡೆಗಳೆಲ್ಲ ಮುರಿದುಬಿದ್ದು ನೆಲ ಸಮವಾದರೆ ಹಾಗಾದರೂ ನಾನು ಬದುಕುವ ಆಸೆಯಿಲ್ಲ. ಹೋಗಲಿ, ನನ್ನನ್ನು ಗಲ್ಲಿಗೆ ಹಾಕುವವನಿಗೇನಾದರೂ ಸಕತ್ ಕಾಯಿಲೆ ಆಗಿಬಿಟ್ಟರ, ಆಕಸ್ಮಾತ್? ಆದರೇನು ಬೇರೆಯವನನ್ನು ಕರೆದುಕೊಂಡು ಬರುವುದಕ್ಕೆ ಎಷ್ಟು ಹೊತ್ತು ಹಿಡಿದೀತು? ಅಥವಾ ಹೈಕೋರ್ಟಿನಿಂದಾಗಲಿ, ಪ್ರೊವಿನ್‌ಷಿಯಲ್ ಅಡ್ವೈಸರ್‌ನಿಂದಾಗಲಿ, ರದ್ದು ಮಾಡುವ ಹುಕುಂ ಪತ್ರ ಬಂದು, ಯಾರದೋ ತಪ್ಪಿನಿಂದ ಅದನ್ನ ಯಾರೂ ಒಡೆಯದೆಯೇ ಇದ್ದರೆ? ಅದೇನು ಆಶ್ಚರ್ಯವಲ್ಲ. ಹೀಗೇ ಆಗಿತ್ತಲ್ಲ, ಪಂಜಾಬಿನಲ್ಲಿ ಕೆಲವು ವರುಷಗಳ ಹಿಂದೆ? ದೊಡ್ಡ ಸಾಹೇಬರ ಕಿಸೆಯಲ್ಲೇ ಲಕೋಟೆ ಬಿದ್ದುಕೊಂಡಿತ್ತು. ಆಸಾಮಿಯು ಫಾಸಿಯಾದ ಮೇಲೆ ಎಷ್ಟೋ ಹೊತ್ತಿನ ಮೇಲೆ ಎಲ್ಲರಿಗೂ ಜ್ಞಾಪಕಕ್ಕೆ ಬಂತು. ಏನಿದು ವಿಚಿತ್ರ, ಬದುಕಿರಬೇಕೆಂಬ ಹಂಬಲ ನನ್ನ ಮನಸ್ಸನ್ನು ಎಲ್ಲೆಲ್ಲೋ ಹಾರಿಸಿಕೊಂಡು ಹೋಗುತ್ತಿದೆ! ಯಾವುದೋ ಅನಿರ್ದಿಷ್ಟ ಶಕ್ತಿಯದೋ ಏನೋ. ಅದರ ಅಮೋಘ ನಿರ್ದೇಶದಿಂದೇನೋ! ನಾನು ಹೀಗಾಗಬಹುದೆಂದು ಎಂದೂ

ಅಂದುಕೊಂಡಿರಲಿಲ್ಲ. ಹಾಗಾದರೆ ಸತ್ಯವಾಗೂ ಇದು ಮೃತ್ಯು ಭಯದಿಂದಲೇ ? ಭಯವೇನೋ ಖಂಡಿತ. ಏಕೆಂದರೆ, ಇದೇ ಕೆಲವು ಕ್ಷಣಗಳ ಹಿಂದೆ ವಾರ್ಡರನ ಕಾಲು ಸಪ್ಪಳ ಕೇಳಿದೊಡನೆ ಹೇಗೆ ನಡುಗಿಬಿಟ್ಟಿದ್ದೆ ! ಅದು ಭಯವಲ್ಲದೆ ಮತ್ತೇನು ? ಆತಂಕದ ಕಡೆಯ ಅನುಭೂತಿಯಲ್ಲಿ ಬರುತ್ತದೆ ನಿರಾಸೆ. ಆ ನಿರಾಸೆಯ ಪ್ರತಿಕ್ರಿಯೆಯೇ ಈಗ ನನ್ನ ಮನಸ್ಸಿನಲ್ಲಿ ಆಗುತ್ತಿರುವುದು.

ದಪ್ಪನೆಯ ಸಣಬಿನ ಹಗ್ಗ – ಚಿಕ್ಕ ವಯಸ್ಸಲ್ಲಿ ನಾವು ಇದನ್ನೇ 'ಲಾಕ್-ಲೈನ್' ಎನ್ನುತ್ತಿದ್ದೆವು. ಆ ಹಗ್ಗದ ನಡುವೆ ಒಂದು ಕುಣಿಕೆ ಅದರ ಬುಡದಲ್ಲಿ ಹಿತ್ತಾಳೆಯದೊಂದು ಗುಬಟು. ಹಗ್ಗಕ್ಕೆ ಉದ್ದಕ್ಕೂ ಚೆನ್ನಾಗಿ ಕೊಬ್ಬು ಬಳಿದಿರುತ್ತದೆ. ತಳಗಡೆ ಕತ್ತಲು ಕತ್ತಲಾಗಿರುವ ಹಳ್ಳ..... ಬಾವಿಯಂತಿರುತ್ತದೆ. ಆ ಹಳ್ಳ ಹೆಚ್ಚು ಆಳ ಇರುವುದಲ್ಲ. ಮರದ ಹಲಗೆಯನ್ನು ಎಳೆದೊಡನೆ ಶರೀರವೆಲ್ಲ ನೆಲದ ಆಧಾರವಿಲ್ಲದೆ ತೂಗಿಬೀಳುವಾಗ ಕಾಲು ಜಮೀನಿಗೆ ತಾಕದಿರಲಿ, ಎಂದೇ ಹಳ್ಳ ತೋಡಿರುವುದು. ಅದಕ್ಕೆ ಆಳವೇಕೆ ? ಇನ್ನೂ ಆಳವಾಗಿ ಅಗೆದುಬಿಟ್ಟರೆ ನೀರು ಬರುತ್ತದೆ. ನಾಲ್ಕೈದು ಮೊಳದಷ್ಟು ಆಳ ಇರಬಹುದು. ಮೇಲಿಲ್ಲ. ಹಳ್ಳ ಆಳ ಇದ್ದಷ್ಟೂ ಹಗ್ಗವೂ ಉದ್ದವಾಗಿರಬೇಕು. ಅಷ್ಟೇ ಶರೀರದ ತೂಗಾಡುವಿಕೆಯೂ ಹೆಚ್ಚಾಗುತ್ತದೆ. ಹೀಗೆ ತೂಗಾಡುವಿಕೆಯೇ ಬಹು ಮುಖ್ಯ. ಅದೇ ಬೇಕಾಗಿರುವುದು. ಇಲ್ಲದೆ ಹೋದರೆ ಕುತ್ತಿಗೆಯ ಬಳಿ ಇರುವ ಮೂಳೆ ಹೇಗೆ ಮುರಿಯುತ್ತದೆ. ಫಾಸಿ ಅಂದರೆ ಬರೆ ಉಸಿರು ಆಡದಿರುವ ಹಾಗೆ ಬಿಗಿಸಿಬಿಡುವುದಷ್ಟೇ ಅಲ್ಲ. ಅದಷ್ಟೇ ಆಗಿದ್ದರೆ ಕುತ್ತಿಗೆ ಹಿಸುಕಿಬಿಟ್ಟರೆ ಸಾಕು. ಉಸಿರು ನಿಂತುಹೋಗುತ್ತದೆ. ಇಷ್ಟೆಲ್ಲ ಯಂತ್ರೋಪಕರಣಗಳೇಕೆ ? ಅತಿ ಕಡಮೆ ಸಮಯದಲ್ಲಿ ಕಡಮೆ ಪರಿಶ್ರಮದಿಂದ ಮರಣವುಂಟುಮಾಡುವುದೇ ಫಾಸಿಯ ಉದ್ದೇಶ್ಯ. ಅದಕ್ಕೇ ಅದನ್ನ ತಯಾರು ಮಾಡಿರುವುದು. ಹಿತ್ತಾಳೆಯ ಗುಬಟು ಕುತ್ತಿಗೆಯ ಮೂಳೆಯ ಮೇಲೆ ಬಲವಾಗಿ ಪೆಟ್ಟು ಕೊಡುತ್ತದೆ. ಕೂಟ್ ಎಂದು ಒಂದು ಶಬ್ದವಾಗುತ್ತದೆ. ಆಮೇಲೆ ? ಆ ಮೇಲೆ ಎಲ್ಲ ಶಾಂತ. ಇಲ್ಲ ಒಂದೇ ಏಟಿಗೆ ಶಾಂತ ಹೇಗೆ ಆಗುತ್ತದೆ ? ಮನುಷ್ಯನಾದವನಿಗೆ ಬದುಕಿರಬೇಕೆಂಬ ಹಂಬಲ ಎಷ್ಟಿರುತ್ತದೆ ! ಈ ಬಲವಾದ ಹಂಬಲದ ಒತ್ತಾಯದಿಂದ ಅಸಹಾಯವಾದ, ಶಿಥಿಲವಾದ ಮನುಷ್ಯ ದೇಹ ಒಂದಿಷ್ಟಾದರೂ ಪ್ರತಿಕ್ರಿಯೆ ತೋರಿಸುವುದಿಲ್ಲವೆ ? ಆ ಬಗೆಯ ಹಂಬಲ, ಆ ಇಚ್ಛಾಶಕ್ತಿ ಇಲ್ಲದೆ ಹೋದರೂ ಸಹ ಸ್ನಾಯುಗಳ ಪ್ರತಿಕ್ರಿಯೆಯಿಂದಾದರೂ ಒಂದು ಪ್ರತಿಭಟನೆ ಇರುತ್ತದೆ.

ಮೇಕೆಯನ್ನು ಮಾರಿಗೆ ಬಲಿಕೊಡುವಾಗ ಅದರ ರುಂಡ ಕತ್ತರಿಸಿದ ಮೇಲೂ ವಿಲವಿಲ ಎಂದು ಒದ್ದಾಡುತ್ತಿರುತ್ತದೆ. ಅದನ್ನು ಎಷ್ಟೋ ಸಲ ನೋಡಿದ್ದೇನೆ. ಸರಿ, ಆಮೇಲೆ ಫಾಸಿಯಾದ ಆಸಾಮಿಯ ದೇಹ ಗಾಳಿಯಲ್ಲಿ ತೂಗಾಡುತ್ತಾ ಇರುತ್ತದೆ. ಕತ್ತಲಲ್ಲಿ ಆ ದಿಕ್ಕಿನಿಂದ ಈ ದಿಕ್ಕಿಗೆ ತೂಗಾಡುತ್ತ ಇರುತ್ತದೆ. ಆಮೇಲೆ ಹಗ್ಗವನ್ನು ಸಡಿಲಬಿಡುತ್ತಾರೆ. ಮೃತದೇಹದ ಕಾಲು ಹಳ್ಳದ ತಳವನ್ನು ತಾಕುತ್ತದೆ. ಡಾಕ್ಟರು ಒಂದು ಕಾಲಿನ ಸ್ನಾಯುವನ್ನು ಕತ್ತರಿಸುತ್ತಾನೇನು ? ಏಕೆಂದರೆ ಎಂದೋ ಒಂದು ಕತೆ ಕೇಳಿದ್ದೆ. ಯಾರೋ ಒಬ್ಬ ಎಲ್ಲ ಆದಮೇಲೂ ಜೀವದಿಂದ ಇದ್ದನಂತೆ ಅದಕ್ಕೇ

ಈ ಎಚ್ಚರಿಕೆ ಅಂತ. ಎಲ್ಲ ಸುಳ್ಳು ಕತೆ. ಡಾಕ್ಟರಿಗೆ ಅಂಥ ಕೆಲಸವೇನೂ ಇಲ್ಲ. ಅದೊಂದು ಸರ್ಕಾರಿ ನಿಯಮ. ಡಾಕ್ಟರು ಫಾಸಿಯಾಗುವಾಗ ಹಾಜರಿರಬೇಕು ಎಂದು. ಅದರ ಸಲುವಾಗಿ ಇರುತ್ತಾನೆ ಅಷ್ಟೆ. ಅವನು ತೀರ್ಮಾನ ಕೊಡಬೇಕು.... ಹ್ಞಾ - ಆಸಾಮಿ ಪೂರ್ತಿ ಸತ್ತು ಹೋಗಿದ್ದಾನೆ ಅಂತ. ಕಾನೂನು ಪ್ರಕಾರ ಸಾಯುವವರೆಗೆ ತೂಗುತ್ತ ಇರಬೇಕು. ಅದರ ಸಲುವಾಗೇ ಡಾಕ್ಟರು ಬಂದು ಹೇಳಬೇಕಾಗುತ್ತದೆ.

ಶವದೇಹವು ಇಲ್ಲ, ಇನ್ನು ಅದನ್ನು ಹೆಣವೆಂದೇ ಅನ್ನಬೇಕು. ಹೆಣವನ್ನು ಮೇಲಕ್ಕೆ ತಂದು ಹಾಕಲಾಗುತ್ತದೆ. ಬೀಭತ್ಸ ನೋಟ. ಕಣ್ಣಿನ ಗುಡ್ಡೆಗಳು ಹೊರಕ್ಕೆ ಬಂದುಬಿಟ್ಟಿರುತ್ತವೆ. ಕಂಬಳಿಯಿಂದ ಅದನ್ನು ಮುಚ್ಚಲಾಗುತ್ತದೆ. ಕಾಲಡಿಯಿಂದ ಮರದ ಹಲಗೆ ಸರಿಸಿ ಬಿಡುವಾಗ ತಟಕ್ಕನೆ ಕಾಲು ಇಳಿಯಬಿದ್ದು ಮೈ ಹಗ್ಗದ ಕುಣಿಕೆಯಿಂದ ಕೆಳಗೆ ಜಗ್ಗುತ್ತದಲ್ಲ, ಆಗ ಎಷ್ಟು ಭಯಂಕರ ನೋವಾಗಿರುತ್ತದೋ ಮನುಷ್ಯನಿಗೆ! ಕಲ್ಪಿಸಿಕೊಳ್ಳಲಾಗದಷ್ಟು ತೀವ್ರ ಯಾತನೆ? ಕಣ್ಣಿನಲ್ಲಿ ನೀರು ಸೋರಲು ತೊಡಗಿರುತ್ತದೆ.... ಛೆ, ಆ ನೋವು ಎಷ್ಟು ಸ್ವಲ್ಪ ಸಮಯ ಮಾತ್ರ! ಬಹುಶಃ, ಆ ಹೊತ್ತಿನಲ್ಲಿ ನೋವನ್ನು ಅನುಭಾವ ಮಾಡುವಷ್ಟು ಶಕ್ತಿಯೂ ಇರುತ್ತದೋ ಇಲ್ಲವೋ! ಮಾರಕವಾಗಿ ಗಾಯಗೊಂಡ ಸೈನಿಕನು ಕೂಡ ಯುದ್ಧರಂಗದಲ್ಲಿ ಕಡೆಯವರೆಗೂ ಆವೇಶದಿಂದ ಹೋರಾಡುವುದಿಲ್ಲವೇ? ಆಗ ಅವನಿಗೆ ನೋವಾಗುತ್ತಿರುವುದರ ಪ್ರಜ್ಞೆ ಇರುತ್ತದೆಯೆ? ಆ ನೋವು ಎಷ್ಟೇ ತೀವ್ರವಾಗಿರಲಿ, ಏನಾಯಿತೀಗ? ಜೀವದ ಮೇಲೆ ಆಸೆಬಿಟ್ಟಿರುವಾಗ ಒಂದೆರಡು ಗಳಿಗೆ ನೋವು ತಡೆಯುವುದಕ್ಕಾಗುವುದಿಲ್ಲವೆ? ನೋವನ್ನು ಕುರಿತು ಯೋಚಿಸುವುದೇ ವ್ಯರ್ಥ! ನಾನು ಎಷ್ಟೋ ಸಲ ಕೇಳಿದ್ದೇನೆ, ಸಾಯುವ ಒಂದೆರಡು ಗಳಿಗೆ ಹಿಂದೆ ಇಡೀ ಜೀವನದಲ್ಲಿ ಆದುದೆಲ್ಲ ಚಲನಚಿತ್ರದಂತೆ ಕಣ್ಣ ಮುಂದೆ ನಿಲ್ಲುವುದಂತೆ. ಆದರೆ ನಾನಂತೂ ಅದನ್ನ ನಂಬುವುದಿಲ್ಲ. ಮರಣದಂಡನೆಯೇ ಇಲ್ಲದೆ ಇರುವ ದೇಶದಲ್ಲಿ ನನಗೆ ಎಂಥ ಸಜಾ ಆಗುತ್ತಿತ್ತು – ಬಹುಶಃ ಜೀವಾವಧಿ ಕಾರಾಗೃಹ ವಾಸದ ದಂಡನೆ ಆಗುತ್ತಿತ್ತು. ಹಾಗಾಗಿದ್ದರೆ, ವಿಚಿತ್ರ ಸುಂದರವಾದ ಈ ಜಗತ್ತಿನಿಂದ ಸದಾ ನನ್ನನ್ನ ಬೇರ್ಪಡಿಸಿ ಇಡಲಾಗುತ್ತಿತ್ತು. ಜೈಲಿನಲ್ಲಾದರೂ ಒಂದು ತುಣುಕು ಜಗತ್ತು ಇರುತ್ತಲ್ಲ! ಜೈಲಿನೊಳಗೆ ಸಹ ಚಳಿಗಾಲ, ಬೇಸಗೆ, ಮಳೆಗಾಲ ಹೀಗೆ ಋತುಗಳ ಪರಿವರ್ತನೆಯನ್ನು ಅನುಭವಿಸಬಹುದಲ್ಲ. ಆಕಾಶ, ಗಾಳಿ, ಚಂದ್ರ, ಸೂರ್ಯ, ತಾರೆಗಳು, ಇವೆಲ್ಲ ತಮ್ಮ ಸೊಬಗನ್ನು ನೀಡುವುದರಲ್ಲಿ ಲೋಭ ತೋರಿಸುತ್ತವೆಯೇ? ಬಿರುಗಾಳಿ, ಸುಂಟರಗಾಳಿಗಳು ತೋರುವ ಹುಚ್ಚು ಆರ್ಭಟ, ಮೊದಲ ಮಳೆಯಲ್ಲಿ ನೆನೆದ ಮಣ್ಣಿನ ನಸುಗಂಪು, ನಡು ರಾತ್ರಿಯಲ್ಲಿ 'ಜೊರೋ' ಎಂದು ಒಂದೇ ಸಮನೆ ಸುರಿಯುವ ಮಳೆಯ ಮಧುರ ನಿನಾದ, ಎಷ್ಟು ಸವಿ ನೆನಪುಗಳನ್ನು ತರುವ ಚಿನ್ನದ ಪದರ ಪೊದಿಸಿದಂತಿರುವ ಶರತ್ಕಾಲದ ಬಿಸಿಲು, ರಹಸ್ಯಮಯವಾದ ಮಾಗಿಯ ಮಂಜು, ಜೈಲಿನ ಗೋಡೆಗಳ ಒಳಗಡೆಯೂ ಇವೆಲ್ಲ ತಮ್ಮ ಸ್ವೇಚ್ಛಾ ಪ್ರಭುತ್ವ ಮಾಡುತ್ತ ಇರುತ್ತವೆ. ಇವೆಲ್ಲ ಅಲ್ಲದೆ ಎಷ್ಟು ಮನುಷ್ಯರ ಚಹರೆಗಳನ್ನು ನೋಡಬಹುದು. ಅವರೆಲ್ಲ ಕಳ್ಳರು, ಡಕಾಯಿತರೂ ಆಗಿರಬಹುದು.

ಆದರೂ ಮನುಷ್ಯರಲ್ಲವೇ ? ಅವರುಗಳ ನಡುವೆಯಾದರೂ ಬದುಕಿರುವುದು ಅವರ ನಡುವೆ ಬದುಕಿರುವುದೇ ಹಗ್ಗದಿಂದ ನೇಣು ಹಾಕಲ್ಪಟ್ಟು ಸಾಯುವುದಕ್ಕಿಂತಲೂ ಎಷ್ಟೋ ಒಳ್ಳೆಯದಲ್ಲವೆ ? ಅಮೆರಿಕಾದಲ್ಲಾದರೆ ಹೇಗೋ ಎಲೆಕ್ಟ್ರಿಕ್ ಚೇರಿನಲ್ಲಿ ಕೂತುಕೊಂಡರೆ ಒಂದು ಸ್ವಿಚ್ ಒತ್ತಿದ ತತ್‌ಕ್ಷಣದೊಳಗಾಗಿ ಎಲ್ಲಾ ಮುಕ್ತಾಯ ! ನೋವು ಸ್ವಲ್ಪವೂ ಇಲ್ಲ. ಆದರೆ ಸಾವಿಗೆ ಮುನ್ನ ಆಗುವ ಮಾನಸಿಕವಾದ ಯಾತನೆ ಮಾತ್ರ ಇಲ್ಲೂ ಅಲ್ಲೂ ಒಂದೇ. ಆದರೆ ಅವರ ಮೃತ್ಯು ದಂಡನೆಯ ಯಂತ್ರ ಎಷ್ಟೋ ನಯ ! ಅದೇ ವ್ಯತ್ಯಾಸ. ಆದರೆ ಬೇರೆ ಕೆಲವು ದೇಶಗಳಲ್ಲಿ ಇರುವಂತೆ ತುಪಾಕಿಯಿಂದ ಸುಡಲ್ಪಟ್ಟೋ, ಕೊಡಲಿಯಿಂದಲೋ, ಖಡ್ಗದಿಂದಲೋ ಕಡಿಯಲ್ಪಟ್ಟೋ ಅಥವಾ ಗಿಲಟಿನ್ ಇಂದ ರುಂಡಮುಂಡದಿಂದ ಬೇರ್ಪಡಿಸಲ್ಪಟ್ಟೋ ಸಾಯುವುದಕ್ಕಿಂತ ನಮ್ಮ ದೇಶದ ವ್ಯವಸ್ಥೆಯೇ ಎಷ್ಟೋ ವಾಸಿ ! ಕೊಡಲಿಯಿಂದ ಕುತ್ತಿಗೆ ಕೊಯ್ಯುವ ಮಾತು ಕೇಳಿದ ಕೂಡಲೇ ಮೈಯೆಲ್ಲ ನಡುಗುತ್ತದೆ. ಹೋಗಲಿ, ಫಾಸಿಯಾದ ಆಸಾಮಿಗೆ ಮಾರ್‌ಫಿಯಾ ಇನ್‌ಜೆಕ್ಷನ್ ಕೊಟ್ಟೋ, ಕ್ಲೋರೋಫಾರಮ್ ಕೊಟ್ಟೋ ಮೂರ್ಛೆ ಹೋಗಿಸಿ ಆಮೇಲೆ ಯಾವ ರೀತಿಯಲ್ಲಿ ಬೇಕಾದರೂ ಮೃತ್ಯು ದಂಡನೆಯನ್ನು ಜಾರಿಗೆ ತಂದರೆ ಸರ್ಕಾರಕ್ಕೆ ಏನು ನಷ್ಟವಾಗುತ್ತದೆ ? ಹೀಗೆ ಮಾಡುವುದರಿಂದ ಆ ಬಡಪಾಯಿಯನ್ನು ದೈಹಿಕ ಮತ್ತು ಮಾನಸಿಕ ಯಾತನೆಗಳಿಂದ ತಪ್ಪಿಸಬಹುದಲ್ಲ ? ತಪ್ಪು ಮಾಡಿದ ಮನುಷ್ಯನನ್ನು ಹೇಗೋ ಸಮಾಜದ ಹೊರಗೆ ಎಸೆದು ಬಿಡಬೇಕೆಂದೇ ಸರ್ಕಾರದ ಗುರಿ ಆಗಿದ್ದರೆ, ಪ್ರಜ್ಞೆ ಇಲ್ಲದ ಹಾಗೆ ಮಾಡಿದ ಮೇಲೇ ಫಾಸಿಯವ್ಯವಸ್ಥೆ ಮಾಡಬಹುದಾಗಿತ್ತು. ಈ ಎಲ್ಲಾ ವಿಧಾನಗಳಿಗಿಂತಲೂ ಪೊಟಾಸಿಯಂ ಸೈನೈಡ್ ಉತ್ತಮ. ಒಂದೇ ಒಂದು ಸೆಕೆಂಡಿನಲ್ಲಿ ಎಲ್ಲ ಮುಗಿದು ಹೋಗುತ್ತದೆ.

ನಮ್ಮ ನೀಲೂ ಕಾಲೇಜು ಲ್ಯಾಬರೇಟರಿಯಿಂದ ಸ್ವಲ್ಪ ಸೈನೈಡ್ ತಂದಿದ್ದ. ಈ ವಸ್ತುವನ್ನು ಕುರಿತು ಎಷ್ಟು ವಿಧವಾದ ಆಲೋಚನೆಗಳು, ಎಷ್ಟು ಕಲ್ಪನೆ, ಭ್ರಾಂತಿಗಳು ! ರಬ್ಬರಿನ ಚಿಕ್ಕ ಕ್ಯಾಪಸೂಲಿನಲ್ಲಿ ಅದನ್ನು ತುಂಬಿ ಬಾಯಲ್ಲಿಟ್ಟುಕೊಂಡಿರುವುದೇ ಎಲ್ಲಕ್ಕಿಂತಲೂ ಒಳ್ಳೆಯ ಮಾರ್ಗ. ಅದೇ ಮಾಡತಕ್ಕದ್ದು ಎಂದು ತೀರ್ಮಾನವೂ ಆಯಿತು. ದಸ್ತಗಿರಿಯಾದರೂ ಭಯವಿಲ್ಲ. ಮನಸ್ಸು ಬಂದಾಗ ಬಾಯಲ್ಲಿರುವ ಕ್ಯಾಪಸೂಲನ್ನು ಹಲ್ಲಿನಿಂದ ಕಚ್ಚಿ ತೂತು ಮಾಡಿ ಬಿಡುವುದು, ಅಷ್ಟೇ. ಯಾವುದನ್ನು ಮೊದಲೇ ಯೋಚಿಸಿ, ನಿರ್ಧಾರ ಮಾಡಿದ್ದೆನೋ ಅದನ್ನೇ ಮಾಡಿಬಿಟ್ಟಿದ್ದರೆ ಈಗಿನ ಈ ಮಾನಸಿಕ ಯಾತನೆಗ ಈ ದುಶ್ಚಿಂತೆಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ಆದರೆ, ಆಗ ಆ ಸಮಯದಲ್ಲಿ ನಾನು ನಿಜವಾಗಿಯೂ ಆ ಸಾಮಾನಿನ ಅವಶ್ಯಕತೆ ಎಂದಾದರೂ ಬಂದೀತು ಎಂದು ನಿರೀಕ್ಷಿಸಿಯೇ ಇರಲಿಲ್ಲವಲ್ಲ ! ಹಾಗೆ ನಿರೀಕ್ಷಿಸಿದ್ದರೆ ಆ ನಡುರಾತ್ರಿ ಬೂಟ್ಸಿನ ಶಬ್ದ ಕೇಳಿದಾಗಲೇ ಕ್ಯಾಪ್‌ಸೂಲನ್ನು ಅಗಿದು ಬಿಡಬಹುದಾಗಿತ್ತು. ಬಾಗಿಲು ತೆಗೆದೊಡನೆ ಅವರೆಲ್ಲ ಆಶ್ಚರ್ಯದಿಂದ ಕಲ್ಲಾಗಿ ಬಿಡುತ್ತಿದ್ದರು. ಕೊಲೆಗಡುಕ ಕೆಲಸಕ್ಕೆ ನಿಯಮಿಸಲ್ಪಟ್ಟ ಖೈದಿ ಹತಾಶನಾಗಿ ಬಿಡುತ್ತಿದ್ದ. ಸೂಪರಿಂಟೆಂಡೆಂಟ್ ಸಾಹೇಬರು ಏನು ಗೋಳು ಬಂತಪ್ಪಾ ಎಂದು ಕೈ ಕೈ ಹಿಸುಕಿಕೊಳ್ಳುತ್ತಿದ್ದರು. ಇನ್ನು ತನಿಖೆ, ವಿಚಾರಣೆ, ಮೇಲಧಿಕಾರಿಗಳ

ಕಡೆಯಿಂದ ಸಾವಿರಾರು ತಕರಾರುಗಳು. ಇಂಥವಕ್ಕೆಲ್ಲ ಗುರಿಯಾಗಬೇಕಾಗುತ್ತೆ. ಎಲ್ಲರೂ ಈ ಆಸಾಮಿ, ಭಯದಿಂದ ಹಾರ್ಟ್ ಫೇಲ್ ಆಗಿ ಸತ್ತಿದ್ದಾನೆ ಎಂದುಕೊಳ್ಳುತ್ತಿದ್ದರು. ಆಮೇಲೆ ಪೋಸ್ಟ್ ಮಾರ್ಟಮ್ ಅಂತೂ ಖಂಡಿತವಾಗಿ ಆಗುತ್ತಿತ್ತು. ಆಗ ಪೊಟಾಸಿಯಮ್ ಸೈನೈಡ್ ಕಾರಣ ಎಂದು ಗೊತ್ತಾಗಿ ಹೋಗುತ್ತಿತ್ತು.

ಆದರೆ ಸೈನೈಡನ್ನು ತಿನ್ನುವುದು ಅಷ್ಟು ಸುಲಭವಲ್ಲ. ಆಗೊಂದು ಸಲ ಪ್ರಯತ್ನ ಪಟ್ಟು ಸಾಧ್ಯ ಆಗಲಿಲ್ಲ. ಒಮ್ಮೆ ನಾನು ಡಿಸ್‌ಪೆಪ್‌ಸಿಯಾ (ಅಜೀರ್ಣ ರೋಗ)ದಿಂದ ನರಳುತ್ತಿದ್ದೆ. ಸಂಜೆ ಪ್ರತಿನಿತ್ಯವೂ ಫುಟ್‌ಬಾಲ್ ಪಂದ್ಯ ನೋಡಲು ಹೋಗುತ್ತಿದ್ದೆ. ಒಂದು ದಿನ ನಮ್ಮ ಜಿತೇನದಾ ಎಸ್.ಡಿ.ಓ. ಸಬ್ ಡಿವಿಜನ್ ಆಫೀಸರ್ ಸಾಹೇಬರನ್ನು ಕರೆಯುತ್ತಿದ್ದುದನ್ನು ಕಂಡೆ "ಕಮ್ ಅಪ್ ಇಸ್‌ಮೇಲ್" ಇಬ್ಬರೂ ತಮ್ಮ ಕಾರಿನಲ್ಲಿ ನಿಂತು ಆಟ ನೋಡತೊಡಗಿದರು. ಪರಸ್ಪರ ಹೆಗಲ ಮೇಲೆ ಕೈ ಹಾಕಿಕೊಂಡಿದ್ದರು. ಆಗ ಅದನ್ನು ನೋಡಿ ನನ್ನ ಮನಸ್ಸು ಏನೋ ಒಂದು ಬಗೆಯಾದ ನಿರಾಸೆಯಿಂದ ತುಂಬಿಹೋಯಿತು. ನನ್ನ ದುರ್ಬಲತೆ, ಹೀನತೆ, ಚತುರತೆಯಿಲ್ಲದಿರುವಿಕೆ ಇವೆಲ್ಲ ಸೇರಿ ಮತ್ತೆ ಮತ್ತೆ ಮನಸ್ಸನ್ನು ಕೊರೆಯುತ್ತ ಬಂತು. ನಮ್ಮ ಜಿತೇನದಾ ಎಂಥ ಚತುರ, ಎಂಥ ಚಟುವಟಿಕೆಯ ಆಳು! ನಾನೇಕೆ ಹಾಗೆ ಆಗಲಿಲ್ಲ ಎಂದು ಅನ್ನಿಸತೊಡಗಿತು. ಅಂದರೆ ಅವನಂತೆ ನಾನೂ ಎಸ್.ಡಿ.ಓ. ಸಾಹೇಬರೊಂದಿಗೆ ಸಲಿಗೆಯಾಗಿರಲು ಆಸೆ ಪಟ್ಟೆನೆಂದಲ್ಲ. ಛೆ, ಅದಲ್ಲವೇ ಅಲ್ಲ. ಆದರೂ ನನ್ನ ಅಪ್ರಯೋಜಕತೆಯ ಬಗ್ಗೆ ನನಗೇ ಜುಗುಪ್ಸೆಯುಂಟಾಯಿತು. ಬದುಕಿದ್ದು ತಾನೇ ಏನು ಪ್ರಯೋಜನ? ಈ ಬಗೆಯಾಗಿ ಕೀಳುತನದ ಬಾಳುವೆ ಇಲ್ಲದಿದ್ದರೆ ತಾನೆ ಏನು? ಸತ್ತುಹೋದರೆಯೇ ವಾಸಿ. ಹೀಗೆಂದು ಜೀವನದ ಮೇಲೇ ನಿರಸನ ಹುಟ್ಟಿ ಸಾಯುವುದೇ ಸರಿ ಎಂದು ಮನಸ್ಸು ಮಾಡಿದೆ. ಅವತ್ತು ರಾತ್ರಿಯೇ ಸೈನೈಡ್ ನುಂಗಿ ಸಾಯುತ್ತೇನೆಂದು ಮನಸ್ಸು ಮಾಡಿದೆ. ಆದರೆ ಆಗಲಿಲ್ಲ. ಇಡೀ ರಾತ್ರಿ ನುಂಗಲೋ ಬೇಡವೋ ಎಂದು ಯೋಚಿಸುತ್ತ ಯೋಚಿಸುತ್ತ ಕಾಲ ಕಳೆದೆ. ಹೀಗೆ ಎಷ್ಟು ಹೊತ್ತಿನವರೆಗೂ ಒಂದು ನಿರ್ಧಾರಕ್ಕೆ ಬರದೆ ಹತ್ತಿರದಲ್ಲೇ ಇದ್ದ ಜಿಲ್ಲಾ ಕಾಂಗ್ರೆಸ್ ಆಫೀಸಿನ ದೊಡ್ಡ ಗಡಿಯಾರ ಗಂಟೆ ಹೊಡೆಯುವುದನ್ನು ಕೇಳುತ್ತ ಬಂದೆ. ಆಮೇಲೆ ನಿಷ್ಕರ್ಷೆ ಮಾಡಿಕೊಂಡಿದ್ದ ಕಡೆಯ ಗಳಿಗೆ ಹತ್ತಿರ ಬರುತ್ತಲೂ "ಇವತ್ತು ಬೇಡ, ನಾಳೆ ನೋಡೋಣ" ಎಂದುಕೊಂಡು ಅಲ್ಲೇ ಬಿಟ್ಟೆ. 'ಲೇಡಿಸ್ ಆಫ್ಟರ್ ನೂನ್' ಎಂಬ ಬಿಸ್ಕತ್ ತಿನ್ನಬೇಕೆಂದು ಬಹಳ ದಿನದಿಂದ ಆಸೆ ಇತ್ತು. ಅದನ್ನು ತಿನ್ನದೆಯೇ ಸಾಯಬೇಕಲ್ಲ ಯಾಕೆ? ನಾಳೆ ಆ ಇಷ್ಟಪೂರ್ತಿ ಮಾಡಿಕೊಂಡು ಆಮೇಲೆ ಆತ್ಮಹತ್ಯೆಯ ಯೋಚನೆ ಮಾಡೋಣವಂತೆ ಎಂದುಕೊಂಡು ಮಲಗಿ ನಿದ್ದೆ ಮಾಡಿದೆ. ಮರುದಿನ ಗೊತ್ತೇ ಇದೆಯಲ್ಲ! ಮನಸ್ಸಿನ ಜಾಡೇ ಬೇರೆ ನಮೂನೆಯಾಗಿಬಿಟ್ಟಿತು. ಆಮೇಲೆ ಎಷ್ಟೋ ಸಲ ಇದನ್ನು ಕುರಿತು ಯೋಚಿಸಿದಾಗಲ್ಲ, ನಾನು ಮಾಡಿದ ಕೆಲಸ ಎಲ್ಲಾ ಬರೇ ಒಂದು ಹಾಸ್ಯದ ಕತೆಯಾಗಿ ಹೋಯಿತು ಅನ್ನಿಸಿತು. ಆದರೆ ಇವತ್ತು ಆ ಸೈನೈಡ್ ನನ್ನ ಬಳಿ ಇದ್ದಿದ್ದರೆ ತಿಂದುಬಿಡುತ್ತಿದ್ದೆ. ಇದು ಸಹ ಸ್ವೇಚ್ಛೆಯಿಂದ ಮಾಡುವ ಆತ್ಮಹತ್ಯೆ ಅಲ್ಲ, ಇನ್ನೊಂದು

ಬರಲಿರುವ ವಿಪತ್ತಿನಿಂದ ಪಾರಾಗುವ ಸಲುವಾಗಿ ಮಾತ್ರ. ಸೈನೈಡಿನ ಸೀಸೆಯನ್ನು ನಿಂಬೇ ಗಿಡದ ಅಡಿಯಲ್ಲಿ ಹೂತು ಬಂದಿದ್ದೆ. ಅದಕ್ಕೆ ಮೊದಲು ಸೀಸೆಯನ್ನು ಬಾದಾಮಿ ಬಣ್ಣದ ಒಂದು ಹಳೆಯ ಕಾಲು ಚೀಲದೊಳಗಡೆ ಇಟ್ಟು ಅದನ್ನು ನೆಲದೊಳಗೆ ಹೂತಿಟ್ಟೆ ಏಕೆ ಹಾಗೆ ಮಾಡಿದೆನೋ ಹೇಳಲಾರೆ. ಈಗಲೂ ಅದು ಅಲ್ಲೇ ಇದೆ ಖಂಡಿತ.

ನಿಂಬೆಗಿಡದ ತಳಭಾಗದಲ್ಲಿರುವ ಸಣ್ಣ ರೆಂಬೆಗಳು ಸದಾ ಮಣ್ಣಿನಿಂದ ಬಳಿಯಲ್ಪಟ್ಟಿರುತ್ತವೆ. ಅದನ್ನು ಲೇಖನಿಗಳಂತೆ ಬಳಸುವ ಸಲುವಾಗಿ ಈ ಏರ್ಪಾಡು. ಜಿಲ್ಲೆಯ ಕಾಂಗ್ರೆಸ್ ಕೆಲಸಗಾರರು ಜಿಲ್ಲೆಯ ಆಫೀಸಿಗೆ ಬಂದಾಗೆಲ್ಲ ಅವರಲ್ಲಿ ಎಷ್ಟೋ ಮಂದಿ ಈ ಗಿಡದ ಲೇಖನಿಗಳನ್ನು ತೆಗೆದುಕೊಂಡು ಹೋಗುವರು. ನಮ್ಮ ನೀಲುವಿಗೆ ಪ್ರತಿ ಸಲ ಊಟಕ್ಕೆ ಕೂಡುವಾಗ ನಿಂಬೆ ಹಣ್ಣು ಬೇಕು. ತೊವ್ವೆಗೆ ಒಂದೆರಡು ತೊಟ್ಟು ನಿಂಬೆ ಹಣ್ಣು ರಸ ಇಲ್ಲದಿದ್ದರೆ ಅನ್ನ ರುಚಿಸದು ಅವನಿಗೆ. ಆಶ್ರಮದಲ್ಲಿ ಮೀನು, ಮಾಂಸದ ಅಡಿಗೆಯಾಗುವುದಿಲ್ಲ. ಯಾವಾಗಾದರೂ ದೊಡ್ಡದೊಂದು ಮೀನು ತಂದಾಗ ದೊಡ್ಡಮ್ಮನ ಮನೆಯಲ್ಲಿ ನಮ್ಮನ್ನು ಊಟಕ್ಕೆ ಕರೆಯಲಾಗುತ್ತದೆ. ಆ ಮನೆಗೆ ಹೋಗುವಾಗಲೂ ನೀಲೂ ಜೇಬಿನಲ್ಲಿ ಒಂದು ನಿಂಬೆ ಹಣ್ಣನ್ನು ಇಟ್ಟುಕೊಂಡು ಹೋಗುವನು. ಅವರ ಮನೆಯಲ್ಲಿ ಇರುತ್ತದೋ ಇಲ್ಲವೋ ಎಂಬ ಅನುಮಾನ. ಆ ಮನೆಯ ಸಣ್ಣ ಮಗುವಿಗೆ ಸಹ ಇದು ಗೊತ್ತು. ಒಬ್ಬ ಹುಡುಗ ಅವನ ಜೇಬು ಹುಡುಕುತ್ತಾನೆ. ಇನ್ನೊಬ್ಬ ಹೋಗಿ ನೀಲೂ ಮಾಮನ ಜೇಬಲ್ಲಿ ನಿಂಬೆಹಣ್ಣಿದೆ ಎಂದು ಓಡಿಹೋಗಿ ದೊಡ್ಡಮ್ಮನಿಗೆ ತಿಳಿಸುತ್ತಾನೆ. ದೊಡ್ಡಮ್ಮ ಅಡಿಗೆ ಮನೆಯಿಂದ ಕೈ ಒರೆಸಿಕೊಳ್ಳುತ್ತ ಬಂದು, "ಏನೋ ಮಾಛ್ ಪಾತರೀ, ಬಂದುಬಿಟ್ಟಿರೋ ಅಂತೂನೂ?" ಅನ್ನುತ್ತಾಳೆ. ಬಹಳ ಹಿಂದಿನ ಮಾತು. ದೊಡ್ಡಮ್ಮನ ಮನೆಯ ವರಾಂಡದಲ್ಲಿ ಸಾಲುಸಾಲಾಗಿ ಮಣೆಗಳು, ಎಲೆಗಳು ಹಾಕಲ್ಪಟ್ಟಿವೆ. ಮುಂದೆ ದೊಡ್ಡತಪ್ಪಲೆಯಲ್ಲಿ ಅನ್ನ. ನಾನೂ, ನೀಲೂ, ಜಿತೇನದಾ ಫ್ಯಾಂಟಾ ಎಲ್ಲ ಊಟಕ್ಕೆ ಕೂಡಬೇಕು. "ಅರೇ ಮಾಛ್ ಪಾತರಿ ಜೇ! (ಅರೇ, ಇವತ್ತು ಮೀನಿನ ಅಡಿಗೆ ಹ್ಞಾ!) ಎನ್ನುತ್ತ ನೀಲು ಓಡಿ ಹೋಗಿ ಮಣೆಯ ಮೇಲೆ ಕಾಲಿಟ್ಟೊಡನೆ ಮಣೆ ಜಾರಿ ಹಿಂದಕ್ಕೆ ಸರಿಯಿತು. ಅನ್ನದ ತಪ್ಪಲೆಗೆ ತಗುಲಿ ಅದೂ ಬೋರಲಾಗಿ ಬಿದ್ದು ಅನ್ನವೆಲ್ಲ ಚೆಲ್ಲಿ ಹೋಯಿತು. ಎಲ್ಲಾ ನಷ್ಟವಾಯಿತು. ಅವತ್ತಿನಿಂದ ದೊಡ್ಡಮ್ಮ ನೀಲುವಿಗೆ 'ಮಾಛ್ ಪಾತರೀ' ಎಂದು ಕರೆಯುತ್ತಾಳೆ. ಮೊದಲು ಮೊದಲು ಈ ಮಾತಿನಲ್ಲಿ ಸ್ವಲ್ಪ ಪರಿಹಾಸ್ಯದ ಖಾರ ಇರುತ್ತಿದ್ದರೂ ಈಗ ಆ ಹೆಸರು ಸ್ಥಿರವಾದ ಮೇಲೆ ಅದರ ಹಾಸ್ಯದ ಘಾಟನ್ನು ಕಳೆದುಕೊಂಡು ಬಿಟ್ಟಿದೆ. ಆಮೇಲೆ ದೊಡ್ಡಮ್ಮ "ಎಲ್ಲೋ ಬಾರೀಂದ್ರರ* ಮನೆ ಹುಡುಗಾ, ನಿಂಬೆಹಣ್ಣೆಲ್ಲಿ? ಹೆಚ್ಚಿ ಕೊಡುತೇನೆ" ಎಂದಳು.

ಅದೇ ನಮ್ಮ ನೀಲು, ಚೋಟುದ್ದ ಇದ್ದ, ಹಾಫ್ ಪ್ಯಾಂಟ್ ತೊಟ್ಟಿರುತ್ತಿದ್ದ ಕ್ಯಾಪ್ಟನ್ ನೀಲು, ಆ ದೊಡ್ಡಮ್ಮನ 'ಮಾಛ್ ಪಾತರೀ' ನೀಲು, 'ಅಣ್ಣಾ' ಎಂದು ಕರೆಯುವುದಕ್ಕೆ ತೊದಲುತ್ತಿದ್ದ ಆ ನೀಲು ನನ್ನ ಸಂಗಡ ಈ ರೀತಿ ನಡೆದುಕೊಂಡ

* ಬಾರೀಂದ್ರರು ಬ್ರಾಹ್ಮಣರ ಒಂದು ಶ್ರೇಷ್ಠ ಕುಲೀನ ವರ್ಗದವರು ಎಂಬ ನಂಬಿಕೆ.

ಕಡೆಗೂ ? ಅವನ ಕಡೆಯಿಂದ ನಾನೆಂದಿಗೂ ಇಂಥ ನಡವಳಿಕೆಯನ್ನು ನಿರೀಕ್ಷಿಸಿರಲಿಲ್ಲ! ಎಷ್ಟು ಕೆಟ್ಟ ಪರಿವರ್ತನೆಯಾಗಿದೆ ಅವನ ಮನಸ್ಸಿನಲ್ಲಿ? ಛೀ, ಏನಿದು! ನಾನೇಕೆ ಹೀಗೆ ಯೋಚಿಸಲಿಕ್ಕೆ ಮೊದಲು ಮಾಡಿದೆ ? ಒಂದು ಸಲ ನನ್ನ ಕಾಲಿನ ಮೇಲೆ ಒಂದು ಗಾಯವಾಗಿತ್ತು. ಅದಕ್ಕೆ ಏಟು ತಗುಲಿ ನೋವಾದೀತೆಂದು ಕೈಯಲ್ಲಿ ಮುಟ್ಟುತ್ತಿರಲಿಲ್ಲ. ಪೇಟೆಗೆ ಹೋದರೂ, ದಾರಿಯಲ್ಲಿ ಎಲ್ಲಿ ಹೋದರೂ, ಗುಂಪಿನಲ್ಲಿರುವಾಗಲೂ ಗಾಯಕ್ಕೆ ತಗುಲದಂತೆ ಅತಿ ಜಾಗರೂಕತೆಯಿಂದ ಓಡಾಡುತ್ತಿದ್ದೆ. ಮನೆಗೆ ಬಂದು ಕುರ್ಚಿಯ ಮೇಲೆ ಆರಾಮವಾಗಿ ಕೂತಿರುವಾಗ ಕಾಲನ್ನು ಟೇಬಲಿನ ಮೇಲಿಟ್ಟೊಡನೆ ಅದಕ್ಕೆ ತಗುಲಬೇಕೆ ? ಮನಸ್ಸಿನ ಮರ್ಮಸ್ಥಳದಲ್ಲಿ ಆಗಿರುವ ಗಾಯವನ್ನು ಇನ್ನು ಮರೆವಿನ, ನಿರ್ಲಕ್ಷ್ಯದ ಮುಲಾಮಿನಿಂದ ತರ್ಕದ ಲೇಪನದಿಂದ ಮುಚ್ಚಿಡಲು ಸಾಧ್ಯವಿಲ್ಲ. ಛೆ.... ಬೇಡ. ನಾನೇ ನೀಲುವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋದರೆ ಹೊರಗಿನ ಜನರು ಹೇಗೆ ಅರ್ಥ ಮಾಡಿಕೊಂಡಾರು ? ಹಿಂದಿನ ಕಾಲದಲ್ಲಿ ಎಷ್ಟೋ ಕಡೆ ನರಿ ಗ್ರಾಮದಲ್ಲಿ ಉಪದ್ರವಕೊಡುತ್ತದೆಂದು ಅದನ್ನು ಹಿಡಿದು ನಾಲ್ಕು ರಸ್ತೆ ಸೇರುವ ಚೌಕದಲ್ಲಿ ಶೂಲಕ್ಕೆ ಹಾಕುತ್ತಿದ್ದರಂತೆ. ಜನರು ಕೇವಲ ತಮ್ಮ ದೃಷ್ಟಿಯಿಂದಲೇ ಬೇರೊಬ್ಬರ ವ್ಯವಹಾರವನ್ನು ಸರಿಯೋ, ತಪ್ಪೋ ಎಂದು ತೀರ್ಮಾನ ಮಾಡುತ್ತಾರೆ. ನರಿಯು ತನ್ನ ಆಹಾರ ಒದಗಿಸಿಕೊಳ್ಳಬೇಕಾದರೆ ಗ್ರಾಮಸ್ಥರಿಗೆ ಶತ್ರುವಾಗುತ್ತದೆ. ಅದಕ್ಕೆ ಅದರ ಮೇಲೆ ಸೇಡು ತೀರಿಸಿಕೊಳ್ಳುತ್ತಾರೆ. ನೀಲೂ ನನ್ನ ವಿರುದ್ಧ ಮಾಡಿದ ಕೆಲಸ ನನ್ನ ದೃಷ್ಟಿಯಿಂದ ಕೆಟ್ಟದೆನಿಸಿದರೂ ಅವನು ಆರಿಸಿಕೊಂಡಿದ್ದ ದಾರಿಯಲ್ಲಿ ಅದು ಅವನ ಕರ್ತವ್ಯವಾಯಿತು. ನಾನು ಹೀಗೆ ವಿಚಾರ ಮಾಡಿ ಅವನ ದೃಷ್ಟಿಯಿಂದ ಅವನು ಮಾಡಿದ ಕೆಲಸದ ಬಗೆಗೆ ತೀರ್ಪುಕೊಡುವುದು ಯೋಗ್ಯವಾಗುತ್ತದೆ. ನೀಲೂ ಅವತ್ತಿನ ದಿನ ನನ್ನನ್ನ ಭೇಟ್ಟಿಯಾಗಲು ಬಂದಿದ್ದಾಗ ಈ ಕಂಬಳಿಯ ಮೇಲೇ ಕೂತಿದ್ದ. ನನ್ನ ಮುಖದ ಕಡೆ ನೇರವಾಗಿ ನಿಷ್ಕಪಟವಾಗಿ ನೋಡಲು ಆಗಲಿಲ್ಲ ಅವನಿಗೆ. ಅವನ ಕಣ್ಣಲ್ಲೂ ಮುಖದ ಮೇಲೂ ತಪ್ಪಿತಸ್ಥನಂತೆ ಸಂಕೋಚದ ಭಾವ ಯಾಕೆ ? ಎಲ್ಲೋ ಕೊರತೆಯಿದೆ, ಖಂಡಿತ. ಇಲ್ಲವಾದರೆ ಈ ನಾಚಿಕೆ ಏಕೆ ? ಪಶ್ಚಾತ್ತಾಪದ ಚಾಟಿ ಏಟೇ ? ಅಥವಾ ಕೇವಲ ಮರುಕವೆ ? ನೀಲೂ ನನ್ನೊಡನೆ ಏನೋ ಹೇಳಬೇಕೆಂದಿದ್ದ. ಏನು ಹೇಳಬೇಕೆಂದಿದ್ದ ಎಂದೂ ನನಗೆ ಗೊತ್ತು. ಆದರೆ ನಾನು ಅವಕಾಶ ಕೊಡಲಿಲ್ಲ. ಕೊಟ್ಟಿದ್ದರೆ ನನ್ನ ಸಂಯಮವೂ ಮುರಿದು ಬೀಳುತ್ತಿತ್ತು. ನೀಲೂ ಬಂದಿರುವುದು ತನ್ನ ಸ್ವಂತ ಒಡಹುಟ್ಟಿದವನನ್ನು, ಅಣ್ಣನನ್ನು ನೋಡಿ ಹೋಗುವುದಕ್ಕೆ; ತನ್ನ ರಾಜಕೀಯ ಪ್ರತಿದ್ವಂದ್ವಿ ಪಾರ್ಟಿಯ ಸ್ಥಾನೀಯ ಮುಂದಾಳಿನೊಡನೆ ಮಾತನಾಡುವುದಕ್ಕಲ್ಲ. ಅವತ್ತಿನ ದಿನ ಅವನ ಎದುರಿಗೆ ನನ್ನ ಮಾನಸಿಕ ಒಳತೋಟಿಯನ್ನು ಹೊರಗೆ ತೋರಗೊಡಲಿಲ್ಲ. ನಿಜವಾಗಿ ಎಂಥ ಅದೃಷ್ಟ! ನನಗೆ ಸ್ವಲ್ಪದರಲ್ಲೇ ಕಣ್ಣಲ್ಲಿ ನೀರು ಬಂದುಬಿಡುತ್ತದೆ. ಅದೇ ಅಂಜಿಕೆಯಿತ್ತು ನನಗೆ. ಅಂತೂ ಏನಾದರೂ ಆಗಲಿ, ಹೇಗೋ ಒಂದು ಬಗೆಯಾಗಿ ನನ್ನೊಡನೆ ಅವನ ಭೇಟಿಯು ಚೆನ್ನಾಗಿಯೇ ಕಳೆಯಿತೆಂದು ಹೇಳಬಹುದು. ಅವನು ನನ್ನನ್ನು ಬೀಳ್ಕೊಡುವಾಗ ನಾನು ಒಳಗಿನ ದುಃಖ ಹೊರಬೀಳದಂತೆ

ತಡೆದುಕೊಂಡಿದ್ದ. ಆದರೆ ಅವನಂತೂ ಆವೇಗವನ್ನು ತಃಳಿದಿಟ್ಟುಕೊಳ್ಳಲು ಪ್ರಯಾಸಪಡುತ್ತಿದ್ದುದು ಕಾಣಬಂತು. ಹೋಗಿಬರುತ್ತೇನೆಂದು ಹೇಳುವಾಗ ಎರಡು ಕೈಗಳಿಂದಲೂ ನನ್ನ ಬಲಗೈಯನ್ನು ಬಿಗಿಯಾಗಿ ಹಿಡಿದುಕೊಂಡಿದ್ದ. ಒಂದೇ ಒಂದು ಗಳಿಗೆ. ನಡುಗುತ್ತಿರುವ ಆ ಮೃದುವಾದ ಕೈಯ ಹಿಮದಂತೆ ತಣ್ಣಗಿದ್ದ ಸ್ಪರ್ಶವನ್ನು ಈಗಲೂ ಅನುಭವ ಮಾಡುತ್ತೇನೆ. ಅಮ್ಮನನ್ನು ಹೋಗಿ ನೋಡು ಎಂದು ಹೇಳಿದ್ದೆ. ನೋಡಿದನೋ ಇಲ್ಲವೋ ಯಾರಿಗೆ ಗೊತ್ತು? ಅಮ್ಮನನ್ನು ಕಂಡರೆ ಭಯ. ಇನ್ನು ಅಮ್ಮನಿಗೆ ಉಳಿದಿರುವವನು ಒಬ್ಬನೇ ಮಗ. ಕಣ್ಣು ಮುಚ್ಚಿಕೊಂಡು ಅಮ್ಮನ ಮುಖ ಚಿತ್ರಿಸಿಕೊಳ್ಳಲು ಪ್ರಯತ್ನಪಡುತ್ತೇನೆ.

ಅಮ್ಮ ಆಲಿವ್ ಉಪ್ಪಿನಕಾಯಿಯ ಜತೆಯಲ್ಲಿ ಅನ್ನ ಕಲಿಸಿಕೊಂಡು ತಿನ್ನುತ್ತ ಇದ್ದಾಳೆ. ಮುಂಭಾಗದ ತಲೆಗೂದಲು ಕಪ್ಪು ಬಿಳುಪು ಮಿಶ್ರವಾಗಿದೆ. ಕಪ್ಪೇ ಹೆಚ್ಚು ಭಾಗ. ಬೈತಲೆಯ ಬಳಿ ಕೂದಲು ಸ್ವಲ್ಪ ಉದುರಿ ಬೈತಲೆಯ ಭಾಗ ಸ್ವಲ್ಪ ಅಗಲವಾಗಿದೆ. ಅದರ ಮೇಲೆ ಸ್ವಲ್ಪ ಅಗಲವಾಗಿಯೇ ಕುಂಕುಮ ಹಚ್ಚಲಾಗಿದೆ. ಅದರ ಹಿಂದೆಯೇ ತಲೆಯ ಮೇಲೆ ಅರೆ ಹೊದಿಸಿರುವ ಖದ್ದರ್ ಸೀರೆಯ ಕೆಂಪು ಅಂಚು ಕಾಣುತ್ತದೆ. ಕಿವಿ, ಕೊರಳುಗಳಲ್ಲಿ ಯಾವ ಒಡವೆಯೂ ಇಲ್ಲ. ಅರೆ ಮುಚ್ಚಿರುವ ಕಣ್ಣುಗಳ ಕೊನೆ ಭಾಗದಲ್ಲಿ ಸಣ್ಣ ಸಣ್ಣ ಗೆರೆಗಳು ಒಂದು ದೊಡ್ಡದು, ಉಳಿದವೆಲ್ಲ ಕೂದಲಷ್ಟು ಸಣ್ಣ. ಮೂಗಿನ ಕೆಳಭಾಗದಲ್ಲಿ ಎರಡೂ ಕಡೆ ಚರ್ಮದ ರೇಖೆಗಳು ತುಟಿಗಳ ಎರಡೂ ಕೊನೆಯವರೆಗೂ ಹರಡಿವೆ. ಹೊಳೆಯುವ ಆ ಮುಖಬಣ್ಣಕ್ಕೆ ಅವೆರಡು ರೇಖೆಗಳೂ ಸ್ಪಷ್ಟವಾಗಿ ಕಾಣುತ್ತವೆ. ಅಮ್ಮ ತುಟಿ ಮುಂದಕ್ಕೆ ಚಾಚುತ್ತಾಳೆ. ನಾಲಗೆ ನೆಕ್ಕಿಕೊಳ್ಳುತ್ತಿದ್ದಾಳೆ. ಕಂಠನಾಳದ ಮೃದುಕಂಪನದಿಂದ ಅದು ತಿಳಿದುಬರುತ್ತದೆ. ನಾಲಗೆಯನ್ನು ಅಂಗುಳಕ್ಕೆ ತಗುಲಿಸಿ 'ಟಕ್' ಎಂದು ಒಂದು ಬಗೆಯಾದ ಶಬ್ದವನ್ನು ಮಾಡುತ್ತಾಳೆ. ತುಟಿಗಳನ್ನು ತೆರೆದಾಗ ಕೆಳ ಸಾಲಿನ ಹಲ್ಲುಗಳಲ್ಲಿ ಒಂದಿಲ್ಲದಿರುವುದು ಕಾಣುತ್ತದೆ. ಅದರ ನಡುವೆಯಿಂದ ಕೆಂಪನೆಯ ನಾಲಗೆ ಕಾಣುತ್ತದೆ. "ನೀವು ಏಳಿರೋ ಇನ್ನ ನೀವು ಏಳಿ" ಎನ್ನುವಳು. ನಾವು ಕೂತೇ ಇರುತ್ತೇವೆ.

ದೊಡ್ಡಮ್ಮನಿಗೂ ಕೆಳಗಿನ ಸಾಲಿನಲ್ಲಿ ಎಷ್ಟೋ ಹಲ್ಲಿಲ್ಲ. ಹೇಗೆ ಇರುತ್ತದೆ? ಇಪ್ಪತ್ತು ನಾಲ್ಕು ಗಂಟೆ ಪಲ್ಲಿನ ತಳಗಡೆ ತುಟಿಗಳಲ್ಲಿ ಹೊಗೇಸೊಪ್ಪಿನ ಪುಡಿಯ ಜತೆ ಸುಣ್ಣ ಕಲಿಸಿ ತುರುಕಿಕೊಂಡಿರುತ್ತಾಳೆ. ಬೇರೆ ಜನ ವೀಳ್ಯದೆಲೆ ಸಂಗಡ ಹೊಗೇಸೊಪ್ಪಿನ ಪುಡಿ ತಿನ್ನುತ್ತಾರೆ. ಆದರೆ ಹೀಗೇ ಬರೇ ಹೊಗೇಸೊಪ್ಪಿನ ಪುಡಿಯನ್ನು ಮೂರು ಹೊತ್ತೂ ಸೇವಿಸುವವರನ್ನು ನಾನೆಲ್ಲೂ ನೋಡಿಲ್ಲ. ದೊಡ್ಡಮ್ಮ ಈಗ ಏನು ಮಾಡುತ್ತಾ ಇರುತ್ತಾಳೋ! ಇವತ್ತು ರಾತ್ರಿ ದೊಡ್ಡಮ್ಮ ನಿದ್ದೆ ಮಾಡಿರುತ್ತಾಳಾ? ಚಳಿಯಾಗಲಿ, ಸೆಕೆಯಾಗಲಿ, ರಾತ್ರಿ ಮೂರು ಗಂಟೆಯ ವೇಳೆಯಲ್ಲೇ ಎದ್ದು ದೊಡ್ಡಮ್ಮ ಜಪ ಮಾಡುತ್ತಾಳೆ. ಗೋಡೆಯ ಮೇಲೆ ತೂಗು ಹಾಕಿರುವ ರಾಧಾಕೃಷ್ಣರ ಪಟದ ಮೇಲೆ ಬೆಳಕು ಬಿದ್ದಿರುತ್ತದೆ. ಮೂಗಿನ ಮೇಲೆ ಕನ್ನಡಕ ಏರಿಸಿ ದೊಡ್ಡಮ್ಮ ಈ ಕಡೆ ದೃಷ್ಟಿಯಿಟ್ಟು ಸ್ಥಿರವಾಗಿ ಕೂಡುತ್ತಾಳೆ. ಇದು ಆಕೆಯ ಗುರುದೇವನ ನಿರ್ದೇಶ. ದುಂಡು ಮುಖ. ಅಮ್ಮನ ಮಾತಿನಲ್ಲಿ ಸಂಪುಟದ

ಹಾಗಿರುವ ಮುಖ. ಅದರ ಮೇಲೆ ಅಲ್ಲಲ್ಲಿ ಸಿಡುಬಿನ ಕಲೆಗಳು. ಹಣೆಯ ಮೇಲೊಂದು ನೀಲಿ ಹಚ್ಚೆಯ ಬೊಟ್ಟು. ಕೊರಳಲ್ಲಿ ಒಂದು ಮಣಿಗಳ ಸರ. ಜಪಮಾಡುತ್ತ ಮಾಡುತ್ತ ಆಗಾಗ ಪಕ್ಕದ ಕಿಟಕಿಯಾಚೆಗೆ ಹೊಗೇಸೊಪ್ಪಿನ ರಸವನ್ನು ಪಿಚಕಾರಿಯಂತೆ ಉಗುಳುತ್ತಿರುತ್ತಾಳೆ. ಅದೇ ಅವಕಾಶದಲ್ಲಿ ಆಕಾಶದ ಕಡೆ ಬೆಳಗಾಗುವುದಕ್ಕೆ ಇನ್ನೂ ಎಷ್ಟು ಹೊತ್ತು ಎಂದು ನೋಡುತ್ತ ಇರುತ್ತಾಳೆ. ಈ ಬಾರಿ ಪೊರಗಡೆಯ ನೀರಿನ ತೊಟ್ಟಿಯಲ್ಲಿ ಬಕೆಟ್ಟು ಎಸೆಯುವ ಶಬ್ದ ಕೇಳಬರುತ್ತದೆ. ಅದೇ ಕೇರಿಯಲ್ಲಿರುವ ದಿನಸಿ ಅಂಗಡಿಯವ ರಾಮದೇವ ಸಹಾ ಪ್ರತಿದಿನ ಮುಂಜಾನೆಯಾಗುತ್ತಲೂ ತೊಟ್ಟಿಯಿಂದ ನೀರುಕೊಂಡು ಹೋಗಲು ಬರುತ್ತಾನೆ. ಅದೇ ದೊಡ್ಡಮ್ಮನ ಗಡಿಯಾರ. “ಬೇಲಿ ಏಯ್ ಬೇಲಿ - ಇವತ್ತೇನು ಏಳುವುದಿಲ್ಲವೇ ನೀನು ?” - ನವದೀದಿ ಸರಸರನೆ ಹಾಸಿಗೆಯಿಂದ ಎದ್ದು ಕೂಡುತ್ತಾಳೆ.

ಚಿಕ್ಕಂದಿನಲ್ಲಿ ನೀಲುವನ್ನು ಹೀಗೇ ನಾನು ಬೆಳಗ್ಗೆ ಹೊತ್ತು ಎಬ್ಬಿಸಲು ಹೋದರೆ ಅವನು ಮೊಂಡುತನ ಮಾಡುತ್ತಿದ್ದ. “ಬೇಡ.... ಬೇಡ.... ಅಣ್ಣಾ ಎಬ್ಬಿಸಬೇಡ ನಾನು ಸುಮ್ಮನಿರೋದಿಲ್ಲ ನೋಡತಾಯಿರು!” ಎನ್ನುತ್ತ ಮಗ್ಗಲು ತಿರುಗಿ ಮಲಗುವನು. ಮತ್ತೇ ಎಳೆದು ಎಬ್ಬಿಸಲು ಹೋದರೆ “ಮತ್ತೇ!” ಎಂದು ಗರ್ಜಿಸುವನು. ಇನ್ನೂ ಎಳೆದರೆ “ತಿರುಗಿ!” ಎಂದು ಕೂಗುವನು. ಆಗಲೂ ಸುಮ್ಮನಿರದೆ ಎಳೆದರೆ “ಬೇಡ ಅಂದರೂ ಎಳೀತೀಯಾ?” ಎಂದು ಸ್ವಲ್ಪ ಜೋರಾಗಿಯೇ ಅರಚುವನು. ಆಮೇಲೆ ತನ್ನಲ್ಲೇ ಗೊಣಗಿಕೊಂಡು ಗೊಣಗಿಕೊಂಡು ಕಣ್ಣುಜ್ಜುತ್ತ ಎದ್ದು ಕೂಡುವನು. ಆಗ ಅಮ್ಮ “ಶುರುವಾಯಿತು, ಬೆಳಂಬೆಳಗ್ಗೆ ಎದ್ದು ಹಾಪಿನ ಮಂತ್ರ ಜಪಿಸಲಿಕ್ಕೆ!” ಎನ್ನುವಳು. ನೀಲುವಿನ ಮುಖವನ್ನು ಕಣ್ಣೆದುರಿಗೆ ತಂದುಕೊಳ್ಳಲು ಯತ್ನಿಸುತ್ತೇನೆ. ಏನು ಮಾಡಿದರೂ ಆಗಲೊಲ್ಲದು. ಆಗಾಗ ನನ್ನ ಪ್ರಯತ್ನವಿಲ್ಲದೆಯೇ ಅವನ ಚಹರೆ ನನ್ನ ಕಣ್ಣ ಮುಂದೆ ಬರುತ್ತ ಇರುತ್ತದೆ. ಆದರೆ, ಈಗ ಕೊನೆಯ ಗಳಿಗೆಯ ತೃಪ್ತಿಗಾಗಿ ಇಷ್ಟದಿಂದ ಪ್ರಯತ್ನಪಡುತ್ತೇನೆ - ಬರುವುದಿಲ್ಲ. ಆದರೆ ಇನ್ನೆಲ್ಲಿ ಬರುತ್ತದೆ ? ನೀಲೂ ಮುಖ ಬರಮಾಡಿಕೊಳ್ಳಲು ಯತ್ನಿಸಿದರೆ ಮನಸ್ಸಲ್ಲಿ ಇನ್ಯಾರದೋ ಮುಖ ಬರುತ್ತದೆ - ಗಣೌರಿ ಮಹತೋ ಎಂಬವನ ಮುಖ. ಬೋಳುತಲೆ, ಚಪ್ಪಟೆ ಮೂಗು, ಬುಲ್‌ಡಾಗ್‌ನಂತೆ ಮುಖ. ಒಂದು ಕಿವಿಯ ಮೇಲುಭಾಗದಲ್ಲಿ ತೂತುಮಾಡಿ ಚಿನ್ನದ ಉಂಗುರವನ್ನು ಹಾಕಿಕೊಂಡಿದ್ದಾನೆ.

ಮೈ ಏಕೋ ಚಳಿ ಚಳಿಯಾಗುತ್ತಿದೆ. ಮುಂಜಾನೆ ಹೊತ್ತು ಗಾಳಿ ತುಂಬ ತಣ್ಣಗಿರುತ್ತದೆ. ಇನ್ನೆರಡು ಗಂಟೆ ಹೊತ್ತು ಸೆಲ್ಲಿನಲ್ಲಿ ತಣ್ಣಗಿರುತ್ತದೆ. ಹುಚ್ಚ ಖೈದಿ ಆಗಲೇ ಅರಚಲು ಮೊದಲು ಮಾಡಿದ್ದಾನೆ. ಮೂರನೆಯ ನಂಬರಿನಲ್ಲಿ ಯಾವಾಗ ಭಜನ ಶುರು ಮಾಡಿದರೋ ನಾನು ಗಮನಿಸಲೇ ಇಲ್ಲ.

ಅರಳೀಮರದ ಮೇಲೆ ಕಾಗೆಗಳು 'ಕಾ-ಕಾ' ಶಬ್ದ ಮಾಡುತ್ತಿದ್ದುವು. ಈಗ ಇದ್ದಕ್ಕಿದ್ದ ಹಾಗೆ ಸುಮ್ಮನಾಗಿ ಬಿಟ್ಟಿವೆ. ಬಹುಶಃ, ಬೆಳಗ್ಗೆ ಆಗಲಿಕ್ಕೆ ಇನ್ನೂ ಹೊತ್ತಿದೆ ಎಂದುಕೊಂಡೇನೋ. ಮೊದಲು ತಪ್ಪು ಊಹೆ ಮಾಡಿ ಕೂಗಲಿಕ್ಕೆ ತೊಡಗಿದ್ದುವು

ಎಂದು ಕಾಣುತ್ತದೆ. ಇನ್ನು ನನ್ನ ಅವಧಿ ಎಷ್ಟಿದ್ದೀತು ? ಈಗ ಒಂದೊಂದು ಕ್ಷಣಕ್ಕೂ ಎಷ್ಟು ಬೆಲೆ ನನ್ನ ಲೆಕ್ಕದಲ್ಲಿ ? ಸಿನಿಮಾ ಚಿತ್ರದಲ್ಲಿ ಆದರೆ ತೋರಿಸಬಹುದು. ಒಂದು ಮರಳಿನ ಗಡಿಯಾರ ಡಮರುಗದ ಆಕಾರದಲ್ಲಿ. ಮೇಲಿನ ಭಾಗದಲ್ಲಿರುವ ಮರಳು ಖಾಲಿಯಾಗುತ್ತ ಬರುತ್ತಿದೆ. ಆದರೂ ಟಪ್, ಟಪ್ ಎಂದು ಮರಳಿನ ಕಣಗಳು ಅನವರತವೂ ಒಂದೊಂದಾಗಿ ಕೆಳಗೆ ಬೀಳುತ್ತಿದೆ. ಒಂದು ಗಳಿಗೆ ಕೂಡ ನಿಲ್ಲುವುದಿಲ್ಲ ಅಥವಾ ಇನ್ನೊಂದು ಸಾಮ್ಯ.... ಹಣತೆಯಲ್ಲಿರುವ ಎಣ್ಣೆ ಮುಗಿಯುತ್ತ ಬಂದಿದೆ. ಬಹುಶಃ ಗಡಿಯಾರದ ಮುಳ್ಳು ಚಲಿಸುತ್ತ ಇದೆ. ನನ್ನ ಗಡಿಯಾರವೂ ಅದರ ನಮೂನೆಯಲ್ಲೇ ನಡೆಯುತ್ತಿದೆ. ಅದೇ ಕಟ್ಟುನಿಟ್ಟಾದ ನಿಯಮದಲ್ಲಿ ನಡೆಯುತ್ತಿದೆ. ಚಳಿಗಾಳಿ ಬೀಸುವಿಕೆ, ಹುಚ್ಚನ ಅರಚುವಿಕೆ, ಮೂರನೆಯ ನಂಬರಿನ ಭಜನೆ, ಇನ್ನು ಉಳಿದಿರುವುದು ಕೇವಲ ಆಕಾಶ ಕ್ರಮೇಣ ತಿಳಿಯಾಗಿ ಹೋಗುವಿಕೆ. ಶುಕ್ರ ತಾರೆಯನ್ನು ಗುರುತಿಸುವುದಕ್ಕಾಗುತ್ತದೆ ಮತ್ತು ಇವೆಲ್ಲಕ್ಕಿಂತಲೂ ಕಠಿಣವಾದ ಸತ್ಯ, ನನ್ನ ಸೆಲ್ಲಿನ ವಾರ್ಡರನು ಅಂಗಳದಲ್ಲಿರುವ ಚೌಕದಲ್ಲಿ ಕೂತು ತೂಕಡಿಸುತ್ತಿದ್ದಾನೆ.

ಈಗ, ಈ ಗಳಿಗೆ, ಬಿಲೂ ಇದ್ದಾನೆ. ಇನ್ನು ಸ್ವಲ್ಪ ಕ್ಷಣಗಳಾದ ಮೇಲೆ ಇರುವುದಿಲ್ಲ. ರಕ್ತ, ಮಾಂಸಗಳಿಂದ ಮಾಡಲ್ಪಟ್ಟ ಸುಖ, ದುಃಖಗಳಿಂದ ಕೂಡಿದ ಬಿಲೂ ಎಂಬುವವನು ಇನ್ನಿಲ್ಲ. ಸರ್ಕಾರಿ ಗಣತಿ (statistics)ಯಲ್ಲಿ ಒಂದು ಸಂಖ್ಯೆ ಮಾತ್ರ. ಸರ್ಕಾರಿ ಪುಸ್ತಕಗಳಲ್ಲಿ ಅಗಣಿತ ಸಂಖ್ಯೆಗಳಲ್ಲಿ ಒಂದು ಹೆಚ್ಚಾದರೇನು, ಕಡಮೆ ಆದರೆ ಏನು ? ಏನು ವ್ಯತ್ಯಾಸವಾದೀತು ? ವೈಜ್ಞಾನಿಕ ಸಂಶೋಧನೆಗಳಲ್ಲಿ ದೃಷ್ಟಿ ವಿಭ್ರಮ ಅಥವಾ ಉಪಕರಣಗಳ ದೋಷದಿಂದ ನೂರಾರು ಸಂಖ್ಯೆಗಳನ್ನು ಗಣನೆಗೆ ತಂದುಕೊಳ್ಳುವುದಿಲ್ಲ. ವ್ಯವಸಾಯ ಕ್ಷೇತ್ರದಲ್ಲೂ ಎಷ್ಟೋ ಹಾಳು-ಬೀಳುಗಳು ಲೆಕ್ಕಕ್ಕೆ ಬರುತ್ತವೆಯೆ ? ನಾನು ಬಹುಶಃ ಇಂಥವುಗಳಲ್ಲಿ ಒಂದು. ಬಹುಶಃ ಭಾರತ ಸರ್ಕಾರದ ಲೆಕ್ಕಾಚಾರ ಮಾಡುವ ಸಮಯದಲ್ಲಿ ನಾನು ಪೂರ್ಣಿಯ ಜೈಲಿನ 1109ನೆಯ ಫಾಸಿಯ ಆಸಾಮಿ. ಫಾಸಿಯವರ ಶೇಕಡ ಪ್ರಮಾಣದಲ್ಲಿ ಒಂದು ದಶಮಾಂಶದಷ್ಟು ಸೇರಿಸಲ್ಪಡುತ್ತೇನೆ. ಸರ್ಕಾರಿ ರಿಪೋರ್ಟನ್ನು ಮುದ್ರಿಸುವಾಗ ಅಷ್ಟು ಮಟ್ಟಿಗೆ ಆಗುವ ಮಸಿಯ ಖರ್ಚಿಗೆ ಕಾರಣನಾಗುತ್ತೇನೆ. ಇದೇ ನನ್ನ ಬಾಳುವೆಗೆ ಭಲೆ. ರಾಷ್ಟ್ರೀಯ ಇತಿಹಾಸದಲ್ಲಿ ಬಿಲೂ ಬಾಬುವಿನ ದಾನ !

ಎತ್ತಿನ ಬಂಡಿಯ ಚಕ್ರ ಉರುಳುವಾಗ ಕ್ಯಾಂಚ್, ಕ್ಯಾಂಚ್ ಎಂದು ಶಬ್ದ ಮಾಡುವ ಹಾಗೆ ಯಾವುದೋ ಒಂದು ಶಬ್ದ ಆಗುತ್ತಿದೆ. ಬಹುಶಃ ವಾರ್ಡರು ಸೆಲ್ಲಿನ ಬಾಗಿಲು ತೆಗೆಯುವ ಶಬ್ದ. ಇನ್ನೇನು ? ನಿಜವಾಗಿಯೂ ಅದೇ. ಏನು ಅಂದುಕೊಂಡೆನೋ ಅದೇ. ಸಿಮೆಂಟು ಹಾಕಿದ ಅಂಗಳದ ನೆಲದ ಮೇಲೆ ಒಂದೇ ಸಲಕ್ಕೆ ಅನೇಕ ಬೂಟುಗಳ ಶಬ್ದ ಕೇಳಿಬರುತ್ತಿದೆ. ಎಷ್ಟು ಜನ ಬರುತ್ತ ಇದ್ದಾರೋ ! ಒಂದು ದಳ ಸೈನಿಕರ ಪದಧ್ವನಿಗಳ ಪ್ರತಿ ಶಬ್ದಕ್ಕೂ ಒಂದು ಸೇತುವೆ ಮುರಿದುಬೀಳುವ ಸಂಭವವಿದೆಯೆಂದು ಎಲ್ಲೋ ಕೇಳಿದ್ದೆ. ನಿಜವಾಗಿಯೂ, ಶಬ್ದ ಎಷ್ಟು ಜೋರಾಗಿ ಬರುತ್ತಿದೆ. ಈ ಶಬ್ದದ ಜತೆಗೇ ನನ್ನ ಎದೆಯ ಒಳಗಡೆಯೂ ಟಿಪ್ ಟಿಪ್ ಎನ್ನುತ್ತಿದೆ. ಹೃದಯದ ಮಿಡಿತದ ಶಬ್ದವನ್ನು ಸ್ಪಷ್ಟವಾಗಿ ಕೇಳುತ್ತಿದ್ದೇನೆ. ಮೈಯೆಲ್ಲ ನಡುಗುತ್ತಿದೆ. ಜೋರು ಜೋರಾಗಿ ಉಸಿರು ಬಿಡುತ್ತಿದ್ದೇನೆ. ಕಣ್ಣ ಮುಂದೆ ಯಾವುದರದೋ

ಏನೋ ಒಂದು ತೆರೆ ಕಳಚಿ ಬಿದ್ದ ಹಾಗಾಗಿದೆ. ತಲೆಯ ಒಳಗಡೆ ಯಾವುದೋ ಒಂದು ಬಗೆಯಾದ ಚಳಿಯ ಭಾವ, ಖಾಲಿ ಖಾಲಿ ಭಾವ. ಒಮ್ಮೆ ನನ್ನ ಬಲಗೈಯ ಬೆರಳೊಂದು ಸೈಕಲಿನ ಸ್ಪೋಕ್ಸ್‌ಗೆ ಸಿಕ್ಕಿ ಹಾಕಿಕೊಂಡು ಕತ್ತರಿಸಿ ಹೋಗಿತ್ತು. ರಕ್ತ ನಿಲ್ಲಲೇ ಇಲ್ಲ. ಆಗ ಆ ರಕ್ತ ನೋಡಿ ಇದೇ ರೀತಿ ತಲೆಯೊಳಗೆ ಝಿಮ್ ಝಿಮ್ ಅನ್ನತೊಡಗಿತ್ತು.

ಹಣೆಯ ಮೇಲೆ ಮತ್ತು ಮೂಗಿನ ಕೆಳಗೆ ಹನಿ ಹನಿಯಾಗಿ ಬೆವರು ತೋರಿಸಿಕೊಳ್ಳುತ್ತಿದೆ. ಯಾಕೋ ಹೇಳಲಾರೆ, ಎದ್ದು ನಿಂತುಕೊಳ್ಳಬೇಕು ಎಂದೆನ್ನಿಸುತ್ತಿದೆ. ಸಲಾಕೆ ಹಿಡಿದುಕೊಂಡು ಎದ್ದು ನಿಲ್ಲಲು ಯತ್ನಿಸಿದೆ. ಕೈಕಾಲುಗಳು ಸುಮ್ಮನೆ ನಡುಗುತ್ತಿವೆ. ನಿಲ್ಲಲು ಆಗಲೇ ಇಲ್ಲ. ಕಾಲಿನ ಕಡೆ ಪಾರ್ಶ್ವವಾಯು ಬಂದ ಹಾಗೆ ಇದೆ. ಆಗೊಮ್ಮೆ ಟೈಫಾಯ್ಡ್ ಜ್ವರದಲ್ಲಿ ಮಲಗಿದ್ದಾಗ ಮಂಚದಿಂದ ಮೊದಲಬಾರಿ ಇಳಿಯಲು ಹೋಗಿ ಕಾಲು ಹೀಗೇ ಆಗಿತ್ತು. ನಮ್ಮ ವಾರ್ಡರನು ಎದ್ದು ನಿಂತು ತಲೆಯ ಮೇಲೆ ಪಗಡಿ ಸರಿ ಮಾಡಿಕೊಂಡ. ಹುಚ್ಚ ಇನ್ನೂ ಅರಚುತ್ತಲೇ ಇದ್ದಾನೆ. ಮೂರನೆಯ ನಂಬರಿನಲ್ಲಿ ಭಜನೆ ಹಾಡು ನಿಂತಿಲ್ಲ. ಬೂಟಿನ ಶಬ್ದ ಹತ್ತಿರ ಬರುತ್ತಿದೆ. ಇನ್ನೂ ಇನ್ನೂ ಹತ್ತಿರ. ಕಿಬ್ಬೊಟ್ಟೆಯ ನಡುವೆ ಖಾಲಿಯಾಗುತ್ತಿರುವ ಹಾಗಿದೆ. ಹೊಟ್ಟೆಯ ಒಳಭಾಗದಲ್ಲಿ ಮಂಜುಗಡ್ಡೆಯಂತೆ ತಣ್ಣಗಾಗುತ್ತಿರುವಂತೆ ಅನ್ನಿಸುತ್ತಿದೆ. ಯಾವಾಗಲೋ ಒಂದು ಸಲ ಜಾತ್ರೆಯಲ್ಲಿ ರಂಕ ರಾಟಣ ಮೆರ್‍ರಿಗೋರೌಂಡ್‌ದಲ್ಲಿ ಕೂತು ತಿರುಗುತ್ತಿರುವಾಗ ಚಕ್ರ ಮೇಲಿಂದ ಕೆಳಗೆ ಇಳಿಯುತ್ತಿರುವಾಗ ನನ್ನ ಹೊಟ್ಟೆಯಲ್ಲಿ ಹೀಗೇ ಆಗಿತ್ತು. ನಾಲಗೆ ಒಣಗಿ ಹೋಗಿ ಥರಥರ ನಡುಗಲು ತೊಡಗಿದೆ. ಮತ್ತು ಗಂಟಲೊಳಗೆ ಸಿಕ್ಕಿ ಹಾಕಿಕೊಳ್ಳುತ್ತಿರುವಂತಿದೆ.

ಸರಸ್ವತೀ! ಅಮ್ಮಾ! ದೊಡ್ಡಮ್ಮಾ...! ನೀಲೂ...! ನೀಲೂ ಏನು ಮಾಡಿಬಿಟ್ಟೆಯೋ ನೀನು? ಒಂದು ಕಬ್ಬಿಣದ ಹಾರಿಜಾಂಟಲ್ ಬಾರಿನ ಮೇಲೆ ನನ್ನ ಮೃತ ದೇಹ ತೂಗಾಡುತ್ತಿದೆ. ಎರಡು ಕಾಲುಗಳೂ ಗಾಳಿಯಲ್ಲಿ ತೂಗಾಡುತ್ತಿದೆ. ಉತ್ತರ, ಈಶಾನ್ಯ, ಪೂರ್ವ, ಆಗ್ನೇಯ, ದಕ್ಷಿಣ....

ಇದೇನು! ಬೂಟಿನ ಶಬ್ದ ಈಗ ನನ್ನ ದಿಕ್ಕಿಗೆ ಬರುತ್ತಿಲ್ಲ. ನನ್ನ ವಾರ್ಡರು ಹಣಿಕಿ ಹಣಿಕಿ ವಾರ್ಡಿನ ಅಂಗಳದ ಕಡೆ ನೋಡುತ್ತಾನೆ. ಮೂರನೆಯ ನಂಬರಲ್ಲಿ ಭಜನೆ ಹಠಾತ್ತಾಗಿ ನಿಂತು ಹೋಯಿತು. ಮನಸ್ಸಿನ ಉದ್ವೇಗದಿಂದ ನನ್ನ ಕಿವಿಯೇ ಕಿವುಡಾಗಿ ಹೋಯಿತೇನು? ಇಲ್ಲ! ಮೂಗನು ಮಾತಾಡಲು ಯತ್ನಿಸುವಾಗ ಶಬ್ದ ಹೊರಡುವಂಥ ಶಬ್ದವೊಂದು ಕಿವಿಗೆ ಕೇಳಿಸಿತು ಈಗ! ಅತಿ ಕರುಣೆಯ, ಕಾತರದ, ಅಸಹಾಯ ಆರ್ತನಾದ!

ಯಾರು...? ಏಕೆ...?

ಈ ಸಲ.... ಈ ಸಲ.... ಕೇವಲ ಲೆಕ್ಕವಿಲ್ಲದಷ್ಟು ಬೂಟುಗಳ ಶಬ್ದ ಮಾತ್ರ ಅಲ್ಲ. ಗೌರೀಶಂಕರದ ಶಿಖರ ಮುರಿದುಬೀಳುತ್ತಿದೆ! ಭಯಂಕರ ಬಿರುಗಾಳಿಯ ಸಿಡಿಲಿನ ಶಬ್ದ.... ಮತ್ತೆ ಆರ್ತನಾದ.... ಮೋಡಕವಿದ ಮುಗಿಲನ್ನು ಮುಟ್ಟಿ ಸೀಳುವಂಥ ಆರ್ತನಾದ! "ಹುಷಿಯಾರೀಸೆ!" (ಹುಷಾರಿನಿಂದಾ!) ಕಾಲಡಿಯ

ನೆಲ ಒಡೆದು ಚೂರು ಚೂರಾಗಿ ಹೋಯಿತು. ಕೆಳಗೆ.... ಇನ್ನೂ ಕೆಳಗೆ.... ತಳವೇ ಇಲ್ಲದ ಮಬ್ಬಿನ ನಡುವೆ.

"ಮುಂದೆ ದೀಪ ತೋರಿಸು!" ಅನೇಕ ವಿಕೃತಾಂಗರಾದ ಪ್ರೇತಗಳ ನೆರಳುಗಳು ಕ್ರಮೇಣ ಚಿಕ್ಕ ಚಿಕ್ಕದಾಗಿ ಹೋಗುತ್ತ ಲಾಟೀನಿನ ಬೆಳಕಿನಲ್ಲಿ ಸೇರಿ ಹೋಗುತ್ತವೆ. ಲಾಟೀನುಗಳು ಇದೇ ದಿಕ್ಕಿನಲ್ಲಿ ಬರುತ್ತಿವೆ. ಸಾವಿರಾರು ಗ್ರಹ, ಉಪಗ್ರಹಗಳು ತಮ್ಮ ಅಕ್ಷವನ್ನು ತೊರೆದು ನನ್ನ ಕಡೆ ಓಡಿ ಬರುತ್ತಿವೆ. ಪ್ರತಿ ರೋಮಕೂಪದಲ್ಲೂ ನಿರೀಕ್ಷಿಸುತ್ತಿರುವ ಆತಂಕದ ಮುನ್ಸೂಚನೆ.... ಪ್ರತಿ ಸ್ನಾಯುವಿನಲ್ಲೂ ಟೈಫೂನಿನ ಸ್ಫೋಟ! ಈ ಕ್ಷೋಭೆ, ಈ ತಳಮಳ ಕಣ್ಣಿನ ಗುಡ್ಡೆಗಳ ಮಧ್ಯೆಯಿಂದ ಒಡೆದು ಹೊರಗೆ ಬರಬೇಕೆನ್ನುತ್ತಿದೆ. ಈ ಪಾರ್ಶ್ವವಾಯುವಿನ ಹೊಡೆತದಿಂದ ಇನ್ನು ನನ್ನ ಕೈಲಿ ನಿಲ್ಲುವುದಕ್ಕಾಗದು. ಬಿಗಿದ ಮುಷ್ಟಿಯಿಂದ ಸಲಾಕೆಗಳನ್ನು ಹಿಡಿದುಕೊಂಡುಬಿಟ್ಟೆ.

# ಅಪ್ಪರ್ ಡಿವಿಜನ್ ವಾರ್ಡ್

"ರಾಷ್ಟ್ರ ಗಗನದ ದಿವ್ಯ ಜ್ಯೋತಿ ನಮೋ ನಮೋ!" ಸಂಜೆಯ ಕೀರ್ತನೆ ಮುಕ್ತಾಯವಾಯಿತು. ವಾರ್ಡರು ಬಾಗಿಲು ಮುಚ್ಚಿ ತನ್ನೊಳಗೆ ತಾನೇ ಗೊಣಗಿಕೊಳ್ಳುತ್ತಾ ಹೋದ. ಶ್ರೋತೃಗಳ ಪಕ್ಕದಲ್ಲಿ ನಿಂತಿರುವ ಇನ್ನೊಬ್ಬ ವಾರ್ಡರು ಅಲ್ಲೇ ಇದ್ದಾನೆ. ಗೊಣಗಿಕೊಳ್ಳುವುದಕ್ಕೆ ಇನ್ನೇನಿದೆ ಯಥಾ ಪ್ರಕಾರ.

ಒಬ್ಬ ಬಾಬು ಇಲ್ಲಿ, ಇನ್ನೊಬ್ಬ ಬಾಬು ಅಲ್ಲಿ. ಒಬ್ಬರನ್ನ ಕರೆದು ಒಳಗೆ ಕೂಡಿಸಿದ ತತ್‌ಕ್ಷಣ ಇನ್ನೊಬ್ಬ ಬಾಬು ಹೊರಗಡೆ ಹೋಗತಾರೆ. ಒಬ್ಬರು ಕಕ್ಕಸಲ್ಲಿ ಹೋಗಿ ಕೂತಿದಾರೆ, ಇನ್ನೊಬ್ಬರು ಪೂಜೆಗೆ. ಒಬ್ಬರು ಅಂತಾರೆ, "ಒಂದೇ ಒಂದು ನಿಮಿಷ ಸಿಪಾಹೀ ಜೀ" ಇನ್ನೊಬ್ಬರು, "ಈ ಆಟ ಆಗಿಹೋಗಲಿ ಕೈಲಿ ಎಲೆಗಳಿವೆ" ಅಂತಾರೆ. ಈ ಫೂದನ್ ಬಾಬುಗಳು ಆ ಕಡೆ ಈ ಕಡೆ ಅಡ್ಡಾಡುವುದು ಇನ್ನೂ ಮುಗಿಯೋದೆ ಕಾಣೆ. ಅವರು ನೋಡತಾನೇ ಇದ್ದಾರೆ. ಈ ಕಡೆ ನಾನು ಬಾಗಿಲು ಮುಚ್ಚಿಕೊಂಡು ಹೋಗಲಿಕ್ಕೆ ನಿಂತೇ ಇದ್ದೇನೆ. ಆದರೂ ಒಳಕ್ಕೆ ಬರವೊಲ್ಲರು. ತಿಂದದ್ದು ಅರಗಿಸಿಕೊಳ್ಳಲಿಕ್ಕೆ ಇಷ್ಟುಮಟ್ಟಿಗೆ ನಡೆಯಬೇಕಾಗಿದ್ದರೆ ಅಷ್ಟು ಹೆಚ್ಚಾಗಿ ತಿನ್ನೋದು ಯಾಕೆ ಅಂತ? ಇವರು ತಮ್ಮ ಮನೆಗಳಲ್ಲಿ ತಿನ್ನೋದೇನು ನನಗೆ ಗೊತ್ತೇ ಇದೆ. ಇಲ್ಲಿ ಅಪ್ಪರ್ ಡಿವಿಜನ್ (ಮೇಲು ವರ್ಗ) ಸಿಕ್ಕಿದೆಯಲ್ಲ ಅಂತ ಹೊಟ್ಟೆ ಒಳಗೆ ಗಾಳಿ, ನೀರು ಓಡಾಡಲಿಕ್ಕಾದರೂ ಸ್ವಲ್ಪ ಜಾಗ ಬಿಡಬೇಡವಾ? ಹತ್!

ಮೆಹರಚಂದ್‌ಜೀಗೆ "ರಾಷ್ಟ್ರ ಗಗನದ" ಹಾಡಿನ ರಾಗ ಗೊತ್ತು. ನಾವೆಲ್ಲ ಅವರ ಜತೆಯಲ್ಲಿ ದನಿ ಸೇರಿಸುತ್ತೇವೆ, ಅಷ್ಟೆ. ಇಲ್ಲಿ ಈ ಹಾಡಿನ ಹೆಸರು. "ಪ್ರಾರ್ಥಾನಾ!" (ಪ್ರಾರ್ಥನೆ) ಆಗಿ ಹೋಗಿದೆ. ಪ್ರಾರ್ಥನೆಗೆ ಮೊದಲು ಲಾಟೀನಿನ ಬತ್ತಿಗಳನ್ನು ಕೆಳಗಿಳಿಸಬೇಕಾಗುತ್ತದೆ. ಪ್ರತಿದಿನ ಈತನು ಹಾಡಿನಲ್ಲಿ ಒಂದು ಪಂಕ್ತಿ ಮರೆತು ಹೋಗುತ್ತಾನೆ. ಆಗ ದೀಪಗಳನ್ನು ಸ್ವಲ್ಪ ಏರಿಸಿದರೆ ಅವನು ಜೇಬಿನಿಂದ 'ಆಶ್ರಮ ಭಜನಾವಳಿ' ಪುಸ್ತಕವನ್ನು ತೆಗೆದು ನೋಡುತ್ತಾನೆ. ಇಷ್ಟು ದಿನಗಳಿಂದ ಈ ಹಾಡನ್ನೇ ಹಾಡುತ್ತಿದ್ದಾನೆ. ಇನ್ನೇನು ಕೆಲವು ದಿನಗಳಿಗೆ ಅವರಿಗೆ ಬಿಡುಗಡೆಯೂ ಆಗುತ್ತದೆ. ಆದರೂ ಹಾಡನ್ನು ಪೂರ್ತಿಯಾಗಿ ಬಾಯಿಪಾಠ ಮಾಡಿಕೊಂಡಿಲ್ಲ. ಉಳಿದವರೆಲ್ಲರಿಗೂ ಬಾಯಿಗೆ ಬಂದುಬಿಟ್ಟಿದೆ. ಆದರೆ ಎಲ್ಲರೂ ಮಜ ನೋಡುತ್ತಿರುತ್ತಾರೆ. ಪ್ರತಿದಿನ ಭಜನೆಯಾಗುವಾಗ ಹಾಡಿನಲ್ಲಿ ಈ ಪಂಕ್ತಿಯನ್ನು ಹೇಳಬೇಕಾಗಿ ಬಂದೊಡನೆ ಎಲ್ಲರೂ ಮುಸಿಮುಸಿ ನಗುತ್ತಿರುತ್ತಾರೆ. ಏಕೆಂದು ಮೆಹರ್‌ಚಂದ್‌ಜೀಗೆ ಗೊತ್ತಾಗುವುದಿಲ್ಲ. ಅವನು ಆ ಪಂಕ್ತಿ ಪುಸ್ತಕದಲ್ಲಿ ನೋಡಲು ಲಾಟೀನಿನ ದೀಪ ಏರಿಸುವುದಕ್ಕೆ ಕೈ ಚಾಚಿದಾಗ ನೆರೆದಿದ್ದವರೆಲ್ಲ ಕಷ್ಟದಿಂದ ನಗು ತಡೆದುಕೊಳ್ಳುವ ಶಬ್ದ ಕೇಳಬಹುದು. ನಾನೊಂದು ಸಲ ಅವನಿಗೆ ಆ ಪಂಕ್ತಿ

ಜ್ಞಾಪಿಸಲು ಯತ್ನಿಸಿದೆ. ಆದು ಅವನಿಗೆ ಇಷ್ಟವಾಗುವುದಿಲ್ಲ ಅಂತ ಅನ್ನಿಸಿತು. ಆಮೇಲೆ ಸುಮ್ಮನೆ ಇರಬೇಕಾಯಿತು.

ಈಗಿನ ಏರ್ಪಾಡಂತೂ ಚೆನ್ನಾಗೇ ಇದೆ. "ಲಾಕ್-ಅಪ್" (ಎಲ್ಲರನ್ನೂ ಕೂಡಿಸಿ ಬಾಗಿಲು ಬೀಗ ಹಾಕುವುದು) ಮಾಡುವ ಹೊತ್ತಿಗೆ ಸರಿಯಾಗಿ ಹಾಡು, ಭಜನೆ ಮುಗಿದಿರುತ್ತದೆ. ಇದಕ್ಕೆ ಮೊದಲು ಬಾಗಿಲು ಮುಚ್ಚಿದ ಮೇಲೇ 'ಪ್ರಾರ್ಥನೆ' ಆರಂಭ ಆಗುತ್ತಾ ಇತ್ತು. ಆದರೆ ಸೋಷಲಿಸ್ಟ್ ಪಾರ್ಟಿಯ ಅನೇಕರಿಗೆ ಇದು ಇಷ್ಟವಾಗಲಿಲ್ಲ. ಈ ದಳದವರಾದ ಬ್ರಹ್ಮದೇವ್ ಮತ್ತು ಶಿವ್‌ಪೂಜನ್ ಇಬ್ಬರೂ ಪ್ರಾರ್ಥನೆ ಶುರು ಆದಾಗ ಬೇಕೆಂದೇ ಯಾವುದೋ ಅಪಸ್ವರದಲ್ಲಿ ಇನ್ನೊಂದು ಹಾಡು ಹಾಡಲಿಕ್ಕೆ ತೊಡಗಿದರು. ನಮ್ಮ ಭಜನೆ ಹಾಡಿನ ಕಡೆ ಇವರಿಗೆ ಇಷ್ಟು ಅಸಹ್ಯತೆ ಇದೆಯೆಂದು ನಮಗೆ ಗೊತ್ತಿರಲಿಲ್ಲ. ಅವತ್ತಿನಿಂದ ಎಲ್ಲರಿಗೂ ಹೇಳಿ ಒಪ್ಪಿಸಿ ಪ್ರಾರ್ಥನೆಯ ಸಮಯವನ್ನು ಸ್ವಲ್ಪ ಹಿಂದಕ್ಕೆ ಹಾಕಿಕೊಳ್ಳುವ ಹಾಗೆ ಮಾಡಿದೆ. ಅದರ ತರುವಾಯ "ಲಾಕ್-ಅಪ್" ಆಗುವುದಕ್ಕೆ ಮುನ್ನವೇ ಪ್ರಾರ್ಥನೆ ಮುಗಿದು ಹೋಗಿರುತ್ತದೆ. ಈ ಏರ್ಪಾಟಿಗೆ ಮೆಹರ್‌ಚಂದ್‌ಜೀ ಮತ್ತು ಸದಾಶಿವ್ ಇವರಿಬ್ಬರೂ ಏನು ಮಾಡಿದರೂ ಒಪ್ಪಲೇ ಇಲ್ಲ. ಅವರ ವಾದ ಹೀಗೆ, "ನಾವೇಕೆ ಸೋಲಬೇಕು ಅಂತ ? ಇವರೆಲ್ಲ ರಾತ್ರಿ ಹನ್ನೆರಡವರೆಗೂ ನಮ್ಮ ಮೂಗಿಗೆ ಹೊಡೆಯುವ ಹಾಗೆ ಬೀಡಿ ಸೇದುತ್ತ ಹೋಗುತ್ತಾರೆ. ಈ ಲಕ್ಷ್ಮೀಕಾಂತ ಮಾರ್ಕ್ಸ್‌ವಾದದ ಮೇಲೆ ಸುಮ್ಮನೆ ಲೆಕ್ಚರ್ ಕೊಡುತಾನೇ ಇರತಾನೆ. ನಮಗೆ ನಿದ್ದೆ ಮಾಡಗೊಡಿಸೋದಿಲ್ಲ. ನಾವೇನಾದರೂ ಅಂದಿದ್ದೇವೆಯೆ ಇದುವರೆಗೂ ? ಮಾಸ್ಟರ್ ಬಾಬು, ತಾವು ನಮ್ಮನ್ನ ತಡೆಯಲಿಕ್ಕೆ ಬರಬೇಡಿ. ಇವರನ್ನ ತಣ್ಣಗೆ ಮಾಡಬೇಕು ಅಂದರೆ ಎಷ್ಟು ಹೊತ್ತು ? ಸ್ವಲ್ಪವೂ ತೊಂದರೆ ತಗೊಳ್ಳಬೇಕಾಗಿಲ್ಲ"

ನಾನೆಷ್ಟೋ ಹೇಳಿ ಸಮುದಾಯಿಸಿದೆ. "ಇವರಿಗೆ ಅಷ್ಟು ಮಟ್ಟಿಗೆ ಕಷ್ಟ, ಅಸೌಕರ್ಯ ಅಂತ ಅನ್ನಿಸೋದನ್ನೇ ನಾವು ಯಾಕೆ ಮಾಡಲಿಕ್ಕೆ ಹೋಗಬೇಕು ? ಆದರೆ ಇವರಿಗೆ ಯಾವುದೇ ಇಷ್ಟವಾಗಲಿ, ನಮ್ಮ ಕರ್ತವ್ಯವನ್ನೂ ನಾವು ಬಿಡಬಾರದು. ಇವರೆಲ್ಲ ಇನ್ನೂ ಹುಡುಗರು. ನಮ್ಮಗಳ ಆದರ್ಶ ಯಾವುದು ? ಮಹಾತ್ಮಾಜಿ ತೋರಿಸಿಕೊಟ್ಟಿರುವ ದಾರಿ ಅಲ್ಲವೆ ? ಅದು ಎಷ್ಟು ಶ್ರೇಷ್ಠವಾದದ್ದು ? ಆ ದಾರಿಯಿಂದ ನಾವೇಕೆ ಕಾಲು ತೆಗೆಯಬೇಕು ?" ಹೀಗೇ ಎಷ್ಟೋ ಹೇಳಿದ ಮೇಲೆ ಮನಸ್ಸಿನಲ್ಲಿ ಅಷ್ಟು ಸಮಾಧಾನ ಆಗದಿದ್ದರೂ ನನ್ನ ಮಾತಿಗಂತೂ ಒಪ್ಪಿಕೊಂಡರು. ಅವತ್ತಿನಿಂದ ಮೊದಲುಗೊಂಡು ಸಂಜೆ ಬಾಗಿಲು ಮುಚ್ಚುವ ಮುನ್ನವೇ ನಾವು ನಮ್ಮ ಪ್ರಾರ್ಥನೆ ಮುಗಿಸಿಬಿಡುತ್ತೇವೆ. ಇವರೆಲ್ಲ ಇನ್ನೂ ಹುಡುಗತನಬಿಟ್ಟಿಲ್ಲ. ಸ್ಕೂಲು ಕಾಲೇಜುಗಳ ವಿದ್ಯಾರ್ಥಿಗಳು ಅವತ್ತು ವಾಲಿಬಾಲ್ ಆಡುತ್ತಿದ್ದಾಗ ಕಾಮ್ರೇಡ್ ಮಾಧೇರಾಮ್ ಕಾಮ್ರೇಡ್ ಮುರಲಿ ಮಿಶ್ರನ ಎದೆ ಮೇಲೆ ಕೂತು ಅವನ ಕುತ್ತಿಗೆ ಹಿಸುಕಲಿಕ್ಕೆ ಹೋಗಿದ್ದ. ಊಟದ ಸಮಯದಲ್ಲಿ ಇವತ್ತಿಗೂ ಈ ಜನ ಕಿಚನ್ ಮ್ಯಾನೇಜರ್ ಜತೆ ಜಗಳ ಆಡುತ್ತಾರೆ. ಇವತ್ತು ಇವನ ಸಂಗಡ ಅವನು ಮಾತುಬಿಟ್ಟಿದ್ದಾನೆ. ನಾಳೆ ಇನ್ನೊಬ್ಬನ ಜತೆ ಜಗಳ – ಇದೆಲ್ಲ ಪ್ರತಿನಿತ್ಯದ ರಾಮಾಯಣ. ಎಲ್ಲ ನಿನ್ನೆ ಮೊನ್ನೆಯ ಹುಡುಗರು. ಇವರುಗಳ ಸರಿ, ತಪ್ಪುಗಳನ್ನು

ನಾವೇಕೆ ವಿಚಾರ ಮಾಡಲಿಕ್ಕೆ ಹೋಗೋಣ ? ನಮಗೇ ವಯಸ್ಸಾಗಿದೆ. ಇನ್ನೆಷ್ಟು ದಿನ ಇರುತ್ತೇವೆ ? ಇನ್ನೂ ನಮ್ಮ ನಮ್ಮ ಮನಸ್ಸಿನ ಪ್ರವೃತ್ತಿಗಳನ್ನು ಹಿಡಿದಿಟ್ಟುಕೊಳ್ಳಲಿಕ್ಕೆ ಆಗಿಲ್ಲ. ಇವರೋ ಇನ್ನು ಚಿಕ್ಕ ಪ್ರಾಯದವರು. ಇವರುಗಳ ಕುಂದು ಕೊರತೆಗಳನ್ನ ತಲೆಗೆ ಹಚ್ಚಿಕೊಂಡು ಕೂತರೆ ನಾವು ಈ ದಾರಿ ಹಿಡಿದು ಬಂದಿದ್ದೇ ವ್ಯರ್ಥ. ನಮ್ಮ ಬಿಲೂ ಸಹ ಈ ಪಂಗಡದವರ ಹಾಗೇ... ಅದೇ ಮನೋವೃತ್ತಿ. ಇವರಲ್ಲಿ ಪ್ರತಿಯೊಬ್ಬ ಹುಡುಗನೂ ನನಗೆ ಬಿಲೂ ಇದ್ದ ಹಾಗೆ !

ಇವತ್ತು ರಾತ್ರಿಯಾದರೂ ಬಿಲೂ ಹತ್ತಿರ ಇರಲಿಕ್ಕೆ ಸಾಧ್ಯವಾಗಿದ್ದಿದ್ದರೆ ? ಹೂ... ಇಲ್ಲ.... ಇದೇ ಸರಿ.... ಇಬ್ಬರೂ ಈ ಸಮಯದಲ್ಲಿ ಒಂದೇ ಕಡೆ ಇಲ್ಲದಿರುವುದೇ ಒಳ್ಳೆಯದೆನ್ನಿಸತ್ತೆ.... ವಿಚಾರ ಮಾಡಿದರೆ. ಹಾಗೆ ಆಗಿದ್ದರೆ ಇಬ್ಬರೂ ಸಹನೆ ಕಳೆದುಕೊಳ್ಳುತ್ತಾ ಇದ್ದೆವು. ಆದರೆ ಒಂದು ಕಡೆಯಗಳಿಗೆವರೆಗೂ ಅವನ ಜತೆ ಮಾತಾಡುತ್ತ ಇರಬಹುದಾಗಿತ್ತು. ಯಾರಿಗೆ ಗೊತ್ತು. ಆಡಲಿಕ್ಕೆ ಮಾತೇ ಬಾಯಿಗೆ ಬರುತ್ತಿತ್ತೋ ಇಲ್ಲವೋ ? ಮಕ್ಕಳ ಸಂಗಡ ನಾನು ಯಾವಾಗಲೂ ಹಾಗೇ. ಕೆಲಸವಿದ್ದರೆ ಮಾತು ಅಷ್ಟೇ. ಅವರೂ ಅಷ್ಟೆ ಅಗತ್ಯವಿಲ್ಲದಿದ್ದರೆ ನನ್ನ ಮುಂದೆ ಮಾತೇ ಇಲ್ಲ. ಈ ಬಿಲೂ ಅಂತೂ ನನ್ನ ಮುಂದೆ ಬಂದರೆ ಮೂಗನಾಗಿ ಬಿಡುತ್ತಾನೆ. ಅಷ್ಟು ಸಂಕೋಚ. ಯಾವತ್ತೂ ಚೂಟಿಯಿರಲಿಲ್ಲ ಅವನು. ಮುಖಹೇಡಿ, ಸಣ್ಣ ವಯಸ್ಸಿಂದಲೂ ಹಾಗೇ. ಆದರೆ ಆ ದೋಷ ನನ್ನಿಂದ ನಾನು ಬೆಳೆಸಿರುವ ರೀತಿಯಿಂದ ಆದದ್ದು. ನಾನು ಬೆಳೆಸಿರುವ ಹಾಗೆ ಅವರು ಬೆಳೆದಿದ್ದಾರೆ. ಆದರೂ ನಾನು ಬೆಳೆಸಿರುವ ಹಾಗೇ ಅವರು ಆಗಬೇಕಾಗಿದ್ದರೆ ನೀಲೂ ಯಾಕೆ ಹಾಗೆ ಆಗಲಿಲ್ಲ ? ಅದಕ್ಕೂ ಒಂದು ಕಾರಣ ಇರಬಹುದು. ಬಿಲೂ ಇಂಗ್ಲಿಷ್ ಕಾಲೇಜಿನಲ್ಲಿ ಓದಲಿಲ್ಲ. ಅದಕ್ಕೇ ಅವನಲ್ಲಿ ಕೀಳ್ತನದ ಮನೋಭಾವ ಇರಬಹುದು. ನೀಲೂ ಕಾಲೇಜಿನಲ್ಲಿ ಓದಿದ್ದಾನೆ. ಆದುದರಿಂದಲೇ ಅವನಲ್ಲಿ ಈ ಬಗೆಯ ಮನೋಭಾವ ಇಲ್ಲ.... ಹುಡುಗರು ಹೊರಗಡೆ ಹೇಗೆ ನಡೆದುಕೊಳ್ಳುತ್ತಾರೋ ಆ ವಿಷಯದಲ್ಲಿ ನಾನು ಹೇಳಲಾರೆ. ಆದರೆ ಇವತ್ತು ಅವರಿಗೂ ನನಗೂ ಪರಸ್ಪರ ಇರುವ ದೂರತ್ವಕ್ಕೆ ಕಾರಣ ನಾನೇ. ಮೊದಲಿಂದಲೂ ಇವರೊಂದಿಗೆ ನಾನು ಮನಸ್ಸು ಬಿಚ್ಚು ಮಾತುಕತೆ ಆಡೇ ಇಲ್ಲ ಇದುವರೆಗೆ. ಅವರೊಡನೆ ನಿಸ್ಸಂಕೋಚದಿಂದ ಮಕ್ಕಳಾಗಿದ್ದಾಗಲೂ ತೊಡೆ ಮೇಲೆ ಕೂಡಿಸಿಕೊಂಡಾಗಲಿ, ಬೆನ್ನ ಮೇಲೆ ಹೊತ್ತುಕೊಂಡಾಗಲಿ ಆಡಿಸಲಿಲ್ಲ. ಆದರ ಮಾಡಿಲ್ಲ. ಹಾಗೆ ಅವರಿಗೆ ಹೆಚ್ಚು ಸಲಿಗೆ ಕೊಟ್ಟರೆ ಅವರನ್ನ ಆಮೇಲೆ ಶಿಕ್ಷೆ ಮಾಡಿ ಹದ್ದಿನಲ್ಲಿಡುವುದಕ್ಕೆ ಕಷ್ಟವಾಗುತ್ತದೆ ಎಂಬ ಅಭಿಪ್ರಾಯವಿತ್ತು ನನಗೆ. ಇದರೊಂದಿಗೆ ಹೆಚ್ಚಾಗಿ ಮಾತುಕತೆ ಆಡದೆ ಸ್ವಲ್ಪ ದೂರವಾಗಿದ್ದರೆ ಆಗ ಅವರು ಭಯ, ಭಕ್ತಿಗಳಿಂದ ನಡೆದುಕೊಳ್ಳುತ್ತಾರೆ, ಸಲಿಗೆ ಕೊಟ್ಟರೆ ತಲೆಯ ಮೇಲೆ ಕೂಡುತ್ತಾರೆ. ಈ ವಿಷಯದಲ್ಲಿ ನಾನು ಎಂದೂ ಯಾರ ಮಾತನ್ನೂ ಕೇಳುವವನಾಗಿರಲಿಲ್ಲ. ಹೌದು, ನಾನು ಆಗಿದ್ದದ್ದು ಸ್ಕೂಲ್ ಮಾಸ್ಟರ್. ಅಭ್ಯಾಸ ದೋಷವೆನ್ನಿ ಅಥವಾ ಬೇರೆ ಯಾವ ಕಾರಣವೋ ಅನ್ನಿ. ಲೋಕದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ನಾನು ಬಹುಮಟ್ಟಿಗೆ ಈ ಗುರು-ಶಿಷ್ಯ ಸಂಬಂಧವನ್ನೇ ಪಾಲಿಸುತ್ತ ಬಂದಿದ್ದೇನೆ. ರಾಜಕೀಯ ಕ್ಷೇತ್ರದಲ್ಲೂ ಸಹ, ದೊಡ್ಡವರನ್ನ ನನ್ನ ಗುರುಗಳಂತೆಯೂ

ಸಣ್ಣವರನ್ನು ನನ್ನ ಶಿಷ್ಯರಂತೆಯೂ ನೋಡುತ್ತ ಹಾಗೇ ವ್ಯವಹರಿಸುತ್ತ ಬಂದಿದ್ದೇನೆ. ಯಾರೊಡನೆಯೂ ಬಂಧುವಿನಂತೆ ಆಗಲು ಸಾಧ್ಯವಾಗಿಲ್ಲ. ಯಾವಾಗಲೂ ಜಿತೇನನು ಸಣ್ಣವನಿದ್ದಾಗ ಇಪ್ಪತ್ತು ನಾಲ್ಕು ಗಂಟೆಯೂ ಯದುದಾದಾ ಸಂಗಡವೇ ಇರುತ್ತಿದ್ದ. ನಮ್ಮ ತಂದೆಯ ದಪ್ಪ ದೊಣ್ಣೆಯನ್ನು ಹಿಡಿದುಕೊಂಡು, ಈ ದುಂಡು ದುಂಡಾಗಿದ್ದ ಹುಡುಗ ಅವರ ಮುಂದೆ ಮುಂದೆ ಹೋಗುತ್ತಿದ್ದ, ಅವರೆಲ್ಲಿ ಹೋದರೂ ಅಲ್ಲಿ ಜತೆಯಲ್ಲಿರುತ್ತಿದ್ದ – ಊಟ ಮಾಡುವಾಗ, ಹೊರಗಡೆ ಅಡ್ಡಾಡುವಾಗ ಸಹ. ಆಗ ಸಂಜೆಯ ವೇಳೆ ನಾನೂ ನಮ್ಮಪ್ಪನೂ ಹರಟೆಗೆ ಕೂತಾಗ ನನ್ನ ಸಂಗಡವೂ ಚೆನ್ನಾಗಿ ಸಲಿಗೆ ಬೆಳೆಸಿಕೊಂಡುಬಿಟ್ಟಿದ್ದ. ಹೀಗೆ ಬೇರೆಯವರ ಹುಡುಗರೊಂದಿಗೆ ಸಲಿಗೆ ಬೆಳೆಸಿಕೊಳ್ಳುವುದು, ಅವರಿಗಾಗಿ ಜೇಬಿನಲ್ಲಿ ಪೆಪ್ಪರ್‌ಮಿಂಟ್ ಲೊಸೆನ್‌ಜಸ್ ಕೊಂಡು ಹೋಗುವುದು ನನ್ನ ಹೆಂಡತಿಗೆ ಅಷ್ಟಾಗಿ ಹಿಡಿಸಲಿಲ್ಲ. ನನ್ನ ಸ್ವಂತ ಮಕ್ಕಳಲ್ಲಿ ತೋರುವ ಉದಾಸೀನತೆ ಮತ್ತು ಬೇರೆಯವರ ಮಕ್ಕಳ ವಿಷಯದಲ್ಲಿ ತೋರುವ ಉತ್ಸಾಹ ಈ ವ್ಯತ್ಯಾಸ ತುಂಬ ಅಸಂಗತವೆನ್ನಿಸಿತು ಆಕೆಗೆ. ಆಕೆ ಸ್ವಲ್ಪ ಮಾತಿನ ಹೆಂಗಸು. ಆದರೂ ಒಂದು ದಿನ ಹಿಡಿದಿಟ್ಟುಕೊಳ್ಳಲಾರದೆ, “ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳ ಕಡೆಯೂ ಒಂದು ಸಲ ತಿರುಗಿ ನೋಡಿ” ಎಂದು ಬಾಯಿಬಿಟ್ಟು ಹೇಳಿಯೂಬಿಟ್ಟಳು. ಆ ಮಾತು ಕೇಳಿ ನಕ್ಕುಬಿಟ್ಟು ಮನಸ್ಸಿಗಾದ ಅಸ್ವಸ್ಥತೆಯನ್ನು ದೂರ ಮಾಡಿಕೊಳ್ಳಲು ಯತ್ನಿಸಿದೆ. ಆದರೆ ಅವತ್ತಿನಿಂದ ನಾನೇನಾದರೂ ಮಕ್ಕಳೊಂದಿಗೆ ಹೆಚ್ಚು ಹೆಚ್ಚಾಗಿ ಸಲಿಗೆ ಬೆಳೆಸಿಕೊಂಡು ಕಲೆತಿದ್ದರೆ ಇವತ್ತು ನಮ್ಮ ನಮ್ಮ ಪರಸ್ಪರ ಸಂಬಂಧ ಸ್ನೇಹ, ವಾತ್ಸಲ್ಯಗಳಿಂದ ಕೂಡಿರುವುದಾಗಿತ್ತು - ಭಯ, ಗೌರವಗಳಿಂದ ಅಲ್ಲ. ನೀಲೂ, ಬಿಲೂ ಇಬ್ಬರಿಗೂ ಇವತ್ತು ಪ್ರೀತಿ, ಆದರಗಳ ಸಂಪರ್ಕವಿದ್ದಲ್ಲಿ ಅದೆಲ್ಲ ಅವರ ಅಮ್ಮನ ಬಳಿ. ಒಟ್ಟಿಗೇ ಊಟಕ್ಕೆ ಕೂಡುವುದು, ಹೃದಯ ಬಿಚ್ಚಿ ಮಾತುಕತೆ ಆಡುವುದು ಇವೆಲ್ಲ ಚಿಕ್ಕಂದಿನಲ್ಲಿದ್ದಂತೆಯೇ ಇವತ್ತಿಗೂ ಇದೆ. ಮಕ್ಕಳ ಮಾತೆತ್ತಿದಾಗೆಲ್ಲ ನೀಲೂ, ಬಿಲೂ ಎಂದೇ ಬರುತ್ತದೆ. ಬಿಲೂ ದೊಡ್ಡವನು, ನೀಲೂ ಕಿರಿಯ, ನ್ಯಾಯವಾಗಿ ಬಿಲೂ, ನೀಲೂ ಎಂದು ಸಾಧಾರಣವಾಗಿ ಬಾಯಲ್ಲಿ ಬರಬೇಕಾಗಿತ್ತು. ಕಾರ್ತೀಕ (ಷಣ್ಮುಖ) ಗಣೇಶ ಎನ್ನುತ್ತಾರೆ, ಯಾಕೆ ? ಗಣೇಶ ದೊಡ್ಡವನು - ಪೂಜೆಗಳಲ್ಲೂ ಅವನಿಗೇ ಮೊದಲನೆ ಪೂಜೆ. ಕಾರ್ತೀಕ ಕಿರಿಯ. ಆದರೂ ಮೊದಲು ಗಣೇಶ, ಆಮೇಲೆ ಕಾರ್ತೀಕ. ಗಣೇಶ, ಕಾರ್ತೀಕ, ಅನ್ನುವುದಕ್ಕಿಂತ ಕಾರ್ತೀಕ, ಗಣೇಶ ಅನ್ನುವುದೇ ಸುಲಭವಾಗುತ್ತದೆ. ಒಂದೇ ಉಸಿರಿನಲ್ಲಿ ಹೇಳಿಬಿಡಬಹುದು.

ಸದಾಶಿವನು ನನ್ನ ಸೊಳ್ಳೇಪರದೆಯನ್ನು ಬಿಚ್ಚಿಹಾಕಲು ಬಂದಿದ್ದಾನೆ. ಬಹುಶಃ ನಾನು ಈಗಲೇ ಜಪ ಮಾಡಲು ಕೂಡುತ್ತೇನೆಂದುಕೊಂಡಿದ್ದಾನೆ. ಈ ಸೊಳ್ಳೇಕಾಟದಲ್ಲಿ ತೆರೆಯ ಹೊರಗಡೆ ಕೂತು ಜಪ ಮಾಡಲು ಸಾಧ್ಯವೇ ಎಲ್ಲಾದರೂ ? ಸೊಳ್ಳೆಯ ಕಡಿತದಿಂದ ಮನಸ್ಸಿನ ಏಕಾಗ್ರತೆ ಎಲ್ಲಿ ಇರುತ್ತದೆ ? ನಾನು ರಾತ್ರಿ ಮಲಗುವಾಗ ಸೊಳ್ಳೇಪರದೆಯನ್ನು ಹಾಕಿಕೊಳ್ಳುವುದಿಲ್ಲ. ಮೈ ಎಷ್ಟಾದರೂ ಸಹಿಸಿಕೊಳ್ಳಬಲ್ಲುದು. ಸೊಳ್ಳೆಯ ಕಡಿತವನ್ನು ಸಹಿಸಿಕೊಳ್ಳುವುದೇ ಕಷ್ಟವೆನಿಸಿದರೆ ಇಷ್ಟರಮಟ್ಟಿಗೆ ಸಹನಶೀಲತೆ, ಕಟ್ಟುನಿಟ್ಟಿನ ಸರಳತೆ ಇಲ್ಲದೆ

ಹೋದರೆ, ನಾವು ಅಂಥ ದೊಡ್ಡದೇನು ಸಾಧಿಸಬಲ್ಲೆವು ? ಬಿಲೂ, ಇವತ್ತೂ ರಾತ್ರಿ ಸೊಳ್ಳೆ ಪರದೆಯಿಲ್ಲದೆ, ಎಷ್ಟು ಸಂಕಟಪಡುತ್ತಾನೋ ? ನೆನೆಸಿಕೊಂಡರೆ ? ಕೈ ಸನ್ನೆ ಮಾಡಿ ಸೊಳ್ಳೇ ಪರದೆ ಬೇಡ ಎನ್ನುತ್ತೇನೆ. ಇವತ್ತು ಸೋಮವಾರ ನನ್ನ ಮೌನವ್ರತ. ಗಾಂಧೀಜಿ ಈ ವ್ರತವನ್ನು ಆತ್ಮಶುದ್ಧಿಗಾಗಿ ಮಾಡುತ್ತಾರೆ. ಅವರು ತಮ್ಮ ಒಳ್ಳೆಯದಕ್ಕೆಂದು ಮಾಡುವುದನ್ನು ನಾವೂ ಏಕೆ ಮಾಡಬಾರದು ? ಪ್ರತಿ ಸೋಮವಾರ ಬಿಟ್ಟು ಸೋಮವಾರ ಸಂಜೆಗೆ ಮೊದಲು ಪೂಜೆ ಮಾಡಿದ ಮೇಲೆ ಆಹಾರ ತೆಗೆದುಕೊಳ್ಳುತ್ತೇನೆ. ಊಟವಾದ ಮೇಲೆ ಮಾತಾಡುತ್ತೇನೆ. ಅದನ್ನ ಜ್ಞಾಪಿಸಿಕೊಂಡು ಸದಾಶಿವನು ನನ್ನ ಪೂಜೆಗೆ ಅಣಿ ಮಾಡಿಕೊಡಲು ಬಂದಿದ್ದಾನೆ. ಬಹಳ ಒಳ್ಳೇ ಹುಡುಗ ಸದಾಶಿವ. ನಿಜವಾಗಿಯೂ 'ಸದಾಶಿವ'ನೇ! ಕೆಲವು ವರುಷಗಳ ಹಿಂದೆ "ವಸ್ತ್ರ ಸ್ವಾವಲಂಬಿ" ಪ್ರತಿಜ್ಞಾ ಪತ್ರಕ್ಕೆ ಸಹಿಮಾಡಿದ ಲಾಗಾಯಿತು ಪ್ರತಿನಿತ್ಯ ಇವತ್ತಿನವರೆಗೆ ಸಾವಿನ ಸಾವಿರ ಗಜ ನೂಲು ತೆಗೆಯುತ್ತಾನೆ.

ಅಪ್ಪರ್ ಡಿವಿಜನ್ ವಾರ್ಡ್ ವಿಶಾಲವಾದ ದೊಡ್ಡ ಹಾಲು. ಈ ಸಮಯದಲ್ಲಿ ಮೂವತ್ತ ನಾಲ್ಕು ಖೈದಿಗಳು ಈ ವಾರ್ಡಿನಲ್ಲಿ ಇರುತ್ತಾರೆ ಹತ್ತೊಂಬತ್ತು ಜನ ಬೇರೆ ಖೈದಿಗಳು, ಹದಿನೈದು ಮಂದಿ ರಾಜಕೀಯ ಖೈದಿಗಳು. ಕೆಲವರು ಸಜಾ ಆಗಿರುವವರು, ಕೆಲವರು ನಡೆಯುತ್ತಿರುವ ಮೊಕದ್ದಮೆಗಳಲ್ಲಿ ಆಪಾದಿತರಾದವರು. ನಡುವೆ ಇರುವ ಬಾಗಿಲ ಹತ್ತಿರವೇ ನನ್ನ ಜಾಗ (Seat) ರೂಮಿನ ನಡುವೆಯೇ ಹೋಗಿ ಬರುವ ದಾರಿ. ಅದರ ಎರಡೂ ಕಡೆ ಗೋಡೆಗೆ ಅಂಟಿದಂತೆ ಸಾಲು ಸಾಲಾಗಿ ಮಂಚಗಳು. ಅವೆಲ್ಲದರಲ್ಲೂ ಸೊಳ್ಳೇಪರದೆ ತೂಗು ಹಾಕಲ್ಪಟ್ಟಿದೆ. ಪ್ರತಿ ಮಂಚದ ಪಕ್ಕದಲ್ಲೂ ಒಂದು ಮೇಜು, ಒಂದು ಕುರ್ಚಿ, ಒಂದು ಪುಸ್ತಕಗಳ ಶೆಲ್ಫ್. ಸುಮಾರು ಎಲ್ಲಾ ಮಂಚಗಳ ಮೇಲೂ ಕಂಬಳಿ ಹಾಸಿರುತ್ತಾರೆ. ಎಲ್ಲಾ ಮೇಜುಗಳ ಮೇಲೂ ಒಂದೊಂದು ಟೇಬಲ್ ಕ್ಲಾತ್. ಅದರ ಮೇಲೆ ಕನ್ನಡಿ, ಬಾಚಣಿಗೆ ಮತ್ತು ಇನ್ನೂ ಯಾವ ಯಾವುದೋ ಕಬ್ಬಿಣದ ಸಲಾಕೆ, ದೊಡ್ಡ ಬೀಗ, ಬೀಗದ ಕೈ ಗೊಂಚಲು, ಮತ್ತು ಈ ವಾರ್ಡರುಗಳ ಚಹರೆಗಳು ಇವನ್ನೆಲ್ಲ ನೋಡದೆ ಹೋದರೆ ಇದನ್ನ ಜೈಲು ಎಂದು ತಿಳಿಯಲಾಗುವುದಿಲ್ಲ. ಇದೊಂದು ಕಾಲೇಜು ವಿದ್ಯಾರ್ಥಿಗಳ ಹಾಸ್ಟಲು ಅಂದುಕೊಳ್ಳಬಹುದು. ಹೋದ ಆಗಸ್ಟ್ ತಿಂಗಳಲ್ಲಿ ಹರಿಹರ್‌ಜೀ ಮತ್ತು ಮೊಕದ್ದಮೆಯೊಂದರಲ್ಲಿ ಆಪಾದಿತರಾದ ಆತನ ಹಣ್ಣು ಮುದುಕರಾದ ತಂದೆಯನ್ನು ಇಲ್ಲಿಗೆ ಕರೆತಂದಿದ್ದರು. ಆಗ ಆ ಮುದುಕರು ತಮ್ಮನ್ನು ಪೊಲೀಸರು ಧರ್ಮಶಾಲೆಯೊಂದಕ್ಕೆ ತಂದಿರಿಸಿದ್ದಾರೆಂದು ತಿಳಿದರು.

ಬಹುಶಃ ಕೆಲವು ದಿನ ಇಲ್ಲಿರಿಸಿ ಆಮೇಲೆ ಜೈಲಿಗೆ ಕರೆದುಕೊಂಡು ಹೋಗುತ್ತಾರೆಂದು ಅವರ ಅಭಿಪ್ರಾಯ. ಒಂದು ಸಲ ಮಗನನ್ನು ಯಾವಾಗ ತಮ್ಮನ್ನು ಜೈಲಿಗೆ ಕೊಂಡುಹೋಗುತ್ತಾರೆ ಎಂದು ಸಹ ಕೇಳಿದರು. ಒಂದೆರಡು ದಿನಗಳಾದ ಮೇಲೆ ಪೊಲೀಸರು ಅವರನ್ನು ಬಿಡುಗಡೆ ಮಾಡಿಬಿಟ್ಟರು. ನಾನು ಹಿಂದೆ, ಅಂದರೆ 1921-22ರಲ್ಲಿ ಜೈಲಿನಲ್ಲಿದ್ದಾಗ, ಆಗಿನ ಸ್ಥಿತಿಗೂ ಈಗಿನದಕ್ಕೂ ಅಜಗಜಾಂತರ! ಆಗ ನಾನು ಇದ್ದದ್ದು ಸಾಧಾರಣ ಖೈದಿ ವರ್ಗದಲ್ಲಿ. ಪ್ರತಿಯೊಬ್ಬ ಖೈದಿಗೂ ಒಂದೊಂದು ಕೆಲಸ ಕೊಟ್ಟಿದ್ದರು. "ಸರ್ಕಾರ ಸಲಾಮು"

ಮಾಡಲೇಬೇಕೆಂದು ಒತ್ತಾಯ ಬೇರೆ. ಅದನ್ನ ಕುರಿತು ಎಷ್ಟು ಗಲಾಟೆಯೋ! ಎಲ್ಲಾದರೂ ಹೋಗುತಾಯಿರಲಿ ಮೇಟಿನ ಕರ್ಕಶ ದನಿ "ಒಬ್ಬರ ಹಿಂದೆ ಒಬ್ಬರು ಲೈನ್ ಮಾಡಿಕೊಂಡು ಹೋಗಬೇಕು" ಕಕ್ಕಸಿಗೆ ಹೋಗುವಾಗ ಸಹ ಎಲ್ಲರ ಕೈಯಲ್ಲೂ ಒಂದೊಂದು ಕಬ್ಬಿಣದ ಪಾತ್ರೆ. ಊಟ ತಿಂಡಿಗಳಲ್ಲೂ ನೀರು, ಚಹಾ ಎಲ್ಲದಕ್ಕೂ ಇದನ್ನೇ ಉಪಯೋಗಿಸಬೇಕು. ಮಾತೆತ್ತಿದರೆ "ಬಾರ್ ಬೇಡಿ" (ಬಾರ್ ಬೆಟರ್ಸ್) "ಖಾಡಾ ಹಾತ್‌ಕಡಾ" (ಕೈಕಾಲುಗಳೆರಡಕ್ಕೂ ಬೇಡಿ) "ಚಟೀ ವಹನಾಬ" (ಗೋಣಿ ಬಟ್ಟೆ ಧರಿಸುವುದು) ಇಂಥ ಕಠಿಣ ಶಿಕ್ಷೆಗಳು ಸಹ ಕಾದಿರುತ್ತಿದ್ದುವು. ಆಗಿನದಕ್ಕೂ ಈಗಿನದಕ್ಕೂ ಹೋಲಿಕೆ ಎಲ್ಲಿದೆ ? ಓಡಾಟ, ಊಟ-ಉಪಚಾರ ಮತ್ತು ವಸತಿ - ಇವೆಲ್ಲದರಲ್ಲೂ ಖೈದಿಗಳಿಗೆಲ್ಲ ಸರಿಸಮಾನವಾದ ಹಕ್ಕುಗಳನ್ನು ಕೊಡುವ ಹಾಗೆ ಮಾಡಿದ್ದಾರೆ. ಇದರ ಹಿಂದೆ ಎಷ್ಟು ಜನ ಸ್ಮರಿಸಲಾಗದ ದೇಶಭಕ್ತರ ಸತತ ಶ್ರಮ, ತ್ಯಾಗ ಮತ್ತು ಆತ್ಮ ವಿಸರ್ಜನೆಗಳನ್ನು ಕಾಣಬಹುದು! ಆದರೆ ಈಗಲೂ ಇವರ ನಡೆವಳಿಕೆ ಆಶ್ಚರ್ಯವೇ. ನನಗೂ ನನ್ನ ಹೆಂಡತಿಗೂ ಮೇಲುವರ್ಗ ಕೊಟ್ಟಿದ್ದಾರೆ. ಆದರೆ ನಮ್ಮ ಬಿಲೂಗೆ ಏಕೆ ಮೂರನೆಯ ವರ್ಗ ? ಇನ್ನು ಚರಖಾ ಹಿಡಿದು ಕೂಡೋಣ. ಮನಸ್ಸಿನ ಉದ್ವೇಗವನ್ನು ತಣ್ಣಗಿಡಲು ಇದಕ್ಕಿಂತ ಒಳ್ಳೆಯ ಉಪಾಯವಿಲ್ಲ. ಸ್ವಲ್ಪ ಹೊತ್ತು ನೆಟ್ಟ ಮನಸ್ಸಿನಿಂದ ಚರಖಾ ನಡೆಸಿದರೆ, ನಾನು ಕಂಡಹಾಗೆ, ಸ್ನಾಯುಗಳ ಉದ್ವೇಗ ನಿಧಾನವಾಗಿ ತಣ್ಣಗಾಗಿ ಹೋಗುತ್ತದೆ. ಹೀಗೆ ಹೇಳಿದರೆ ಡಾಕ್ಟರರು ನಗಬಹುದು, ನಗಲಿ ಸೋಷಲಿಸ್ಟ್ ಬಂಧುಗಳು ನಂಬದಿರಬಹುದು. ಆದರೆ ಇದರಲ್ಲಿ ನನ್ನ ಸ್ವಂತ ಅನುಭವ ಇದೆ.

ಚರಖಾ ಹಿಡಿದು ಕೂತೆ. ಆಗ ಸದಾಶಿವ ಏನೋ ಹೇಳುವುದಕ್ಕೆ ಬಂದ ಅಂತ ಕಾಣುತ್ತದೆ. ಮತ್ತೆ ಸುಮ್ಮನೆ ಏಕೆ ನಿಂತಿದ್ದಾನೆ ? ನಾನು ಇಂಗಿತದಿಂದಲೇ 'ಏನು ?' ಎಂದು ಪ್ರಶ್ನೆ ಮಾಡಿದೆ. ಅವನು ಸ್ವಲ್ಪ ತಡವರಿಸುತ್ತ "ನಾವೆಲ್ಲ ಒಟ್ಟಿಗೆ 'ಸೂತ್ರಯಜ್ಞ' (ಸಾಮೂಹಿಕವಾಗಿ ನೂಲು ತೆಗೆಯುವಿಕೆ) ಶುರು ಮಾಡಬೇಕು ಎಂದಿದ್ದೇವೆ. ತಮಗೇನು ಅನನುಕೂಲವಿಲ್ಲ ತಾನೇ ?" ಎಂದು ಕೇಳಿದ. ನಾನು ಅವನನ್ನು "ಕೂಡು" ಎಂದು ಸನ್ನೆ ಮಾಡಿ ಹೇಳಿದೆ.

ಈಗಿನ ಕಾಲದ ಹುಡುಗರಿಗೆ ಇಷ್ಟು ಫಾರ್ಮಾಲಿಟಿ ಏಕೆ, ನನಗೆ ಆಶ್ಚರ್ಯ. ಒಟ್ಟಿಗೆ ಕೂತು ಚರಖಾ ನಡೆಸುವುದೊಂದು ಸಂತೋಷದ ವಿಷಯ. ಇವರುಗಳಿಗೆ ಇಷ್ಟು ಒಳ್ಳೇ ಬುದ್ಧಿ ಬಂದುಬಿಟ್ಟರೆ ಎಷ್ಟೋ ದೊಡ್ಡ ಸಂಗತಿ ಅದು. ಇದರಲ್ಲಿ ನನ್ನ ಅಭಿಪ್ರಾಯ, ಅನುಮತಿ ಕೇಳುವುದರಲ್ಲೇನಿದೆ ? ನನಗೆ ಬೇಕಾಗಿರುವುದೇ ಇದು. ಇನ್ನೂ ಇವರಿಗೇ ಅಂಜಿಕೆ. ಸೋಷಲಿಸ್ಟರು ಇವರನ್ನೆಲ್ಲ ತಮ್ಮ ಪಾರ್ಟಿಗೆ ಸೇರಿಸಿಕೊಳ್ಳಬೇಕು ಎಂದು ಹೊಂಚು ಹಾಕಿ ಕೂತಿದ್ದಾರೆ. ಇವರುಗಳ ಮೇಲೆ ಭರವಸೆ ಹೇಗೆ ಇಡುವುದು ? ಸಂಜೆಯಲ್ಲಿ ಮಾಡುವ ಹಾಗೇ ಬೆಳಗ್ಗೆಯೂ ಪ್ರಾರ್ಥನೆ ಮಾಡುವ ಪ್ರಸ್ತಾವ ಮಾಡಿದಾಗ ನನಗೆ ಎಷ್ಟು ಪೇಚಾಟ ಆಗುವ ಹಾಗೆ ಮಾಡಿದರು! ಈ ನಮ್ಮ ಮೆಹರ್‌ಚಂದ್ ಸಹ ನನ್ನ ಮರೆಯಲ್ಲಿ ಹಾಸ್ಯ ಮಾಡಿದ ಅಂತ ಕೇಳಿದೆ. ದಿನಕ್ಕೆ ಕೊಡುವ ಹತ್ತಾಣೆ ಭತ್ಯದಲ್ಲಿ ಎರಡು ಹೊತ್ತು ಪ್ರಾರ್ಥನೆ ಮಾಡಲಿಕ್ಕ ಸಾಧ್ಯವಿಲ್ಲವಂತೆ! ಭತ್ಯ ಒಂದೂ ಕಾಲು ರೂಪಾಯಿ ಮಾಡಿಸಲಿ

ಆಗಬೇಕಾದರೆ ಎರಡು ಹೊತ್ತು ಪ್ರಾರ್ಥನೆ ಮಾಡೋಣವಂತೆ! ಸಾಮಾನುಗಳ ಬೆಲೆ ಜಾಸ್ತಿಯಾಗಿರೋದರಿಂದ ಬೇಗನೇ ಭತ್ಯ ಹನ್ನೆರಡಾಣೆಗೆ ಏರಿಸುತ್ತಾರೆ ಅಂತ ಕೇಳಿದೆ - ಆಗಬೇಕಾಗಿದ್ದರೆ ವಾರಕ್ಕೆ ಒಂದು ಸಲವಾದರೂ ಬೆಳಗ್ಗೆ ಹೊತ್ತು ಪ್ರಾರ್ಥನೆ ಮಾಡೋಣ ಹೀಗೆಲ್ಲ ಹೇಳಿ 'ಹಿಹ್ಹಿ' ಎಂದು ನಕ್ಕನಂತೆ. ಯಾಕಪ್ಪಾ? ನಿಮಗೆ ಪ್ರಾರ್ಥನೆ ಇಷ್ಟವಿಲ್ಲದಿದ್ದರೆ ಮಾಡಬೇಡಿ. ಆದರೆ ಪ್ರಾರ್ಥನೆಯ ಸಂಬಂಧವಾಗಿ ಹೀಗೆ ಹುಚ್ಚುಹುಚ್ಚಾಗಿ ತಮಾಷೆ ಮಾಡಿ ನಗುವುದಂತೂ ನಾಚಿಕೆಗೇಡು. ಇವರೆಲ್ಲ ಗಾಂಧಿಜಿಯ ಶಿಷ್ಯರು ಬೇರೆ. ಸತ್ಯಾಗ್ರಹಿಗಳು. ನಾಸ್ತಿಕರಲ್ಲ. ಇವರಂಥವರು ಸಹ ಈ ವಿಷಯಗಳನ್ನು ಕುರಿತು ಹಾಸ್ಯ -ತಮಾಷೆ ಮಾಡಿದರೆ ಇನ್ನು ಸೋಷಲಿಸ್ಟರು ಮನಸ್ಸಿಗೆ ಬಂದ ಹಾಗೆ ಮಾತಾಡಿದಾಗ ಅವರನ್ನ ಯಾಕೆ ಸುಮ್ಮನೆ ದೂಷಿಸಬೇಕು?

ಸದಾಶಿವನೂ ಮೆಹರ್‌ಚಂದ್‌ಜೀ ಸೇರಿ ಸಾಲಾಗಿ ಕಂಬಳಿ ಹಾಸಿದರು. ನನ್ನ ಮಂಚ ಇದ್ದದ್ದು ಸರಿಯಾಗಿ ವಾರ್ಡಿನ ಮಧ್ಯಭಾಗದಲ್ಲಿ. ವಾರ್ಡಿನ ಒಳಗೆ ಹೊಕ್ಕೊಡನೆ ಎಡಭಾಗದಲ್ಲಿ ಗಾಂಧಿಜಿಯವರ ಭಕ್ತರ ದಳ ಅಂದರೆ ಕಾಂಗ್ರೆಸಿನ ಬಹು ಸಂಖ್ಯಾದ ದಳ (Majority). ಇವರೇ ಅಲ್ಲದೆ ಆ ಪಾರ್ಶ್ವ ಇರುವವರಲ್ಲಿ ಒಬ್ಬಾತ ಕಮ್ಯೂನಿಸ್ಟ್, ಇನ್ನೊಬ್ಬ ಕಿಸಾನ್ ಸಭಾ ಸದಸ್ಯ. ಇವರಿಬ್ಬರನ್ನೂ ಸರ್ಕಾರ ಏಕೆ ಅರೆಸ್ಟು ಮಾಡಿ ಇಲ್ಲಿಟ್ಟಿದ್ದಾರೋ ಇವರಿಗೇ ಗೊತ್ತಿಲ್ಲ. ಇವರುಗಳು ಆಂತರಿಕವಾಗಿ ಈಗ ನಡೆಯುತ್ತಿರುವ ಯುದ್ಧದಲ್ಲಿ ಸರ್ಕಾರಕ್ಕೆ ಬೆಂಬಲ ನೀಡಲು ಇಷ್ಟಪಡುತ್ತಾರೆ. ವಾರ್ಡಿನ ಬಲಭಾಗದಲ್ಲಿ ಸೋಷಲಿಸ್ಟರೂ ಮತ್ತು ಫಾರ್‌ವರ್ಡ್ ಬ್ಲಾಕ್ ಪಾರ್ಟಿಯ ಸದಸ್ಯರಿರುತ್ತಾರೆ. ಇವರ ನಡುವೆ ನಾನೊಬ್ಬನೇ ಬಫರ್ (ತಟಸ್ಥ ಅಥವಾ ಮಧ್ಯಸ್ಥ). ಈ ವ್ಯವಸ್ಥೆ ಮಾಡಿದವರು ಜೈಲಿನವರಲ್ಲ. ಅವರವರ ಸೌಕರ್ಯಕ್ಕೆ ತಕ್ಕಂತೆ ಆಗಾಗ ಸೀಟುಗಳನ್ನು ಅದಲುಬದಲು ಮಾಡಿಕೊಂಡದ್ದು ಪರಿಣಾಮವಾಗಿ ಈ ಸ್ಥಿತಿ ಹೀಗೆ ನಿಂತಿದೆ. ನನ್ನ ಸೀಟಿನ ಬಳಿಯೇ ವಾರ್ಡಿನೊಳಗೆ ಪ್ರವೇಶ ಮಾಡಲು ಬಾಗಿಲಿದೆ. ಬಾಗಿಲ ಎದುರು ಬದಿಯಲ್ಲಿ ಎಷ್ಟೋ ಜಾಗ ಪೂರ್ತಿಯಾಗಿ ಖಾಲಿ ಇದೆ. ಏಕೆಂದರೆ ಒಂದು ಕಾರಣ, ಈ ಜಾಗ ದಾರಿಯ ಮೇಲೆ ಇದೆ. ಇನ್ನೊಂದು ಕಾರಣ ಇದರ ನೆತ್ತಿಯ ಮೇಲೆ ಛಾವಣಿಯಲ್ಲಿ ಪಾರಿವಾಳದ ಹಕ್ಕಿಗಳು ಗೂಡು ಕಟ್ಟಿಕೊಂಡಿವೆ. ಆದ್ದರಿಂದ ಇಲ್ಲಿ ಯಾರ ಮಂಚವೂ ಇಲ್ಲ. ಇದೇ ಜಾಗದಲ್ಲಿ ಕಂಬಳಿ ಹಾಸಿ ಎಲ್ಲರೂ ಚರಖಾಗಳನ್ನು ತಂದು ಕೂತರು. ರಾಮಚಂದ್ರ, ಕಿಷನ್‌ದೇವ್, ಹರಿಹರ, ರಾಮದೇನಿ, ಸದಾಶಿವ್, ರಾಮಶರಣ್, ಭೂಷಣ ಪ್ರಸಾದ್, ರಾಮಲೋಚನ ಮತ್ತು ಮೆಹರ್‌ಚಂದ್ ಇಷ್ಟು ಮಂದಿ. ಇವರಲ್ಲಿ ಹೆಚ್ಚು ಮಂದಿಯ ಹೆಸರುಗಳಲ್ಲಿ 'ರಾಮ' ಶಬ್ದ ಮೊದಲಲ್ಲಿ ಬರುತ್ತದೆ. ರಾಮದೇನಿಯನ್ನು ಬಿಟ್ಟು ಉಳಿದವರೆಲ್ಲರ ಮುಂದೆ "ಬಾರ್‌ಬೇದ ಚಕ್ರ"* ಮತ್ತು ರಾಮದೇನಿಯು ಜೈಲಿಗೆ ಬಂದು ಚರಖಾ ತಿರುಗಿಸುವುದನ್ನು ಕಲಿತಿದ್ದ ರೆಮಿಷನ್ (ಕಾರಾಗೃಹ ವಾಸದ ಅವಧಿಯಲ್ಲಿ ಸ್ವಲ್ಪ ಭಾಗ ವಜಾ) ಆಗುವುದೆಂಬ ಆಸೆಯಿಂದ. ಪೊಲೀಸ್ ಠಾಣೆಯ ಮುತ್ತಿಗೆ ಮತ್ತು ಖಾಸ್ ಮಹಲನ್ನು ಬೆಂಕಿಯಿಟ್ಟು ಸುಟ್ಟ ಆಪಾದನೆಯ ಮೇಲೆ ಅವನಿಗೆ ಹನ್ನೆರಡು ವರುಷ ಸಜಾ ಆಗಿತ್ತು. ಜೈಲಿನವರಿಂದ ಅವನು ಚರಖಾ

---

* ಒಂದು ನಮೂನೆಯ ಚರಖಾ.

ತಿರುಗಿಸುವ ಕೆಲಸ ಪಡೆದಿದ್ದಾನೆ. ಆದ್ದರಿಂದ ಅವನ ಎದುರುಗಡೆ ಅತಿ ದೊಡ್ಡಗಾತ್ರದ "ಬಿಹಾರ್ ಚರಖಾ" ಇಬ್ಬರು ಕೂಡುವಷ್ಟು ಜಾಗ ಆಕ್ರಮಿಸಿಕೊಂಡಿದೆ. ರಾಮದೇವಿಯು ಮೊದಲು ಸೂಪರಿಂಟೆಂಡೆಂಟ್ ಸಾಹೇಬರೊಡನೆ ತಾನು ಜೈಲಿನ ಕೆಲಸ ಮಾಡಲು ತಯಾರಿದ್ದೇನೆಂದು ಹೇಳಿದಾಗ ಬೇರೆಯವರೆಲ್ಲ ಅವನಿಗೆ ಬಹಿಷ್ಕಾರ ಹಾಕಬೇಕೆಂಬ ಮಾತನ್ನೆತ್ತಿದರು. ರಾಜಕೀಯ ಖೈದಿಯಾದವನು ಹೋಗಿ ಕೆಲಸ ಮಾಡುತ್ತೇನೆ. ಕೊಡಿ ಎಂದು ಕೇಳುವುದೆ ? ಛೇ ! ಆದರೆ ಈ ಕೆಲವು ದಿನಗಳಿಂದ ನೋಡುತ್ತ ಬಂದಿದ್ದೇನೆ – ಮತ್ತೆ ಇವರೆಲ್ಲ ಅವನೊಡನೆ ಮಾತುಕತೆ ಆಡಲು ತೊಡಗಿದ್ದಾರೆ. ಇವರೆಲ್ಲ ಚರಖಾ ತಿರುಗಿಸತೊಡಗಿದ್ದಾರೆ. ಬಲಗಡೆಯಲ್ಲಿದ್ದವರಲ್ಲಿ ಒಬ್ಬ ಚರಖಾ ತಿರುಗಿಸುವುದನ್ನು ಬಾಯ ಶಬ್ದದಿಂದ ಅನುಕರಣ ಮಾಡುತ್ತಿದ್ದಾನೆ. ಸಂಗಡಿಗರು ಮೂರು ನಾಲ್ಕು ಜನ ಗಟ್ಟಿಯಾಗಿ ನಗತೊಡಗಿದರು. ಅದು ಸುಖಲಾಲ್ ಅಲ್ಲದೆ ಬೇರೆ ಯಾರಿರುತ್ತಾರೆ ! ಇಲ್ಲ, ಸುಖಲಾಲ್ ಅನ್ನಬಾರದು, ಕಾಮ್ರೇಡ್ ಸುಖಲಾಲ್ ಹಾಳು, ನೆನಪೇ ಇರುವುದಿಲ್ಲ. ಬೇರೆಯವರನ್ನು ಅಣಕಿಸುವುದರಲ್ಲಿ, ಕ್ಯಾರಿಕೇಚರ್ (ವ್ಯಂಗ್ಯಾನುಕರಣ) ಮಾಡುವುದರಲ್ಲಿ ಹುಡುಗ ನಿಸ್ಸೀಮ.

ಇಷ್ಟು ಜನ ಚರಖಾದಲ್ಲಿ ನೂಲು ತೆಗೆಯುತ್ತಿದ್ದಾರೆ ಎರಡು ಲಾಟೀನುಗಳಿದ್ದರೆ ಸಾಕೇ ಬೆಳಕು ? ಯುದ್ಧದ ನೆಪದಿಂದ ನಮಗೆ ಕೊಡುವ ಕೆರೋಸಿನ್ ಎಣ್ಣೆಯ ಪ್ರಮಾಣದಲ್ಲಿ ಸ್ವಲ್ಪ ಭಾಗ ಕಡಮೆ ಮಾಡಲಾಗಿದೆ. ಆಳೊಬ್ಬನಿಗೆ ಕಾಲು ಚಟಾಕು ಕೊಡುತ್ತಾರೆ. ಆ ಕಾರಣದಿಂದ ಹಲವಾರು ಜನ ಒಟ್ಟಿಗೆ ಸೇರಿ ಒಂದು ಲಾಟೀನನ್ನು ಉರಿಸುತ್ತಾರೆ. ವಾರ್ಡಿನ ಹೊರಗಡೆ ಎಲೆಕ್ಟ್ರಿಕ್ ದೀಪ ಉರಿಯುತ್ತಿದೆ. ಒಳಗಡೆಯೂ ಒಂದೆರಡು ದೀಪ ಉರಿಸಿದರೆ ಇವರಿಗೇನು ಹೋಗುತ್ತದೆ ? ಈ ಸರ್ಕಾರ ಏನು ತಿಳಿದುಕೊಂಡಿದೆಯೋ ಗೊತ್ತಿಲ್ಲ. ಬಹುಶಃ ಇವರಿಗೇನೋ ಭಯ. ಎಲೆಕ್ಟ್ರಿಕ್ ದೀಪ ಹಾಕಿದರೆ ಆತ್ಮಹತ್ಯೆ ಮಾಡಿಕೊಂಡಾರೇನೋ ಖೈದಿಗಳು ಅಂತ. ಎಲ್ಲರೂ ಆತ್ಮಹತ್ಯೆ ಯಾವಾಗ ಮಾಡಿಕೊಂಡೇವು ಎಂದು ಆತುರದಿಂದ ಕಾಯುತ್ತಿರುವ ಹಾಗೆ ! ಅದಕ್ಕಾಗೇ ಏನೋ ಜೈಲಿನ ಕಾಂಪೌಂಡಿನಲ್ಲಿರುವ ಹಳೇ, ಹಾಳು ಬಾವಿಗಳನ್ನೆಲ್ಲ ಮರದ ಹಲಗೆಗಳಿಂದ ಚೆನ್ನಾಗಿ ಮುಚ್ಚಿಹಾಕಿಬಿಟ್ಟಿದ್ದಾರೆ. ಆದರೆ ಅವರ ಭಯಕ್ಕೆ ಆಧಾರ ಇಲ್ಲದೆ ಇಲ್ಲ. ಯಾವಾಗಲೋ ಯಾವ ಆಸಾಮಿಯೋ ಇಂಥ ಹಾಳುಬಾವಿ ಒಂದರಲ್ಲಿ ಧುಮುಕಿ ಸತ್ತುಹೋಗಿದ್ದ. ಅದೇ, ಆಗೊಮ್ಮೆ ಕೆಲವರಿಗೆ ಬೆಸಿಲರಿ ಡೀಸೆಂಟ್ರಿ ಆಗಿದ್ದಾಗ ನಾನು ಡಾಕ್ಟರ ಬಳಿ ಹೋಗಿ ನಮ್ಮ ವಾರ್ಡಿಗೆ ಒಂದು ಬಾಟಲ್ ಎಲೆಕ್ಟ್ರಾನಿಕ್ ಕ್ಲೋರಿನ್ ಒದಗಿಸಿದರೆ ಕುಡಿಯುವ ನೀರಿನಲ್ಲಿ ಇದನ್ನು ಎಲ್ಲರೂ ನಿಯಮಿತವಾಗಿ ಬಳಸುವ ಹಾಗೆ ನಾನು ಏರ್ಪಾಡು ಮಾಡುತ್ತೇನೆ ಎಂದು ಹೇಳಿದೆ.

ಆ ಡಾಕ್ಟರ್ ಬಾಬು ಕೈ ಜೋಡಿಸಿ ನನಗೆ ಏನೆಂದ ಅಂದರೆ - "ಕ್ಷಮಿಸಿಬಿಡಿ ಮಹಾಸ್ವಾಮಿ ! ಅಂಥ ಮಾತು ಹೇಳಬೇಡಿ ದಯವಿಟ್ಟು. ಪೆನ್‌ಶನ್ ಆಗುವುದಕ್ಕೆ ನನಗಿನ್ನು ಮೂರು ವರುಷ ಮಾತ್ರ ಬಾಕಿ ಇದೆ. ಇದಕ್ಕೆ ಮೊದಲೇ ಎರಡು ಸಲ 'ಡಿಪಾರ್ಟ್‌ಮೆಂಟಲ್ ಆಕ್ಷನ್' ಆಗಿದೆ. ಒಂದು ಸಲ ಒಬ್ಬ ಒಂದು ಸೀರೆ ಮಾಲೀಷ್ ಮಾಡುವ ಔಷಧಿ ಕುಡಿದುಬಿಟ್ಟಿದ್ದ ಇನ್ನೊಬ್ಬ ಫಿನೈಲ್ ಕುಡಿದುಬಿಟ್ಟಿದ್ದ. ನನ್ನಿಂದ

ವಿವರಣೆ ಕೇಳಿದರು. ಅಷ್ಟೊಂದು ಫಿನ್ನೈಲ್ ಆ ಖೈದಿಗೆ ಹೇಗೆ ಸಿಕ್ಕಿತು ಅಂತ. ಹೇಗಿದೆ ತಮಾಷೆ ? ನಾನೇ ಅದಕ್ಕೆ ಹೊಣೆ ? ಅಲ್ಲ.... ಆ ಫಿನೈಲನ್ನು ಯಾವ ಝಾಡ್ ಮಾಲಿಯೋ ಕೊಟ್ಟಿರಲಿಕ್ಕಿಲ್ಲವೆ ? ಅಥವಾ ಬೇರೆ ಇನ್ನ್ಯಾರಾದರೂ ಕೊಟ್ಟಿರಲಿಕ್ಕಿಲ್ಲವೆ ? ಅಂತೂ ಈ ಡಿಪಾರ್ಟ್‌ಮೆಂಟಿಗೆ ಹೇಳೋರು ಕೇಳೋರು ಇಲ್ಲ ಅಂತ ಕಾಣುತ್ತೆ ಸ್ವಾಮಿ.''

ಒಂದೇ ಸಲ ಅನೇಕ ಚರಖಾಗಳು ಮಾಡುವ ನಾನಾ ಬಗೆಯ ಶಬ್ದಗಳು ಕೇಳುವುದಕ್ಕೆ ಚೆನ್ನಾಗಿರುತ್ತದೆ. ಬಹಳ ಮೇಲೆ ಆಕಾಶದಲ್ಲಿ ಏರೋಪ್ಲೇನ್ ಹಾರಿ ಹೋಗುತ್ತಿರುವ ಶಬ್ದ ಮುಂದಿನ ಬಂಗಾರದಂಥ ಭಾರತವನ್ನು ನಿರ್ಮಿಸಲು ಹಿಡಿದಿರುವ ಈ ದಾರಿಯಲ್ಲಿ ನಾನೊಬ್ಬನೇ ಅಲ್ಲ, ಇರುವುದು ಎಂದು ಮನವರಿಕೆ ಮಾಡುತ್ತದೆ ಈ ಶಬ್ದ. ಇದು ಕೇವಲ ಇಂತಿಷ್ಟು ಗಜ, ಇಂತಿಷ್ಟು ಮೊಳ ನೂಲನ್ನು ತೆಗೆಯುವುದೊಂದೇ ಅಲ್ಲ. ಈಗ ಚರಖಾದಲ್ಲಿ ಪ್ರಾಣಪ್ರತಿಷ್ಠೆ ಮಾಡಲಾಗುತ್ತ ಇದೆ. ಇದೇ ರಾಮರಾಜ್ಯವನ್ನು ಭಾರತದಲ್ಲಿ ಮತ್ತೆ ತರುವ ಏಕಮಾತ್ರ ಅಸ್ತ್ರ. ರಾಮರಾಜ್ಯವೆಂದರೆ ಪ್ರೇಮದ ರಾಜ್ಯ. ಪರಮವೈಷ್ಣವನಾದ ಶ್ರೀ ಚೈತನ್ಯನ (ಗೌರಾಂಗ) ರಾಜ್ಯ. ಜನತೆ, ದ್ವೇಷ, ಹಿಂಸೆಗಳನ್ನು ಮರೆತು ಹೋಗುವರು. ಪರಿಶ್ರಮ ಮಾಡಿ, ಚೆನ್ನಾಗಿ ಊಟ ಮಾಡಿ ಆರಾಮವಾಗಿ, ಸುಖವಾಗಿರಿ, ಯಾವುದಕ್ಕೂ ಅಭಾವ ಇರುವುದಿಲ್ಲ. ಪ್ರತಿಯೊಬ್ಬರ ಮನೆಯಲ್ಲೂ ಒಂದು ಹಸು ಪ್ರತಿಯೊಬ್ಬರ ಗುಡಾಣದಲ್ಲೂ ಸಮೃದ್ಧಿಯಾಗಿ ಧಾನ್ಯ. ಎಷ್ಟೆಷ್ಟು ನೂಲು ತೆಗೆಯುತ್ತೇವೋ ಅಷ್ಟಷ್ಟು ನಮ್ಮ ಗುರಿಯ ಹತ್ತಿರಕ್ಕೆ ಬರುತ್ತೇವೆ. ನಾವು ಕಟ್ಟುವ ರಾಮರಾಜ್ಯದಲ್ಲಿ ಒಬ್ಬೊಬ್ಬರೂ ಬೇರೆಯವರಿಗೆ ಸಹಾಯ ಮಾಡುತ್ತಾರೆ. ಹಣವಂತರು ತಮ್ಮ ಹಣವನ್ನು ಬಡವರಿಗೆ ಹಂಚುತ್ತಾರೆ. ಗ್ರಾಮಗಳು ಇನ್ನು ಮೇಲೆ ತಮಗೆ ಆವಶ್ಯಕವಾದ ವಸ್ತುಗಳಿಗಾಗಿ ಹೊರಗಡೆ ಹೋಗುವುದಿಲ್ಲ. ತಾವೇ ಉತ್ಪನ್ನ ಮಾಡಿಕೊಳ್ಳುತ್ತವೆ. ಶ್ರಮಕರನ್ನು ಶೋಷಣೆ ಮಾಡುವುದು ಪೂರ್ತಿಯಾಗಿ ನಿಂತುಹೋಗುತ್ತದೆ. ಯಾರೂ ಭೋಗಕ್ಕೆ ಆಸೆ ಪಡದೆ ಇರುವಾಗ ಶೋಷಣೆ ಹೇಗೆ ಸಾಧ್ಯ ? ನಮ್ಮ ಅಭಿಪ್ರಾಯ ಹೀಗಿದ್ದರೆ ಬೇರೆಲ್ಲರೂ ಸಹ ಹಾಗೇ ಭಾವಿಸುವರು ಎಂಬುದನ್ನು ಈ 'ಸೂತ್ರ ಯಜ್ಞ' ಮನವರಿಕೆ ಮಾಡುತ್ತದೆ. ಎಷ್ಟೋ ರಾಜಕೀಯ ಕೆಲಸಗಾರರು ತಂಡ ತಂಡವಾಗಿ ನಮ್ಮ ದಾರಿಯನ್ನು ಬಿಟ್ಟ ಹೋಗುತ್ತಿದ್ದಾರೆ. ಅರ್ಥವಾಗಲಿ, ಆಗದಿರಲಿ, ನಂಬಲಿ, ನಂಬದಿರಲಿ ಸೋಷಲಿಸ್ಟ್ ಅನ್ನಿಸಿಕೊಳ್ಳುವುದು ಈಗ ಒಂದು ಫ್ಯಾಷನ್ನಾಗುತ್ತ ಇದೆ. ನಮ್ಮ ನೀಲೂ, ಬಿಲೂ ಇವರ ಮಾತೇ ತೆಗೆದುಕೊಳ್ಳಿ, ಇವರೇ 1930-32ರಲ್ಲಿ ಎಷ್ಟು ಚರಖಾ ತಿರುಗಿಸುತ್ತಿದ್ದರು, ಯಾವ ನಮೂನೆ ಮಾತಾಡುತ್ತಿದ್ದರು ? ಎಷ್ಟು ತೃಪ್ತಿಕರವಾಗಿ ತಯಾರಾಗಿದ್ದರು ಅಂದರೆ ಅವರು ಎಂದಾದರೂ ಅಂಥ ಉಚ್ಚ ಆದರ್ಶಗಳನ್ನ ಹೀಗೆ ಬಿಟ್ಟುಕೊಡುತ್ತಾರೆ ಎಂಬುದಾಗಿ ಎಂದೂ ಯೋಚಿಸಲು ಆಗುತ್ತಿರಲಿಲ್ಲ. ಈಗಲೂ ನಮ್ಮ ಮತಾವಲಂಬಿಗಳಾಗಿದ್ದವರು ನಮ್ಮ ದಾರಿ ಬಿಟ್ಟು ಹೊರಟುಹೋದರೆ ಆಗ ನಮ್ಮ ಪಥವೇ ಸರಿಯಾಗಿದೆಯೋ ಇಲ್ಲವೋ ಎಂಬ ಸಂದೇಹ ಹುಟ್ಟಿಕೊಳ್ಳುತ್ತದೆ. ನಮ್ಮ ದೇಶದ ವೇದ, ಪುರಾಣಗಳು, ಋಷಿ ಮುನಿಗಳು, ಶಾಸ್ತ್ರ ಇತಿಹಾಸಗಳು ಎಲ್ಲಿ

ಹೋದುವು ? ಈಗ ಎಲ್ಲರ ದೃಷ್ಟಿ ರಷ್ಯದಕಡೆ – ಎಲವೋ, ರಷ್ಯ ಹಾಗಾದರೆ ನಮ್ಮ ತಾಯಿನಾಡಿಗಿಂತಲೂ ಶ್ರೇಷ್ಠವೆ ? ದೇಶ, ವಿದೇಶಗಳ ಇತಿಹಾಸ ನಮಗೇನು ಹೊಸದಲ್ಲ. ನಾವೂ ಎಷ್ಟೋ ಓದಿದ್ದೇವೆ. ಮ್ಯಾಜಿನಿ, ಗ್ಯಾರಿಬಾಲ್ಡಿ, ವಾಷಿಂಗ್‌ಟನ್ – ಮುಂತಾದವರ ಅಮರ ಜೀವನ ಚರಿತ್ರೆಗಳು ನಮಗೂ ರೋಮಾಂಚ ಹುಟ್ಟಿಸುತ್ತಿದ್ದುವು.

ಅವರುಗಳ ಕೀರ್ತಿಯಲ್ಲವೇ ನಮ್ಮ ವಿದ್ಯಾರ್ಥಿ ಜೀವನದಲ್ಲಿ ಉಚ್ಚ ಆದರ್ಶಗಳ ಪ್ರೇರಣೆ ನೀಡುತ್ತಿದ್ದುದು ? ಆದರೆ ಮಾತ್ರ ನಾವು ನಮ್ಮ ಛತ್ರಪತಿ ಶಿವಾಜಿಯ ಸಾಹಸ, ಗೌರವಗಳ ಚರಿತ್ರೆಯನ್ನು ಮರೆತು ಹೋಗಿಲ್ಲ. ಸ್ವಾಮಿ ವಿವೇಕಾನಂದರ ಸ್ಫೂರ್ತಿದಾಯಕ ನುಡಿಯನ್ನು ಅಲ್ಲಗಳೆದು ಮಾರ್ಕ್ಸ್ ಸಿದ್ಧಾಂತಗಳ ಬಲೆಯಲ್ಲಿ ಸಿಕ್ಕಿಬಿದ್ದಿಲ್ಲ. ನಮ್ಮ ಮಹಾತ್ಮಾ ಗಾಂಧಿಗಿಂತಲೂ ಸ್ಟಾಲಿನ್ನೇ ಬಲು ದೊಡ್ಡವನೆಂದು ನಮಗೆ ಅನ್ನಿಸಿಯೇ ಇಲ್ಲ, ವಿದೇಶಿ ವಿದ್ವಾಂಸರ ಕೃತಿಗಳನ್ನು ಓದಬಾರದೆಂದು ಹೇಳಿದವರಾರು ? ಓದಿ, ಬೇಕಾದ ಹಾಗೆ. ನಾವು ಓದಿಲ್ಲವೇನು ಬೆಂಟ್ ಹ್ಯಾಮ್, ಸ್ಪೆನ್ಸರ್, ಮಿಲ್, ಇಂಥವರ ಬರಹಗಳನ್ನ ? ಬೇಕಾದಷ್ಟು ಓದಿದ್ದೇವೆ. ಹಾಗೆಂದುಬಿಟ್ಟು ನಮ್ಮವರು ಬರೆದಿರುವುದನ್ನೆಲ್ಲ ಮರೆತು ಹೋಗಬೇಕೇನು ?

ಬಿಲೂ ಮೊದಲು ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಗೆ ಸೇರಿಕೊಳ್ಳುವಾಗಲೇ ನಾನು ಅವನಿಗೆ ಚೆನ್ನಾಗಿ ತಿಳಿಯಹೇಳಿದ್ದರೆ ಬಹುಶಃ ಈಗಲೂ ಅವನು ಈ ನಮೂನೆ ಆಗುತ್ತಾ ಇರಲಿಲ್ಲ. ಬಿಲೂ ಒಬ್ಬನನ್ನು ನಾನು ಹಿಡಿತದಲ್ಲಿ ಇಟ್ಟುಕೊಂಡಿದ್ದರೆ ನೀಲೂ ಸಹ ಕೈಬಿಟ್ಟು ಹೋಗುತ್ತಿರಲಿಲ್ಲ. ಕಿವಿ ಎಳೆದರೆ ತಲೆಯೂ ಹತ್ತಿರ ಬರುತ್ತದಲ್ಲವೆ ? ಅಣ್ಣ ಏನೇನು ಮಾಡಿದರೂ ತಮ್ಮನಾದವನು ಅದನ್ನೆಲ್ಲ ಅನುಕರಿಸುವುದಿಲ್ಲವೆ; ಒಳ್ಳೇದಾಗಲಿ, ಕೆಟ್ಟದಾಗಲಿ ಅರ್ಥವಾಗಲಿ, ಆಗದಿರಲಿ ? ಆದರೆ ಬಲಾತ್ಕಾರದಿಂದ ಯಾರನ್ನಾಗಲಿ ಯಾವುದೇ ಒಂದು ಪಂಥದಲ್ಲಿ ಕಟ್ಟಿಡುವುದಕ್ಕಾಗುವುದಿಲ್ಲ ! ಅದರಲ್ಲೂ ಎಂದೂ ಬುದ್ಧಿಹೀನನಾಗಿಲ್ಲದವನನ್ನು. ಬಿಲೂ ವಯಸ್ಸಿಗೆ ಬಂದಿರುವ ಹುಡುಗ – ಅವನನ್ನೇ ಹಿಡಿತದಲ್ಲಿಟ್ಟುಕೊಳ್ಳಲು ಯತ್ನಿಸುವುದು ? ಯಾವ ಉದ್ದೇಶಕ್ಕಾಗಿ ? ನಾನು ಹಿಡಿದಿರುವ ದಾರಿಯಲ್ಲಿ ಅವನು ಬಂದಿಲ್ಲ ಎಂತಲೆ ? ನನ್ನ ಅಭಿಪ್ರಾಯಗಳಂತೆ ಅವನದಿಲ್ಲ ಎಂತಲೆ ? ಅವನ ಸ್ವಂತ ವ್ಯಕ್ತಿತ್ವದ ಬಗೆಗೆ ನನಗೆ ಸ್ವಲ್ಪವೂ ಗೌರವವಿಲ್ಲದೆ ಹೋದಲ್ಲಿ ನನ್ನ ಪಂಥದ ಸಂಯಮ ಮತ್ತು ಸಹನೆ ಎಲ್ಲಿ ಹೋದ ಹಾಗೆ ? ಇವರೇನು ಅರಿಯದವರಲ್ಲ ? ನಾನು ಇವರಿಗೆ ತಿಳಿಯಹೇಳಬಹುದಾಗಿದ್ದ ವಿಷಯಗಳನ್ನು ಕುರಿತು ಅವರೇ ಸ್ವಂತವಾಗಿ ಜಿಜ್ಞಾಸೆ ಮಾಡಿ ನೋಡಿಲ್ಲವೆ ? ಇವರೂ ಸಹ ನನ್ನ ಪಂಥದ ವಾತಾವರಣವಿರುವ ರಾಜಕೀಯ ಆಶ್ರಮದಲ್ಲಿ ಬೆಳೆದವರು. ಇವರು ಈ ವಿಷಯದ ಸೂಕ್ಷ್ಮಾತಿಸೂಕ್ಷ್ಮ ಪರಸ್ಪರ ವಿರುದ್ಧ ಅಂಶಗಳನ್ನೆಲ್ಲ ಚೆನ್ನಾಗಿ ಅರಿತವರು. ಈ ವಿಷಯಗಳನ್ನೆಲ್ಲ ಕುರಿತು ಎಷ್ಟೋ ಸಲ ಎಷ್ಟೋ ಕಡೆ ಎಷ್ಟೋ ಚರ್ಚೆ, ಮೀಮಾಂಸೆಗಳನ್ನು ಕೇಳಿರುವಂಥವರು. ಈ ನಮ್ಮ ಬಿಲೂ ಮೂರು ತಿಂಗಳ ಕಾಲ ಸಬರಮತಿ ಆಶ್ರಮದಲ್ಲೂ ಇದ್ದು ಬಂದಿದ್ದ. ಗಾಂಧೀಜಿಯವರ ಪಾದ ಧೂಳಿ ತೆಗೆದುಕೊಳ್ಳುವ ಸುಯೋಗ ನೀಲೂ, ಬಿಲೂ ಇಬ್ಬರಿಗೂ ಲಭಸಿದೆ. ಇವರು ಪೂರ್ಣಯಾ

ಆಶ್ರಮದಲ್ಲಿ ಗಾಂಧೀಜಿಯ ಸಂಗಡ ನಿಂತು ಫೋಟೊ ಸಹ ತೆಗೆಸಿಕೊಂಡಿದ್ದರು. ಎಷ್ಟೇ ಸ್ವಲ್ಪ ದಿನಗಳಾಗಿರಲಿ, ಇಂಥ ಮಹಾತ್ಮರ ಸಂಪರ್ಕದಲ್ಲಿ ಇದ್ದರೂ, ಆತನ ಪ್ರಭಾವ ಇವರ ಮೇಲೆ ಬೀಳದೆ ಇದ್ದ ಮೇಲೆ, ನಾನು ಏನಾದರೂ ಮಾಡಹೋಗುವುದು ಅಸಂಬದ್ಧ ಅಷ್ಟೇ.

ನನ್ನ ಸ್ವಂತ ಆಚರಣೆಯನ್ನೇ ಗಮನಿಸೋಣ. ನಾನು ಮೊದಲು ಸರ್ಕಾರೀ ಉದ್ಯೋಗಕ್ಕೆ - ಹೆಡ್‌ಮಾಸ್ತರ್ ನೌಕರಿಗೆ ರಾಜೀನಾಮೆ ಕೊಟ್ಟು ರಾಜಕೀಯ ಕ್ಷೇತ್ರಕ್ಕೆ ಇಳಿದಾಗ ಯಾರದಾದರೂ ಮಾತನ್ನು ಕೇಳಿದ್ದೇನೇನು ? ಯಾರ್‍ಯಾರೋ ಬೇಡ, ಈ ಕೆಲಸ ಮಾಡಬೇಡ ಎಂದು ಹೇಳಲು ಬಂದಿದ್ದರು. ಡಿ.ಪಿ.ಐ. ಸಾಹೇಬರು ತಾವೇ ಪತ್ರವನ್ನು ಮಂಜೂರು ಮಾಡದೆ ಇಟ್ಟುಕೊಂಡು ನನಗೆ ತಿಳಿಯ ಹೇಳುವ ಸಲುವಾಗಿ ಹೇಳಿಕಳಿಸಿದ್ದರು. ನಾನು ಪಟ್ಟಣದಲ್ಲಿರುವ ಅವರ ಬಂಗಲೆಗೆ ಹೋಗಿದ್ದೆ ನೋಡಲಿಕ್ಕೆ. ನನ್ನ ರಾಜೀನಾಮೆಯ ಸುದ್ದಿ ಸಾಹೇಬರ ಬೇಹಾರಾ (ಖಾಸಾ ಅಂಗ ಸೇವಕ) ಆದವನಿಗೂ ಗೊತ್ತಾಗಿ ಹೋಗಿತ್ತು. ಬೇರೆ ಸಮಯಗಳಲ್ಲಾದರೆ ಸಾಹೇಬರನ್ನು ಭೆಟ್ಟಿಯಾಗುವುದಕ್ಕೆ ಕಾರ್ಡು ಕಳಿಸುವಾಗ ಈ ಮನುಷ್ಯನನ್ನು ಪ್ರಸನ್ನಗೊಳಿಸಬೇಕಾಗಿತ್ತು - ಕೈ ಬೆಚ್ಚಗೆ ಮಾಡಬೇಕಾಗುತ್ತಿತ್ತು. ಆಗ ಈ ಆರ್ಡರ್‌ಲಿ ಮಹಾಶಯ ಎಷ್ಟು ಅಸಡ್ಡೆ ತೋರುತ್ತಿದ್ದ! ಈಗಲೋ... ನನ್ನನ್ನು ನೋಡಿದೊಡನೆ ತಟಕ್ಕನೆ ಎದ್ದು ಭಕ್ತಿಯಿಂದ ಬಾಗಿ ನನ್ನ ಕಾಲು ಮುಟ್ಟಿ ಕಣ್ಣಿಗೊತ್ತಿಕೊಳ್ಳುವವರೆಗೂ ಬಿಟ್ಟರೆತಾನೆ ?

"ಮಾಸ್ತರ್ ಸಾಹೇಬರು ಸ್ವರಾಜ್ಯ ಚಳವಳಿಯಲ್ಲಿ ಸೇರಿಕೊಂಡಿದ್ದಾರೆ ಅಂತ ಕೇಳಿದೆ" - ಎಂದ. ತಾನು ನನಗೆ ಪ್ರಣಾಮ ಮಾಡುತ್ತೇನೆಂದೂ, ನನಗೆ ಬೇಕಾದ ಸೇವೆ ಮಾಡಲು ಗದ್ಗದವಾಗಿ ಹೋಗಿತ್ತು - ಅವನ ಮುಖ ಭಕ್ತಿಭಾವದಿಂದ ತುಳುಕುತ್ತಿತ್ತು. ಆಮೇಲೆ ಅವನು ಹೇಳುತ್ತ ಹೋದ, "ನನಗೂ ಸ್ವರಾಜ್ಯ ಚಳವಳಿಯಲ್ಲಿ ಸೇರಿ ತಮ್ಮಂಥವರಿಗೆ ಅಲ್ಪಸ್ವಲ್ಪ ಸೇವೆ ಸಲ್ಲಿಸಬೇಕು ಅಂತ ಮನಸ್ಸಲ್ಲಿ ಇದೆ. ಮಗ ಮುಂದಿನ ವರುಷ "ಮಿಡಲ್ ಇಂತಿಹಾನ್" ಪರೀಕ್ಷೆಗೆ ಕೂಡುವವನಿದ್ದಾನೆ. ಆಮೇಲೆ ಸಾಹೇಬರಿಗೆ ಹೇಳಿ ಅವನಿಗೊಂದು ನೌಕರಿ ಕೊಡಿಸಿಬಿಟ್ಟು ಅದಾದ ಮೇಲೆ ನಾನೂ ಚಳವಳಿಗೆ ಸೇರಿಕೊಂಡು ಬಿಡತ್ತೇನೆ."

ಡಿ.ಪಿ.ಐ. ಸಾಹೇಬರ ಅನುಗ್ರಹಕ್ಕೆ ಪಾತ್ರನಾಗಿದ್ದವನು ನಾನು. ಬಿ.ಟಿ. ಪರೀಕ್ಷೆಗೆ ಓದುವಾಗ ಅವರು ನಮ್ಮ ಪ್ರಿನ್ಸಿಪಾಲ್ ಆಗಿದ್ದರು. ನನ್ನನ್ನು ನೋಡಿದೊಡನೆ ಎದ್ದು ಕೈ ಹಿಡಿದು ಕೂಡಿಸಿದರು. ಗುರು-ಶಿಷ್ಯರ ನಡುವೆ ಆಗುವ ಧಾಟಿಯಲ್ಲಿ ಮಾತು, ಕತೆ ಆಯಿತು. ಅಧಿಕಾರಿಗೂ ನೌಕರನಿಗೂ ಆಗುವ ಮಾತುಕತೆಯಂತಲ್ಲ. ನಾನು ಅವರನ್ನು ಬೀಳ್ಕೊಟ್ಟು ಹೊರಡುವಾಗಲೂ ಆತನು, "ಸನ್ಯಾಲ್, ತಪ್ಪು ಮಾಡುತ್ತಾ ಇದ್ದೀಯೆ. ಇನ್ನೊಂದು ಸಲ ಚೆನ್ನಾಗಿ ಯೋಚನೆ ಮಾಡಿ ನೋಡು" ಎಂದರು. ಆಗ ನಾನು ಹೇಳಿದೆ - "ಇಲ್ಲ, ಸಾರ್, ತಪ್ಪು ಇದುವರೆಗೂ ಮಾಡಿದ್ದೆ. ಇನ್ನು ಮಾಡುವುದಿಲ್ಲ."

ನಮ್ಮ ಕೇರಿಯ ಹಿರಿಯರಾದ ಮಿತ್ರಮಹಾಶಯರು ಕಾಳೀಮಂದಿರದ ಹಿಂಬದಿ ಇರುವ ಇಟ್ಟಿಗೆಗೂಡಿನ ಬಳಿ ಕರೆದು ಕೊಂಡು ಹೋಗಿ ಎಷ್ಟೋ

ಆಪ್ಯಾಯತೆಯಿಂದ, ನೋವಿನಿಂದ ನನಗೆ ಬುದ್ಧಿ ಹೇಳಲು ಪ್ರಯತ್ನಿಸಿದರು. "ಯಾಕಪ್ಪಾ ಇಂಥ ಗಲಾಟೆಗಳಲ್ಲಿ ಸಿಕ್ಕಿ ಹಾಕಿಕೊಳ್ಳುತ್ತ ಇದ್ದೀಯೆ. ಮದುವೆ ಮಾಡಿಕೊಂಡಿರುವ ಗೃಹಸ್ಥ ನೀನು. ಮಕ್ಕಳು-ಮರಿ ಇವೆ ನಿನಗೆ. ಹಿಂದೆ, ಮುಂದೆ ಯಾವುದೂ ನೋಡದೆ ಈ ರೀತಿ ಧುಮುಕಿ ಬೀಳುವುದು ಸರಿಯೇ ನೀನೇ ಹೇಳು. ಅಲ್ಲಯ್ಯಾ, ಇಡೀ ಇಂಡಿಯಾ ದೇಶಕ್ಕೇ ಸ್ವರಾಜ್ಯ ಬಂದಾಗ ನಮ್ಮ ಪೂರ್ಣಿಯಾ ಜಿಲ್ಲೆಗೂ ಬರದೆ ಹೋಗುತ್ತದೇನಯ್ಯಾ ? ಈ ಜಾಗ ಒಂದು ಮಾತ್ರಬಿಟ್ಟು ಸ್ವರಾಜ್ಯ ಎಂದಿಗೂ ಬರೋದಿಲ್ಲ." - ಹೀಗೇ ಎಷ್ಟು ಮಂದಿ ಎಷ್ಟು ವಿಧವಾದ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದ್ದರು! ಅವರಲ್ಲಿ ಯಾರ ಮಾತಿಗಾದರೂ ನಾನು ಕಿವಿಗೊಟ್ಟಿದ್ದೇನೇನು ? ಈ ದಾರಿ ಹಿಡಿಯಲಿಕ್ಕೆ ಮೊದಲು ಯಾರ ಸಲಹೆಯಾದರೂ ಕೇಳಿದ್ದೇನೇನು ? ಹಾಗೆ ಯಾರದಾದರೂ ಕೇಳಿದ್ದರೆ ಅದು ಕೇವಲ ನಮ್ಮ ಬಿಲೂನ ತಾಯಿಯನ್ನು... ಅದೂ ಸಲಹೆ ಕೇಳುವ ಹಾಗಲ್ಲ. ತೀರ್ಮಾನ ಮಾಡಿರುವುದನ್ನು ತಿಳಿಸುವುದು ಅಷ್ಟೇ. ಅವಳು ಏನೆಂದುಕೊಂಡಳೋ ಗೊತ್ತಿಲ್ಲ. ಇಷ್ಟು ಮಾತ್ರ ಹೇಳಿದ್ದಳು, "ನಿಮಗೆ ಯಾವುದು ಸರಿ ಅನ್ನಿಸುತ್ತೋ ಹಾಗೆ ಮಾಡಿ. ನನ್ನಂಥ ಹೆಂಗಸರಿಗೆ ಏನು ಅಭಿಪ್ರಾಯ ಇದ್ದೀತು ಇಂಥ ವಿಷಯಗಳಲ್ಲಿ ?" ನಾನು ಯಾರ ಉಪದೇಶದ ಮೇರೆಗೂ ನಡೆದವನಲ್ಲ. ನನಗೆ ಯಾವುದು ಸರಿಯೆಂದು ಅನ್ನಿಸಿತೋ ಹಾಗೇ ಮಾಡಿದ್ದೇನೆ. ಹೀಗಿರುವಾಗ, ಬಿಲೂ ಮಾತ್ರ ನನ್ನ ಮಾತಿನಂತೆಯೇ ನಡೆಯಬೇಕೆಂದಿದೆಯೇ ?

ಯಾವುದೋ ಒಂದು ಚರಖಾದಲ್ಲಿ ಮಾತ್ರ ಎತ್ತಿನ ಗಾಡಿಯ ಗಾಲಿಯ ಶಬ್ದದ ಹಾಗೆ 'ಕ್ಯಾಂಚ್-ಕ್ಯಾಂಚ್' ಅನ್ನುತ್ತಿದೆ. ಈ ಶಬ್ದದ ಕೊನೆಯಿಲ್ಲದ ಪುನರಾವೃತ್ತಿ ಕೇಳಿ ಕಿವಿ ಚಿಟ್ಟೆನ್ನಿಸುತ್ತಿದೆ. ಸಿಮೆಂಟಿನ ನೆಲದ ಮೇಲೆ ಯಾವುದಾದರೂ ಲೋಹದಿಂದ ಮಾಡಿದ ಪಾತ್ರೆ ಉಜ್ಜಿಕೊಂಡು ಎಳೆದುಕೊಂಡು ಹೋದರೆ ಹೇಗೆ ಶಬ್ದ ಆಗುತ್ತದೋ ಅಷ್ಟು ಕರ್ಕಶವಾಗಿ ಕೇಳುತ್ತದೆ. ಜೈಲಿಗೆ ಬರುವುದಕ್ಕೆ ಮುನ್ನ ನನ್ನ ಈ ಸ್ನಾಯುಗಳ ದೌರ್ಬಲ್ಯವನ್ನು ಗಮನಿಸಿರಲಿಲ್ಲ. ನನ್ನ ಆರೋಗ್ಯವಂತವಾದ ಸ್ನಾಯುಮಂಡಲಿಯೂ ಸ್ವಲ್ಪದರಿಂದ ಕದಲಿಸಲ್ಪಡುವಂಥದಲ್ಲ ಎಂದು ಗರ್ವಿಸುತ್ತಿದೆ. ಈಗ ಜೈಲಿಗೆ ಬಂದ ಮೇಲೆ ಇದೇಕೆ ಹೀಗಾಗಿಬಿಟ್ಟೆ ? ಖಂಡಿತವಾಗಿ, ರಾಮದೇನಿಯ ಚರಖಾದಿಂದಲೇ ಈ ಶಬ್ದ ಬರುತ್ತಿರುವುದು. ನನ್ನ ಕೈಯಲ್ಲಿದ್ದ ನೂಲಿನ ಮೇಲಿನಿಂದ ನನ್ನ ಕಣ್ಣನ್ನು ಅತ್ತ ಹೊರಳಿಸಿದೆ. ರಾಮದೇನಿಗೆ ಅದು ಗಮನಕ್ಕೆ ಬಂತು. ನನ್ನ ಕಣ್ಣು ಆ ಕಡೆ ಹೋಗಿದ್ದನ್ನು ನೋಡಿದ ತತ್‌ಕ್ಷಣ ಚರಖಾ ಬಿಟ್ಟು ಮೇಲಕ್ಕೆ ಎದ್ದ. ಎದ್ದದ್ದೇ ನೇರವಾಗಿ ತನ್ನ ಮಂಚದ ಕಡೆ ಓಡಿದ. ಎಲ್ಲರೂ ಆ ಕಡೆ ನೋಡತೊಡಗಿದರು. ಅವರಿಗೆ ಆಶ್ಚರ್ಯ! ಇದೇನು, ಈ ಮನುಷ್ಯ ಇಷ್ಟು ಮಾತ್ರ ಶಿಷ್ಟಾಚಾರ ಇಲ್ಲ! 'ಸಾಮೂಹಿಕ ಸೂತ್ರಯಜ್ಞ'ದಿಂದ ಹೀಗೆ ಹಠಾತ್ತಾಗಿ ಹೇಳದೆ ಕೇಳದೆ ಎದ್ದು ಹೋಗುವುದೆ ? ರಾಮದೇನಿ ವಾಪಸು ಬಂದ. ಕೈಯಲ್ಲಿ ಎಣ್ಣೆಯ ಶೀಶೆ, ಚರಖಾದ ಗಾಲಿಗೆ ತೊಟ್ಟುತೊಟ್ಟಾಗಿ ಎಣ್ಣೆ ಬಿಟ್ಟ. ಆಮೇಲೆ ಮೊದಲಿನ ಹಾಗೆ ಚರಖಾ ತಿರುಗಿಸಲುತೊಡಗಿದ. ಎಲ್ಲರೂ ನನ್ನ ಕಡೆ ನೋಡಿದರು. ನಾನು ಆಗಾಗ ಗಮನಿಸಿದೆ. ಅವರೆಲ್ಲ ಚರಖಾ ತಿರುಗಿಸುತ್ತಲೇ ನನ್ನ ಕಡೆಯೇ

ನೋಡುತ್ತ ಇರುತ್ತಾರೆ ಯಾಕೆ? ನನ್ನ ಮುಖದಲ್ಲೇನಾದರೂ ಬದಲಾವಣೆ ನೋಡುತ್ತಿದ್ದಾರೋ? ಈಚೆಗೆ ಕೆಲವು ದಿನಗಳಿಂದಲೂ ನನ್ನ ಮನಸ್ಸಿನಲ್ಲಿ ಯಾವ ದ್ವಂದ್ವ, ಯಾವುದೊಂದು ಸಂಶಯ ಮನೆ ಮಾಡಿಕೊಂಡಿದೆಯೋ ಅದರ ಕುರುಹೇನಾದರೂ ನನ್ನ ಮುಖದ ಮೇಲೆ ಕಾಣುತ್ತಿದೆಯೆ? ಮನಸ್ಸಿನ ಚಿಂತೆಯನ್ನು ಮುಚ್ಚುವುದಕಾಗುತ್ತದೆಯೇ? ಈ ಸೆಕೆಯಲ್ಲಿ ಉಪವಾಸ ಮಾಡಿದ ಮೇಲೆ ನನ್ನ ಮುಖ ಬಹುಶಃ ಒಣಗಿದಂತೆ ತೋರುತ್ತಿರಬಹುದು. ಇರಲಾರದು, ಈ ಉಪವಾಸವನ್ನು ನಾನು ಪ್ರತಿ ಸೋಮವಾರವೂ ಮಾಡುತ್ತ ಬಂದಿದೇನೆ. ಅದರಿಂದ ಏನೂ ಆಗಿಲ್ಲ ಬಹುಶಃ ಅಂತೂ, ಇವರೆಲ್ಲರ ಸಹಾನುಭೂತಿಗೆ ನಾನೇನು ಬೆಲೆ ಕೊಡಬಲ್ಲೆ? ನಾನು ಯಾವುದರಿಂದಾದರೂ ಸ್ವಲ್ಪ ಹೊತ್ತು ಮನಸ್ಸಿನ ಅಶಾಂತಿಯನ್ನು ಮರೆಯುವ ಹಾಗಾದರೆ ಸಾಕು ಎಂಬ ಉದ್ದೇಶ್ಯದಿಂದಲೇ ಇವರೆಲ್ಲ ಈ ಸಾಮೂಹಿಕ ಸೂತ್ರಯಜ್ಞವನ್ನು ಏರ್ಪಾಡು ಮಾಡಿ ಚರಖಾ ತಿರುಗಿಸುತ್ತ ಕೂತಿದ್ದಾರೆ. ಎಲ್ಲರೂ ಒಟ್ಟು ಸೇರಿ ನನ್ನ ಮನಸ್ಸಿನ ಭಾರ ಇಳಿಸಿ ಮನಸ್ಸು ಹಗುರವಾಗಲು ನೆರವಾಗುತ್ತಿದ್ದಾರೆ.

ತಲೆ ತುಂಬ ಗುಂಗುರು ಕೂದಲು, ಹೊಳೆಯುವ ಬೆಳ್ಳಗಿನ ಬಣ್ಣ. ಸ್ವಲ್ಪ ಹುಡುಗಿಯಂತೆ ತೋರುವ ಕೋಲು ಮುಖ, ಕಿರಿದಾದ ಗಲ್ಲ. ಭಾವನಾ ಪೂರ್ಣವಾದ ಕಡುಗಪ್ಪಾದ ಕಣ್ಣುಗಳ ದೃಷ್ಟಿ ಅತಿ ಗಂಭೀರ. ನಾನು ಎಂದಾದರೂ ಅವನ ಕಡೆ ದಿಟ್ಟಿಸಿ ನೋಡಿದರೆ ತತ್‌ಕ್ಷಣ ಮುಖ ತಗ್ಗಿಸಿಬಿಡುವನು. ಆದರೆ ಇಂಥ ಕಣ್ಣಿಂದಲೂ ಮಿಂಚಿನ ಬೆಂಕಿಯ ಕಿಡಿ ಹೊರಗೆ ಬರುವುದನ್ನು ನಾನು ಕಂಡಿದ್ದೇನೆ. ಒಂದು ಸಲ ನಾನು ನೌಕರಿ ಬಿಡುವುದಕ್ಕೆ ಹಿಂದೆ ನಡೆದ ಸಂಗತಿ. ನಾನು ಹೆಡ್‌ಮಾಸ್ತರಾಗಿದ್ದ ಹೈಸ್ಕೂಲಿನ ಪಕ್ಕದಲ್ಲೇ ಪ್ಲಾಂಟರ್ಸ್ ಕ್ಲಬ್ ಇತ್ತು. ಎರಡು ಕಾಂಪೌಂಡುಗಳ ನಡುವೆ ಒಂದು ತಂತಿಯ ಬೇಲಿ. ಕ್ಲಬ್ಬಿನ ಒಳಗಡೆ ಯಾವುದೋ ಹೆಂಗಸರ ಉತ್ಸವ. ಕ್ಲಬ್ಬಿನ ಮಹಿಳೆಯರು ಏರ್ಪಾಡು ಮಾಡಿರುವ ಚಾರಿಟಿ ಫೇರ್ ಅಥವಾ ಇನ್ನೇನೋ, ನಡೆಯುತ್ತಿದೆ. ನೀಲೂ ಮತ್ತು ಬಿಲೂ ಬೇಲಿಯ ಮೇಲೆ ಹತ್ತಿ ಆಕಡೆ ನಡೆಯುತ್ತಿರುವ ಪಾಶ್ಚಾತ್ಯ ಹೆಂಗಸರ (ಮೇಮ್ ಸಾಹೇಬರ) ಉತ್ಸವ ನೋಡುತ್ತಿದ್ದಾರೆ. ಈ ಹೆಂಗಸರು ನಾನಾ ವಿಧವಾದ ಷೋಕಿ ಸಾಮಾನುಗಳ ಅಂಗಡಿಗಳನ್ನು ತೆರೆದಿದ್ದಾರೆ.

ನೀಲೂ ಆಗಿನ್ನೂ ಚಿಕ್ಕವನು. ಬಿಲೂ ತಮ್ಮನನ್ನು ಮಧ್ಯದ ತಂತಿಯ ಮೇಲೆ ನಿಲ್ಲಿಸಿಕೊಂಡು ಹಿಡಿದುಕೊಂಡಿದ್ದಾನೆ. ಕ್ಲಬ್ಬಿನ ಮೆಂಬರುಗಳಲ್ಲೊಬ್ಬನಾದ ಪೆರಿನ್ ಸಾಹೇಬ ಹಠಾತ್ತಾಗಿ ನನ್ನ ನಿವಾಸದ ಕಾಂಪೌಂಡಿನೊಳಗೆ ಧಾವಿಸಿ ಬರುತ್ತಿರುವುದನ್ನು ಕಂಡೆ. ಕೈಯಲ್ಲೊಂದು ಛಡಿ, ಕಣ್ಣಲ್ಲಿ ಉದ್ಧತ ದೃಷ್ಟಿ. ಬಂದದ್ದೇ ನನಗೆ ಹೇಳತೊಡಗಿದ. - "ನಮ್ಮ ಲೇಡೀಸ್ ಸ್ಟಾಲುಗಳನ್ನು ನಡೆಸುತ್ತಿದ್ದಾರೆ. ನಿಮ್ಮ ಹುಡುಗರು ಕಾಂಪೌಂಡಿನ ಗೋಡೆ ಹತ್ತಿ 'ಹಾಂ' ಅಂತ ಕಣ್ಣು ಬಿಟ್ಟುಕೊಂಡು ಇಪ್ಪತ್ತನಾಲ್ಕು ಗಂಟೆಯೂ ನೋಡುತ್ತಾ ಇರುತ್ತಾರೆ. ಇದು ಸರಿಯಲ್ಲ. ನೋಡಿ, ಹೆಡ್‌ಮಾಸ್ತರೇ, ನೀವೇನಾದರೂ ಅವರನ್ನು ಕರೆದು ಬುದ್ಧಿ ಹೇಳದಿದ್ದರೆ ನಾವೇ ಅವರಿಗೆ ತಕ್ಕ ಬಂದೋಬಸ್ತು ಮಾಡುತ್ತೇವೆ" - ಎಂದು ತನ್ನ ಛಡಿಯನ್ನು

ಕಾಂಪೌಂಡಿನ ಮೇಲೆ ನಿಂತಿದ್ದ ನೀಲು ಕಡೆ ತೋರಿಸುತ್ತ ಹೇಗೆ ದರ್ಪದಿಂದ ಒಳಗೆ ಬಂದಿದ್ದನೋ ಹಾಗೇ ಹೊರಗಡೆ ಹೊರಟುಹೋದ. ನನಗೂ ಕೋಪಬಂದು ಬಿಲೂವನ್ನು ಕರೆದು, "ಮುಠ್ಠಾಳ - ಆ ಕಡೆ ಯಾಕೋ ಹೋಗೋದು ?" ಎಂದು ಹೇಳಿದರೆ, ಸಾಧಾರಣವಾಗಿ ನನ್ನ ಮುಖಕ್ಕೆ ಮುಖಕೊಟ್ಟು ನೋಡದೆ ಇರುವಂಥ ಈ ಬಿಲೂ ನನ್ನ ಕಡೆ ದುರದುರ ನೋಡುತ್ತ, "ಯಾಕೆ, ಅಲ್ಲಿ ಹೋಗಿ ನೋಡಿದರೆ ಏನಾಗತ್ತೆ ?" ಎಂದು ಗಡುಸಾಗಿ ಉತ್ತರ ಕೊಟ್ಟ. ಆಗ ಅವನ ಕಣ್ಣಲ್ಲಿ ಅಡಗಿರುವ ಪೌರುಷದ ಕಿಡಿ ಕಾಣಬಂತು ನನಗೆ. ನಾನು ಕೇಳಿದ ಪ್ರಶ್ನೆಗೆ "ಯಾಕೆ ?" ಎಂದು ಮತ್ತೆ ಪ್ರಶ್ನೆ ಹಾಕುತ್ತಾನಲ್ಲ ? ಇಷ್ಟಕ್ಕೆ ಬಂದುಬಿಟ್ಟನೇ ಆಗಲೇ ? ಅವನ ಕಿವಿ ಹಿಡಿದು ಹಾಗೇ ಮನೆಯ ಒಳಗೆ ಎಳೆದುಕೊಂಡು ಬಂದೆ. ಅವರಮ್ಮ ಅಡಿಗೆ ಮನೆಯಲ್ಲಿದ್ದಳು. "ನೋಡಿದೆಯೇನೆ ನಿನ್ನ ಮುದ್ದುಮಗನ ಪ್ರತಾಪ ? - ಅಲ್ಲ, ಸಾಹೇಬ ಜನಗಳ ಜತೆ ಜಗಳ ಕಟ್ಟಿಕೊಂಡರೆ ನನ್ನ ಚಾಕರಿ ಉಳಿದೀತೆ ನೀನೇ ಹೇಳು" ಎಂದೆ.

ಆಮೇಲೆ ನಾನು ನನ್ನ ರೂಮಿನ ವರಾಂಡದಲ್ಲಿ ನಿಂತು ಬಿಲೂ ಅವರಮ್ಮನ ಸಂಗಡ ತರ್ಕ ಮಾಡುತ್ತಿರುವುದನ್ನು ಕೇಳಿಸಿಕೊಂಡೆ. "ಯಾಕಮ್ಮಾ?" - ಬಿಲೂ ದೊಡ್ಡ ದನಿಯಲ್ಲಿ ವಾದ ಮಾಡುತ್ತಿದ್ದ. "ನಾವು ಹೋಗಿ ನೋಡಿದರೆ ಇವರದೇನು ಹೋಗತ್ತೆ ಮಹಾ ? ನಮ್ಮ ಮನೆಯಲ್ಲಿ ನಿಂತು ನೋಡಲಿಕ್ಕೆ ನಮಗೆ ಹಕ್ಕಿಲ್ಲವಾ ?"

ಅವತ್ತು ರಾತ್ರಿ ಬಿಲೂ ಊಟವೇ ಮಾಡಲಿಲ್ಲ. ಕೋಪದಿಂದಲೋ ಅಭಿಮಾನದಿಂದಲೋ ಗೊತ್ತಿಲ್ಲ. ಸುಮಾರು ನಡುರಾತ್ರಿಯಲ್ಲಿ ನನ್ನ ಹೆಂಡತಿ ನನ್ನನ್ನು ಕೂಗಿ ಎಬ್ಬಿಸಿದಳು. "ಬಿಲೂ ಇಲ್ಲ. ಹಾಸಿಗೆ ಮೇಲೆ ನೋಡಿದರೆ ಖಾಲಿ.... ಅಯ್ಯೋ, ಹೋಗಿ ಹುಡುಕಿ ಹೋಗಿ ಈಗಲೇ...!" ಎಲ್ಲಿ ಹುಡುಕುವುದು ? ಎಲ್ಲಿ ಹೋದ ಈ ರಾತ್ರಿಯಲ್ಲಿ ? ಎಲ್ಲರೂ ಹೋದೆವು ಹುಡುಕಲಿಕ್ಕೆ. ನಾನು, ಮನೆ ಆಳುಗಳು, ಸ್ಕೂಲಿನ ದರವಾನ (ಕಾವಲುಗಾರ) ಎಲ್ಲರೂ ಕೈಯಲ್ಲಿ ಲಾಟೀನು, ದೊಣ್ಣೆ ಹಿಡಿದುಕೊಂಡು ಹೋದೆವು ಹೊರಗಡೆ. ಆದರೆ ಎಲ್ಲಿ ಹುಡುಕಿದರೂ ಸಿಗಲಿಲ್ಲ. ಈ ಕಡೆ ನನ್ನ ಹೆಂಡತಿ ಸುಮ್ಮನೆ ಅಳುತಾಳೆ, ಅವಳ ರೋದನವನ್ನು ಯಾರೂ ನಿಲ್ಲಿಸುವ ಹಾಗಿಲ್ಲ. ನನ್ನ ಮೇಲೆ ಸುಮ್ಮನೆ ದೂರುತ್ತಾಳೆ.... ಎಲ್ಲಾ ನಿಮ್ಮಿಂದ.... ನಿಮ್ಮಿಂದ... ಪಾಪ, ಚೋಟುದ್ದ ಹುಡುಗ ನೋಡಿಬಿಟ್ಟರೆ ಆ ಸಾಹೇಬ ಹೆಂಗಸರಿಗೆ ಏನು ಆಗುತ್ತೆ ಅಂಥ ಅಪಮಾನ! ಅವನನ್ನು ಯಾಕೆ ದಂಡಿಸಬೇಕಾಗಿತ್ತು" ಹಾಗೆ ಹೀಗೆ. ಏನು ಮಾಡುವುದು ಈಗ ? ಕಡೆಗೆ ಹಾಸ್ಟೆಲಿನಲ್ಲಿದ್ದ ಹುಡುಗನೊಬ್ಬ ಬಿಲೂವನ್ನು ಕಂಡುಹಿಡಿದ. ಬೆಳಗ್ಗೆ ಎಲ್ಲಿಂದ ನೀಲು ಮತ್ತು ಬಿಲೂ ನಿಂತುಕೊಂಡು ಮೇಮ್ ಸಾಹೇಬರ ಉತ್ಸವ ನೋಡುತ್ತ ಇದ್ದರೋ ಸರಿಯಾಗಿ ಅದೇ ಜಾಗದಲ್ಲೇ ಬೇಲಿಯ ಮೇಲೆ ಕೂತಿದ್ದಾನೆ ಬಿಲೂ. ಉತ್ಸವದ ದೀಪಗಳು ಆರಿ ಹೋಗಿ ಎಷ್ಟೋ ಹೊತ್ತಾಗಿ ಹೋಗಿದೆ. ಆದರೆ ಬಿಲೂ ನನ್ನ ದಂಡನೆಯ ಅನ್ಯಾಯವನ್ನು ಪ್ರಮಾಣ ಮಾಡಿ ತೋರಿಸಬೇಕೆಂದೇ ತನ್ನದೇ ಆದ ತರ್ಕದ ಅನುಗುಣವಾಗಿ ಈ ಚಳಿ ರಾತ್ರಿಯ ಕತ್ತಲಲ್ಲಿ ಒಬ್ಬನೇ ಇಲ್ಲಿ ಬಂದು ಕೂತಿದ್ದಾನೆ. ಮೈಮೇಲೆ ಎಲೆ ಹಸಿರು ಬಣ್ಣದ ಉಣ್ಣೆಯ ಹೊದಿಕೆಯೊಂದು ಬಿಟ್ಟರೆ

ಬೇರೆ ಏನೂ ಇಲ್ಲ. ಬರಿಗಾಲು, ಕೈಕಾಲುಗಳು ಮಂಜಿನಗಡ್ಡೆಯಂತೆ ತಣ್ಣಗಾಗಿ ಬಿಟ್ಟಿವೆ. ನಮ್ಮ ಬಿಲೂ ಇಂಥವನು.

ಬಲಾತ್ಕಾರದಿಂದ ಯಾರಾದರೂ ಅವನಿಂದ ಏನಾದರೂ ಒಂದು ಕೆಲಸ ಮಾಡಿಸಿಕೊಳ್ಳುವುದೆಂದರೆ ಅದು ಸಾಧ್ಯವಿಲ್ಲದ ಮಾತು. ಆದರೆ ಅವನನ್ನು ಮೋಸ ಮಾಡಿ ಅಥವಾ ಪುಸಲಾಯಿಸಿ, ಇಲ್ಲವೇ ಯಾವುದಾದರೂ ಒಂದು ವಿಧದಿಂದ ಅವನ ಮುಗ್ಧ, ಅಮಾಯಕ ಮನಸ್ಸನ್ನು ಮರುಳು ಮಾಡಿ ಹಾಗೆ ಮಾಡಬಹುದೇ ಹೊರತು ದೇಹ ಬಲದ ಜೋರಿನಿಂದ ಎಂದಿಗೂ ಸಾಧ್ಯವಿಲ್ಲ. ಆಗ ಅವನು ರೊಚ್ಚಿಗೆದ್ದು ಬಿಡುತ್ತಾನೆ. ಇವನನ್ನು ಹುಡುಗನಾಗಿದ್ದಾಗಲಿಂದ ಗಮನಿಸುತ್ತ ಬಂದಿದ್ದೇನೆ. ಸುಮಾರು ಇಪ್ಪತ್ತು ವರುಷಗಳ ಹಿಂದಿನ ಮಾತು. ಒಂದು ದಿನ ನಾನು ಜಿಲ್ಲಾ ಕಾಂಗ್ರೆಸ್ ಆಫೀಸು ರೂಮಿನಲ್ಲಿದ್ದೆ. ಹತ್ತಿರದಲ್ಲೇ ಇದ್ದ ನಮ್ಮ ಮನೆಯಲ್ಲಿ ನನ್ನ ಹೆಂಡತಿಯು ಗಟ್ಟಿಯಾಗಿ ಅರಚುತ್ತ ಇರುವುದನ್ನು ಕೇಳಿಸಿಕೊಂಡವನು ಹಾಗೇ ಓಡಿ ಬಂದು ನೋಡಿದೆ. ನನ್ನ ಹೆಂಡತಿ ನೀಲೂವನ್ನ ದಂಡಿಸುತ್ತ, "ಹೇಳು ಒಳ್ಳೇ ಮಾತಲ್ಲಿ, ಒಪ್ಪಿಕೋ ಮುಸಲ್ಮಾನನ ಎಂಜಲು ತಿಂದೆ ಅಂತ... ಇಲ್ಲಾ ಅಂತೀಯಾ ತಿರುಗೀ ತಡೀ ನಿನಗೆ ಮಾಡತೀನಿ" ಎಂದು ಕೈಲಿದ್ದ ತಟ್ಟೆಯಿಂದ ಹೊಡೆಯುತ್ತೇನ ಎಂದು ಹೆದರಿಸುತ್ತ ಇದ್ದಾಳೆ. ಅವಳ ಇನ್ನೊಂದು ಕೈಯಲ್ಲಿ ಕೊಳವೆ ಮುರಿದ ಒಂದು ಚಹಾ ಪಾಟ್ ಇದೆ. ಅದರ ಒಳಗಡೆ ರವೆಯೋ ಏನೋ ಇದೆ. ಕೋಪದ ಭರದಲ್ಲಿ ಪಾಟನ್ನು ಕೆಳಗಿಡುವುದನ್ನ ಮರೆತುಬಿಟ್ಟಿದ್ದಾಳೆ. ಸಮಾಚಾರವೇನು ಎಂದು ವಿಚಾರಿಸಿದರೆ ಆಗ ತಿಳಿದುಬಂತು. ಈ ಇಬ್ಬರು ಹುಡುಗರೂ ಬೇಹಬೂದ್ ಎಂಬ ವಕೀಲನ ತೋಟಕ್ಕೆ ನುಗ್ಗಿ ಬೋರೆ ಹಣ್ಣು ಕದ್ದು ತಿನ್ನಲಿಕ್ಕೆ ಹೋಗಿದ್ದರು. ಅಲ್ಲಿ ವಕೀಲನ ಅಳಿಯ ಇಹಾದನ ಕೈಯಲ್ಲಿ ಸಿಕ್ಕಿ ಬಿದ್ದುಬಿಟ್ಟರು. ಇಹಾದನು ಒಂದು ಬೋರೆ ಗಿಡದ ಎಲೆಯ ಮೇಲೆ ಇಬ್ಬರನ್ನೂ ಉಗಿಯಿರಿ ಎಂದು ಹೇಳಿ ಆಮೇಲೆ ಅದನ್ನೇ ಅಂದರೆ ತಮ್ಮ ಎಂಜಲನ್ನೇ ನೆಕ್ಕಿ ಬಿಸಾಡಿರಿ ಎಂದು ಬಲಾತ್ಕಾರ ಮಾಡಿದನಂತೆ. ಇನ್ನು ಮೇಲೆ ಅವರು ಎಂದಿಗೂ ತೋಟಕ್ಕೆ ಬಂದು ಕದಿಯದಿರಲಿ ಎಂದು. ತನ್ನ ಮಾತಿನ ಹಾಗೆ ಮಾಡದೆ ಹೋದರೆ ಏಟು ಬೀಳುತ್ತದೆಂದೂ ಮತ್ತು ಮಾಸ್ಟರ್ ಸಾಹೇಬರಿಗೆ ಹೇಳುತ್ತೇನೆಂದೂ ಹೆದರಿಸಿದ ಮೇಲೆ ನೀಲೂ ಭಯದಿಂದ ಎಂಜಲು ನೆಕ್ಕಿಬಿಟ್ಟ. ಬಿಲೂ ಏನು ಮಾಡಿದರೂ ನಾನು ನೆಕ್ಕುವುದಿಲ್ಲ ಅಂದದ್ದೇ ಅಲ್ಲದೆ ಇನ್ನೂ, ಏನೇನೋ ಮಾತುಗಳನ್ನು ಸಹ ಅಂದನಂತೆ. ಆಮೇಲೆ ಬೆಹದೂದನ ಮಗಳು ನಮ್ಮ ಮನೆಗೆ ಬಂದು ಬಿಲೂ ತನ್ನ ಗಂಡನನ್ನು ಅಪಮಾನ ಮಾಡಿದನೆಂದು ದೂರು ಹೇಳಿದಳು. ಇದರಿಂದ ಎಲ್ಲಾ ಸಂಗತಿಯೂ ಬಟ್ಟ ಬಯಲಾಗಿ ಹೋಯಿತು. ಆಗಲೂ ನನ್ನ ಹೆಂಡತಿಯ ಮೂಲ ಪ್ರಶ್ನೆ – ಅಂದರೆ ತನ್ನ ಮಕ್ಕಳು ತೋಟಕ್ಕೆ ಹಣ್ಣು ಕದಿಯಲು ಹೋದದ್ದು ಮತ್ತು ವಕೀಲರ ಅಳಿಯನನ್ನು ಅಪಮಾನ ಮಾಡಿದ್ದು – ಅದರ ಗೋಜಿಗೇ ಹೋಗಲಿಲ್ಲ. ಈಗ ಅವಳ ನಿಗಾ ಇರುವುದು ಒಂದು ಮುಖ್ಯ ವಿಷಯದ ಕಡೆ – ಅದು ಏನೆಂದರೆ ನೀಲೂ ತನ್ನ ಎಂಜಲನ್ನೇ ನೆಕ್ಕಿದನೋ ಅಥವಾ ಆ ಮುಸಲ್ಮಾನ ಉಗಿದ ಎಂಜಲನ್ನು ನೆಕ್ಕಿದನೋ ಎಂಬುವುದೇ! ಅದರ ಮೇಲೆ ಇನ್ನೂ ವಿಚಾರಣೆ ನಡೆಸುತ್ತಿದ್ದಳು.

ಇದ್ದಕ್ಕಿದ್ದ ಹಾಗೆ ಬೆಚ್ಚಿ ಬಿದ್ದೆ. "ಹೋ... .ಹೋ ? ಹೋ !" ಎಂದು ಅಷ್ಟು ದೊಡ್ಡ ಹಾಲೆಲ್ಲ ನಡುಗುವ ಹಾಗೆ ಅಷ್ಟು ಚರಖಾಗಳು ಮಾಡುತ್ತಿರುವ ಶಬ್ದವನ್ನೆಲ್ಲ ಮುಳುಗಿಸುತ್ತ ನಗುವಿನ ಅಲೆಯೊಂದು ಶಬ್ದ ಮಾಡುತ್ತಿದೆ. ನನ್ನ ಬಲಗಡೆಯ ಎರಡು ಸೀಟುಗಳಾದ ಮೇಲೆ ಇರುವ ಕಿಟಕಿಯ ಪರದೆ ಮತ್ತು ಒಂದು ಹಾಸಿಗೆಯ ಚಾದರ - ಇವುಗಳನ್ನು ಕಟ್ಟಿ ಒಂದು ಸಣ್ಣ ಕೋಣೆಯಂತೆ ಮಾರ್ಪಾಡು ಮಾಡಿರುವುದಾಗಿದೆ. ಇದರೊಳಗಡೆಯೇ ಸೋಷಲಿಸ್ಟ್ ಪಕ್ಷದವರು ನಡೆಸುತ್ತಿದ್ದ "ಕ್ಯಾಪಿಟಲ್"* ಕ್ಲಾಸು (ವ್ಯಾಸಂಗ) ಫಾರ್‌ವರ್ಡ್ ಬ್ಲಾಕಿನ ನಾಲ್ಕು ಜನ ಈ ಕ್ಲಾಸಿನಲ್ಲಿ ಸೇರಿಕೊಳ್ಳುವುದಿಲ್ಲ. ಅವರೆಲ್ಲ ಹಗಲು ವೇಳೆ ಒಟ್ಟಿಗೆ ಸೇರಿ ಯಾವುದೋ ಕೆಲವು ಮಾರ್ಕ್ಸ್ ವಾದದ ಪುಸ್ತಕಗಳನ್ನು ಓದುತ್ತಾರೆ. "ಕ್ಯಾಪಿಟಲ್" ಓದುವ ಜನರಲ್ಲಿ ಇಷ್ಟು ಹಾಸ್ಯಕ್ಕೆ ಕಾರಣವೇನು ? ಈ ಸೆಕೆಯಲ್ಲೂ ನಾಲ್ಕೂ ಕಡೆ ಪರದೆ ಸುತ್ತಿಕೊಂಡು ಒಳಗಡೆ ಕೂತಿರುವುದರ ಅಗತ್ಯವೇನು ? ಈಗಿನ ಕಾಲದ ಹುಡುಗರ ಸ್ವಭಾವವೇ ಅತಿ ವಿಚಿತ್ರ. ಪರದೆಗಳ ಮೇಲುಗಡೆಯಿಂದ ಸುರುಳಿ ಸುರುಳಿಯಾಗಿ ಹೊಗೆ ಏಳುತ್ತಿದೆ. ಇವರುಗಳು ಸಿಗರೇಟ್ ಸೇದುವುದಕ್ಕೆಂದು ಈ ಪರದೆಗಳನ್ನು ಕಟ್ಟಿಕೊಂಡಿದ್ದಾರೇನು ? ಛೇ, ಅಲ್ಲ, ಅದಕ್ಕೆ ಹಗಲು, ರಾತ್ರಿ ಎಂದೇನಾದರೂ ಉಂಟೆ. ಸದಾ ಸಿಗರೇಟು, ಚುಟ್ಟಾ ಸೇದುವುದಕ್ಕೆ ಅವರಿಗೆ ಈಗ ಯಾವ ಮುಚ್ಚುಮರೆಯೂ ಬೇಕಾಗಿಲ್ಲ. ಆ ದಳದ ಕಾಮ್ರೇಡ್ ಬನಾರಸಿ, ಬಿಲೂಗಿಂತ ವಯಸ್ಸಲ್ಲಿ ಎಷ್ಟು ಚಿಕ್ಕವನು – ಅವನ ಶಿಷ್ಯ ಇವನು. ನನ್ನ ಸಂಗಡ ಆಗಾಗ ಬಿಲೂ ವಿಷಯವಾಗಿ ಮಾತಾಡಲು ಬರುತ್ತಾನೆ. ತುಟಿಗಳ ಒಂದು ಮೂಲೆಯಲ್ಲಿ ಸಿಗರೇಟೊಂದು ಇದ್ದೇ ಇರುತ್ತದೆ. ಇವರೆಲ್ಲ ಜೈಲಿನ ಪರ್ಸನಲ್ ಅಕೌಂಟಿನಿಂದ ಹಣ ಸಾಲ ತೆಗೆದುಕೊಳ್ಳುತ್ತಾರೆ. ಆಮೇಲೆ ಈ ಕಡೆ..

"ನೀವು ಎಷ್ಟು ಜನ ಇದ್ದೀರಿ ?"

ಇದು ವಾರ್ಡರನ ಕೂಗು. ಅವನು ಹೊಸ ವಾರ್ಡರು. ಅಂದರೆ ಆಗಲೇ ಹನ್ನೊಂದು ಗಂಟೆ ಹೊಡೆದಾಗಿದೆ. ಪರದೆ ಸುತ್ತಿರುವ ಸ್ಥಳದಿಂದ ಯಾರೋ ಒಬ್ಬರು ವಾರ್ಡರನ್ನು ಉದ್ದೇಶಿಸಿ "ಕೂಡಬೇಡಿ ನಡೀರಿ" ಎಂದು ಕೂಗಿದರು. ಇನ್ನೊಬ್ಬನು "ನಾವು ಇಲ್ಲಿ ಏಳೂವರೆ ಜನ ಇದ್ದೇವೆ" ಎಂದು ಕೂಗಿದ. ವಾರ್ಡರನು ತನ್ನಲ್ಲೇ ಏನೋ ಗೊಣಗಿಕೊಳ್ಳುತ್ತ ಹೋದ. "ಪಾವ್‌ರೋಟಿ (ಬ್ರೆಡ್) ಜೊತೆಗೆ ಕೋಳಿ ಮೊಟ್ಟೆ ತಿಂತಾರೆ. ಇಂಥವರು ಮಹಾತ್ಮಾ ಗಾಂಧೀಯವರ ಕೆಲಸ ಮಾಡಲಿಕ್ಕೆ ಜೈಲಿಗೆ ಬಂದಿದ್ದಾರೆ ಆಹಾ ! ಎಂಥ ಜನ !" ಎಂದು ಹೇಳಿಕೊಳ್ಳುತ್ತ ಹೋದ.

ಆಗ ಪರದೆ ಒಳಗಿಂದ ಒಬ್ಬನು ಕೂಗಿದ, "ಏ ಬೈದ್‌ನಾಥ್ ಏಳೋ ಬೇಗ ಆ ರ್‍ಯಾಸ್ಕಲ್ ಮೇಲೆ ಹೂಜಿ ನೀರು ಎರಚಿಬಿಟ್ಟು ಬಾ !"

ಎಲ್ಲರು "ಹೋ" ಎನ್ನುತ್ತ ಎದ್ದರು. ಕಾಮ್ರೇಡ್ ಬೈದನಾಥ್ ಒಂದು ಗ್ಲಾಸಲ್ಲಿ ನೀರು ತುಂಬಿಕೊಂಡು ಹೊರಗೆ ಬಂದ. ರೋಗಿಷ್ಟ, ಒಣಕಲು ಮೈ, ನರೆತಗಡ್ಡದ ಆಳು. ಪಾಯಿಜಾಮಾ ಮತ್ತು ಜುಬ್ಬಾ ತೊಟ್ಟಿದ್ದಾನೆ. ಜುಬ್ಬಾದ ಕಾಲರ್ ಸ್ವಲ್ಪ ಮೇಲಕ್ಕೆ ಇದೆ. ಈ ಸೋಷಲಿಸ್ಟರೆಲ್ಲ ಬಟ್ಟೆಗಳ ಗುದಾಮಿನ ಖೈದಿ ದರ್ಜಿಗೆ ಬೀಡಿಯ

---

*ಕಾರ್ಲ್ ಮಾರ್ಕ್ಸ್ ಬರೆದಿರುವ "ದಾಸ್ ಕ್ಯಾಪಿಟಲ್" ಎಂಬ ಪ್ರಸಿದ್ಧ ಗ್ರಂಥ.

ಲಂಚ ಕೊಟ್ಟು ಈ ನಮೂನೆಯ ಜುಬ್ಬಾ ತಯಾರು ಮಾಡಿಸಿಕೊಂಡಿದ್ದಾರೆ. ಇಂಥ ಸೆಕೆಯಲ್ಲೂ ಇವರು ಎಂದೂ ಬರಿ ಮೈಯಲ್ಲಿ ಇರುವುದಿಲ್ಲ. ಇಂಥವರೇ ಅಲ್ಲವೇ ಲೋಕದಲ್ಲೆಲ್ಲ ದೀನದರಿದ್ರರ ರಾಜ್ಯ ಕಟ್ಟಬೇಕೆನ್ನುವುದು!

ಹನ್ನೊಂದು ಹೊಡೆದಾಯಿತು. ಎಲ್ಲರೂ ಚರಖಾ ತಿರುಗಿಸುವ ಕೆಲಸ ಮುಗಿಸಿದರು. ಸ್ಪಿಂಡಲುಗಳು, ಹತ್ತಿ ವಗೈರೆ ಸಾಮಾನುಗಳನ್ನೆಲ್ಲ ಅಚ್ಚುಕಟ್ಟಾಗಿ ತೆಗೆದಿಟ್ಟು ಎಲ್ಲರೂ ಎದ್ದು ಹೋಗುವುದಕ್ಕೆ ತಯಾರು ಮಾಡಿಕೊಳ್ಳುತ್ತಿದ್ದಾರೆ. ಒಂದೇ ಸಮನಾಗಿ ಎರಡು ಗಂಟೆಗಿಂತಲೂ ಹೆಚ್ಚಾಗಿ ಚರಖಾ ತಿರುಗಿಸುವುದು ಎಲ್ಲರ ಕೈಲೂ ಆಗುತ್ತೇನು? ವ್ಯಕ್ತಿಗತ ಸತ್ಯಾಗ್ರಹದ ಸಮಯದಲ್ಲಿ ಹಜಾರೀ ಬಾಗ್ ಜೈಲಿನಲ್ಲಿದ್ದಾಗ ಗಾಂಧೀ ಜಯಂತಿಯ ದಿನ ಹೀಗೇ ಒಂದೇ ಸಮನಾಗಿ ಎಂಟುಗಂಟೆ ಕಾಲ ಕೂತು ಚರಖಾ ತಿರುಗಿಸಿದ್ದರಿಂದ ನನಗೆ ಮೂತ್ರಕೋಶದ ಅವ್ಯವಸ್ಥೆಯಿಂದ ನರಳುವಂತಾಯಿತು. ಆ ಲಾಗಾಯಿತು ನಾನು ಹೀಗೆ ಒಂದೇ ಸಮನಾಗಿ ಬಹಳ ಹೊತ್ತು ಕೂತು ದಾರ ತೆಗೆಯುವುದಿಲ್ಲ. ಬಹುಶಃ ಆ ಕಾಯಿಲೆ ಬೇರೆ ಕಾರಣದಿಂದಲೂ ಬಂದಿರಬಹುದು. ಆದರೆ ಜೈಲಿನ ಡಾಕ್ಟರ ಅಭಿಪ್ರಾಯದ ಪ್ರಕಾರ ಒಂದೇ ಸಮನಾಗಿ ಒಂದೇ ಕಡೆ ಕೂಡುವುದರಿಂದಲೇ ಕಿಡ್ನಿ ಕಾಯಿಲೆ ಬಂದಿರುವುದು. ಡಾಕ್ಟರ ಮಾತಿಗೆ ಪ್ರತಿಯಾಗಿ ಹೋಗುವುದು ಸರಿಯಲ್ಲ. ಎಲ್ಲರೂ ಎದ್ದು ತಮ್ಮ ತಮ್ಮ ಮಂಚಗಳ ಕಡೆ ಹೊರಟುಹೋದರು. ಸದಾಶಿವನೂ, ಮೆಹರ್‌ಚಂದರೂ ಇನ್ನೂ ನಿಂತೇ ಇದ್ದಾರೆ.

ಮೆಹರ್‌ಚಂದ್, "ಮಾಸ್ಟರ್ ಸಾಬ್, ಸ್ವಲ್ಪ ಏನಾದರೂ ಆಹಾರ ತೆಗೆದುಕೊಳ್ಳಿ. ಇಡೀ ದಿನ ಏನೂ ಇಲ್ಲದೆ ಹೊಟ್ಟೆಯಲ್ಲಿ ಪಿತ್ತ ಏರಿರುತ್ತದೆ. ನಿಮ್ಮ ಊಟ ಈ ಟೇಬಲ್ ಮೇಲೆ ಇಟ್ಟಿರಲಾಗಿದೆ. ತಾವು ಎರಡು ರೊಟ್ಟಿಯಾದರೂ ತಿನ್ನಿ" ಎಂದ.

ನಾನು ಒಂದು ಕಾಗದಲ್ಲಿ ಬರೆದು "ಈ ಸೆಕೆಯಲ್ಲಿ ನನಗೆ ಏನೂ ತಿನ್ನಬೇಕು ಎಂದು ಅನ್ನಿಸುವುದಿಲ್ಲ" ಎಂದು ತಿಳಿಸಿದೆ. ಆಗ ಮೆಹರ್‌ಚಂದ್, "ಸ್ವಲ್ಪ ಮೊಸರು ತಂದುಕೊಡಲೆ? ನಮ್ಮ ಮನೆಯಿಂದ ಇವತ್ತು ಮೊಸರು ಕಳಿಸಿದ್ದಾರೆ. ನಮ್ಮ ಸ್ವಂತ ಹಸುವಿನ ಹಾಲಿನಿಂದ ಮಾಡಿದ ಮೊಸರು. ಹಾಗಿಲ್ಲದೆ ಹೋಗಿದ್ದರೆ ನಾನು ಹೇಳತಾನೇ ಇರಲಿಲ್ಲ. ತಾವು ಗಾಂಧೀ ಸೇವಾ ಸಂಘದ ಶಿಷ್ಯರು. ಎಮ್ಮೆ ಹಾಲು, ಮೊಸರು ಯಾವುದೂ ಮುಟ್ಟುವುದಿಲ್ಲ – ಗೊತ್ತು. ಜೈಲಿನಲ್ಲಿ ಕೊಡುವ ಹಾಲನ್ನು ತಾವು ಅದಕ್ಕೇ ಕುಡಿಯುವುದಿಲ್ಲ. ಇವತ್ತೇನೋ ಆಕಸ್ಮಾತ್ತಾಗಿ ಮನೆಯಿಂದ ಹಸುವಿನ ಮೊಸರು ಕಳಿಸಿದ್ದಾರೆ ಅಂತ ಕೇಳತೇನೆ ಹೊರತು - ತಾವು ತೆಗೆದುಕೊಳ್ಳದೆ ಹೋದರೆ ನನಗೆ ತುಂಬಾ ದುಃಖವಾಗುತ್ತೆ."

ಅವನು ನಾಟಕೀಯ ಭಂಗಿಯಲ್ಲಿ ಹೇಳುತ್ತ ಹೋದ. ಎರಡೂ ಕೈಗಳನ್ನು ಜೋಡಿಸಿಕೊಂಡು, "ಈ ನನ್ನ ಅನುರೋಧವನ್ನು ತಾವು ಹೇಗಾದರೂ ಪಾಲಿಸಬೇಕು ಮಾಸ್ಟರ್ ಮಹಾಶಯರೆ! ನಮ್ಮ ಫಾದರ್ ಖುದ್ದಾಗಿ ಈ ಮೊಸರನ್ನು ತಂದುಕೊಟ್ಟು ಹೋಗಿದ್ದಾರೆ" ಎಂದ. ಮತ್ತೆ 'ಫಾದರ್' ಅನ್ನುತ್ತಾನೆ. ಈ ಬಿಹಾರಿನಲ್ಲಿ ಅಲ್ಪಸ್ವಲ್ಪ ಇಂಗ್ಲಿಷ್ ಕಲಿತವರು ಸಹ ಅಮ್ಮ ಅಪ್ಪ, ಅಕ್ಕ, ಅಣ್ಣ, ಮಾವ ಇಂಥವಕ್ಕೂ ಇಂಗ್ಲಿಷ್ ಭಾಷೆ ಉಪಯೋಗಿಸುತ್ತಾರೆ. ತಾಯ್ನುಡಿಯಲ್ಲಿ

ಹೇಳುವುದಿಲ್ಲ. ಒಬ್ಬರು ತಮ್ಮ ಸಿಸ್ಟರ್‌ಗೆ ನೆಗಡಿಯಾಗಿದೆ ಅಂತಾರೆ. ಇನ್ನ್ಯಾರೋ ಒಬ್ಬ ತಲೆ ತಗ್ಗಿಸಿಕೊಂಡು ಅಳುಮೋರೆ ಹಾಕಿಕೊಂಡಿದ್ದಾನೆ. ಯಾಕೆ ಎಂದು ವಿಚಾರಿಸಿದರೆ ಮದರ್‌ಗೆ ಡೆತ್ ಆಗಿಹೋಯಿತು ಅಂತಾನೆ. ಮಾತಿನ ಮಧ್ಯೆ ಮಧ್ಯೆ ಇಂಗ್ಲಿಷ್ ಪದಗಳನ್ನು ಉಪಯೋಗಿಸುವುದೊಂದೇ ಅಲ್ಲ. ತಂದೆ, ತಾಯಿ, ಅಕ್ಕ ಮುಂತಾದ ಪದಗಳಿಗೆ ಮಾತೃಭಾಷೆ ಉಪಯೋಗಿಸುವುದಕ್ಕೆ ಏನೋ ನಾಚುತ್ತಾರೆ.

"ಫಾದರ್ ನನಗೆ ಬಾರಿ ಬಾರಿಗೂ ಹೇಳಿ ಹೋಗಿದ್ದಾರೆ. ಮಾಸ್ಟರ್ ಸಾಹೇಬರಿಗೆ ನಮ್ಮ ಮನೆ ಮೊಸರು ಕೊಡು ಅಂತ. ಒಳ್ಳೇ ದನದ ಹಾಲನ್ನು ಬಿಸಿ ಮಾಡಿ ಹೆಪ್ಪು ಹಾಕಿದ ಫಸ್ಟ್‌ಕ್ಲಾಸ್ ಮೊಸರು." ಹೀಗೆಲ್ಲ ಆತನು ಒತ್ತಾಯ ಮಾಡುತ್ತಿದ್ದರೆ 'ಬೇಡ' ಎಂದು ಹೇಳುವುದು ಹೇಗೆ? ಸ್ವಲ್ಪವಾದರೂ ತೆಗೆದುಕೊಳ್ಳದೆ ಹೋದರೆ ಬಹಳ ನೊಂದುಕೊಳ್ಳುತ್ತಾನೆ ಮನುಷ್ಯ. ಇಂತಹ ಹಠವಾದಿಯ ಅನುರೋಧಕ್ಕೆ 'ಹೂ' ಅನ್ನುವವರೆಗೂ ಬಿಟ್ಟರೆ ತಾನೆ? ಒಂದು ಗಂಟೆಯವರೆಗೂ ನನ್ನ ಕಿವಿಗೆ ವಿರಾಮ ಕೊಡುವುದಿಲ್ಲ. ಇವರ ಸ್ವಭಾವ ನನಗೆ ಗೊತ್ತು. ಮೆಹರ್‌ಚಂದ್ ಮತ್ತು ಸದಾಶಿವ್. ಇವರಿಬ್ಬರೂ ಪರಸ್ಪರ ಕಣ್ಣು ಸನ್ನೆ ಮಾಡಿಕೊಂಡದ್ದನ್ನು ಗಮನಿಸಿದೆ. ಓ, ಹಾಗಾದರೆ ಈ ಸದಾಶಿವನೇ ಮೆಹರ್‌ಚಂದನನ್ನು ನನ್ನಕಡೆ ಕಳಿಸಿದ್ದಾನೆ. ತನಗೇ ಧೈರ್ಯವಿಲ್ಲ. ಬಹುಶಃ ಒಪ್ಪಿಕೊಳ್ಳುವವರೆಗೂ ಬಿಡಬೇಡ ಅಂತ ಹೇಳಿರಬೇಕು. ಸದಾಶಿವನು ಎದ್ದು ಚರಖಾದ ಪೆಟ್ಟಿಗೆಯನ್ನು ಮುಚ್ಚಿ ತೆಗೆದಿಟ್ಟ. ಆಮೇಲೆ ಕಂಬಳಿಗಳನ್ನೆಲ್ಲ ಮಡಿಸಿ ಒಂದು ಕಡೆ ತೆಗೆದಿಟ್ಟು ಬಂದ. ಹಾಲಿನಲ್ಲಿ ನೀರಿನ ಡ್ರಮ್ ಇದ್ದ ಕಡೆ ನನ್ನ ಸ್ನಾನದ ವಸ್ತ್ರವನ್ನೂ, ಸ್ನಾನಕ್ಕೆ ಉಪಯೋಗಿಸುವ ನನ್ನ ಪಾತ್ರೆಯನ್ನೂ ಇಟ್ಟು ಬಂದ. ಮಂಚದ ತಳಗಡೆಯಿಂದ ನನ್ನ ಮರದ ಮೆಟ್ಟುಗಳನ್ನು ತೆಗೆದು ಹೊರಗೆ ಇಟ್ಟ. ನನ್ನ ಸ್ವಂತ ಮಕ್ಕಳ ಕಡೆಯಿಂದ ಇಷ್ಟು ಮಟ್ಟಿಗೆ ಸೇವೆಯನ್ನೂ ಉಪಚಾರವನ್ನು ನಾನೆಂದೂ ಒಂದು ದಿನವೂ ಪಡೆದಿಲ್ಲ. ಯಾವತ್ತಾದರೂ ಅಪೇಕ್ಷಿಸಿದ್ದೇನೆಂದೂ ಅನ್ನಿಸುವುದಿಲ್ಲ.

ಯಾವತ್ತೋ ಒಂದು ದಿನ, ನಾನು ನೌಕರಿಯನ್ನು ಬಿಡುವುದಕ್ಕೆ ಮುನ್ನ ರಜಾ ದಿವಸ ನೀಲೂ ಮತ್ತು ಬಿಲೂ ಬಿಸಿಲಲ್ಲಿ ಆಡದಿರಲಿ ಎಂಬ ಉದ್ದೇಶ್ಯದಿಂದ ಅವರನ್ನು ಕರೆದು ತನ್ನ ತಲೆಯ ನರೆತ ಕೂದಲನ್ನ ಒಂದೊಂದಾಗಿ ಕೀಳಲು ಹೇಳಿದ್ದೆ. ಅದು ನೆನಪಿದೆ.

ಇದಲ್ಲದೆ 1927ರ ಲಾಗಾಯಿತು ಇಷ್ಟಪಟ್ಟು ಯಾರ ಕಡೆಯಿಂದಲೂ ಸೇವೆ ತೆಗೆದುಕೊಂಡಿಲ್ಲ. ಇದೇ ವಿಷಯದಲ್ಲಿ ನನ್ನ ಹೆಂಡತಿ ಎಷ್ಟು ಅನುನಯ ಮಾಡಿದ್ದಾಳೋ, ಎಷ್ಟು ಕಣ್ಣೀರು ಸುರಿಸಿದ್ದಾಳೋ! ನನ್ನ ಈ ಹೊಸ ಮರದ ಮೆಟ್ಟುಗಳನ್ನು ನಾಲ್ಕೈದು ತಿಂಗಳ ಹಿಂದೆ ಶ್ರೀರಾಮ ಚರಿತರ್‌ಜಿ ನನಗೆ ಉಡುಗೊರೆಯಾಗಿ ಕೊಟ್ಟಿದ್ದರು. ಬೇಡ ಅನ್ನಲು ಆಗಲಿಲ್ಲ. ಬಹಳ ಇಷ್ಟವೂ ಆಗಿತ್ತು. ಆಮೇಲೆ, ಬಿಷುನ್‌ದೇವ್‌ಜೀ ರಾಮಚರಿತರ್‌ಜೀಯನ್ನು ಪ್ರಶ್ನೆ ಮಾಡುತ್ತಿರುವುದನ್ನು ಕೇಳಿಸಿಕೊಂಡೆ. ಮೆಟ್ಟಿನ ಬೆಲ್ಟಿಂಗ್ ಚರ್ಮಕ್ಕೆ ಎಷ್ಟುಕೊಟ್ಟೆ ಎಂದು ಕೇಳುತ್ತಿದ್ದರು. ರಾಮಚರಿತರ್‌ಜಿ, "ಚರ್ಮ ನಾಲ್ಕು ಬೀಡಿ, ಮರಕ್ಕೆ ಆರು ಬೀಡಿ" ಎಂದು ಉತ್ತರ ಕೊಟ್ಟರು. ಬಿಷುನ್‌ದೇವ್‌ಜೀ ಅದಕ್ಕೆ, "ಛೆ, ಎಲ್ಲೋ ದಡ್ಡರು, ಹತ್ತು ಬೀಡಿಗಳಿಗೆ ಜೈಲಿನಲ್ಲಿ ಬೀಟ್ ಕಂಬಳಿ ಸಿಗುತ್ತೆ, ನೀವು ಬಂದು

ದರಗಳನ್ನು ಏರಿಸಿ ಹಾಳು ಮಾಡಿಬಿಟ್ಟಿರಿ" ಅಂದರು. ಅದಕ್ಕೇ ಅಂದುಕೊಂಡೆ. ಇಷ್ಟು ಚೆನ್ನಾಗಿರುವ ಚರ್ಮದ ಬೆಲ್ಟ್ (ಪಟ್ಟಿ) ಹಾಕಿದ ಹೊಸ ಮೆಟ್ಟು – ಇದರ ಬೆಲ್ಟಿಂಗ್ ಜೈಲಿನ ಫ್ಯಾಕ್ಟರಿಯಲ್ಲಿ ತಯಾರಾದದ್ದು. ಇದನ್ನು ಬೇಡವೆಂದು ಹೇಳಿದರೆ ಮರ್ಯಾದೆಗೆ ತಕ್ಕುದಲ್ಲವೆಂದು ವಾಪಸು ಕೊಡಲಿಲ್ಲ. ಆದರೆ ಇದುವರೆಗೆ ಅದನ್ನು ಉಪಯೋಗಿಸಲು ಮನಸ್ಸು ಬರಲಿಲ್ಲ. ಮಂಚದ ತಳಗಡೆ ತೆಗೆದಿಟ್ಟುಬಿಟ್ಟಿದ್ದೆ. ಈ ಸದಾಶಿವನು ಅದನ್ನು ಇವತ್ತು ಹೊರಗೆ ತೆಗೆದಿಟ್ಟ. ಎಂಥ ಪರಿಸ್ಥಿತಿಯ ನಡುವೆ ಬಂದಿದ್ದೇನೆಂದರೆ, ನನ್ನ ಸ್ವಂತ ನೀತಿ, ನಿಷ್ಠೆಗಳನ್ನು ಕಾಪಾಡಿಕೊಳ್ಳುವುದೇ ಕಷ್ಟವಾಗಿ ಹೋಗಿದೆ. ಮೆಟ್ಟುಗಳನ್ನು ತೆಗೆದು ಮತ್ತೆ ಮಂಚದ ಕೆಳಗೆ ದೂಡಿಬಿಟ್ಟೆ. ನೀರಿನ ಪೀಪಾಯಿ ಬಳಿ ಹೋಗಿ ಕೈಕಾಲು ಮುಖ ತೊಳೆದುಕೊಂಡೆ. ಸದಾಶಿವನು ಕೈಗೆ ಒರೆಸಿಕೊಳ್ಳುವ ವಸ್ತ್ರ ಕೊಟ್ಟ. ನೀರಿನ ಪೀಪಾಯಿಯ ಪಕ್ಕದಲ್ಲಿರುವ ಮಂಚ ದಾಸಜೀ ಅವರದು. ಗೊರಕೆ ಹೊಡೆಯುತ್ತಿದ್ದರು. ಮನುಷ್ಯ ಪ್ರತಿ ಸಲ ಉಸಿರು ಬಿಡುವಾಗಲೂ ಬಾಯಿಂದ ಬಿಡುತ್ತಾರೆ. ಇದರಿಂದ ತುಟಿಗಳೆರಡೂ ನಡುಗುತ್ತ ಅವುಗಳ ನಡುವಣಿಂದ "ಫರ್...ರ್...ರ್..ರ್!" ಎಂಬ ಒಂದು ಬಗೆಯಾದ ಶಬ್ದ ಹೊರಗೆ ಬರುತ್ತದೆ. ಕುದುರೆ ಹುಲ್ಲು ಮೇಯುವಾಗ ಆಗಾಗ ಈ ಬಗೆಯಾದ ಶಬ್ದ ಹೊರಡಿಸುತ್ತದೆ. ಈ ಮಹಾಶಯ ಸರಿಯಾಗಿ ಸಂಜೆಯಾಗುತ್ತಲೂ ಮಲಗಿ ನಿದ್ದೆ ಮಾಡುತ್ತಾನೆ. ಮಲಗಿದ ತತ್‌ಕ್ಷಣ ನಿದ್ದೆ ಬಂದು ಬಿಡುತ್ತದೆ ಈತನಿಗೆ. ರಾತ್ರಿ ಎರಡು ಗಂಟೆಗೆ ಎಚ್ಚರವಾಗಿ ಬಿಡುತ್ತಾರೆ. ಈ ಸೆಕೆಯಲ್ಲೂ ಸಂಜೆ ಎಂಟುಗಂಟೆಗೇ ನಿದ್ದೆ ಹೇಗೆ ಬರುತ್ತದೆ ಇವರಿಗೆ ? ಆಶ್ಚರ್ಯ! ರಾಮಾಯಣ, ಮಹಾಭಾರತಗಳಲ್ಲಿ ಇಚ್ಛಾಮರಣದ ವಿವರ ಓದಿದ್ದುಂಟು. ಆದರೆ ಇಚ್ಛಾನಿದ್ರೆ... ಇದು ಸಹ ಸಾಮಾನ್ಯ ಸಾಧನೆಯೆ ? ಸಂಜೆಯಾದೊಡನೆ ಪ್ರಾರ್ಥನೆ ಆಗುತ್ತದೆ. ಎಷ್ಟೋ ಮಾತು, ಕತೆ, ಕೂಗಾಟ ಎಲ್ಲಾ ಆಗುತ್ತದೆ. ಯಾವುದರಿಂದಲೂ ಈತನ ನಿದ್ದೆಗೆ ಸ್ವಲ್ಪವೂ ಅಡ್ಡಿ ಬರುವುದಿಲ್ಲ.

ನನ್ನ ಕುರ್ಚಿಯ ಪಕ್ಕದಲ್ಲೇ ಮೆಹರ್‌ಚಂದ್ ಮೊಸರಿನಿಂದ ಶರಬತ್ತು ತಯಾರು ಮಾಡುತ್ತಿದ್ದಾನೆ. ನನ್ನನ್ನು, "ಬೆಲ್ಲ ಹಾಕಲೋ ಬೂರಾ (ಸಕ್ಕರೆ) ಹಾಕಲೋ. ನನ್ನ ಹತ್ತಿರ ಸ್ವಲ್ಪ ಬೂರಾ ಇದೆ" ಎಂದು ಕೇಳಿದ. ಬೆಲ್ಲವೇ ಸಾಕು ಎಂದು ಸನ್ನೆ ಮಾಡಿ ತಿಳಿಸಿದೆ. ಒಂದು ಸಣ್ಣ ಕೊಡದ ತುಂಬ ಶರಬತ್ತನ್ನು ತಯಾರು ಮಾಡಿದ. ಸದಾಶಿವನು ಕಂಬಳಿ ಹಾಸಿದ. ಅದರ ಮುಂದೆಯೇ ನೆಲದ ಮೇಲೆ ನೀರು ಚಿಮುಕಿಸಿ ಶರಬತ್ತಿನ ಕೊಡ, ಪಕ್ಕದಲ್ಲಿ ಒಂದು ಗ್ಲಾಸು ತೆಗೆದಿಟ್ಟ. ನಾನು ಅಲ್ಯೂಮಿನಿಯಮ್ ಗ್ಲಾಸಿನಲ್ಲಿ ಒಂದು ಗ್ಲಾಸಿನಷ್ಟು ಶರಬತ್ತು ಸುರಿದುಕೊಂಡೆ. ಮೊಸರೇ ಹೆಚ್ಚು, ಶರಬತ್ತಲ್ಲ ಅದು. ಮಜ್ಜಿಗೆಯಂತೆ ನೀರಾಗಿದೆ. ಜೈಲಿನ ಗ್ಲಾಸುಗಳೂ ಅದ್ಭುತವಾದುವು. ಕುಡಿಯುವಾಗ ಎಷ್ಟೋ ಮೈಮೇಲೂ ಬಟ್ಟೆಯಮೇಲೂ ಬೀಳುತ್ತದೆ. ಮೊಸರಿಗೆ ಸಿಹಿಯೂ ಚೆನ್ನಾಗಿ ಸೇರಿಸಿದ್ದಾನೆ ಮೆಹರ್‌ಚಂದ್. ಅವನು ನನಗೆ ಹೇಳುತ್ತಹೋದ -"ಬೆಳಗ್ಗೆ ಇವತ್ತು, ಇಂಟರ್‌ವ್ಯೂ ಇತ್ತು. ಎರಡು ಕೊಡ ಮೊಸರು ತಂದಿದ್ದರು ನಮ್ಮ ತಂದೆ. ಇನ್ನೊಂದು ತಪ್ಪಲೆಯಲ್ಲಿ 'ಗಂದ್ ಕಾ ಲಡ್ಡು'*

*ಗೋಧಿಹಿಟ್ಟು ಮತ್ತು ಮರದ ಗೋಂದಿನಿಂದ ಮಾಡಲ್ಪಟ್ಟ ಲಡ್ಡು.

ಆಫೀಸಿನ ಜನಕ್ಕೆ ತಿನ್ನಲಿಕ್ಕೆ ಇಷ್ಟವೋ ಇಲ್ಲವೋ ಯಾರಿಗೆ ಗೊತ್ತು? ಜೈಲರ್ ಸಾಹೇಬ ಮೊದಲಲ್ಲೇ ಜಮಾದಾರನಿಗೆ ಕೊಡದೊಳಗಡೆ ಕೋಲುಹಾಕಿ ನೋಡು - ತಳಗಡೆ ಏನಾದರೂ ಇಟ್ಟಿರತಾರೇನೋ ಯಾರಿಗೆ ಗೊತ್ತು? ಬರೇ ಮೊಸರಲ್ಲದೆ! ಆಮೇಲೆ ಒಂದು ಕಡೆ ತೆಗೆದಿಟ್ಟುಬಿಡು. ಡಾಕ್ಟರು ಬಂದು ಪಾಸ್ ಮಾಡತಾರೆ. ಈ ಜೈಲರ್ ನನ್ನ ಮೇಲೆ ಯಾಕೆ ಇಷ್ಟು ಸಂದೇಹಪಟ್ಟರೋ ಯಾರಿಗೆ ಗೊತ್ತು? ಬೇರೆ ಯಾರ ವಿಷಯದಲ್ಲೂ ಹೀಗೆ ಮಾಡುವುದಿಲ್ಲ. ನಾನೇನು ಮಾಡಿದೆ ಗೊತ್ತಾ? ಅವರು ಆ ಕಡೆ ಹೋದಮೇಲೆ ಜಮಾದಾರ್ ಸಾಹೇಬನಿಗೆ ನಾಲ್ಕು ಲಾಡು ಕೊಟ್ಟು ಮಾತಾಡದೆ ಕೊಡಗಳನ್ನು ತಗೊಂಡು ಬಂದುಬಿಟ್ಟೆ."

ಆಮೇಲೆ ಅವನಿಗೆ ಏನೋ ಅನ್ನಿಸತ್ತೆ. ಸ್ವಲ್ಪ ಸುಮ್ಮನಿದ್ದು ನನ್ನನ್ನ ಕುರಿತು, "ಸಕ್ಕರೆ ಹಾಕಿ ತಯಾರು ಮಾಡಿದ ಲಡ್ಡೂ ಅದಕ್ಕೇ ನಿಮಗೆ ಕೊಡಲಿಕ್ಕೆ ಮನಸ್ಸು ಬರಲಿಲ್ಲ. ಇನ್ನೊಂದು ಗ್ಲಾಸು ಮೊಸರು ಕೊಡಲಾ ಮಾಸ್ಟರ್ ಬಾಬೂ?" ಎಂದ. ನಾನು ಬೇಡ ಎಂದು ಸನ್ನೆ ಮಾಡಿದೆ. ಒಂದು ಗ್ಲಾಸು ಕುಡಿದದ್ದೇ ಕಷ್ಟ ಅದರ ಮೇಲೆ ಇನ್ನೊಂದೆ? ಕೈ, ಬಾಯಿ ತೊಳೆದುಕೊಂಡು ಬಂದು ಮತ್ತೆ ಕಂಬಳಿಯ ಮೇಲೆ ಕೂತೆ. ಮೆಹರ್‌ಚಂದ್ ಗ್ಲಾಸಿನಿಂದ ಕೊಡದ ಮೇಲೆ ಹೊಡೆದು ಶಬ್ದ ಮಾಡುತ್ತ "ಬನ್ನೀ ಬನ್ನೀ... ಶರಬತ್ ಯಾರು ಕುಡಿಯುವವರಿದ್ದೀರಿ" ಎಂದು ರಾಗವಾಗಿ ಕೂಗಿ ಆಹ್ವಾನ ಮಾಡುತ್ತ ಬಂದ. ಬಿಷುನ್‌ದೇವಜೀ ಒಬ್ಬರನ್ನು ಬಿಟ್ಟರೆ ಬೇರೆ ಯಾರೂ ಮುಂದೆ ಬರಲಿಲ್ಲ. ಈ ವಾರ್ಡಿನಲ್ಲಿರುವವರಲ್ಲಿ ಯಾರೂ ಬೆಲ್ಲ ಹಾಕಿದ ಶರಬತ್ತು ಕುಡಿಯಲು ಇಷ್ಟಪಡುವುದಿಲ್ಲ. ಸಕ್ಕರೆ ಶರಬತ್ತಾಗಿದ್ದರೆ ಅನೇಕರು ಬಂದು ಕುಡಿಯುತ್ತಿದ್ದರು. ಬಿಷುನ್‌ದೇವಜೀ ಅರ್ಧ ಸೇರು ಗೋಧಿ ರೊಟ್ಟಿ ತಿನ್ನುತ್ತಾರೆ. ವಯಸ್ಸು ಚಿಕ್ಕದು. ಒಳ್ಳೇ ಮೈಕಟ್ಟು ಮತ್ತು ಆರೋಗ್ಯ. ಆದರೇನಂತೆ ಅರ್ಧರಾತ್ರಿಯಲ್ಲಿ ಎದ್ದು ಒಂದು ಕೊಡ ಮೊಸರು ಕುಡಿಯುವುದೆ? ಈ ವಾರ್ಡಿನವರಿಗೆ ಬೆಲ್ಲವೆಂದರೆ ಏಕೋ ಅರುಚಿ? ಸಕ್ಕರೆಯೇ ಬೇಕು. ಆದರೆ ಪಾಪ, ನಮ್ಮ ಬಿಲೂ ಅಂಥವರು? ಮೂರನೆಯ ವರ್ಗದ ವಾರ್ಡಿನಲ್ಲಿರುವವರಿಗೆ ಒಂದಿಷ್ಟು ಬೆಲ್ಲ, ಒಂದೆರಡು ಹಸೀ ಮೆಣಸಿನಕಾಯಿ, ಒಂದು ಈರುಳ್ಳಿ ಸಿಕ್ಕಿಬಿಟ್ಟರೆ ಕೃತಾರ್ಥರಾಗಿ ಬಿಡುತ್ತಾರೆ.

ಸ್ಕರ್ವಿರೋಗ ಬರದೇ ಇರಲು ವಾರಕ್ಕೆ ಎರಡು ಸಲ ಸ್ವಲ್ಪ ಸ್ವಲ್ಪ ಉಪ್ಪಿನಕಾಯಿ ಸಿಗುತ್ತದೆ ಅವರಿಗೆ. ಈ ಭೋಗ್ಯವಸ್ತು ಇರುವ ದಿವಸ ಇವರಿಗೆ ಎಷ್ಟು ಅನ್ನ ತಿಂದರೂ ಹೊಟ್ಟೆ ತುಂಬದು. ಬರೇ ಉಪ್ಪಿನ ಕಾಯಿ ಕಲಸಿಕೊಂಡೇ ಅನ್ನ ತಿಂದುಬಿಡುವರು. ಇನ್ನು ಸಾರಿನೊಡನೆ ಕಲಸಿಕೊಳ್ಳಲು ಅನ್ನವೆಲ್ಲಿ? ಬಹಳ ಕಷ್ಟದಿಂದ ಸಂಪಾದಿಸಿದ ಸಾರಿನ ಹಸೀಮೆಣಸಿನ ಕಾಯಿ ಸಹ ವ್ಯರ್ಥವಾಗಿ ಹೋಗುತ್ತದೆ. ಬಿಲೂಗೆ ಎರಡು ಹೊತ್ತೂ ಅನ್ನ ತಿಂದು ಅಭ್ಯಾಸ. ಅವನ ವಾರ್ಡಿನಲ್ಲಿ ಅದು ಸಹ ಸಿಗುತ್ತದೋ ಇಲ್ಲವೋ ಯಾರಿಗೆ ಗೊತ್ತು? ಜೈಲ್ ಕೋಡಿನ ಅನುಸಾರ ಎರಡು ಹೊತ್ತು ಅನ್ನ ಕೊಡುವುದಕ್ಕೆ "ಬೆಂಗಾಲ್ ಡೈಯಟ್" ಅನ್ನುತ್ತಾರೆ. ಯಾರಿಗೆ ಇದು ಸಿಗುವುದಿಲ್ಲವೋ ಅವರಿಗೆ 'ಪರಿಧಿರ್' (ರೊಟ್ಟಿಯಂತಹ ಒಂದು ಪದಾರ್ಥ) ಎರಡೆರಡು ಕೊಡುತ್ತಾರೆ. ಈ ಅರೆ ಬೆಂದ,

ಅರಗಿಸಿಕೊಳ್ಳಲಾಗದ ತಿನಿಸನ್ನು ಬಹುಶಃ ಭೀಮ, ಗಣೇಶ ಮುಂತಾದವರು ತಿಂದು ಜೀರ್ಣಿಸಿಕೊಳ್ಳಬಹುದೇನೋ, ಆದರೆ ನಮ್ಮಂಥ ಬಡಕಲು ಬಂಗಾಳಿಗಳ ಕೈಲಿ ಸಾಧ್ಯವಿಲ್ಲ... ಒಂದೊಂದು ಸಲ ನನಗೆ ಅನ್ನಿಸುತ್ತೆ ನಾನು ಬಿಲೂವನ್ನೇ ಮನಸ್ಸಿಗೆ ತಂದುಕೊಂಡು ಈ ಬಾರಿ ಜೈಲಲ್ಲಿ ಹಣ್ಣು, ಹಾಲು ಇಂಥವನ್ನೆಲ್ಲ ತೆಗೆದುಕೊಳ್ಳುವುದನ್ನು ಬಿಟ್ಟುಬಿಟ್ಟಿದ್ದೇನೆ. ಮಲಗುವಾಗ ಸೊಳ್ಳೇ ಪರದೆ ಉಪಯೋಗಿಸುವುದಿಲ್ಲ ಎಂಬುದು ಬಿಲೂಗೆ ತಿಳಿದರೆ ಒಳ್ಳೆಯದು. ತಿಳಿದು ಬಂದರೆ ಅವನಿಗೆ ಸ್ವಲ್ಪವಾದರೂ ಸಮಾಧಾನವಾಗಬಹುದು. ತನ್ನ ವಿಷಯವಾಗಿ ತನ್ನ ತಂದೆ ಸ್ವಲ್ಪವಾದರೂ ಚಿಂತೆ ಮಾಡುತ್ತಿದ್ದಾನೆ ಎಂದು ಅವನಿಗೆ ತಿಳಿಯುತ್ತಿತ್ತು. ಬಿಲೂಗೆ ಫಾಸಿಯಾಗದೆ ಹೋಗಿದ್ದರೆ, ಆಗ ಬಹುಶಃ ಅವನೂ ಇಲ್ಲೇ ಈ ಪರದೆಯಿಂದ ಮುಚ್ಚಿರುವ ಜಾಗದಲ್ಲಿ ಈ ಸೋಷಲಿಸ್ಟರ ನಡುವೆ 'ಕ್ಯಾಪಿಟಲ್' ಮೇಲೆ ವ್ಯಾಖ್ಯಾನ ಮಾಡುತ್ತಿದ್ದ. ಅವನೇ ಇಲ್ಲಿ ಇದ್ದಿದ್ದರೆ ಆಗ ಕಾಮ್ರೇಡ್ ಲಕ್ಷ್ಮೀ ಚತುರ್ವೇದಿಯು 'ಗುರುಗಿರಿ' ಮಾಡುತ್ತಿರಲಿಲ್ಲ. ಆಗ ಹಿಂದೊಮ್ಮೆ ಮಣಿಹಾರಿ ಘಾಟಿನಲ್ಲಿ ಈ ದಳದವರ ಸಮ್ಮರ್ ಕ್ಯಾಂಪ್ ತೆರೆಯಲ್ಪಟ್ಟಿದ್ದ ಸಂದರ್ಭದಲ್ಲಿ ಬಿಲೂ ಅಲ್ಲವೇ ಅದಕ್ಕೆ ಅಧ್ಯಕ್ಷನಾಗಿದ್ದುದು ? ಕಾಮ್ರೇಡ್ ಬನಾರಸಿ ಸಹ ಅವತ್ತು ನನ್ನ ಮುಂದೆ ಚುರುಟು ಎಳೆಯುತ್ತ ಎಳೆಯುತ್ತ, "ಬಿಲೂ ಬಾಬು ಹಾಗೆ ನಮ್ಮ ದಳದಲ್ಲಿ ಯಾರೂ ಚೆನ್ನಾಗಿ ಮಾರ್ಕ್ಸ್‌ವಾದದ ವಿಷಯದಲ್ಲಿ ಪಾಠ ಹೇಳುವವರಿಲ್ಲ. ಅದಕ್ಕಾಗೇ ಆ ಸಲ ಶೋನ್‌ಪುರದಲ್ಲಿ ಪ್ರಾದೇಶಿಕ ಸಮ್ಮರ್ ಕ್ಯಾಂಪ್ ತೆರೆದಾಗ, ಡೈಯಲೆಕ್ಟಿಕ್ ಮೆಟೀರಿಯಲಿಸಂ ವಿಷಯವಾಗಿ ಪಾಠ ಹೇಳುವ ಭಾರ ಬಿಲೂ ಬಾಬು ಮೇಲೇ ವಹಿಸಲ್ಪಟ್ಟಿತ್ತು. ಅವಕಾಶವಾದಿಗಳ ಮಾತು ಬಿಟ್ಟುಬಿಟ್ಟು ಕೇವಲ ಸಾಚಾ ಕೆಲಸಗಾರರ ಮಾತು ಮಾತ್ರ ತೆಗೆದುಕೊಂಡರೆ ಇವತ್ತು ನಮ್ಮ ದಳದ ಬುದ್ಧಿ ಜೀವಿಗಳ ಮಧ್ಯೆ ನಮ್ಮ ಬಿಲೂ ಬಾಬೂಗಿರುವ ಸ್ಥಾನ ಅತಿ ಉನ್ನತವಾದುದು. ಆದರೆ ಬಿಲೂ ಬಾಬು ಅಷ್ಟಾಗಿ ಉಗ್ರಗಾಮಿ ಇಲ್ಲದಿರಬಹುದು. ಇದರ ಸಲುವಾಗೇ ಪಾರ್ಟಿಯ ಸರ್ವೋಚ್ಚ ಸ್ಥಾನಕ್ಕೆ ಏರಲು ಆಗಿಲ್ಲ ಆತ" ಎಂದೆಲ್ಲ ಇನ್ನೂ ಏನೇನೋ ಹೇಳಿದ. ಅವನು ಹೇಳಿದ ಮಾತನ್ನೆಲ್ಲ ಜ್ಞಾಪಕದಲ್ಲಿಟ್ಟಿರುವುದೂ ಕಷ್ಟ ಮಾತಾಡುವಾಗ ಈ ಜನಕ್ಕೆ ಎಂಥೆಂಥ ಪದಗಳನ್ನು ಬಳಸುವ ಅಭ್ಯಾಸವಾಗಿ ಹೋಗಿದೆಯೆಂದರೆ ಅವುಗಳ ಮೂಲಾರ್ಥ ನಮಗೆಲ್ಲ ಸ್ವಲ್ಪವೂ ತಿಳಿದಿರುವುದಿಲ್ಲ. ಇವರುಗಳ ಜೊತೆ ಮಾತುಕತೆ ಆಡುವಾಗ ನಮಗೆ ಅವರ ಮಾತಿನ ಆಳವೇ ಸಿಗುವುದಿಲ್ಲ. ಸಾಧಾರಣ ಬಳಕೆಯ ಭಾಷೆಯಲ್ಲಿ ಹೇಳಬೇಕಾದ್ದನ್ನು ಹೇಳಬಾರದೆ ? ಇವರುಗಳು ಮನೆಯಲ್ಲೂ ಹೆಂಡತಿ ಮಕ್ಕಳ ಸಂಗಡ ಈ ಭಾಷೆಯಲ್ಲೇ ಮಾತಾಡುತ್ತಾರೇನು ? ನಮ್ಮಂಥವರಿಗೇ ಇವರ ಮಾತಿನಲ್ಲಿ ಅರ್ಧದಷ್ಟು ಸಹ ತಿಳಿಯುವುದಿಲ್ಲ. ಇನ್ನು ಇವರುಗಳ ತಾಯಿ, ಅಕ್ಕ, ತಂಗಿಯರಿಗೆ ಏನು ತಿಳಿದೀತು ? ಅದೇ ಯಾವುದೋ ಒಂದು ಕತೆ ಕೂಡ ಇದೆಯಲ್ಲ. ಯಾರೋ ಒಬ್ಬ ಇಂಗ್ಲಿಷು ಕಲಿಯುವ ಹುಚ್ಚಿನಲ್ಲಿ ತಾನು ಇನ್ನು ಮೇಲೆ ಮಾತಾಡುವಾಗ ಇಂಗ್ಲಿಷಲ್ಲದೆ ಬೇರೆ ಯಾವ ಭಾಷೆಯನ್ನೂ ಆಡುವುದಿಲ್ಲವೆಂದು ಹಠ ತೊಟ್ಟಿದ್ದನಂತೆ ಒಂದು ಸಲ ಸಕತ್ ಕಾಯಿಲೆ ಆಯಿತಂತೆ ಅವನಿಗೆ. ನೀರಡಿಕೆಯಿಂದ ಬಾಯಿ ಒಣಗಿಹೋಗುತ್ತ ಇದೆ,

ತಾಯಿಯನ್ನು ಕರೆದು 'ವಾಟರ್ ವಾಟರ್' ಎಂದು ಎಷ್ಟು ಕೂಗಿದರೂ ಆಕೆಗೆ ಅರ್ಥವಾಗಬೇಕಲ್ಲ. ಹಾಗೇತಾನೇ ಆಗಬೇಕು ಇಂಥವರಿಗೆಲ್ಲ!

ನಮ್ಮ ಬಿಲೂ ಸಹ ಈ ಜನರ ದಳದಲ್ಲೊಬ್ಬ ಮುಂದಾಳು. ಆದರೆ ಇಷ್ಟು ಹೇಳಬಲ್ಲೆ. ಅವನ ಬಾಯಿಂದ ಮಾತ್ರ ಈ ನಮೂನೆಯಾದ ಮಾತುಗಳು ಬಂದಿರುವುದು ಇದುವರೆಗೂ ನನ್ನ ಕಿವಿಯಲ್ಲಿ ಬಿದ್ದಿಲ್ಲ. ಆದರೆ ಅವನ ದಳದವರ ಸಂಗಡ ಹೇಗೆ ಮಾತಾಡುತ್ತಾನೋ ಅದು ಗೊತ್ತಿಲ್ಲ. ಆದರೆ ಮನೆಯಲ್ಲಿ ಮಾತ್ರ ಅವನು ಸಾಮ್ಯವಾದಿಗಳಿಗೆ ಸ್ವಾಭಾವಿಕವಾದ ಭಾಷೆ ಉಪಯೋಗಿಸುವುದನ್ನು ನಾನು ಕೇಳಿಲ್ಲ. ಇವರೆಲ್ಲ ತೊಡುವ ದೊಗಳೆ ಪಾಯಿಜಾಮಾ ಮತ್ತು ಕುತ್ತಿಗೆ ತುಂಬ ಕಾಲರಿರುವ ಜುಬ್ಬ ಇವುಗಳನ್ನು ಸಹ ಅವನು ತೊಡುತ್ತಿರಲಿಲ್ಲ. ಹೊಗೇಸೊಪ್ಪಿನ ವಾಸನೆ ಕೂಡ ಅವನ ಮೈಯಿಂದ ಬಂದ ಹಾಗೆ ಅನುಭವವಿಲ್ಲ. ಇವರುಗಳ 'ಮಿಲಿಟೆಂಟ್' ಎಂಬ ಪದದ ಅರ್ಥ ಏನೋ ನಾನು ಅರಿಯೆ. ಬಹುಶಃ ಇವತ್ತು ರಾತ್ರಿ ಇಲ್ಲವೇ ನಾಳೆ ಬೆಳಗ್ಗೆಯೇ ದೇಶಕ್ಕಾಗಿ ಪ್ರಾಣತ್ಯಾಗ ಮಾಡುತ್ತಾ ಇರುವಂಥವನು 'ಮಿಲಿಟೆಂಟ್' ಅಲ್ಲವೇನು? ಅವನು ಯಾಕೆ ಮಿಲಿಟೆಂಟ್ ಆದಾನು? ಮಿಲಿಟೆಂಟ್ ಯಾರು? ಈ ಒಣಕಲು ಮೈಯ ಬೈಜನಾಥ್ - ಈಗ ಸ್ವಲ್ಪ ಹೊತ್ತಿಗೆ ಮೊದಲು ವಾರ್ಡರನ ಮೈಮೇಲೆ ಹೂಜಿ ನೀರು ಎರಚಲು ಹೋಗಿದ್ದನಲ್ಲ ಧೈರ್ಯಶಾಲಿ? ಛೀ ಛೀ! ಏನು ಮಾತಾಡುತ್ತ ಇದ್ದೇನೆ! ಇದೇಕೆ ಈ ನಮೂನೆ ಯೋಚನೆ ಮಾಡುತ್ತ ಇದ್ದೇನೆ? ಬಿಲೂ ಮಿಲಿಟೆಂಟ್ ಆಗಿಬಿಟ್ಟರೆ ಅದು ನನಗೆ ಹೆಮ್ಮೆಯೆ?

ಮಹಾತ್ಮಾಜೀ! ಮನ್ನಿಸಿ ಇಗೋ ನಿಮಗೆ ನನ್ನ ಪ್ರಣಾಮ! ಬಹುಶಃ ಬನಾರಸಿ ಸರಿಯಾಗೇ ಹೇಳಿದ್ದ. ಬಿಲೂ, ನನ್ನ ಮಗನಾದವನು ಆಶ್ರಮದ ವಾತಾವರಣದಲ್ಲಿ ಬೆಳೆದವನು. ಅವನು ಮಿಲಿಟೆಂಟ್ ಆಗದೇ ಇರುವುದೇ ಸ್ವಾಭಾವಿಕ...... ಸದಾಶಿವನು ನನ್ನ ಮೇಜಿನ ಮೇಲೆ ಕಾಲು ತೂಗಾಡಿಸುತ್ತ ಕೂತಿದ್ದಾನೆ. ಅವನು ನನ್ನ ಮುಖದ ಕಡೆಯೇ ನೋಡುತ್ತ ಇದ್ದಾನೆ. ನಾನು ಮಹಾತ್ಮಾಗಾಂಧಿಯನ್ನು ನೆನೆಸಿಕೊಂಡು ಪ್ರಣಾಮ ಮಾಡಿದ್ದನ್ನು ಕಂಡು ಏಕೆ ಎಂದು ಆಶ್ಚರ್ಯಪಡುತ್ತಿದ್ದಾನೆ. ಅವನು ಇದಕ್ಕೆ ತನ್ನ ಮನಸ್ಸಿನಲ್ಲಿ ಮಾಡಿಕೊಂಡಿರುವುದೇ ಕಾರಣ ಎಂದುಕೊಂಡಿರುತ್ತಾನೆ, ಖಂಡಿತ.

"ಬಿಷುನ್‌ದೇವ್ ಬಾಬೂ, ಬಿಷುನ್ ದೇವ್ ಬಾಬೂ!"

ನನ್ನ ಎಡಗಡೆ ಎರಡು ಮೂರು ಸೀಟು ಬಿಟ್ಟು ಬಿಷುನ್‌ದೇವರ ಸೀಟಿರುವುದು. ಒಬ್ಬ ವಾರ್ಡರು ಅವರ ಸೀಟಿನ ಮುಂದೆ ಇರುವ ಕಿಟಕಿಯ ಹೊರಗಡೆ ನಿಂತು ಅವರನ್ನು ಕೂಗುತ್ತ ಇದ್ದಾನೆ. ಬಿಷುನ್‌ದೇವಜೀಗೆ ಹೊರಗಡೆ ಭಾರಿ ವ್ಯಾಪಾರ ಇದೆ. ಅವರ ವೃತ್ತಿಯೇ ವ್ಯಾಪಾರ. ಬತ್ತದ ಹೊಟ್ಟು ತೆಗೆಯುವ ಯಂತ್ರ. ಸ್ವರ್ಗದಲ್ಲೂ ಅದೇ ಕೆಲಸ ಮಾಡುತ್ತದಂತೆ. ನಮ್ಮ ಬಿಷುನ್ ದೇವರು ಜೈಲಿನಲ್ಲೂ ಒಂದು ಬಗೆಯಾಗಿ ಕಾರುಬಾರು ಮಾಡುತ್ತಾರೆ. ಅವರು ಕಿಚನ್ ಮ್ಯಾನೇಜರ್ (ಅಡಿಗೆ ಮನೆ ಪಾರುಪತ್ತೇದಾರರು) ಆಗಿ ಕೆಲಸ ಮಾಡುತ್ತ ಇದಾರೆ. ಆ ಜವಾಬುದಾರಿಯನ್ನೇ ಅನುಕೂಲ ಮಾಡಿಕೊಂಡು ತಮ್ಮ ಪ್ರಭಾವ ಜೈಲಿನಲ್ಲೆಲ್ಲ ಹರಡುವಂತೆ ಮಾಡಿಕೊಂಡಿದ್ದಾರೆ. ಜೈಲಿಗೆ ಸಾಮಾನು ಒದಗಿಸುವ ಕಂಟ್ರಾಕ್ಟರೊಡನೆ ಅವರಿಗೆ

ಖಾಸಾ ಸಂಬಂಧ ಇದೆ. ಈ ವಾರ್ಡರು ಇವರಿಬ್ಬರ ನಡುವೆ ಮಧ್ಯಸ್ಥಗಾರ ಮತ್ತು ಸುದ್ದಿಗಾರನ ಕೆಲಸ ಮಾಡುತ್ತಾನೆ. ಜತೆಗೆ ಸಾಮಾನು ಸರಂಜಾಮುಗಳನ್ನು ತರುವುದು, ಸಾಗಿಸುವುದು ಇಂಥ ಕೆಲಸವೂ ಅವನದೇ. ಪ್ರತಿದಿನವೂ ಜೈಲ್ ಕಂಟ್ರಾಕ್ಟರು ರೇಷನ್ ರಿಕ್ವಿಜಿಷನ್ (ಆಯಾ ದಿನದ ಸಾಮಾನು ಸರಬರಾಜಿಯ ಯಾದಿ) ಎಷ್ಟಿದೆಯೋ ಅದಕ್ಕಿಂದಲೂ ಕಡಮೆ ಪರಿಮಾಣದಲ್ಲಿ ಸಾಮಾನು ಕೊಟ್ಟು ಎಲ್ಲ ಕೊಟ್ಟ ಹಾಗೆ ಕಿಚನ್ ಮ್ಯಾನೇಜರಿಂದ ಸಹಿ ಮಾಡಿಸಿಕೊಳ್ಳುತ್ತಾನೆ. ಅದಕ್ಕೆ ಪ್ರತಿಫಲವಾಗಿ ಅರ್ಧರಾತ್ರಿಯಲ್ಲಿ ಈ ವಾರ್ಡರು ಬಂದು ಮ್ಯಾನೇಜರಿಗೆ ಬೇಕಾದ ಕೆಲವು ಸಾಮಾನುಗಳನ್ನು ಕೊಟ್ಟು ಹೋಗುತ್ತಾನೆ. ಆ ಸಾಮಾನುಗಳು ಯಾವುವೂ ರೇಷನ್ ಪಟ್ಟಿಯಲ್ಲಿಲ್ಲದಿರುವಂಥವು. ಜೈಲಿನ ಅಧಿಕಾರಿ ವರ್ಗಕ್ಕೆ ಈ ಸಂಗತಿ ತಿಳಿಯದೆ ಇಲ್ಲ. ಇದನ್ನು ನಿರ್ಮೂಲ ಮಾಡುವುದಕ್ಕೋಸ್ಕರ ರೇಷನ್ ಗುದಾಮಿನಿಂದ ನಿತ್ಯ ನಿಗದಿ ಸಾಮಾನುಗಳನ್ನು ಕರಾರುವಾಕ್ಕಾಗಿ ಕಳಿಸುವಂತೆ ಕಟ್ಟುನಿಟ್ಟಾದ ಹುಕುಂ ಮಾಡಿದರೂ ಸಹ ಯುದ್ಧದ ಪ್ರಯುಕ್ತ ಎಷ್ಟೋ ಸಾಮಾನುಗಳು ಬಜಾರಿನಲ್ಲೇ ದೊರೆಯುವುದಿಲ್ಲವಾದುದರಿಂದ ನಿಗದಿಯಾದ ಪಟ್ಟಿಯಂತೆ ಎಲ್ಲಾ ಸಾಮಾನುಗಳನ್ನೂ ಪ್ರತಿನಿತ್ಯ ಒದಗಿಸಲು ಸಾಧ್ಯವಿಲ್ಲ. ಒದಗಿಸದೆ ಹೋದರೆ ಗಲಾಟೆಯಾಗುತ್ತದೆ. ಅಪ್ಪರ್ ಡಿವಿಜನ್ನಿನ ರಾಜಕೀಯ ಖೈದಿಗಳು ಉಪವಾಸ ಮುಷ್ಕರ ಹೂಡಿದರೂ ಹೂಡಬಹುದು. ಬಹುಶಃ ವಾರ್ಡಿನೊಳಗಡೆ (ಲಾಕ್‌ಅಪ್) ನಿರ್ಬಂಧದಲ್ಲಿರುವುದಕ್ಕೆ ನಿರಾಕರಿಸಬಹುದು. ಒಂದು ಪಕ್ಷ ಹಾಗಾದರೂ ಬಲಪ್ರದರ್ಶನ ಮಾಡಿ, ಲಾಠೀ ಛಾರ್ಜು ಮಾಡಿ ಅವರನ್ನ ಹದ್ದಿನಲ್ಲಿಡಲು ಯತ್ನಿಸಬಹುದು. ಆದರೆ ಒಂದೆರಡು ಬಾರಿ ಹೀಗೂ ಆದಲ್ಲಿ ಚಾಕಚಕ್ಯವಿಲ್ಲ ಎಂಬ ಟೀಕೆಗೆ ಜೈಲರೂ, ಸೂಪರಿಂಟೆಂಡೆಂಟರೂ ಗುರಿಯಾಗುವರು. ಕೆಲವು ದಿನಗಳಾದ ಮೇಲೆ ಅವರನ್ನು ಬೇರೆಲ್ಲಾದರೂ ವರ್ಗ ಮಾಡಲು ಹುಕುಂ ಸಹ ಬಂದುಬಿಡುತ್ತದೆ. ಈ ಖೈದಿಗಳನ್ನು ಹೊಡೆದು ಬಡಿದು ಸಮಾಚಾರವನ್ನು ಹೊರಗೆ ಬರದಂತೆ ತುಳಿದಿಟ್ಟು ಬಿಡೋಣ ಅಂದರೆ ಸೆಕ್ಯೂರಿಟಿ ಖೈದಿಗಳು ಇರುವವರೆಗೂ ಅದು ಸಾಧ್ಯವಾಗುವುದಿಲ್ಲ. ಈ ಸೆಕ್ಯೂರಿಟಿ ಖೈದಿಗಳು ಗಲಾಟೆ ಮಾಡಿದರ ಅವರ ಮೇಲೂ ಲಾಠೀ ಛಾರ್ಜು ಮಾಡುವುದಕ್ಕೆ ಜಿಲ್ಲಾ ಮ್ಯಾಜಿಸ್ಟ್ರೇಟರ ಹುಕುಂ ಬೇಕಾಗುತ್ತದೆ. ಸೆಕ್ಯೂರಿಟಿ ಖೈದಿಗಳನ್ನು ಪ್ರತ್ಯೇಕವಾದ ವಾರ್ಡಿನಲ್ಲಿಡುವುದಕ್ಕೆ ಎಲ್ಲಾ ಕಡೆಯೂ ಜೈಲುಗಳಲ್ಲಿ ಸ್ಥಳದ ಅಭಾವ ಇರೋಣದರಿಂದ ಅದೂ ಸಾಧ್ಯವಿಲ್ಲದ ಮಾತು. ಇಂಥ ಆಗುಹೋಗುಗಳನ್ನು ಕೂಲಂಕಷವಾಗಿ ವಿಚಾರ ಮಾಡಿಯೇ ಜೈಲಿನ ಅಧಿಕಾರಿ ವರ್ಗವು ಯಾವ ಗಲಾಟೆಯೂ ಆಗದೇ ಇರುವುದೇ ಒಳ್ಳೆಯದೆಂದು ತಿಳಿದು, ಎಷ್ಟೋ ಸಂಗತಿಗಳನ್ನು ನೋಡಿದರೂ ನೋಡದೆ ಇರುವ ಹಾಗೆ ಸುಮ್ಮನಿದ್ದು ಬಿಡುತ್ತದೆ. ಅಲ್ಲದೆ ಇದರಿಂದ ಅವರಿಗೆ ಕಂಟ್ರಾಕ್ಟರ ಕಡೆಯಿಂದ ಬರುವ "ಕಮಿಷನ್ನಿ"ನಲ್ಲಿ ಹೆಚ್ಚು ಕಡಮೆಯೇನೂ ಆಗುವುದೂ ಇಲ್ಲ. ಒಟ್ಟಿನಲ್ಲಿ ಫಾಯಿದೇ (ಲಾಭ) ಆಗುತ್ತಿರುವುದು ನಮ್ಮ ಬಿಷುನ್‌ದೇವಜೀಗೆ. ವಾರ್ಡರೂ ಬಿಷುನ್‌ದೇವ್‌ಜಿ ಪರಸ್ಪರ ಏನು ಮಾತಾಡುತ್ತಿದ್ದಾರೋ ಗೊತ್ತಿಲ್ಲ. ಹಠಾತ್ತಾಗಿ ಬಿಷುನ್‌ದೇವ್‌ಜಿ ದೊಡ್ಡ ದನಿಯಲ್ಲೇ "ಸಿಪಾಹಿ ಜೀ, ಸ್ವಲ್ಪ ಮೊಸರು ಶರಬತ್ತು ಕುಡಿತೀರಾ ?"

ಎಂದು ಕೇಳಿದರು. ವಾರ್ಡರು "ಲಾಯಿಯೇ!" (ತನ್ನಿ) ಎಂದ. ಗ್ಲಾಸು ಸಲಾಕೆಗಳ ಮಧ್ಯೆಯಿಂದ ಹೊರಗೆ ಹೋಗಲು ಆಗಲಿಲ್ಲ. "ತಡೀರಿ ನಾನು ಚಹಾ ಕಪ್ಪಿನಲ್ಲಿ ಕೊಡುತ್ತೇನೆ" ಎಂದು ಬಿಷುನ್‌ದೇವ್‌ಜೀ ಹೋಗಿ ಚಹಾ ಕುಡಿಯುವ ಕಪ್ಪಿನಲ್ಲಿ ಮಜ್ಜಿಗೆ ಶರಬತ್ತನ್ನು ಹಾಕಿ ವಾರ್ಡರಿಗೆ ಕೊಟ್ಟರು.

ಓ! ಈಗ ಗೊತ್ತಾಯಿತು. ಇದಕ್ಕೇ ಇವರು ಇವತ್ತು ಮಜ್ಜಿಗೆ ಶರಬತ್ತು ಮಾಡಿಸಿದ್ದು ಇಷ್ಟು ಸಂಭ್ರಮದಿಂದ! ಅದೇ ಅಂದುಕೊಂಡೆ ಇದೇನಪ್ಪಾ, ಹಠಾತ್ತಾಗಿ ಇವರಿಗೆಲ್ಲ ಬೆಲ್ಲ ಹಾಕಿದ ಮಜ್ಜಿಗೆ ಶರಬತ್ ಕುಡಿಯಲು ಚಪಲ ಹುಟ್ಟಿದೆ ಅಂತ. ವಾರ್ಡರು ಹೊರಟು ಹೋದ. ಬಹುಶಃ ಅವನ ಡ್ಯೂಟಿ ಬೇರೆ ವಾರ್ಡಿನಲ್ಲಿರಬೇಕು. ಭೂಷಣ್‌ಜೀ ತಮ್ಮ ಹಾಸಿಗೆ ಮೇಲೆ ಸೊಳ್ಳೇ ಪರದೆ ಹಾಕಿಕೊಂಡು ಮಲಗಿದ್ದರು. ಬಿಷುನ್‌ದೇವ್‌ಜೀ ಹಾಸಿಗೆ ಪಕ್ಕದಲ್ಲೇ ಅವರ ಸೀಟ್ ಇದ್ದದ್ದು. ಆತನು ಸೊಳ್ಳೆ ಪರದೆಯೊಳಗಡೆಯಿಂದಲೇ, "ಏನು ತಿಕ್ರಮ್ ಮಾಡ್ತಾ ಇದ್ದೀರಿ" ಎಂದು ಕೇಳಿದರು. ನಿಯಮಗಳನ್ನು ಮುರಿದು ಹಾಕಿ ಸೌಕರ್ಯಗಳನ್ನು ಕಲ್ಪಿಸಿಕೊಳ್ಳುವುದಕ್ಕೆ ಜೈಲಿನಲ್ಲಿ ಇಟ್ಟ ಹೆಸರು "ತಿಕ್ರಮ" ಅಷ್ಟೇ ಹೊರತು ಈ ಪದಕ್ಕೆ ಬೇರೆ ಯಾವ ಅರ್ಥವೂ ಇಲ್ಲ. ಈ ಜೈಲಿನಲ್ಲೇ ಈ ಪದ ಹುಟ್ಟಿಕೊಂಡದ್ದು. ಬಿಷುನ್‌ದೇವಜೀ ಪ್ರತಿದಿನವೂ ಬೀಡಿ ತರಿಸುತ್ತಾರೆ ಮತ್ತು ಮೇಟ ಸಹಾಯದಿಂದ ಅದನ್ನೆಲ್ಲ ಮಾರಲು ಜೈಲಿನ ಫ್ಯಾಕ್ಟರಿಗೆ ಕಳಿಸುತ್ತಾರೆ. ಅಲ್ಲಿ ಕೆಲಸ ಮಾಡುವ ಸಾಧಾರಣ ಖೈದಿಗಳೂ ಈ ಬೀಡಿಯನ್ನು ಕೊಳ್ಳುತ್ತಾರೆ. ಒಂದು ಕಟ್ಟಿಗೆ ಹತ್ತು ಪೈಸಾ. ಬಿಷುನ್‌ದೇವ್‌ಜಿ ಈ ವ್ಯಾಪಾರದಿಂದ ಚೆನ್ನಾಗಿ ಲಾಭ ಪಡೆಯುತ್ತಾರೆ. ಮೆಸ್ಸಿನ ಮೆಂಬರುಗಳಲ್ಲಿ ಕೆಲವರು ಇದನ್ನು ಕುರಿತು ಗಲಾಟೆ ಮಾಡಿದರೆ ಅವರ ಬಾಯನ್ನು ಮುಚ್ಚಿಸಲು ಅವರಿಗೆ ಆಗಾಗ ವಾಸನೆ ಎಣ್ಣೆ ಮುಂತಾದ ಸಣ್ಣಪುಟ್ಟ ಅಲಂಕಾರದ ಸಾಮಾನುಗಳನ್ನು ತರಿಸಿಕೊಡಲಾಗುತ್ತಿತ್ತು. ಇವಿಷ್ಟೇ ಅಲ್ಲದೆ ಜೈಲಿನ ಗುದಾಮಿನಲ್ಲಿ ಕೆಲಸ ಮಾಡುವ ಖೈದಿಗಳ ಸಂಗಡವೂ ಒಂದು ಬಂದೋಬಸ್ತು ಮಾಡಲಾಗಿದೆ. ಎರಡು ಕಟ್ಟು ಬೀಡಿಗೆ ಒಂದು ಗ್ಲಾಸು ತುಪ್ಪ, ಒಂದು ಕಟ್ಟಿಗೆ ಅರ್ಧ ಸೇರು ಸಕ್ಕರೆ ಹೀಗೆ ಒಂದು ರೀತಿಯಲ್ಲಿ ಬೀಡಿಯೇ ಇಲ್ಲಿನ ಅಂಗೀಕೃತ ನಾಣ್ಯ. ಭೂಷಣ್‌ಜೀ ಬಿಷುನ್‌ದೇವಜೀಗೆ ಹೇಳುತ್ತಿದ್ದ - "ನನಗೊಂದು ಬಂಡಲ್ (ಕಟ್ಟು) ಬೀಡಿ ಕೊಡಣ್ಣಾ. ಉಣ್ಣೆಯ ಜಾಮಾ (ಜುಬ್ಬ)ವನ್ನು ಚಳಿಗಾಲ ಆದಮೇಲೆ ಒಗೆಸಿಲ್ಲ. ನಾಳೆ ಅದನ್ನು ಧೋಬೀ ಕಮ್ಯಾಂಡಿಗೆ (ಅಗಸರ ಕ್ಯಾಂಪಿಗೆ) ಕಳಿಸಬೇಕಾಗಿದೆ. ಇಸ್ತ್ರಿ ಮಾಡಿಸಲಿಕ್ಕೆ ಮತ್ತು ನಾಳೆ ನನಗೋಸ್ಕರ ಫೌಂಟನ್ ಪೆನ್ನಿಗೆ ಮಸಿ ತರಿಸಬೇಕಾಗಿದೆ. ಅದು ಸ್ವಲ್ಪ ತರಿಸಿಕೊಡಲಿಕ್ಕೆ ಹೇಳಿಬಿಡಪ್ಪಾ - ಕಂಟ್ರಾಕ್ಟರಿಗೆ" ಎಂದು ನಗುತ್ತಲೇ "ನಾನು ಯಾರು ಗೊತ್ತಾ? ಝುಪಟ್ಟಾನಂದರ ದಳದವನು!" ಎನ್ನುವನು. ಈ ಝುಪಟ್ಟಾನಂದ ಎನ್ನುವ ಹೆಸರಿಗೆ ಒಂದು ಇತಿಹಾಸವಿದೆ. ಬಿಷುನ್‌ದೇವಜೀ ಒಂದು ಹಾಸ್ಯದ ಪದ್ಯ ಕಟ್ಟಿದ್ದ. ಆ ಪದ್ಯ ಸರಿಯಾಗಿ ನೆನಪಿಲ್ಲ. ಆದರೆ ಅದರ ಭಾವಾರ್ಥ ಹೀಗೆ-

ಜೈಲಿನ ರಾಜಕೀಯ ಖೈದಿಗಳೆಲ್ಲ ಸಿದ್ಧ ಪುರುಷರು. ಅವರಲ್ಲಿ ಮೂರು ಶ್ರೇಣಿಗಳಿರುತ್ತವೆ. ಮೊದಲನೆಯ ಶ್ರೇಣಿಯವರಿಗೆ ಜೋಗಾಡಾನಂದ*ರೆಂದು

* 'ಜೋಗಾಡ್' ಅಂದರೆ ಒದಗಿಸಿಕೊಳ್ಳುವಿಕೆ.

ಹೆಸರು. ಈ ಶ್ರೇಣಿಯ ಜನ ಬೀಡಿ, ಪೈಸಾಗಳನ್ನು ಲಂಚವಾಗಿ ಕೊಟ್ಟು, ಸವಿ ಮಾತುಗಳಾಡಿ ಜೈಲ್ ಡಾಕ್ಟರನ್ನು ಖುಷಿಪಡಿಸಿ ಮತ್ತು ಆಗಾಗ ಜೈಲಿನ ಕೆಲಸಗಾರರೊಡನೆ ಜಗಳ ಆಡಿ ನಾನಾವಿಧವಾದ ಸಾಮಾನು, ಸಲಕರಣೆಗಳನ್ನು ಒದಗಿಸಿಕೊಳ್ಳುವರು. ಇವರುಗಳಿಗೆ ಚಟ ಹಿಡಿದಿರುವ ವಸ್ತುಗಳಿಂದ ಹಿಡಿದು ಯಾವ ಪದಾರ್ಥದ ಅಭಾವವೂ ಇರುವುದಿಲ್ಲ. ಇವರು ಸದಾ ಇಂಥ ಯೋಜನೆಗಳ ಸಂಚು, ತಂತ್ರಗಳಲ್ಲೇ ಮುಳುಗಿರುತ್ತಾರೆ. ಎರಡನೆಯ ಶ್ರೇಣಿಯಲ್ಲಿರುವವರು ಝಪಟ್ಟಾನಂದರು. 'ಝಪಟ್ಟಾಮಾರನಾ' ಎಂದರೆ ಗಿಡುಗ, ರಣಹದ್ದುಗಳಂತೆ ಫಕ್ಕನೆ ಹಾರಿಬಿದ್ದು ಎತ್ತಿಕೊಂಡು ಹೋಗುವುದು ಎಂದರ್ಥ. ಈ ನಮೂನೆ ಖೈದಿಗಳು ಸಾಧಾರಣವಾಗಿ ಏನೂ ಮಾಡದೆ ನಿಶ್ಶಬ್ದವಾಗಿ ಎಲ್ಲೋ ಇರುತ್ತಾರೆ. ಮುಖದಲ್ಲಿ, ಕಣ್ಣಲ್ಲಿ ಏನೂ ಅರಿಯದವರಂತೆ ನಿಸ್ಪೃಹಭಾವ ಒಡೆದು ತೋರುವ ಹಾಗೆ ನಟಿಸುತ್ತ ಇರುತ್ತಾರೆ. ಆದರೆ ಗಿಡುಗ ಎತ್ತರವಾದ ಮರದ ಮೇಲೆ ಸಮಾಧಿಭಾವದಲ್ಲಿ ಕೂತು ಇದ್ದು ಸಹ ಶಿಕಾರಿಯ ಮೇಲೆ ಚೆನ್ನಾಗಿ ನಿಗಾ ಇಟ್ಟಿರುವ ಹಾಗೆ ಇದ್ದರೂ ಎಲ್ಲ ವೇಳೆಯೂ, ಯಾವ ಜೋಗಾಡಾನಂದರು ಎಲ್ಲಿ, ಏನು ಮಾಡುತ್ತ ಇರುತ್ತಾರೆಂಬುದರ ಮೇಲೆ ಚೆನ್ನಾಗಿ ನಿಗಾ ಇಟ್ಟಿರುತ್ತಾರೆ. ಜೋಗಾಡಾನಂದರ ಕೈಗೆ ಯಾವ ಸಾಮಾನಾದರೂ ಬಂದಾಗ ಸರಿಯಾಗಿ ಅದೇ ಸಮಯಕ್ಕೆ ಇವರು ಅವರ ಮುಂದೆ ಹಾಜರಾಗುತ್ತಾರೆ. ತಮಗೆ ಬರಬೇಕಾದ ಭಾಗವನ್ನು ಕೇಳಿ ತೆಗೆದುಕೊಳ್ಳುವುದಕ್ಕೆ. 'ತಿಕ್ರಮ್' ಮಾಡಲು ಹೋಗಿ ಹಿಡಿಯಲ್ಪಟ್ಟರೆ ಅಪಾಯ ಇರುತ್ತದೆ. ಆದರೆ ಝಪಟ್ಟಾನಂದರು ಮಾಡುವ ಕೆಲಸದಲ್ಲಿ ಯಾವ ಅಪಾಯದ ಅಂಜಿಕೆಯೂ ಇಲ್ಲ. ಆದರೆ ಜೊಗಾಡಾನಂದರಿಗೆ ಸಲ್ಲುವುದಕ್ಕಿಂತ ಇವರಿಗೆ ಸಲ್ಲುವ ಭಾಗ ತುಂಬ ಕಡಮೆ. ಜೋಗಾಡಾನಂದರು ಸ್ವಲ್ಪ ಸ್ವಲ್ಪವಾದರೂ ಕೆಲವು ಸಾಮಾನುಗಳನ್ನು ಇಷ್ಟವಿಲ್ಲದೆಯೇ ಕೊಡಬೇಕಾಗುತ್ತದೆ. ಕೊಡದೆ ಹೋದರೆ ಗಲಾಟೆಯಾಗಿ ಸಿಕ್ಕಿಬೀಳುವ ಭಯ ಇದೆಯಲ್ಲ. ಅದಕ್ಕೇ ಈ ಜನಗಳನ್ನು ತಣ್ಣಗಿಡಬೇಕಾಗುತ್ತದೆ. ಮೂರನೆಯ ಶ್ರೇಣಿಯ ರಾಜಕೀಯ ಖೈದಿಗಳಿಗೆ "ಬೇಕೂಫಾನಂದ"ರೆಂದು ಹೆಸರು. ಇವರೇ ಬಹುಮಂದಿಯಿರುವುದು. ಸಾಮಾನುಗಳನ್ನು ಒದಗಿಸಿಕೊಳ್ಳುವುದರಲ್ಲೂ ಅವುಗಳಲ್ಲಿ ಭಾಗ ತೆಗೆದುಕೊಳ್ಳುವುದರಲ್ಲೂ ಅವರಿಗೆ ರೂಪಾಯಿಗೆ ನೂರು ಪೈಸೆ ಅಷ್ಟು ಆಸೆ ಇರುತ್ತದೆ. ಆದರೆ ಸಾಮರ್ಥ್ಯ ಇಲ್ಲ. ಇವರ ಭಯ ಏನೆಂದರೆ, ಸಿಕ್ಕಿ ಬೀಳದೆ ಹೋದರೂ ಬೇರೆ ಜನರು ಇವರ ವಿಷಯವಾಗಿ ಮಾತಾಡಿಕೊಳ್ಳದೆ ಇರುತ್ತಾರೆಯೇ ಎಂಬುದೇ. ಇನ್ನು ಅಕಸ್ಮಾತ್ತಾಗಿ ಸಿಕ್ಕಿಬಿದ್ದರಂತೂ ಇವರ ಮಾನಪೂರ್ತಿಯಾಗಿ ಹೋದ ಹಾಗೇ. ಒಟ್ಟಿನಲ್ಲಿ ಇವೆಲ್ಲ ಜಂಜಾಟಗಳಿಂದ ದೂರವಾಗಿದ್ದುಕೊಂಡು ಇತರರನ್ನು ಟೀಕೆ ಮಾಡಿ ತೀರ್ಪು ಕೊಡುವ ಅಧಿಕಾರ ಇಟ್ಟುಕೊಂಡಿರುವುದೇ ಬುದ್ಧಿವಂತರ ಲಕ್ಷಣ.

ಕೋಲಾಹಲ ಮಾಡುತ್ತ ಮಾಡುತ್ತ ಪರದೆಸುತ್ತಿದ್ದ ಜಾಗದಿಂದ ಎಲ್ಲರೂ ಹೊರಗೆಬಂದರು. ಹಾಗಾದರೆ ಇವರ 'ಕ್ಲಾಸು' (ವ್ಯಾಸಂಗ) ಮುಗಿಯಿತು ಅಂತ ಕಾಣುತ್ತೆ. ಹಗಲೆಲ್ಲ ಬೇಕಾದಷ್ಟು ಸಮಯ ಇರುತ್ತದೆ. ಹಾಗಿದ್ದರೂ ಇವರು ರಾತ್ರಿ

ಹೊತ್ತೇ ಓದು, ಚರ್ಚೆ ಎಲ್ಲಾ ನಡೆಸುವುದು. ಬೆಳಗ್ಗೆ ಅಂತೂ ಇವರಲ್ಲಿ ಯಾರೂ ಎಂಟು ಗಂಟೆಗೆ ಏಳುವ ಪಾಪಕ್ಕೆ ಹೋಗುವುದಿಲ್ಲ. ಆದರೂ, ರಾಜಕೀಯ ಕ್ಷೇತ್ರಕ್ಕೆ ಇಳಿದು ಬಂದಿರುವಾಗಲೂ ಇವರು ತಮ್ಮ ಓದು, ವ್ಯಾಸಂಗ ಬಿಡದೇ ಇರುವುದನ್ನ ಕಂಡರಂತೂ ತುಂಬ ಸಂತೋಷವೇ ಆಗುತ್ತದೆ. ನಾನು ಮಾಡುತ್ತಿದ್ದುದು ಶಾಲಾ ಮಾಸ್ಟರ ಕೆಲಸ. ಅದಕ್ಕೆ ಯಾರಾದರೂ ಹುಡುಗರು ಓದುತ್ತ ಇರುವುದನ್ನ ಕಂಡರೆ ಇವತ್ತಿಗೂ ಮನಸ್ಸಿನಲ್ಲಾಗುವ ಆನಂದವನ್ನ ತಡೆದಿಟ್ಟುಕೊಳ್ಳಲಾರೆ. ಸೋಷಲಿಸ್ಟರು, ಫಾರ್ವರ್ಡ್ ಬ್ಲಾಕಿನವರು, ಕಮ್ಯೂನಿಸ್ಟ್ ಮತ್ತು ಕಿಸಾನ್ ಸಭಾ ಹುಡುಗರಿಬ್ಬರೂ– ಇವರೆಲ್ಲರಲ್ಲೂ ಓದು, ವ್ಯಾಸಂಗಗಳ ಮೇಲೆ ಇರುವ ಉತ್ಸಾಹ ನೋಡಿ ಬಹಳ ಆಶ್ಚರ್ಯಪಡುತ್ತೇನೆ ಮತ್ತು ನಮ್ಮ ಪಕ್ಷದ ಮೆಂಬರುಗಳೊಂದಿಗೆ ಹೋಲಿಸುತ್ತೇನೆ. ಫಾರ್ವರ್ಡ್ ಬ್ಲಾಕಿನವರಾದವರು ಮೂರು ಜನ ಮಾತ್ರ ಇದ್ದಾರೆ ಇಲ್ಲಿ. ಅವರು ಸಹ ಎಷ್ಟೋ ಹಣ ವೆಚ್ಚ ಮಾಡಿ ಸೆನ್ಸಾರ್ ಆಗದೇ ಇರುವ ಮಾರ್ಕ್ಸ್‌ವಾದದ ಪುಸ್ತಕಗಳನ್ನು ತರಿಸಿಕೊಂಡಿದ್ದಾರೆ. ಕಮ್ಯೂನಿಸ್ಟ್ ಹುಡುಗರು ಸದಾ ಪುಸ್ತಕಗಳನ್ನು ತರಿಸುತ್ತಲೇ ಇರುತ್ತಾರೆ. ಇವರಂತೆ ಗಂಟೆಗಟ್ಟಲೆ ಓದು, ಚರ್ಚೆಗಳ ಕ್ಲಾಸು ನಡೆಸೋಣ ಎಂದರೆ ನಮ್ಮ ಪಕ್ಷದವರಲ್ಲಿ ಜನರೇ ಸಿಗುವುದಿಲ್ಲ. ಅದರ ಪ್ರತ್ಯಕ್ಷ ಪ್ರಮಾಣವೂ ಆಗಿಹೋಗಿದೆ. ಈ ಸದಾಶಿವನ ಉತ್ಸಾಹ ಮತ್ತು ಒತ್ತಾಯಕ್ಕೋಸ್ಕರ ನಾನೂ ಕಳೆದ ಮಾಗಿ ಕಾಲದಲ್ಲಿ ಬೇಲದ ಮರದ ಕೆಳಗೆ "ಕನ್‌ಸ್ಟ್ರಕ್ಟಿವ್ ಪ್ರೋಗ್ರಾಮ್" (ರಚನಾತ್ಮಕ ಕಾರ್ಯಕ್ರಮ) ಮೇಲೆ ಕ್ಲಾಸನ್ನು ನಡೆಸಲು ಶುರು ಮಾಡಿದ್ದೆ. ಮೊದಲ ವಾರದಲ್ಲಿ ಕೆಲವರು ಹುಡುಗರು ಬಂದಿದ್ದರು. ಆಮೇಲೆ ಸ್ವಲ್ಪ ದಿನಗಳಲ್ಲೇ ನೋಡಿದರೆ ಮೂರೇ ಜನ ಉಳಿದರು. ಕೇವಲ ನಮ್ಮ ಸದಾಶಿವ, ದಾದಾಜೀ, ಮತ್ತು ರಾಮಶರಣಜೀ ಮತ್ತು ಸಿ.ಎಸ್.ಪಿ (ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ)ಯು ನಡೆಸುತ್ತಿದ್ದ ರಷ್ಯಾ ವಿಪ್ಲವದ ಇತಿಹಾಸದ ಕ್ಲಾಸಿನಲ್ಲೋ ನೋಡುತ್ತೇನೆ, ಜನ ಕಿಕ್ಕಿರಿಯುವಷ್ಟು ತುಂಬಿರುತ್ತಾರೆ. ನಮ್ಮ ಹುಡುಗರಲ್ಲಿ ಕೆಲವರೂ ಅವರ ಮಧ್ಯೆ ಕೂತಿರುವುದನ್ನು ನೋಡಿದೆ. ನೀಲೂ ಮತ್ತು ಬಿಲೂ - ಇವರ ದಳದ ಕಾರ್ಯಕ್ರಮದ ಅಡಿಪಾಯ ಈ ಕಾಲದ ಮನುಷ್ಯರ ಮನಸ್ಸು ಯಾವ ಮಾರ್ಗದಲ್ಲಿ ಓಡುತ್ತಿವೆಯೋ ಅದರ ಮೇಲಿದೆ ಮತ್ತು ನಮ್ಮ ಪಕ್ಷದ ಕಾರ್ಯಕ್ರಮದ ಅಡಿಪಾಯ ಹಿಂಸೆ, ಲೋಭಗಳಿಲ್ಲದ ಒಂದು ಆದರ್ಶ ಮಾನವನ ಮನಸ್ಸಿನ ಮಾರ್ಗದ ಮೇಲೆ. ಆ ಕಾರಣದಿಂದಲೇ ಸಾಧಾರಣ ಜನರನ್ನು ಈ ಸೋಷಲಿಸ್ಟರ ಪ್ರೋಗ್ರಾಮ್ ಹೆಚ್ಚಾಗಿ ಆಕರ್ಷಣೆ ಮಾಡುತ್ತದೆ.

ನಮ್ಮ ನೀಲೂ ಮತ್ತು ಬಿಲೂಗೂ ಸಹ ಅದೇನು ಓದುವ ಹುಚ್ಚು! ಮತ್ತೆ ನಮ್ಮ ಪಕ್ಷದ ಜನರಿಗೋ? ಅವರ ಮಾತು ಹೇಳಿ ಪ್ರಯೋಜನವೇನು? ನಾನೆಂದಾದರೂ ಒಂದು ಪುಸ್ತಕ ಹಿಡಿದು ಕೂತರೆ ಅವರೆಲ್ಲ "ಮಾಸ್ಟರ್ ಬಾಬು ಮತ್ತೆ 'ಇಂತಿಹಾನ್' (ಪರೀಕ್ಷೆ) ಕೊಡತಾರೇನು?" ಎನ್ನುವರು. ನಮ್ಮ ದಳದ ರಾಮಚಂದರ್‌ಜೀ ಜಲ ಚಿಕಿತ್ಸೆಯ ಪುಸ್ತಕ ಓದುತ್ತಾನೆ. ರಾಮಚಂದರ್‌ಜಿ ಮತ್ತು ಹರಿಹರಜೀ ಯೋಗ ಮತ್ತು ಪ್ರಾಣಾಯಾಮದ ಪುಸ್ತಕಗಳನ್ನು ಓದುತ್ತಾರೆ. ಇವರ ಅಭಿಪ್ರಾಯ ಏನೆಂದರೆ ಮಹಾತ್ಮಾಗಾಂಧಿಯ ತತ್ತ್ವಗಳ ಮೇಲೆ ನಂಬಿಕೆ ಇರುವವರು

ಬೇರೆ ಪುಸ್ತಕಗಳನ್ನು ಓದಿ ಪ್ರಯೋಜನವೇನು ಅಂತ. ಇನ್ನು ಕಲಿಯತಕ್ಕ ವಿಷಯಗಳೇನಿವೆ ? ಸಾಧಿಸುವುದೇನು ? ಅಂತ. ಯಾಕೆ ? ನಮ್ಮ ನೀಲೂ ಸಹ ನನ್ನನ್ನು ಹಾಸ್ಯ ಮಾಡುತ್ತಿದ್ದ. ನಾನು ಟೂರ್ ಮೇಲೆ ಹೊರಗೆ ಹೊರಡುವಾಗ ನನ್ನ ಹೆಂಡತಿ ನನ್ನ ಸಾಮಾನುಗಳನ್ನು ಪ್ಯಾಕ್ ಮಾಡುತ್ತಿದ್ದರೆ ನೀಲೂ ಬಂದು "ಅಮ್ಮಾ ಅಪ್ಪನ 'ಹಳೆಯ ಸರ್ವೋದಯ' ಫೈಲನ್ನು ಇಟ್ಟಿದೀಯೋ ಇಲ್ಲವೋ" ಎಂದು ಚೇಷ್ಟೆ ಮಾಡುತ್ತ ಅನ್ನುತ್ತಿದ್ದದ್ದು ಜ್ಞಾಪಕ ಇದೆ. ನಮ್ಮ ನೀಲೂ ಸ್ವಭಾವವೇ ಹಾಗೆ. ಮೊದಲಿಂದಲೂ ಅವನಿಗೆ ಲಘು-ಗುರುಗಳ ವ್ಯತ್ಯಾಸವೇ ತಿಳಿಯುತ್ತಿರಲಿಲ್ಲ. ಇದೇ ವಿಷಯದಲ್ಲಿ ಬಿಲೂಗೂ ಅವನಿಗೂ ಅಜಗಜಾಂತರ! ನೀಲೂ ಯಾವಾಗಲೂ ಮುಂಗೋಪದ ಮನುಷ್ಯ. ರೇಗಿದರೆ ಅವನು ಏನು ಮಾಡುವುದಕ್ಕೂ ಹಿಂಜರಿಯುವವನಲ್ಲ. ವೈಯೇ ಮರೆತುಬಿಡುತ್ತಾನೆ.

ಹಿಂದೆ ಒಮ್ಮೆ ಮನೆಗೆ ಬಂದವನು ಒಳಗೆ ಪ್ರವೇಶ ಮಾಡಿ ನೋಡಿವರೆ ಅಡಿಗೆ ಮನೆಯ ವರಾಂಡದಲ್ಲಿ ನನ್ನ ಹೆಂಡತಿ, ನೀಲೂ ಮತ್ತು ಬಿಲೂ ದೂರ, ದೂರದಲ್ಲಿ ಕೂತಿದ್ದಾರೆ. ಬಿಲೂ ಮತ್ತು ನನ್ನ ಹೆಂಡತಿ ಅಳುತ್ತಾ ಇದ್ದಾರೆ. ನೀಲೂ ಪೊರಕೆಯ ಕಡ್ಡಿಯೊಂದನ್ನು ಹಿಡಿದು ನೆಲದ ಮೇಲೆ ಏನೋ ಗೀಚುತ್ತಿದ್ದಾನೆ. ಅವನ ಪಕ್ಕದಲ್ಲೊಂದು ಮೀನು ಕೊಯ್ಯುವ ಚಾಕು. ಹತ್ತಿರ ಹೋಗಿ ನಿಂತೊಡನೆ ನನ್ನ ಹೆಂಡತಿ ಏನನ್ನೋ ತನ್ನ ಸೀರೆಯ ಕೊನೆಯಿಂದ ಮುಚ್ಚಲು ಪ್ರಯತ್ನಿಸುತ್ತಿದ್ದಾಳೆ. ನಾನು ಸ್ವಲ್ಪ ಗಟ್ಟಿಯಾಗೇ ಪ್ರಶ್ನೆ ಮಾಡಿದ ಮೇಲೆ ಸಂಗತಿ ಎಲ್ಲ ಹೊರಗೆ ಬಂತು. ಬಿಲೂ ಕೈಯಿಂದ ಮಸಿಯ ಸೀಸೆ ಜಾರಿ ಉರುಳಿಬಿದ್ದು ನೀಲುವಿನ "ಹಾಲಿನ ಬೊಂಬೆ" ಎಂಬ ಪುಸ್ತಕದ ರಟ್ಟೆಲ್ಲ ಮಸಿಯಾಗಿ ಹೋಯಿತಂತೆ. ಅದಕ್ಕೆ ನೀಲು ಕೋಪಗೊಂಡು ಅವನ ಮೇಲಿನ ಛಲದಿಂದ ಅವನ ಮಾರ್ಸ್‌ಡನ್ ಎಂಬ ಲೇಖಕನ ಇತಿಹಾಸದ ಪುಸ್ತಕವನ್ನು ಮೀನಿನ ಚಾಕುವಿನಿಂದ ಎರಡು ಭಾಗವಾಗಿ ಕತ್ತರಿಸಿಬಿಟ್ಟಿದ್ದ. ಆ ಎರಡು ಭಾಗಗಳೂ ಎರಡು ಬೇರೆ ಬೇರೆ ನೋಟು ಪುಸ್ತಕಗಳ ಹಾಗೆ ಕಾಣುತ್ತವೆ. ಅಂತೂ ವಿಚಿತ್ರ ಹುಡುಗನ ಈ ನೀಲೂ! ಅವನ ಅಮ್ಮನೂ ಸುಮ್ಮನೆ ಮುದ್ದು ಮಾಡಿ ಮಾಡಿ ತಲೆಯ ಮೇಲೆ ಕೂಡಿಸಿಕೊಂಡು ಬಿಟ್ಟಿದ್ದಾರೆ. ನ್ಯಾಯವಾಗಿ ಅವನನ್ನ ನನ್ನ ಮುಂದೆ ಎಳೆದುಕೊಂಡು ಬಂದು ನಿಲ್ಲಿಸಬೇಕಾಗಿತ್ತು. ಅದಕ್ಕೆ ಬದಲಾಗಿ ಅವನ ತಪ್ಪನ್ನೇ ಮುಚ್ಚಿಡುತ್ತ ಇದ್ದಾಳೆ.

"ಏನಯ್ಯಾ, ಸದಾಶಿವ್, ನಿಮ್ಮ ಭೂಮಿಹಾರ್ - ರಾಜಪೂತ್ ಮಹಾಸಭೆಯ ಮೀಟಿಂಗು ಮುಗಿದುಹೋಯಿತೇನು ?" ಹೀಗೆಂದು ಕಾಮ್ರೇಡ್ ಬೈಜ್‌ನಾಥನು ಸದಾಶಿವನನ್ನ ವ್ಯಂಗ್ಯವಾಗಿ ಕೇಳಿದ. ಅವನ ಉದ್ದೇಶ್ಯ ನಮ್ಮ 'ಸೂತ್ರಯಜ್ಞ'ವನ್ನು ಟೀಕೆ ಮಾಡಬೇಕೆಂದು. ಬಿಹಾರಿನ ಬಿಸಿನೆತ್ತರ ಪಂಥದವರು - ಅಂದರೆ ಸೋಷಲಿಸ್ಟರು, ಫಾರ್‌ವರ್ಡ್ ಬ್ಲಾಕಿನವರು, ಕಮ್ಯೂನಿಸ್ಟ್ ಮತ್ತು ಕಿಸಾನ್ ಸಭಾ ಸದಸ್ಯರೂ, ಬಲಪಕ್ಷದವರಾದ ಕಾಂಗ್ರೆಸಿನವರನ್ನು ಹೀಗೆ ಕರೆದು ಹಾಸ್ಯ ಮಾಡುತ್ತಾರೆ. ಅವರ ಅರ್ಥ ಬಿಹಾರಿನ ಪ್ರಾದೇಶಿಕ ಕಾಂಗ್ರೆಸ್ ಕೇವಲ ಸ್ಥಾನೀಯ ಭೂಮಿಹಾರ್ ಮತ್ತು ರಾಜಪೂತ್ ಜಾತಿಗಳ ಪರಸ್ಪರ ದಳಗಳ ಪೈಪೋಟಿಯಿಂದ ತುಂಬಿರುವ ಸಂಸ್ಥೆಯೆಂದು. ಪ್ರಾದೇಶಿಕ ಕಾಂಗ್ರೆಸಿನಲ್ಲಿ ರಾಜಕೀಯ ವ್ಯತ್ಯಾಸಗಳ ಆಧಾರವಾದ

ದಳಗಳಲ್ಲ – ಪೈಪೋಟಿ ಮಾಡುತ್ತಿರುವುದು. ಆದರೆ ಜಾತೀಯ ಮತ್ತು ವ್ಯಕ್ತಿಗತ ದಳಗಳ ಪೈಪೋಟಿ ಬಹಳ ಉಗ್ರವಾಗಿರುವುದು ನಿಜ. ಜೈಲಿನ ಒಳಗಡೆಯೂ ನಾನು ನೋಡಿರುವ ಹಾಗೆ, ರಾಮಶರಣಜೀ, ಮತ್ತು ಹರಿಹರಜೀ ತಮ್ಮ ತಮ್ಮ ಜಾತಿಗಳ ಆಧಾರದ ಮೇಲೆ ಉಪದಳಗಳನ್ನು ನಿರ್ಮಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಹೀಗೆ ಮಾಡಿದರೆ ನಾಳೆ ಹೊರಗೆ ಹೋದರೂ ಅವರ ಮುಂದಾಳುತನವನ್ನು ಉಳಿಸಿಕೊಳ್ಳಬಹುದೆಂದು ಅವರ ಎಣಿಕೆ. ನೀಲೂ, ಬಿಲೂ ದಳದವರು ಹೇಳುವುದೆಲ್ಲ ಸುಳ್ಳಲ್ಲ. ಹೀಗಿದ್ದರೆ ನಮ್ಮ ದೇಶಕ್ಕೆ ಸ್ವರಾಜ್ಯ ಎಂದಾದರೂ ಬರಲು ಸಾಧ್ಯವೆ ? ಒಂದೊಂದು ಸಲವಂತೂ ಯೋಚನೆ ಮಾಡಿದರೆ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಈ ಸೋಷಲಿಸ್ಟ್ ಗುಂಪಿನವರು ಹೇಳುವುದು ಸುಳ್ಳಲ್ಲದಿದ್ದರೂ ಈ ಕೆಲವು ನಿಮಿಷಗಳ ಹಿಂದೆ ನಾವೆಲ್ಲ ಪೂರ್ತಿ ಮಾಡಿದ ಸೂತ್ರ ಯಜ್ಞವನ್ನು ಕುರಿತು ಹಾಗೆ ಮಾತಾಡುವುದೇ ? ಅದಕ್ಕೂ ದಳಗಳ ಪೈಪೋಟಿಗೂ ಸಂಬಂಧ ವೇನು ? ಅದೂ ಅಲ್ಲದೆ ಸದಾಶಿವನು ಇವರ ಸಮವಯಸ್ಕನಿರಬಹುದು. ಆದರೆ ನನ್ನ ಮುಂದೆ ಕೂತಿರುವಾಗ ಬೈಜ್‌ನಾಥ್ ಆಡಿದ ಮಾತು ನನಗೂ ನೋಯಿಸು ವಂಥದೇ ಅಲ್ಲವೆ ? ನಾನು ವಯಸ್ಸಿನಲ್ಲಿ ಹಿರಿಯ ಎಂಬ ಗೌರವ ಸಹ ಬೇಡವೆ ? ಅವನು ಆಡಿದ ಮಾತನ್ನು ಸದಾಶಿವನೂ ಸುಮ್ಮನೆ ಕೇಳಿಕೊಂಡು ಕೂತಿರುವ ಆಳಲ್ಲ. ತಕ್ಕ ಉತ್ತರ ಕೊಡದೇ ಬಿಡಲಿಲ್ಲ. "ಸುಮ್ಮನಿರೋ ಸಾಕು 'ಲಾಲ್ ದಾಸ್ಯೆಯ" ಗಾದ ಇದೆ ಕೇಳಿದ್ದೀಯಾ ? ಬ್ರಾಹ್ಮಣನಿಗೆ ಒಳ್ಳೇ ಊಟ ಹಾಕಿ, ಕ್ಷತ್ರಿಯ (ರಾಜಪೂತ್)ನಿಗೆ, ಬಾಬೂ ಸಾಹೇಬ್ ಎಂದು ಕರೆದು, ಕಾಯಸ್ಥನಿಗೆ ಹಣ ಕೊಟ್ಟು ಮತ್ತೆ ಬಾಕೀ ಜಾತಿಯವರಿಗೆ ಚೆನ್ನಾಗಿ ಒದೆಕೊಟ್ಟು ಯಾವ ಕೆಲಸವಾದರೂ ಮಾಡಿಸಿಕೊಳ್ಳ ಬಹುದು ಅಂತ. ಕೈ ಸ್ವಲ್ಪ ಬೆಚ್ಚಗೆ ಮಾಡಿದರೆ ಸಾಕು, ಈಗಲೇ ಪಾರ್ಟಿ ಬಿಟ್ಟು ಎದುರು ಪಾರ್ಟಿಗೆ ಸೇರುವುದಕ್ಕೆ ಸಿದ್ಧ. ನಿಮ್ಮ ಕಾಯಸ್ಥರ ಗುಣ ನನಗೆ ಗೊತ್ತಿಲ್ಲವೇ ಬಿಡು" ಎಂದುಬಿಟ್ಟ.

ಬೈಜ್‌ನಾಥನು ಕಾಯಸ್ಥ. ಮಿಥಿಲಾದ ಅನೇಕ ಕಾಯಸ್ಥರ ಹೆಸರ ಕೊನೆಯಲ್ಲಿ ಲಾಲ್ ಅಥವಾ ದಾಸ್ ಎಂದಿರುತ್ತದೆ. ಈ ಕಾರಣ, ಮಂದಿ ಅವರನ್ನು ಎಷ್ಟೋ ಸಲ "ಲಾಲ್ ದಾಸಿಯಾ" ಎಂದು ಕರೆಯುತ್ತಾರೆ. ಜಮೀನ್ದಾರರ ನಾಯಬ್ (ಮ್ಯಾನೇಜರ್) ಗುಮಾಸ್ತೆ, ಪಟ್ವಾರಿ (ಅಮೀನಾ) ಇಂಥ ಕೆಲಸಗಳೆಲ್ಲ ಈ ಜಾತಿಯವರಿಗೆ ಮೀಸಲು. ಈ ಕಾರಣದಿಂದಲೇ ಬಡರೈತರ ಬಳಿ ಇವರನ್ನು ಕುರಿತು ಗೌರವ ಕಡಮೆ. ಹೀಗಿರುವುದರಿಂದ "ಲಾಲ್ ದಾಸಿಯಾ" ಎಂಬ ಮಾತಿನ ಅರ್ಥ ಕೇವಲ ಒಂದು ಸ್ಥಾನೀಯವಾದ ಕಾಯಸ್ಥನೆಂದಲ್ಲ. ಇದರ ನಿಜವಾದ ಅರ್ಥ ಏನೆಂದರೆ ಹಣವೆಂದರೆ ಏನು ಮಾಡುವುದಕ್ಕೂ ತಯಾರಿರುವ, ಬಡರೈತರನ್ನು ತೊಂದರೆಗೊಳಿಸುವ ಮನೋವೃತ್ತಿಯುಳ್ಳ ಒಂದು ಪ್ರಾಣಿ.

ಸದಾಶಿವನ ಮಾತಿಗೆ ಬೈಜ್‌ನಾಥನು ಸುಮ್ಮನಿರದೆ, "ಆಹಾ, ಹಾಗಾ ? ನಿನಗೆ ಈ ಗಾದೆಯೂ ಗೊತ್ತಿರಬೇಕಲ್ಲ... ಕೇಳು. ಗೊಲ್ಲನ ಕಣ್ಣಿಗೆ ಬಿದ್ದ ಹುಲ್ಲು, ಬ್ರಾಹ್ಮಣನ ಕಣ್ಣು ಬಿದ್ದ ಮೊಸರು ಇವೆರಡರ ಭಾಗ್ಯವೂ ಒಂದೇ ನಮೂನೆಯದು" ಎಂದ.

ಸದಾಶಿವನು ಭೂಮಿಹಾರ್ ಬ್ರಾಹ್ಮಣ. ಅವನು ಜವಾಬು ಕೊಡುತ್ತ, "ಓ, ಅದನ್ನು ಒಪ್ಪಿಕೊಂಡೆ ನಾನು. ನೋಡಿದೆಯಲ್ಲ. ನಾನು ಕೊಟ್ಟ ಮೊಸರು ನಮ್ಮ ಮಾಸ್ಟರ್ ಬಾಬು ಕುಡಿದರು. ಕಾಯಸ್ಥರು ಹೇಳಿದ ಗಾದೆಯನ್ನು ಒಪ್ಪಿಕೊಳ್ಳಲಿಲ್ಲ ಅಂದರೆ ಮಾತು ಇನ್ನೆಲ್ಲಿಗೋ ಹೋಗಿಬಿಡುತ್ತದೆ" ಎನ್ನುತ್ತ ಸದಾಶಿವನು ಟೇಬಲ್ಲಿನಿಂದ ಕೆಳಗಿಳಿದು ಬೈಜ್‌ನಾಥನ ಹತ್ತಿರ ಹೋದ. ಇಬ್ಬರೂ ಒಬ್ಬರಿಗೊಬ್ಬರು ಸಣ್ಣದನಿಯಲ್ಲಿ ಏನೇನೋ ಹೇಳಿಕೊಳ್ಳತೊಡಗಿದರು. ಇವರಿಬ್ಬರಿಗೂ ಹಠತ್ತಾಗಿ ಯಾವುದೋ ಗುಟ್ಟಾದ ವಿಷಯ ಮನಸ್ಸಿಗೆ ಬಂದಿರಬೇಕು. ಇವತ್ತು ಬೈಜ್‌ನಾಥನ ದಳದ ಸದಸ್ಯ ಮುಂದಾಳಿನ ಸ್ಥಳದಲ್ಲಿರುವ ಒಬ್ಬ ಕಾಮ್ರೇಡನ ಫಾಸಿಯಾಗಿಲಿದೆ. ಆದರೂ ಇವರುಗಳ ಕಾರ್ಯ ಕಲಾಪದಲ್ಲಿ ಇತರ ದಿನಗಳಿಗಿಂತಲೂ ಬೇರೆಯಾದದ್ದೇನನ್ನೂ ಕಂಡಿಲ್ಲ ನಾನು. ಅದೇ ರೀತಿಯ ಪರದೆ ಮುಚ್ಚಿದ ಮಾರ್ಕ್ಸ್ ವಾದವನ್ನು ಕುರಿತ ವ್ಯಾಸಂಗಗೋಷ್ಠಿ, ಅದೇ ನಗು, ಕೇಕೆಗಳ ದನಿ, ಮಧ್ಯೆ ಮಧ್ಯೆ ವ್ಯಾಲ್ಯೂ, ಲೇಬರ್ ಪವರ್, ಸರ್‌ಪ್ಲಸ್ ವ್ಯಾಲ್ಯೂ*, ಮುಂತಾದ ಶಬ್ದಗಳ ಪ್ರಯೋಗ. ಇವೆಲ್ಲ ಇತರ ದಿನಗಳಂತೆಯೇ ಕಿವಿಯಲ್ಲಿ ಬಿದ್ದುವು. ನನ್ನ ಎಡಗಡೆ ಇರುವವರಲ್ಲೂ ನಾನು ಕಂಡ ವ್ಯವಹಾರ ಇತರ ದಿನಗಳಲ್ಲಿದ್ದ ಹಾಗೇ ಎಲ್ಲೂ ಯಾವ ಬಗೆಯ ಕೊರತೆಯೂ ಆಗಿಲ್ಲ. ಇಲ್ಲಿ, ಹಾಗೆ ಹೇಳುವ ಹಾಗಿಲ್ಲ. ಬಹುಶಃ ಎಲ್ಲರೂ ಯಾವುದೋ ಒಂದು ರೀತಿಯಲ್ಲಿ ಅನುಭವ ಮಾಡುತ್ತಿದ್ದಾರೆ. ಹಾಗಿಲ್ಲದೆ ಹೋದರೆ ದಾಸ್‌ಜೀ ಒಬ್ಬರನ್ನು ಬಿಟ್ಟು ಉಳಿದವರೆಲ್ಲ, ಪ್ರತಿಯೊಬ್ಬರೂ ಇವತ್ತೇಕೆ ಇನ್ನೂ ಎಚ್ಚರವಾಗಿಯೇ ಇರುವುದು. ಭೂಷಣ್‌ಜೀ, ಮತ್ತು ಬಿಷುನ್‌ದೇವಜೀ ಸೊಳ್ಳೆಪರದೆ ಹರಡಿ ಮಲಗಿದ್ದಾರೇನೋ ನಿಜ. ಆದರೆ ಇವರಿಬ್ಬರು ಪರಸ್ಪರ ಮಾತಾಡಿಕೊಳ್ಳುತ್ತಿರುವುದು ಸ್ವಲ್ಪ ಹೊತ್ತಿಗೆ ಮೊದಲು ಕಿವಿಗೆ ಬಿದ್ದಿತ್ತು. ಇವರು ನಿದ್ದೆ ಮಾಡಿಲ್ಲ. ಹಾಗೇ ಅನೇಕ ಮಂಚಗಳ ಸುತ್ತ ಸೊಳ್ಳೆ ಪರದೆ ಹಾಕಲಾಗಿದೆ - ಹೆಚ್ಚು ದೂರದವರೆಗೂ ಕಾಣುವುದಿಲ್ಲ. ಆದರೂ ಅವರೆಲ್ಲ ಮಾತಾಡಿಕೊಳ್ಳುತ್ತಿರುವ ಮರ್ಮರ ದನಿ ಕೇಳಬರುತ್ತಿದೆ. ಆಸ್ಕರ್ ವೈಲ್ಡ್‌ನ ಪ್ರಸಿದ್ಧ ಕವನದ ಬ್ಯಾಲಾಡ್ ಆಫ್ ರೀಡಿಂಗ್ ಜೈಲ್ ಖೈದಿಯೊಬ್ಬನು ಫಾಸಿಯಾಗುವ ರಾತ್ರಿಯನ್ನು ಕುರಿತಾದ ಕೆಲವು ಪಂಕ್ತಿಗಳು ನೆನಪಾಗುತ್ತಿವೆ.

"ಇಲ್ಲ, ಇನ್ನು ನಿದ್ದೆ ಹೋಯಿತು
ಎಂದೂ ಅಳದವರು ಅಳಬೇಕೀಗ
ಎಂದೇ ನಾವು, ನಾವೆಲ್ಲ - ಖಳ, ಮಂಕ,
ಮೋಸಗಾರ -ಎಡೆಬಿಡದೆ ಎಚ್ಚರಿದ್ದವರು
ಒಬ್ಬೊಬ್ಬನ ತಲೆಯೊಳಗೂ ನೋವಿಂದ
ನರಳುವ ಕೈಗಳ ಮೇಲೆ ತೆವಳಿ ತೆವಳಿ
ಹೊಕ್ಕಿದೆ ಬೇರೊಬ್ಬನ ಮೈನಡುಕ, ಭೀತಿ"

ಇದಕ್ಕೆ ಹೆಚ್ಚಾಗಿ ಜ್ಞಾಪಕ ಬರುವುದಿಲ್ಲ. ನನ್ನ ಶಾಲಾ ಮಾಸ್ತರಿ ಬಿಟ್ಟು ಎಷ್ಟು ದಿನಗಳಾದವೋ. ಇವಿಷ್ಟು ಪಂಕ್ತಿಗಳಾದರೂ ನೆನಪಿನಲ್ಲಿದೆಯಲ್ಲ ಅದೇ ಆಶ್ಚರ್ಯ.

---

*ಮಾರ್ಕ್ಸ್ ವಾದದಲ್ಲಿ ಪ್ರಚಲಿತವಾದ ಸಂಕೇತ ಪದಗಳು.

ಈಗ ನೆನಪಿಗೆ ತಂದುಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಆದರೆ ಈಗೆಲ್ಲಿ ಬಂದೀತು? ಆಮೇಲೆ ಯಾವಾಗಲೋ, ಬೇಡದೆ ಇರುವಾಗ ಯಾವ ಅಪ್ರಯೋಜಕ ಗಳಿಗೆಯಲ್ಲೋ ಅನಿರೀಕ್ಷಿತವಾಗಿ ಮನಸ್ಸಿಗೆ ಬರುತ್ತದೆ. ಇವರೆಲ್ಲ ಧಿಗಿಲಿನಿಂದ ಇನ್ನೂ ಎಚ್ಚರವಾಗಿರುವರೇನು? ಬಹುಶಃ ಸಹಾನುಭೂತಿಯಿಂದ ಇರಬೇಕು. ಇಲ್ಲ ಹೀಗೆ ಎಚ್ಚರವಾಗಿರುವುದು ಇಷ್ಟದಿಂದಲ್ಲ. ಪ್ರಯತ್ನಿಸಿದರೂ ಇವರಿಗೆ ನಿದ್ದೆ ಬರುವುದಿಲ್ಲ. ಅದಕ್ಕೆ ಮಾತುಕತೆ ಆಡುತ್ತ ಮನಸ್ಸಿನ ಭಾರವನ್ನು ಹಗುರ ಮಾಡಿಕೊಳ್ಳಬೇಕೆಂದೆನ್ನಿಸಿದೆ. ನನ್ನ ಮನಸ್ಸಾದರೋ ಶಾಂತವಾಗೇ ಇದೆ. ಬಹುಶಃ ನಾನು ಮಗನ ಮೇಲೆ ಎಷ್ಟು ಗಾಢ ಪ್ರೀತಿ ಇಟ್ಟಿರಬೇಕಾಗಿತ್ತೋ, ಅಷ್ಟು ಗಾಢವಾಗಿಟ್ಟಿಲ್ಲ. ಇಲ್ಲವಾಗಿದ್ದರೆ ಇನ್ನೂ ನನ್ನ ಮನಸ್ಸಿನಲ್ಲಿ ಏಕೆ ಯಾವ ತಳಮಳವೂ ಆಗಿಲ್ಲ? ಬೈಜ್‌ನಾಥನ ಮಂಚದ ಬಳಿ ಸದಾಶಿವನೂ ಅವನೂ ಕೆಲವು ಕುರ್ಚಿಗಳನ್ನು ತಂದಿಟ್ಟರು. ಈ ನಡುರಾತ್ರಿಯಲ್ಲಿ ಕುರ್ಚಿಗಳೇತಕ್ಕೆ ಬೇಕು? ಸದಾಶಿವನು ಆಮೇಲೆ ಬಂದು ನನ್ನ ಮಂಚದ ಬಳಿ ಕುಳಿತ. ನಾನು ಕೆಳಗಡೆ ಕಂಬಳಿಯ ಮೇಲೆ ಕೂತಿದ್ದೆ. ಬೈಜ್‌ನಾಥ್, ಲಕ್ಷ್ಮೀ ಚತುರ್ವೇದಿ, ರಾಮಪ್ರಕಾಶ ಮತ್ತು ಗಿರಿಧರ್ - ಇವರೆಲ್ಲ ಕುರ್ಚಿಗಳ ಮೇಲೆ ಕೂತರು. ಇವರೆಲ್ಲ ಇಡೀ ರಾತ್ರಿ ಜಾಗರಣ ಮಾಡುತ್ತಾರೇನು? ನಮ್ಮ ಬಿಲೂವಿಗೂ ರಾತ್ರಿಯೆಲ್ಲ ಎಚ್ಚರವಾಗಿರುವುದು ಅಭ್ಯಾಸ. ಬೇಡವೋ ಎಂದು ಎಷ್ಟು ಸಲ ಹೇಳಿದ್ದೇನೋ! ಕೇಳಬೇಕಲ್ಲ? ಈಗ ಏನು ಮಾಡುತ್ತ ಇರುತ್ತಾನೋ! ಬಹುಶಃ ಸೆಲ್ಲಿನೊಳಗೆ ಸುಮ್ಮನೆ ಅತ್ತಿಂದಿತ್ತ ಅಡ್ಡಾಡುತ್ತಿರುತ್ತಾನೆ - ಹುಚ್ಚನ ಹಾಗೆ. ಒಂದು ಸಲವಾದರೂ ಅಪ್ಪನ ನೆನಪು ಬಂದೀತೆ ಅವನಿಗೆ? ಧಿಗಿಲು ಬೀಳುವ ಹುಡುಗನಲ್ಲ ಅವನು ಎಂದಿಗೂ. ಆದರೆ ಅವನಿಗೆ ಚರಖಾ ತಿರುಗಿಸುವ ಅಭ್ಯಾಸವಿಲ್ಲ. ದೇವರಲ್ಲಿ ನಂಬಿಕೆಯೂ ಇಲ್ಲ. ಇವರೆಡರಲ್ಲಿ ಒಂದಾದರೂ ಇದ್ದಿದ್ದರೆ ಮನಸ್ಸಿಗೆ ಎಷ್ಟು ಬಲ ಬರುತ್ತಿತ್ತು! ನಮ್ಮ ಸ್ಕೂಲಿನ ಸಂಸ್ಕೃತ ಪಂಡಿತರು ಜೈಲಿನ ಧರ್ಮೋಪದೇಶಿ, ಪ್ರತಿ ಭಾನುವಾರ ಬಂದು ಜೈಲಿನ ಹಿಂದೂ ಖೈದಿಗಳಿಗೆ ಧರ್ಮೋಪದೇಶ ಮಾಡುತ್ತಾರೆ.

ನಾನು ಹೆಡ್‌ಮಾಸ್ಟರಾಗಿದ್ದಾಗಲೇ ಪಂಡಿತಜೀ ನೌಕರಿಗೆ ಸೇರಿಕೊಂಡಿದ್ದರು. ಅದೇ ನೆನಪಿನ ಮೇಲೆ ಅವತ್ತು ನನ್ನನ್ನು ನೋಡಲು ಬಂದಿದ್ದರು. ಬಿಲೂ ಅವರ ಶಿಷ್ಯ. ಅವರು ದುಃಖದಿಂದ ನನ್ನಲ್ಲಿ ಹೇಳಿಕೊಂಡರು. ಬಿಲೂ ಇದ್ದ ಸೆಲ್ಲಿಗೆ ಹೋಗಿದ್ದರಂತೆ. ತನಗೆ ಯಾವ ಧರ್ಮೋಪದೇಶವೂ ಬೇಕಾಗಿಲ್ಲ ಎಂದು ಅವನು ಹೇಳಿಬಿಟ್ಟನಂತೆ. ಆದರೆ ಪಂಡಿತಜೀ ಇದನ್ನೂ ಹೇಳಿದರು ಏನೆಂದರೆ, ಬಿಲೂ ಅವರನ್ನ ಕಂಡೊಡನೆ ಕಾಲುಮುಟ್ಟಿ ನಮಸ್ಕಾರ ಮಾಡುವುದನ್ನು ಮರೆಯಲಿಲ್ಲವಂತೆ. ಅವನು ಹೇಗೆ ಮರೆತಾನು? ಅಂಥ ಹುಡುಗನಲ್ಲ ಅವನು. ಆದರೆ ನಾನು ಕೇಳುವುದೊಂದು ಪ್ರಶ್ನೆ! ದೇವರಲ್ಲಿ ನಂಬಿಕೆ ಇಟ್ಟರೆ ಏನು, ನಿಜವಾದ ಸಮತಾವಾದಿಯಾಗಲು ಸಾಧ್ಯವಿಲ್ಲವೆ? ನಾನೆಷ್ಟು ಮಂದಿ ಕಾಪಿ ಬಟ್ಟೆಯವರನ್ನು ನೋಡಿದ್ದೇನೆ. ಅವರು ದಳಗಳಲ್ಲಿ ಕೆಲಸ ಮಾಡುತ್ತಾ ಇರುತ್ತಾರೆ. ಅವರೂ ಸಹ ದೇವರನ್ನು ನಂಬುವುದಿಲ್ಲವೆ? ಅವತ್ತು ಒಬ್ಬ ಅಸಿಸ್ಟೆಂಟ್ ಜೈಲರ್ ಕೈಯಲ್ಲಿ ಒಂದು ಪಾಕೆಟ್ ಗೀತಾ ಪುಸ್ತಕ ಕಳಿಸಿದ್ದೆ. ಆತ ತಿರುಗಿ ಬಂದು "ಅವನಿಗೆ ಈ ಪುಸ್ತಕ ಬೇಕಾಗಿಲ್ಲ

ಅಂತ ಹೇಳಿದ ನಿಮ್ಮ ಮಗ. ಬೇರೆ ಯಾವುದಾದರೂ ಪುಸ್ತಕ ಇದ್ದರೆ ಕಳಿಸಿಕೊಡು ಅಂದ" ಎಂದು ಹೇಳಿದ. ನನ್ನ ಹತ್ತಿರ ಬೇರೆ ಕೆಲವು ಪುಸ್ತಕಗಳೂ ಇದ್ದುವು. ಅವುಗಳನ್ನು ಬಿಲೂಗೆ ತೆಗೆದುಕೊಂಡುಹೋಗಿ ಕೊಡಿ ಎಂದು ಆತನನ್ನ ಕೇಳಿಕೊಂಡೆ. ಆದರೆ ಆತ, "ಧರ್ಮದ ಪುಸ್ತಕ ಕೊಡುವ ಅಧಿಕಾರ ನನಗಿದೆ. ಮೂರನೆಯ ಡಿವಿಜನ್, ಫಾಸಿ ಆಸಾಮಿಗೆ ಬೇರೆ ಯಾವ ಪುಸ್ತಕ ಕೊಡಬೇಕಾದರೂ ಸೂಪರಿಂಟೆಂಡೆಂಟರ ಹುಕುಂ ತೆಗೆದುಕೊಳ್ಳಬೇಕಾಗುತ್ತದೆ. ಸಾಹೇಬರು ಅಷ್ಟೇನೂ ಕಟ್ಟುನಿಟ್ಟಿಲ್ಲದವರು ಮತ್ತು ಒಳ್ಳೇ ಮನುಷ್ಯರು. ಅವರು ಗೊತ್ತೇ? ನಿಮ್ಮ ಮಗನನ್ನು ಏನಾದರೂ ಬೇಕಾಗಿದ್ದರೆ ಕೇಳು ಅಂತ ಕೇಳಿದರು ಸಹ. ಆದರೆ ಪ್ರಿಜನರ್ ತಾನಾಗೇ ಸಾಹೇಬರ ಮುಂದೆ ತನಗೆ ಏನೂ ಬೇಕಾಗಿಲ್ಲವೆಂದು ಹೇಳಿಬಿಟ್ಟ" ಎಂದು ವಿವರ ಕೊಟ್ಟ.

ಆಹಾ ಸರಿಯಾಗೇ ಹೇಳಿದ ನಮ್ಮ ಬಿಲೂ? ಅವನ ಕಡೆಯಿಂದ ಸರಿಯಾಗಿ ಈ ವಿಧವಾದ ಜವಾಬೇ ನಿರೀಕ್ಷಿಸಬೇಕಾದ್ದು. ಕಡೇ ಗಳಿಗೆಯವರೆಗೂ ತಲೆ ಮೇಲೆತ್ತಿಕೊಂಡೇ ಇರುವಂಥ ಮನುಷ್ಯ. ನನ್ನ ಹೆಸರಿಗೆ ಕೀರ್ತಿ ತರುವಂಥ ಹುಡುಗ. ಎಲ್ಲ ವಿಧವಾದ ಕೀಳುತನವನ್ನು ಕಾಲಲ್ಲಿ ಮೆಟ್ಟಿ, ಗೌರವೋಜ್ವಲ ಮುಖದ ಮೇಲೆ ಉದಾಸೀನದ ನಗೆ ತೋರುತ್ತ ಮಿಲಿಟರಿಸ್ಟ್ ಅಲ್ಲದ ನಮ್ಮ ಬಿಲೂ ಹಾಗೆ.... ಹಾಗೇ.... ಹೋಗಿಬಿಡುತ್ತಾನ!

ಮೊದಲನೆಯ ಮಹಾಯುದ್ಧ ಆದ ಮೇಲೆ ನೋಡಿದ ಒಂದು ವ್ಯಂಗ್ಯ ಚಿತ್ರ ನೆನಪಾಗುತ್ತದೆ. 'ಪಂಚ್' ಪತ್ರಿಕೆಯಲ್ಲಿ ಮುದ್ರಿತವಾಗಿತ್ತು. ಇಬ್ಬರು ಮುದಿ ಲಾರ್ಡುಗಳು ತಮ್ಮ ಸ್ಥೂಲವಾದ, ಕೊಬ್ಬಿನಿಂದ ತುಂಬಿದ ಶರೀರಗಳನ್ನು ಮೆತ್ತನೆಯ ಸೋಫಾಗಳ ಮೇಲೆ ಆರಾಮವಾಗಿ ಚಾಚಿಕೊಂಡು ಅರಿಸ್ಟೊಕ್ರಾಟಿಕ್ ಕ್ಲಬ್ಬಿನಲ್ಲಿ ಕೂತಿದ್ದಾರೆ. ಇಬ್ಬರ ಬಾಯಲ್ಲೂ ಚುರುಟ್, ಮೇಜಿನ ಮೇಲೆ ವ್ಹಿಸ್ಕಿ ಬಾಟಲ್ ಮತ್ತು ಎರಡು ವೈನ್ ಗ್ಲಾಸುಗಳು. ಇಬ್ಬರೂ ಮಾತಾಡುತ್ತ ಇದ್ದಾರೆ. ಒಬ್ಬರಾದ ಮೇಲೆ ಒಬ್ಬರು ಹೆಮ್ಮೆ ತೋರಿಸಿಕೊಳ್ಳುತ್ತಾರೆ - ಯಾರ ಮಕ್ಕಳಲ್ಲಿ ಹೆಚ್ಚು ಮಂದಿ ಯುದ್ಧದಲ್ಲಿ ಜೀವತೆತ್ತಿದ್ದಾರೆ ಎಂಬುದರಲ್ಲಿ ಅವರ ಪೈಪೋಟಿ. ಮಕ್ಕಳ ಸಾವಿಗಾಗಿ ಇಬ್ಬರಲ್ಲಿ ಯಾರಿಗೂ ವ್ಯಸನವಿಲ್ಲ. ಒಬ್ಬನ ಗರ್ವವನ್ನು ಇನ್ನೊಬ್ಬ ಮೆಟ್ಟಿ ನಿಲ್ಲುವ ಆತುರದಲ್ಲಿ ಮಕ್ಕಳ ಮರಣ ಒಂದು ದೊಡ್ಡದ? ಆದರೂ ಅವರ ಗರ್ವಕ್ಕೆ ಮೂಲ ಕಾರಣ ಈ ಮರಣ. ಆದರೆ ಈ ಸತ್ಯ ಅವರಿಗೆ ತೋರಿಸುವುದು ಹೇಗೆ? ಈಗ ನಾನು ಪಡುತ್ತಿರುವ ಹೆಮ್ಮೆಯೂ ಅದೇ ರೀತಿಯಾಗಿ ಹಾಸ್ಯಾಸ್ಪದ. ನನ್ನ ಮಗನ ಸಲುವಾಗಿ ನನ್ನ ಕರ್ತವ್ಯ ಸರಿಯಾಗಿ ಪಾಲಿಸದಿದ್ದರೂ ಸಹ ಅವನು ಮಾಡಿರುವ ಸ್ವಾರ್ಥ ತ್ಯಾಗದಲ್ಲಿನ ಕೀರ್ತಿಯಲ್ಲಿ ಭಾಗ ತೆಗೆದುಕೊಳ್ಳಲು ಆತುರ ತೋರಿಸುತ್ತಿದ್ದೇನೆ. ಅದಕ್ಕೆ ನನಗೆ ಸ್ವಲ್ಪವೂ ನಾಚಿಗೆಯಿಲ್ಲ. ನಾನು ಒಂದು ಪಕ್ಷ ಈ ದಾರಿಯಲ್ಲಿ ಇಳಿಯದೆ ಹೋಗಿದ್ದರೆ ಆಗ ನಮ್ಮ ಬಿಲೂಗ ಇಂದು ಈ ದಿಸೆ ಬರುತ್ತಿತ್ತ? ನನ್ನ ತಂದೆ ಸರ್ಕಾರಿ ನೌಕರಿ ಮಾಡುತ್ತಿದ್ದರು. ನಾನೂ ಸರ್ಕಾರಿ ನೌಕರಿಯೇ ಮಾಡಿದೆ. ಮಾಡಿಕೊಂಡು ಹೋಗುತ್ತಿದ್ದೆ. ನನ್ನ ಮಗನೂ ಬೇರೆಲ್ಲರ ಮಕ್ಕಳಂತೆ ಓದು ಬರೆಹ ಮುಗಿಸಿಕೊಂಡು ಹಣ ಸಂಪಾದನೆ ಮಾಡಿರುತ್ತಿದ್ದ.

ಹೆಂಡತಿ, ಮಕ್ಕಳೊಂದಿಗೆ ಲಕ್ಷಣವಾಗಿ ಸಂಸಾರ ಮಾಡಿಕೊಂಡಿರುತ್ತಿದ್ದ. ನಮ್ಮ ಕೇರಿಯ ಹಿರಿಯರಾದ ಮಿತ್ತಿರ್ ಮಹಾಶಯರು ಸರಿಯಾದ ಮಾತೇ ಹೇಳಿದ್ದರು. ಮದುವೆ ಮಾಡಿಕೊಂಡಮೇಲೆ, ಮಕ್ಕಳು ಮರಿ ಆದಮೇಲೆ, ಆಗ ಯಾವ ಮನುಷ್ಯನಿಗೂ ತನ್ನ ಇಷ್ಟಬಂದ ಹಾಗೆ ಜೀವನ ನಡೆಸುವ ಅಧಿಕಾರ ಇರುವುದಿಲ್ಲ. ಆಗ ಅವನ ಜೀವನದ ಮೇಲೆ ಅವನಿಗೆ ಇರುವುದಕ್ಕಿಂತ ಅವನನ್ನ ನಂಬಿಕೊಂಡಿರುವವರಿಗೆ ಹೆಚ್ಚು ಹಕ್ಕು ಹುಟ್ಟಿಕೊಳ್ಳುತ್ತದೆ. ನನ್ನ ಬಳಿಯಂತೂ ಹಣ ಇರಲಿಲ್ಲ. ಹಣ ಸಮೃದ್ಧಿಯಾಗಿ ಇರುವಂಥವರು ಇಂಥ ಸಂದರ್ಭ ಬಂದಲ್ಲಿ ಮೊದಲೇ ಹೆಂಡತಿ ಮಕ್ಕಳ ಪೋಷಣೆಗೆ ಸಾಕಷ್ಟು ವ್ಯವಸ್ಥೆ ಮಾಡಿಟ್ಟು ಕಾರ್ಯರಂಗಕ್ಕೆ ಇಳಿಯುವರು. ಆದರೆ ಹಾಗೆ ಮಾಡಿಬಿಟ್ಟರೆ ಮಾತ್ರ ಕರ್ತವ್ಯ ಪಾಲಿಸಿದ ಹಾಗೆ ಆಗಿಹೋಯಿತೇನು ? ನಿಜ, ಹೆಂಡತಿ ಮಕ್ಕಳಿಗೆ ಸಾಕಷ್ಟು ಆರಾಮವಾಗಿರುವ ಸೌಕರ್ಯ ಕಲ್ಪಿಸಿಕೊಟ್ಟಂತಾಯಿತು. ಆದರೆ ಆರಾಮವಾಗಿರುವುದೇ ಒಂದು ಗುರಿಯೇ ? ಗೃಹಸ್ಥ ಜೀವನದಲ್ಲಿ ಪರಸ್ಪರರಲ್ಲಿ ಒಂದು ಸವಿಯಾದ ಸಂಬಂಧ ಹುಟ್ಟಿಕೊಳ್ಳುತ್ತದಲ್ಲ, ಅದಕ್ಕೆ ಯಾವ ಬೆಲೆಯೂ ಇಲ್ಲವೇನು ? ರಾಜಭೋಗವನ್ನು ತೊರೆದು ಹೊರಟುಹೋದ ಎಂದು ಹೇಳಿ, ಸಿದ್ಧಾರ್ಥನು ಹೆಂಡತಿ, ಮಕ್ಕಳ ಒಳ್ಳೇ ಭವಿಷ್ಯವನ್ನೇ ಯೋಚನೆ ಮಾಡಿಹೋಗಿದ್ದನೆ ?

ಬಿಲೂಗೆ ಇಂಗ್ಲಿಷ್ ಕಾಲೇಜಿನಲ್ಲಿ ಓದುವುದಕ್ಕೆ ಆಸ್ಪದ ಕೊಡಲಿಲ್ಲ. ಅವರಮ್ಮನ ಒತ್ತಾಯದ ಮೇರೆಗೆ ಮೆಟ್ರಿಕ್ಯುಲೇಷನ್‌ವರೆಗೆ ಇಂಗ್ಲಿಷ್ ಹೈಸ್ಕೂಲಿನಲ್ಲಿ ಓದಿಸಿದೆ. ಒಂದು ಪಕ್ಷ ನನ್ನ ಇಷ್ಟದಂತೆಯೇ ನಡೆದಿದ್ದಲ್ಲಿ, ಅವನು ಇಷ್ಟುಮಟ್ಟಿಗೆ ಸಹ ಇಂಗ್ಲಿಷ್ ಶಾಲೆಯಲ್ಲಿ ಓದುತ್ತಿರಲಿಲ್ಲ. ಅವನನ್ನು ಬಿಹಾರ್ ವಿದ್ಯಾಪೀಠಕ್ಕೆ ಕಳಿಸಬೇಕೆಂದೇ ನನ್ನ ಇಷ್ಟ ಇದ್ದದ್ದು. ಅವನನ್ನು ಇಂಗ್ಲಿಷ್ ಸ್ಕೂಲಿನಲ್ಲಿ ಓದುವ ಹಾಗೆ ಬಿಟ್ಟಿದ್ದಕ್ಕೆ ಆಶ್ರಮದ ನನ್ನ ಸಹಕರ್ಮಿಗಳು ಏನೇನು ಟೀಕೆ ಮಾಡಿದರೋ! ಗಾಂಧೀಜಿ ಒಮ್ಮೆ ನಮ್ಮ ಆಶ್ರಮಕ್ಕೆ ಬಂದಿದ್ದಾಗ ಈ ಮಾತು ಅವರ ಕಿವಿಗೂ ಬಿದ್ದಿತ್ತು. ಆ ವಿಷಯ ಹೇಳಿದವರು ಶ್ರೀ ಜೈಸ್ವಾಲ್ ಅವರ ಸೋದರಿ. ಸ್ವಲ್ಪ ಹುಚ್ಚು ಸ್ವಭಾವ ಆಕೆಗೆ. ಆದರೂ ನನಗೆ ಗೊತ್ತು. ಈ ಮಾತನ್ನ ಆಕೆ ತಾನಾಗೇ ಉದ್ದೇಶಿಸಿ ಹೇಳಿದ್ದಲ್ಲ. ಬೇರೆಯವರ ಸಲಹೆ ಮೇಲೆ ಹೇಳಿರಬೇಕು. ಗಾಂಧೀಜೀ ಆ ಸಮಯದಲ್ಲಿ ಈ ವಿಷಯವಾಗಿ ಏನೂ ಹೇಳಲಿಲ್ಲ. "ಇಷ್ಟು ದೊಡ್ಡ ದೇಶದಲ್ಲಿ ಎಲ್ಲಾ ವಿಧವಾದ ಹುಡುಗರೂ ಇರುತ್ತಾರೆ. ನನ್ನ ಮಕ್ಕಳೂ ಸಹ ನನ್ನ ವಿಷಯವಾಗಿ ದೂರುತ್ತಾರೆ" ಎಂದು ಇಷ್ಟು ಮಾತ್ರ ಹೇಳಿ ನಗುತ್ತ ಮಾತನ್ನು ಹಾರಿಸಿಬಿಟ್ಟರು.

ಆದರೂ ನಾಚಿಕೆಯಿಂದ ನಾನು ತಲೆ ತಗ್ಗಿಸುವಂತಾಯಿತು ಮತ್ತು ಈ ವಿಮರ್ಶೆಯ ತೀವ್ರತೆಯನ್ನು ಬಿಲೂ, ಅವನ ತಾಯಿ ಚೆನ್ನಾಗಿ ಅನುಭವ ಮಾಡಿದ್ದರು. ಆ ಕಾರಣದಿಂದಲೇ ನನ್ನ ಹೆಂಡತಿ ಮಗನ ಮೆಟ್ರಿಕ್ಯುಲೇಷನ್ ಪರೀಕ್ಷೆ ಆದೊಡನೆ ಅವನನ್ನು ಇಂಗ್ಲಿಷ್ ಕಾಲೇಜಿಗೆ ಸೇರಿಸುವ ಬದಲು ಕಾಶೀ ವಿದ್ಯಾಪೀಠಕ್ಕೆ ಕಳಿಸುವುದು ಒಳ್ಳೆಯದೆಂದು ತೀರ್ಮಾನ ಮಾಡಿದಳು. ಬಿಲೂ ಸಹ ಅದನ್ನು ಒಪ್ಪಿಕೊಂಡ. ಇಂಗ್ಲಿಷ್ ಕಾಲೇಜಿನಲ್ಲಿ ಏನು ಕಲಿಸುತ್ತಾರೋ ಕಾಶೀ ವಿದ್ಯಾಪೀಠದಲ್ಲಿ ಅದಕ್ಕಿಂದ ಕಡಮೆ ಕಲಿತಿದ್ದಾನೇನು ? ನಮ್ಮ ನೀಲೂ ಬಿ.ಎ. ಪಾಸು ಮಾಡಿದ್ದಾನೆ.

ಅವನು ಹಾಗಾದರೆ ಯಾವ ವಿಷಯದಲ್ಲಾದರೂ ಬಿಲೂಗಿಂತಲೂ ಹೆಚ್ಚಾಗಿ ತಿಳಿದುಕೊಂಡಿದ್ದಾನೆಯೆ? ಬಿಲೂ ಸೇರಿರುವ ದಳದ ಹೆಚ್ಚು ಮಂದಿ ಸದಸ್ಯರು ಎಲ್ಲರೂ ಬಿ.ಎ., ಎಂ.ಎ ಪಾಸ್ ಮಾಡಿರುವ ಹುಡುಗರೇ, ಅಷ್ಟಾದರೂ ಅವರೆಲ್ಲ ಏಕೆ ನಮ್ಮ ಬಿಲೂ ಬಳಿ ಪಾಠ ಹೇಳಿಸಿಕೊಳ್ಳಲು ಬರುತ್ತಾರೆ? ಇಷ್ಟೆಲ್ಲ ಇದ್ದರೂ ಸಹ ಸಾಧಾರಣ ಜನರು ಈ ವಿದ್ಯಾಪೀಠದ "ಶಾಸ್ತ್ರಿ" ಪದವಿಯನ್ನು ಉದಾಸೀನದಿಂದ ಕಾಣುತ್ತಾರೆಂಬ ವಿಷಯ ಚೆನ್ನಾಗಿ ಅನುಭವದಲ್ಲಿ ಕಾಣುತ್ತದೆ. ಬಿಲೂ ಈ ಪರೀಕ್ಷೆಯಲ್ಲಿ ತೇರ್ಗಡೆಯಾದನೆಂಬ ಸುದ್ದಿ ಬಂದೊಡನ ನಾನು ಆ ಕಾಗದ ತೆಗೆದುಕೊಂಡು ಅವರಮ್ಮನಿಗೆ ತಿಳಿಸೋಣವೆಂದು ಮನೆಯೊಳಗೆ ಹೋದೆ. ಅವಳನ್ನ ನೋಡಿದೊಡನೆ ನಾನು, "ಇವತ್ತಿನಿಂದ ನಮ್ಮ ಬಿಲೂ ಹೆಸರು ಏನು ಗೊತ್ತೇ.... ಪೂರ್ಣ ಚಂದ್ರ ಶಾಸ್ತ್ರಿ!" ಎಂದೆ. ಈ ಮಾತಿನಿಂದ ಅವಳು ಹಿಗ್ಗಿ ಹೋಗುತ್ತಾಳೆ ಎಂದು ಕೊಂಡಿದ್ದೆ. ಆದರೆ ನಾನು ಕಂಡ ಹಾಗೆ ಅವಳ ಮುಖದಲ್ಲಿ ಯಾವ ಬಗೆಯಾದ ಉತ್ಸಾಹವೂ ತೋರಲಿಲ್ಲ. ನನ್ನ ಮಾತಿಗೆ ಉತ್ತರವೇ ಕೊಡಲಿಲ್ಲ. ತಲೆ ತಗ್ಗಿಸಿಕೊಂಡು ಒಂದೇ ಗಮನದಿಂದ ಸಂಡಿಗೆ ಇಡುತ್ತ ಹೋದಳು. ಇದಾದ ಮೇಲೂ ನಾನು ಎಷ್ಟೋ ಸಲ ನೋಡಿದ್ದೇನೆ. ವಿದ್ಯಾಭ್ಯಾಸದ ವಿಷಯವೇನಾದರೂ ಎತ್ತಿದರೆ ನನ್ನ ಹೆಂಡತಿ ಮಾತನ್ನು ಮರೆಸುವುದಕ್ಕೆ ಪ್ರಯತ್ನಿಸುತ್ತಾಳೆ. ಇವೆಲ್ಲ ಕಾರಣಗಳಿಂದ ಬಿಲೂ ಮನಸ್ಸಿನಲ್ಲಿ ಕೀಳ್ತನದ ಮನೋವಿಕಾರ ಹುಟ್ಟಿಕೊಂಡು ಬಿಟ್ಟಿದೆ. ಅವನ ಅಮ್ಮನೂ ಮನಸ್ಸಿನಲ್ಲೇ ಬಿಲೂಗೆ ಉಚ್ಚ ವಿದ್ಯಾಭ್ಯಾಸ ಆಗಿಲ್ಲವೆಂದೇ ಅಂದುಕೊಳ್ಳುತ್ತಾರೆ. ಹಾಗಾಗಿರುವುದು ಹುಡುಗನ ತಪ್ಪಿನಿಂದ ಅಲ್ಲ, ಯಾವುದೋ ಪಿತೂರಿಗೆ ಬಲಿಯಾಗಿ ಎಂದೂ ಮತ್ತು ಮುಖ್ಯವಾಗಿ ನನ್ನ ತಪ್ಪಿನಿಂದಲೇ... ಎಂದೂ ಅವಳ ಎಣಿಕೆ. ಸತ್ಯವಾಗಿಯೂ ಬಿಲೂ ಅಂಥ ಬುದ್ಧಿವಂತ ಹುಡುಗನಿಗೆ ಸೌಕರ್ಯ ಮತ್ತು ಸುಯೋಗ ದೊರಕಿದ್ದರೆ ಆಗ ಖಂಡಿತವಾಗೂ ದೊಡ್ಡ ಪ್ರೊಫೆಸರೋ, ವಿಜ್ಞಾನಿಯೋ ಆಗಿಬಿಡುತ್ತಿದ್ದ. ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳಿಂದ ಅವನಿಗೆ ಇಡೀ ಲೋಕದಲ್ಲಿ ಹೆಸರು ಬರುತ್ತಿತ್ತು. ಆದರೇನು? ನಾನು ಅವನನ್ನು ಎಂಥ ಪರಿಸರದಲ್ಲಿ ತಂದು ಸೇರಿಸಿದ್ದೇನೆಂದರೆ ಅಲ್ಲಿಂದ ಜೈಲಿನೊಳಗ ಬಂದರೂ ವಿಶ್ರಾಂತಿ ನೆಮ್ಮದಿ ಮತ್ತು ಮನಶ್ಶಾಂತಿ ಪಡೆಯಬಹುದು. ಅವನು ಬೆಳೆದು ದೊಡ್ಡವನಾಗಿರುವ ವಾತಾವರಣದಲ್ಲಿ ಫಾಸಿ ಶಿಕ್ಷೆಯಂತಹ ಭಯಂಕರ ಶಿಕ್ಷೆ ಸಹ ಎಷ್ಟೋ ಸಾಮಾನ್ಯ ದುರ್ಘಟನೆಗಳಲ್ಲಿ ಒಂದು ಅಷ್ಟೇ! ಆದರೆ ಬಿಲೂ ಮೂರ್ಖನಲ್ಲ. ಅವನಿಗೆ ತನ್ನ ಒಳ್ಳೆಯದು-ಕೆಟ್ಟದು, ಸರಿ-ತಪ್ಪುಗಳು ಯಾವುವು ಎಂಬುದನ್ನು ತಿಳಿದುಕೊಳ್ಳಲು ಬೇಕಾದಷ್ಟು ಬುದ್ಧಿಯಿದೆ. ದೊಡ್ಡವನಾದ ಮೇಲೆ ತನಗೆ ಇಷ್ಟವಾದ ದಾರಿಯನ್ನೇ ಆರಿಸಿಕೊಂಡು ಅದರಲ್ಲಿ ಹೆಜ್ಜೆ ಇಟ್ಟಿದ್ದಾನೆ. ಇದಲ್ಲದೆ ಬೇರೆ ಏನು ತಾನೇ ಮಾಡಬಲ್ಲವನಾಗಿದ್ದ?

ಇದ್ದಕ್ಕಿದ್ದ ಹಾಗೆ ಬೆಚ್ಚಿಬಿದ್ದೆ. ಯಾರು ಇಷ್ಟು ಹೊತ್ತಿನಲ್ಲಿ ಇಷ್ಟು ಜೋರಾಗಿ ಶಬ್ದ ಮಾಡುತ್ತ ಬಾಗಿಲನ್ನು ತಳ್ಳುವುದು? ಬಾಗಿಲು ಮುಚ್ಚಿದೆಯೋ ಇಲ್ಲವೋ ನೋಡುವುದಕ್ಕೆ ಇಷ್ಟು ಜೋರಾಗಿ ಅದರ ಮೇಲೆ ಹೊಡೆಯಬೇಕೆ? ಈ ಶಬ್ದ ಕೇಳಿ ಪಕ್ಕದ ಮಂಚದಲ್ಲಿದ್ದ ಒಬ್ಬರು, "ಹ್ಹಾ.... ಮುರಿದು ಹಾಕು

ಮುರಿದುಹಾಕಿಬಿಡು!" ಎಂದು ಕೂಗಿದರು. ಇನ್ಯಾರೋ ಒಬ್ಬರು ಸೊಳ್ಳೇ ಪರದೆಯ ಒಳಗಡಯಿಂದಲೇ "ಹಾಗೆ ಮಾಡಿದರೆ ಸದ್ಯ ಬದುಕಿದ ಹಾಗೆ" ಎಂದರು.

ನಡುರಾತ್ರಿ ಒಂದು ಗಂಟೆಗೆ ಬರುವ ವಾರ್ಡರು ಈಗ ತಾನೇ ಬಂದಿದ್ದಾನೆ. ಹಾಗಾದರೆ ಅದಕ್ಕೇ ಈ ಶಬ್ದ. ಈ ವಾರ್ಡರು ಒಳಗೆ ಬಂದದ್ದೇ ನನ್ನನ್ನು ಮೊದಲು ನೋಡಿದ. ದೊಡ್ಡ ದೊಡ್ಡ ನರೆತ ಮೀಸೆ. ಅಂದವಾಗಿರುವ ಮುಖ. ನೋಡಿದೊಡನೆ ನನ್ನ ಬಳಿ ಬಂದು ಕೈ ಜೋಡಿಸಿ ನಮಸ್ಕಾರ ಮಾಡಿದ. ಆಮೇಲೆ ನನ್ನ ಮಂಚದ ಬಳಿ ನಾಲ್ಕು ಜನ ಬೈಜ್‌ನಾಥ ಮತ್ತು ಇತರರು ಕೂತಿದ್ದರಲ್ಲ, ಅವರ ಕಡೆ ತಿರುಗಿ "ನಮಸ್ತೆ. ಬಾಬೂ ಸಾಹೇಬ್ ಲೋಗ್ ಮಜೇಸೆ ಹೈ ನಾ ?" ಎಂದು ಮುಗುಳ್ನಗೆ ನಗುತ್ತ ಕೇಳಿದ.

ಲಕ್ಷ್ಮೀ ಚತುರ್ವೇದಿಯು, "ಅರೇ, ಸಿಂಗ್‌ಜೀ ಅಲ್ಲವಾ ? ಎಷ್ಟು ದಿನಗಳಾದ ಮೇಲೆ ನಿಮ್ಮನ್ನ ಇಲ್ಲಿ ಡ್ಯೂಟಿ ಮೇಲೆ ನೋಡತಾಯಿದ್ದೇವೆ. ಸಮಾಚಾರವೇನು ?" ಎಂದ.

"ಏನಿಲ್ಲ... ಒಂದು ವಾರ ಮಾತ್ರ ರಜೆ ಮೇಲೆ ಊರ ಕಡೆ ಹೋಗಿಬಿಟ್ಟು ಬಂದೆ. ನಿನ್ನೆ ರಾತ್ರಿ ಡ್ಯೂಟಿ ಜಾಯಿನ್ ಆದೆ. ಯುದ್ಧದ ಸಮಾಚಾರ ಏನು ?"

"ನಾವು ಹೇಳಬೇಕಾ ಸಮಾಚಾರ ನಿಮಗೆ ? ಅರೇ, ನಾವು ಜೈಲಿನಲ್ಲಿರೋವರು. ನೀವು ಯಾವಾಗ ನಮಗೆ ಹೊರಗಡೆಯ ಸಮಾಚಾರ ಕೊಡತೀರಿ ಅಂತ ಇದ್ದರೆ ಅದಿಲ್ಲ, ಸಮಾಚಾರ ಏನು ಅಂತ ನಮ್ಮನ್ನೇ ಕೇಳತೀರಲ್ಲ, ಚೆನ್ನಾಯಿತು."

"ಹುಜೂರರು ಇಂಗ್ಲಿಷ್ ಪೇಪರು ಓದುತ್ತೀರಿ. ಅದಕ್ಕೆ ಕೇಳಿದೆ" ಎಂದು ನಕ್ಕು ಆಮೇಲೆ ವಾರ್ಡರು ಸಾಹೇಬನು ಯುದ್ಧದ ಸಮಾಚಾರ, ಷಹರಿನದು, ತನ್ನ ಸ್ವಂತ ಊರಿನದು, ಮಹಾತ್ಮಾ ಗಾಂಧೀಜಿಯವರದು ಎಲ್ಲಾ ಅವತ್ತಿನವರೆಗೆ ನಡದ ಸಮಾಚಾರ ಅಲ್ಲದೆ ಇನ್ನೂ ಚಿತ್ರವಿಚಿತ್ರವಾದ ಸುದ್ದಿಗಳು - ಎಷ್ಟು ನರಿಗಳೂ, ಗೃಧ್ರಗಳೂ ಲಾರಿಗಳ ತುಂಬ ಯುದ್ಧ ಕ್ಷೇತ್ರಕ್ಕೆ ಕೊಂಡೊಯ್ಯಲ್ಪಡುತ್ತಿವೆ, ಮಹಾತ್ಮಾಜಿ ಉಪವಾಸ ವ್ರತ ಶುರು ಮಾಡಿದ ದಿನವೇ, ಏಕೋ ಏನೋ ಲಾಟ್ ಸಾಹೇಬರ ಬಂಗಲೆಯ ಛಾವಣಿಯೇ ಕುಸಿದು ಬಿದ್ದುಹೋಗಿದ್ದದ್ದು, ಮಹಾತ್ಮಾಜಿಯವರೊಂದಿಗೆ ಘರ್ಷಣ ಮಾಡಲು ಹೋಗಿ ಹಿಂದೆ ರಾಜಕೋಟೆಯ ದಿವಾನನಿಗೆ ಕಡೆಗೆ ಏನಾಗಿತ್ತು ಇನ್ನೂ ಏನೇನೋ ಸುದ್ದಿಗಳನ್ನೆಲ್ಲ ಹೇಳಿ ಮುಗಿಸಿದ. ಈ ಸುದ್ದಿಗಳನ್ನೆಲ್ಲ ನಮಗೆ ಯಾವಾಗ ಹೇಳೇನು ಎಂದು ಎಷ್ಟು ಆತುರವಾಗಿದ್ದನೋ ಎನ್ನಿಸುತ್ತಿತ್ತು. ಅವನು ಮೊದಲು ನಮ್ಮನ್ನ ನೋಡಿದೊಡನೆ ಮಾಡಿದ ಪ್ರಶ್ನೆಗಳು ಕೇವಲ ಇವಕ್ಕೆ ಪೀಠಿಕೆಯಾಗಿ ಮಾತ್ರ. ಇದಾದ ಮೇಲೆ ಅವನು ಬೈಜ್‌ನಾಥ್ ಮತ್ತು ಅವನ ಸಂಗಡಿಗರು ಕೂತಿರುವ ಜಾಗದ ಬಳಿ ಕಿಟಕಿ ಇದೆಯಲ್ಲ. ಅದರ ಆಚೆ ಬದಿಯಲ್ಲಿರುವ ವರಾಂಡದ ಮೇಲೆ ಕೂಡುತ್ತಾನೆ. ಇನ್ನೂ ಚೆನ್ನಾಗಿ ಹರಟೆ ಹೊಡೆಯುವ ಉದ್ದೇಶ್ಯದಿಂದ. ಬೇರೆ ದಿನ ನೈಟ್ ಡ್ಯೂಟಿ ಮಾಡುವಾಗ ಸಮಯ ಕಳೆಯುವುದೇ ಕಷ್ಟ ಅವನಿಗೆ. ಕೂತು ತೂಕಡಿಸುತ್ತ, ಮತ್ತೆ ತತ್‌ಕ್ಷಣ ಎಚ್ಚತ್ತು ಪಹರೆಯುವರನ್ನು ಎಚ್ಚರಗೊಳಿಸುತ್ತ ಸುಮ್ಮನೆ ಅತ್ತಿಂದಿತ್ತ ಅಡ್ಡಾಡುತ್ತ ಹೇಗೋ ಕಾಲಕಳೆಯೋಣವೆಂದರೂ ಎರಡು ಗಂಟೆ ಹೊತ್ತು ಕಳೆಯುವುದೇ ಕಷ್ಟವಾಗಿ

ಹೋಗುತ್ತದೆ. ಆದರೆ ಬೈಜ್‌ನಾಥ್ ಮತ್ತು ಅವನ ಸಂಗಡಿಗರಿಗೆ ಈ ವಾರ್ಡರು ತಮ್ಮ ಮಾತು ಕೇಳುತ್ತ ಅಲ್ಲಿ ಕೂತಿರುವುದು ಅಷ್ಟಾಗಿ ಹಿಡಿಸುವುದಿಲ್ಲ.

ಆಗ ಬೈಜ್‌ನಾಥನು ಅವನನ್ನ ತಮಾಷೆ ಮಾಡುತ್ತಾ, "ಸಿಂಗ್‌ಜೀ, ನೀವುಗಳು ದ್ವಾಪರಯುಗದಲ್ಲಿ ನಮ್ಮ ಕಿಷನ್‌ಜೀ (ಕೃಷ್ಣ) ಯ ತಾಯಿಯನ್ನೂ, ಕಿಷನ್‌ಜೀಯನ್ನೂ ಜೈಲಿನಲ್ಲಿ ಕೂಡಿ ಹಾಕಿದ್ದಿರಿ. ಈ ಯುಗದಲ್ಲಿ ಮಹಾತ್ಮಾ ಗಾಂಧಿಯನ್ನೂ ಅವರ ಶಿಷ್ಯರನ್ನೂ, ಜೈಲಲ್ಲಿ ಹಾಕಿದ್ದೀರಿ." ಎಂದಾಗ ವಾರ್ಡರೂ ನಗುತ್ತ, "ಏನು ಮಾಡುವುದು ಬಾಬೂಜಿ, ಕರ್ಮ... ಕರ್ಮದ ಲೀಲೆಯನ್ನು ಯಾರಿಗೆ ಮುರಿಯಲಿಕ್ಕೆ ಸಾಧ್ಯ ಹೇಳಿ - ಆದರೆ ಕಿಷನ್‌ಜೀ ಎಷ್ಟು ದಿನ ಇಡಲಿಕ್ಕೆ ಸಾಧ್ಯ ಆಯಿತು? ಸ್ವಲ್ಪೇ ದಿನ. ಆದರೆ ತಾವೆಲ್ಲ ಇನ್ನೂ ಎಷ್ಟು ದಿನ ಇರಬೇಕಾಗತದೋ ಜೈಲಲ್ಲಿ, ಅದನ್ನ ಯಾರಿಗೆ ಹೇಳಲಿಕ್ಕಾಗತದೆ... ಈ ಹಾಳು ಯುದ್ಧವೂ ನಿಲ್ಲೋದಿಲ್ಲ ಅಂತಾ ಇದೆ ಏನು ಮಾಡೋದು!" ಎಂದು ಉತ್ತರ ಕೊಟ್ಟ.

ಬೈಜ್‌ನಾಥನ ದಳದವರು 'ಹೋ ಹೋ' ಎಂದು ದೊಡ್ಡದಾಗಿ ನಗತೊಡಗಿದರು. ಸಿಂಗಜೀಯನ್ನು ಅವರು ಮರುಳು ಮಾಡಿದ್ದರು. ಏಕೆಂದರೆ ಸಿಂಗಜೀ ಯಾವಾಗಲೂ ಬೋಲೋ ಸೀತಾರಾಮ್ ಎನ್ನುತ್ತಿದ್ದ. ರಾಮಭಕ್ತ ಅವನು. ಇವರೆಲ್ಲ ಅವನ ಮುಂದೆ "ಜೈ ರಾಧಾಕಿಷನ್" ಎಂದು ಕೂಗಿ ರೇಗಿಸುತ್ತಿದ್ದರು. ಇವತ್ತು ಅವನೇ ತಿಳಿಯದೆಯೇ ತನ್ನ ಬಾಯಲ್ಲಿ 'ಕಿಷನ್‌ಜೀ' ಶಬ್ದವನ್ನು ಉಚ್ಚರಿಸಿಬಿಟ್ಟಿದ್ದ. ಅವರು ನಕ್ಕೊಡನೆ ಅವನಿಗೆ ಗೊತ್ತಾಗಿ ನಾಚುತ್ತ ತಾನೂ ಗಟ್ಟಿಯಾಗಿ ನಕ್ಕು ಎರಡು ಕೈಯಲ್ಲೂ ಒಮ್ಮೆ ಚಪ್ಪಾಳೆ ತಟ್ಟಿ ಅಲ್ಲಿಂದ ಓಡಿಹೋದ. ಬೈಜ್‌ನಾಥನ ಕಡೆಯವರು "ಶುನೋ ಸಿಂಗ್‌ಜೀ ಶುನೋ" ಎಂದು ಕೂಗಿದರು. "ನಮ್ಮನ್ನೆಲ್ಲ ಯಾವಾಗ ಬಿಡುಗಡೆ ಮಾಡತಾರೆ ಅನ್ನೋ ಸುದ್ದೀ?" ಎಂದು ಅವರು ಎಷ್ಟು ಕೂಗಿದರೂ ಕೇಳಿಸಿಕೊಳ್ಳುವವರು ಯಾರು? ಸಿಂಗ್‌ಜೀ ಅಷ್ಟು ಹೊತ್ತಿಗೆ ವಾರ್ಡಿನ ಆಚೆ ಬದಿಗೆ ಹೊರಟುಹೋಗಿದ್ದ. ಕಾಮ್ರೇಡ್ ಗಿರಿಧರ್ ಸಲಾಕೆಯ ನಡುವಣಿಂದ ಕೈಚಾಚಿ ವಾರ್ಡರನು ಅಲ್ಲಿ ಬಿಟ್ಟುಹೋಗಿದ್ದ ಲಾಟೀನನ್ನು ಎಳೆದುಕೊಂಡು ಅದರಲ್ಲಿನ ಸೀಮೆಎಣ್ಣೆಯನ್ನು ಚಹಾ ಕಪ್ಪಿನಲ್ಲಿ ಸುರಿದುಕೊಂಡು ಒಂದು ಕಡೆ ಇಟ್ಟ. ಆಮೇಲೆ ಲಾಟೀನನ್ನು ಅಲ್ಲೇ ಇರಿಸಿ ಕಪ್ಪನ್ನು ಒಳಗಡೆ ತಂದು ತನ್ನ ಲಾಟೀನಿನೊಳಗೆ ಸೀಮೆಎಣ್ಣೆ ಸುರಿದುಕೊಂಡ. ಈ ಯುದ್ಧದ ಸಮಯದಲ್ಲಿ ಸೀಮೆಎಣ್ಣೆಯ ಅಭಾವ ಹೆಚ್ಚು. ಇವರೆಲ್ಲ ಬಿಡುಗಡೆ ಸುದ್ದಿಯನ್ನು ಚರ್ಚಿಸುತ್ತಿದ್ದಾರೆ. ಇಂಡಿಯಾ ಸರ್ಕಾರದ ಹೋಮ್ ಮೆಂಬರು ಯಾವ ಸ್ಟೇಟ್‌ಮೆಂಟು ಕೊಟ್ಟಿದ್ದಾನೆ, ಪಾರ್ಲಿಮೆಂಟಿನಲ್ಲಿ ಅಮೆರಿ (ಆಗಿನ ಬ್ರಿಟಿಷ್ ಸರ್ಕಾರದಲ್ಲಿ ಇಂಡಿಯಾ ಸಂಬಂಧವಾಗಿ ಸೆಕ್ರೆಟರಿ ಆಫ್ ಸ್ಟೇಟ್) ಏನು ಹೇಳಿಕೆ ಕೊಟ್ಟಿದ್ದಾನೆ, ಯಾವ ಯಾವ ಕಾಂಗ್ರೆಸ್ ಸದಸ್ಯರನ್ನು ಈಗಾಗಲೇ ಬಿಡುಗಡೆ ಮಾಡಿ ಆಗಿದೆ, ಇದೇ ವಿಚಾರಗಳ ಮೇಲೆ ಅವರೆಲ್ಲ ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತ ಗವರ್ನ್‌ಮೆಂಟಿನ ಕಾರ್ಯನೀತಿ ಬದಲಾವಣೆಯಾಗಿದೆಯೋ ಇಲ್ಲವೇ ಎಂಬುದನ್ನು ಕುರಿತು ವಾದ ವಿವಾದಗಳನ್ನು ಮಾಡುತ್ತ ಇದ್ದಾರೆ. ಜೈಲಿನೊಳಗಡೆ ಬಂದು ಏನೋ ಒಂದು ಬಗೆಯ ತೊಡಕಿನಿಂದ

ಪರಿಹಾರ ಹೊಂದಿದ ಹಾಗೆ ಹಾಯಾಗಿ ಉಸಿರು ಬಿಡುತ್ತಿದ್ದರು. ಆದರೆ ಕೆಲವೇ ದಿನಗಳಲ್ಲಿ ಜೈಲಿನ ಒಂದೇ ಸಮನಾದ ಜಡಬಾಳು ಬೇಸರ ತರತೊಡಗಿತು. ಆಮೇಲಿಂದ ಶುರುವಾಗುತ್ತದೆ ಹಗಲು ರಾತ್ರಿ ಯಾವತ್ತು ಬಿಡುಗಡೆ ಆದೀತು, ಯಾವತ್ತು ಬಿಡುಗಡೆ ಆದೀತು ಎಂಬ ಯೋಚನೆ - ಮಾತು ಚರ್ಚೆ ಎಲ್ಲಾ. ವೃತ್ತ ಪತ್ರಿಕೆಗಳಿಂದ ಅವರವರ ಅಭಿಪ್ರಾಯ, ನಂಬಿಕೆಗಳಿಗೆ ಸಮರ್ಥನೆ ಮತ್ತು ನಂಬದೆ ಇರುವವರ ಮುಂದೆ ಪ್ರಮಾಣ ಮಾಡಿತೋರಿಸಲು ಆಧಾರಗಳನ್ನು ಸಂಗ್ರಹ ಮಾಡುವಿಕೆ. ಫೂದನ್‌ಬಾಬು ಸ್ವತಃ ಪ್ರೇರೇಪಿತನಾಗಿ ಹೀಗೆ ಬಿಡುಗಡೆಯಾಗುವ ಸುದ್ದಿಗೆ ಪ್ರಮಾಣಗಳನ್ನು ಸಂಗ್ರಹ ಮಾಡುವ ಕೆಲಸ ತಾನಾಗಿ ವಹಿಸಿಕೊಂಡಿದ್ದಾನೆ. ಪ್ರತಿದಿನ ವೃತ್ತಪತ್ರಿಕೆಗಳನ್ನು ಎಲ್ಲರೂ ಓದಿ ಆದಮೇಲೆ ಅದರ ಸುತ್ತ ಎಷ್ಟು ದೊಡ್ಡ ಗುಂಪು ಸೇರಿರುತ್ತೋ! ಬಿಷುನ್‌ದೇವಜೀ ಈ ವಿಷಯದ ಮೇಲೆ ತುಳಸೀದಾಸನನ್ನು ಅನುಕರಣ ಮಾಡಿ ಒಂದು ವ್ಯಂಗ್ಯ ಪದ್ಯ ಬರೆದಿದ್ದಾನೆ:

ತುಳಸಿ ಡೂಂಥ ಜೈಲ್‌ಮೇ ವಹ್
  ಬಡ್ ಹಿಯಾ ಅಖಬಾರ್,
ಜೆಸಮೇ ಚರ್ಚಾ ಸುಲಹಕೀ
ಕರಹತೀ ಹೋ ಸರ್ಕಾರ್

(ತುಳಸೀದಾಸನು ಜೈಲಿನಲ್ಲಿ ಒಂದು ಎಂಥಾ ಸುಂದರ ಪತ್ರಿಕೆ ಹುಡುಕುತ್ತಿದ್ದಾನೆ. ಅದರಲ್ಲಿ ಗವರ್ನ್‌ಮೆಂಟ್ ನಮ್ಮೊಂದಿಗೆ ಸಂಧಿ ಮಾಡಿಕೊಳ್ಳುವ ಆಲೋಚನೆ ಮಾಡುತ್ತಿದೆ ಎಂದು ಬರೆದಿದೆ.)

ಇವತ್ತು ಬಿಡುಗಡೆ ಆಗದಿರಬಹುದು. ಆದರೆ ಯಾವತ್ತಾದರೂ ಒಂದು ದಿನ ಬಿಡುಗಡೆ ಆಗಲೇಬೇಕಲ್ಲ! ಒಬ್ಬಿಬ್ಬರಲ್ಲ, ಎಲ್ಲರೂ ಬಿಡುಗಡೆ ಆಗಲೇಬೇಕು. ಆಗುತ್ತಾರೆ.... ಎಲ್ಲರೂ ಆದರೆ ಬಿಲು? ಬಿಲೂ ಮಾತ್ರ ಯಾರ ಜತೆಯಲ್ಲೂ ಹೋಗಲು ಆಗುವುದಿಲ್ಲ. ನಾನು ಅವನನ್ನ ಕೊಂಡೊಯ್ಯಲು ಆಗುವುದಿಲ್ಲ. ನಾನು ಮುದುಕನಾಗಿ ಹೋಗಿದ್ದೇನೆ. ಆದರೂ ನನಗೆ ಇನ್ನೂ ಬದುಕಿ ಇರಲು ಆಸೆ ಎಷ್ಟೊಂದಿದೆ! ಮತ್ತು ಬಿಲೂಗೆ ಆಗಿರುವ ವಯಸ್ಸಾದರೂ ಎಷ್ಟು? ಇಡೀ ಬಾಳುವೆಯಲ್ಲ ಅವನ ಮುಂದೆ ಇತ್ತು. ಆದರೂ ನಾನು ಮಾತ್ರ ಇಲ್ಲಿಂದ ಬಿಟ್ಟು ಮನೆಗೆ ಹೋಗುತ್ತೇನೆ. ಬಿಲೂ ಹೋಗಲಾರ. ಬಿಲೂಗೆ ಮದುವೆ ಮಾಡಿಸಿಬಿಟ್ಟಿದ್ದರೆ ಆಗ ಅವನಿಗೆ ಗಾಂಧೀಜಿಯ ಮತದಲ್ಲಿ ನಂಬಿಕೆಯಿರಬಹುದಾಗಿತ್ತು. ಮದುವೆಯಾದ ಮೇಲೆ ಮನುಷ್ಯನಿಗೆ ಜೀವನದ ಆವೇಶ ಕಡಮೆಯಾಗಿಬಿಡುತ್ತದೆ. ಹೊಣೆಗಾರಿಕೆಯ ಜ್ಞಾನ ಹೆಚ್ಚಾಗುತ್ತದೆ. ಹಾಗೆ ಮಾಡಿದ್ದರೆ ಬಿಲೂ ಸೌಮ್ಯವಾದದ ಅಪಾಯಕರವಾದ ಮಾರ್ಗದಲ್ಲಿ ಅಡಿಯಿಡುತ್ತಿರಲಿಲ್ಲ. "ಸರ್ವೋದಯ" ಪತ್ರಿಕೆಯಲ್ಲಿ ಆಚಾರ್ಯ ಕಾಕಾ ಕಾಲೇಲ್‌ಕರ್ ಬರೆದಿರುವ ಒಂದು ಲೇಖನದಲ್ಲಿ ಹಾಸ್ಯ ಕೌತುಕಗಳನ್ನು ಉಪಯೋಗಿಸಿ ಬಹುಮಟ್ಟಿಗೆ ಸತ್ಯವಾಗಿರುವ ಒಂದು ಮಾತನ್ನು ಹೇಳಿದ್ದಾರೆ. ಅವರ ಪ್ರಕಾರ ಕಾಂಗ್ರೆಸ್ ಮುಂದಾಳುಗಳ ಪೈಕಿ ಯಾರಿಗೆ ಹೆಂಡತಿ ಇದ್ದಾಳೋ ಅಂಥವರ ಸ್ವಭಾವ, ನಡವಳಿಕೆ ಸೌಮ್ಯ ಮತ್ತು ಮೃದುವಾಗಿರುತ್ತದಂತೆ. ಮತ್ತೆ ಯಾರು ಅವಿವಾಹಿತರೋ ಮತ್ತು ಯಾರ ಹೆಂಡತಿ

ಬದುಕಿಲ್ಲವೋ ಅಂಥವರು ಕೋಪಿಷ್ಟರೂ, ಗಡುಸು ಸ್ವಭಾವದವರೂ ಆಗಿರುತ್ತಾರೆ. ಅದಕ್ಕೇ ಜವಾಹರ್‌ಲಾಲ್, ಸುಭಾಷ್ ಬೋಸ್ ಮತ್ತು ವಲ್ಲಭಭಾಯ್ ಪಟೇಲ್ ಯಾವ ವಿಷಯವನ್ನಾಗಲಿ ತಾಳ್ಮೆಯಿಂದ ಆವೇಶವಿಲ್ಲದೆ ವಿಚಾರ ಮಾಡಲಾರರು. ಇಲ್ಲ, ಸೌಮ್ಯವಾದಿಗಳ ಪಕ್ಷಕ್ಕೆ ಸೇರದೆ ಹೋಗಿದ್ದರೂ ಬಿಲೂ ಪ್ರಾಣವನ್ನು ನಾನು ಉಳಿಸಲು ಆಗುತ್ತಿರಲಿಲ್ಲ. ಬಹುಶಃ ಈ ಆಂದೋಳನದಲ್ಲಿ ಎಷ್ಟು ಜನ ರಾಜಕೀಯದ ಸಂಪರ್ಕವಿಲ್ಲದವರೂ ಸಹ ಪ್ರಾಣಬಿಟ್ಟಿದ್ದಾರೆ! ಗಾಂಧೀಜಿಯ ಶಿಷ್ಯರಲ್ಲೂ ಸಹ ಎಷ್ಟು ಜನ ಹಿಂಸಾತ್ಮಕ ಕೃತ್ಯಗಳನ್ನು ಮಾಡಿದ್ದಾರೆ! ಅದಕ್ಕೇನು ಲೆಕ್ಕವಿದೆಯೆ? ಹುಟ್ಟು ಸಾವುಗಳು ಯಾರ ಹಿಡಿತದಲ್ಲೂ ಇರುವಂಥದಲ್ಲವಲ್ಲ!

ಸರಸ್ವತಿಯ ಸಂಗಡ ಬಿಲೂ ಮದುವೆ ಮಾಡಿಸಿದ್ದರೆ ಚೆನ್ನಾಗಿರುತ್ತಿತ್ತು. ಇಬ್ಬರೂ ಸುಖವಾಗಿರುತ್ತಿದ್ದರು. ಸರಸ್ವತಿ ಎಷ್ಟು ಒಳ್ಳೇ ಹುಡುಗಿ! ಆಗಸ್ಟ್ ತಿಂಗಳಲ್ಲಿ ಪೊಲೀಸರು ಅವಳನ್ನು ಅರೆಸ್ಟ್ ಮಾಡಿದ್ದರು. ಮೂರು ತಿಂಗಳಾದ ಮೇಲೆ ರುಜುವಾತಿಲ್ಲದೆ ಅವಳನ್ನು ಬಿಡುಗಡೆ ಮಾಡಿದರೆ. ಮತ್ತೆ ಜನವರಿ 26ನೆಯ ತಾರೀಖು, ಸ್ವಾತಂತ್ರ್ಯದಿನದ ಆಚರಣೆಯ ಸಂದರ್ಭದಲ್ಲಿ ಅವಳನ್ನು ಹಿಡಿದು ಜೈಲಿನಲ್ಲಿ ಹಾಕಿದ್ದಾರೆ. ಇವಳ ಜತೆ ಬಿಲೂ ಮದುವೆ ಆಗಿದ್ದರೆ ಇಬ್ಬರೂ ರಾಜಕೀಯ ಕ್ಷೇತ್ರದಲ್ಲಿ ಕೆಲಸ ಮಾಡಬಹುದಾಗಿತ್ತು. ಲೆನಿನ್ ಸಹ ಮದುವೆಯಾಗಿದ್ದನಲ್ಲ!

ಕಪಿಲದೇವ್ ಮತ್ತು ಅವರ ತಾಯಿ ನನ್ನ ಬಳಿ ಬಂದು ಈ ಮದುವೆಯ ಪ್ರಸ್ತಾವ ಮಾಡಿದ್ದರು. ಇವರ ವಂಶದಲ್ಲಿ ಏನೋ ಗಲಾಟೆ ನಡೆದಿತ್ತು. ಇಲ್ಲವಾದರೆ ಅಷ್ಟು ವಿದ್ಯಾಭ್ಯಾಸ ಇಲ್ಲದ ಈ ಭೂಮಿಹಾರ್ ಬ್ರಾಹ್ಮಣರ ಮನೆಯವರು ಬಂಗಾಳಿಗಳ ಹುಡುಗನಿಗೆ ತಮ್ಮ ಮಗಳನ್ನು ಕೊಡುವುದಕ್ಕೆ ಬರುತ್ತಿದ್ದರೆ? ನನಗಂತೂ ಈ ಸಂಬಂಧಕ್ಕೆ ಯಾವ ಆಕ್ಷೇಪಣೆಯೂ ಇರಲಿಲ್ಲ. ಆದರೆ ನನ್ನ ಹೆಂಡತಿ ಏಕೋ ಈ ಸಂಬಂಧಕ್ಕೆ ಒಪ್ಪಲಿಲ್ಲ ಮತ್ತು ಬಿಲೂ ಅಭಿಪ್ರಾಯ ಏನು ಎಂಬುದಾಗಿ ಅವನನ್ನು ಕೇಳಲೂ ಇಲ್ಲ. ಈಗಿನ ಕಾಲದ ಹುಡುಗರು. ಅವನ ಅಭಿಪ್ರಾಯವನ್ನು ಮೊದಲೇ ಕೇಳುವುದು ಉಚಿತವಾಗಿತ್ತು. ಆದರೆ ಬಿಲೂ ತಾಯಿಗೇ ಇಷ್ಟವಾಗದೆ ಹೋದಾಗ ಇನ್ನು ಅವನ ಇಷ್ಟ ಕೇಳಿ ಪ್ರಯೋಜನವೇನು? ನನ್ನ ಹೆಂಡತಿಯು ಎಷ್ಟೋ ದಿನಗಳ ಹಿಂದೆ ನನಗೆ ಬಿಲೂ ಅಂಥ ರಾಜಕೀಯದಲ್ಲಿ ಮುಳುಗಿರುವ ಹುಡುಗನನ್ನು ಮದುವೆಯ ಬಂಧನದಲ್ಲಿ ಇಡುವುದು ಒಳ್ಳೆಯದಲ್ಲವೆಂದು ಹೇಳಿದ್ದಳು. ಆದರೆ ಈ ಸರಸ್ವತಿ ಸಂಗಡ ಅವನ ಜೋಡಿ ಚೆನ್ನಾಗಿ ಒಪ್ಪುತ್ತಿತ್ತು. ಈಗಿನ ಕಾಲದ ಮಧ್ಯಮ ವರ್ಗದ ಬಂಗಾಳೀ ಹುಡುಗಿಗಿಂತಲೂ ಸರಸ್ವತಿಯು ಎಷ್ಟೋ ವಾಸಿ - ಮನೆಗೆಲಸಗಳನ್ನೆಲ್ಲ ಚೆನ್ನಾಗಿ ಕಲಿತಿದ್ದಳು. ನಡೆ, ನುಡಿಗಳಲ್ಲಿ, ಆರೋಗ್ಯ, ರೂಪಗಳಲ್ಲಿ ಯಾವುದರಲ್ಲೂ ಕಡಮೆ ಇಲ್ಲ. ಅದೇ ನಿನ್ನೆ ಮೊನ್ನೆಯ ಹುಡುಗಿ, ಈಗ ನೋಡುತ್ತ ನೋಡುತ್ತ ಹೇಗೆ ಬೆಳೆದುಬಿಟ್ಟಿದ್ದಾಳೆ. ಕಪಿಲದೇವರ ಮೊಕದ್ದಮೆ ಡಿಸ್ಟ್ರಿಕ್ಟ್ ಕೋರ್ಟಿನಲ್ಲಿ ದಾಖಲಾಗಿತ್ತು. ಈ ಕೇಸಿನ ವಿಚಾರಣೆಗೆ ಹಾಜರಾಗುವಾಗ ಕಪಿಲದೇವ್ ಆಶ್ರಮಕ್ಕೂ ಬಂದು ಪ್ರತಿವಾರ ನನ್ನನ್ನು ಕಾಣುತ್ತಿದ್ದರು. ಸಂಗಡ ಮಗಳನ್ನೂ ಆಗಾಗ ಕರೆದುಕೊಂಡು ಬರುತ್ತಿದ್ದರು. ಅವತ್ತೊಂದು ದಿನ ರೋಜಾ ಬಣ್ಣದ ಸೀರೆ ಉಟ್ಟ ಈ ಚೆಲುವೆಯಾದ ಹುಡುಗಿ ಗುಲಾಬ್ ಬಾಗಿನ ಜಾತ್ರೆ

ನೋಡಲು ಹೋಗುತ್ತೇನೆಂದು ಹೇಳಿ ಅಪ್ಪನ ಜತೆಯಲ್ಲಿ ಎತ್ತಿನ ಬಂಡಿಯಲ್ಲಿ ಕೂತು ನಮ್ಮ ಆಶ್ರಮಕ್ಕೆ ಬಂದಿದ್ದಳು. ನಮ್ಮ ಮನೆ ಹುಡುಗಿಯರಾಗಿದ್ದರೆ ಅವಳ ವಯಸ್ಸಲ್ಲಿ ಫ್ರಾಕ್ ತೊಡುತ್ತಿದ್ದರು. ಸೀರೆ ಉಡುತ್ತಿರಲಿಲ್ಲ. ಅಡಿಗೆ ಮನೆಯ ಬಾಗಿಲಲ್ಲಿ ನನ್ನ ಹೆಂಡತಿ ಅವಳನ್ನ ಕೂಡಿಸಿ ತಿಂಡಿ ತಿನ್ನಲುಕೊಟ್ಟಳು. ಹಾಲಿನ ಬಟ್ಟಲನ್ನು ಸ್ವಲ್ಪ ಬಾಯಿಗಿಟ್ಟು ಚಪ್ಪರಿಸಿ ಹಾಗೇ ಇಟ್ಟುಬಿಟ್ಟಳು. ಹಾಲು ಕುಡಿಯದೆ ಹಾಗೇ ಏಕೆ ಬಿಟ್ಟೆ, ಕುಡಿ ಎಂದು ನನ್ನ ಹೆಂಡತಿ ಬಲವಂತ ಮಾಡಿದರೆ ಅಳುವುದಕ್ಕೆ ತೊಡಗಿದಳು. ಯಾಕೆ ಅಳುತ್ತಾ ಇರುವುದು ಎಂದು ಎಷ್ಟು ಕೇಳಿದರೂ ಹೇಳಿದರೆ ತಾನೆ? ಆಮೇಲೆ ನಮ್ಮ ಸಹದೇವನು ಹತ್ತಿರ ಬಂದು ಸಮಾಧಾನ ಮಾಡಿ, ನಗಿಸಿ ಕಾರಣ ಏನು ಎಂಬುದನ್ನು ಹೊರಡಿಸಿದ. "ಹಾಲು ಸಪ್ಪಸಪ್ಪಗಿದೆ" ಎಂದಳು ಆ ಸಣ್ಣ ಹುಡುಗಿ. ಅವಳಿಗೆ ಎಮ್ಮೆ ಹಾಲು ಕುಡಿದು ಅಭ್ಯಾಸ. ಹಸುವಿನ ಹಾಲು ಸಪ್ಪಗಿದೆ ಎಂದು ಅವಳಿಗೆ ರುಚಿಸಲಿಲ್ಲ - ಅಂತೂ ತಮಾಷೆ ಹುಡುಗಿ! ಈಗ ಎಷ್ಟು ದೊಡ್ಡವಳಾಗಿಬಿಟ್ಟಿದ್ದಾಳೆ! ಒಂದು ವಿಷಯದಲ್ಲಿ ಯೋಚನೆ ಮಾಡಿದರೆ ಈ ಮದುವೆ ಆಗದೇ ಹೋದದ್ದೇ ಒಳ್ಳೇದು ಅನ್ನಿಸುತ್ತದೆ. ಆಗಿದ್ದಿದ್ದರೆ ದುರ್ಭಾಗ್ಯ ಹೆಂಗಸರ ಸಂಖ್ಯೆಗೆ ಇನ್ನೊಂದು ಸೇರಿಸಿದಂತೆ ಆಗುತ್ತಿತ್ತು ಅಷ್ಟೇ. ನನ್ನ ಭಾರ ಸಹ ಬೆಳೆಯುತ್ತಿತ್ತು. ಇನ್ನೂ ತೊಂದರೆಗಳಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಿದ್ದೆ. ಅಲ್ಲದೆ, ನಾನು ತಾನೇ ಇನ್ನೆಷ್ಟು ದಿನ ಬದುಕಿರುತ್ತೇನೆ? ನೀಲೂ ಇದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ಅವನ ಮೇಲೆ ನಂಬಿಕೊಂಡರೆ ಮುಗಿದ ಹಾಗೇ! ಸ್ವಲ್ಪವೂ ಜವಾಬುದಾರಿಯಿಲ್ಲದ ಹುಡುಗ. ತನ್ನಿಷ್ಟಕ್ಕೆ ಬಂದ ಹಾಗೆ ಹೋಗುತ್ತಾನೆ. ಅಂಥವನನ್ನು ನೆಚ್ಚುವುದು ಹೇಗೆ? ನಮ್ಮ ಬಿಲೂ ಒಬ್ಬನ ಹತ್ತಿರ ಮಾತ್ರ ತಣ್ಣಗಿರುತ್ತಾನೆ. ಬೇರೆ ಯಾರೂ ಮನುಷ್ಯರಲ್ಲ, ಅವನ ಲೆಕ್ಕದಲ್ಲಿ. ಯಾರ ಮಾತನ್ನೂ ಕಿವಿಗೆ ಹಾಕಿಕೊಳ್ಳುವ ಗೋಜಿಲ್ಲ. ಚಿಕ್ಕವಯಸ್ಸಿಂದಲೂ ಅವನನ್ನು ದಂಡಿಸಲಿಕ್ಕೆ ಹೋಗುವ ಹಾಗಿಲ್ಲ. ಅತಿ ಮೊಂಡ. ದೊಡ್ಡವನಾದ ಮೇಲೆ ಸ್ವಲ್ಪ ಶಾಂತನಾಗಿದ್ದಾನೆ. ಗಂಭೀರವಾಗೂ ಇರುತ್ತಾನೆ. ಚಿಕ್ಕವಯಸ್ಸಲ್ಲಿ ಎಷ್ಟು ದುಷ್ಟನಾಗಿದ್ದ! ಪ್ರತಿದಿನವೂ ಯಾವುದಾದರೊಂದು ಮಾಡಬಾರದ ಕೆಲಸದಲ್ಲೇ ಇರುತ್ತಿದ್ದ.

ಅವತ್ತೊಂದು ದಿನ ದುರ್ಗಾಬಾಬುಗಳ ಬಾತುಕೋಳಿಯೊಂದನ್ನು ಕದ್ದುಕೊಂಡು ಹೋಗಿ ಕುಯಿದು, ಆಶ್ರಮದ ಹಿತ್ತಲಲ್ಲಿದ್ದ ಬಿದಿರು ಮೆಳೆಗಳ ಬಳಿ ಅದನ್ನು ಸುಡುತ್ತಿದ್ದ. ದುರ್ಗಾಬಾಬುಗಳು ಬೊಬ್ಬೆಯಿಡುತ್ತ ಬಂದು ನನ್ನ ಬಳಿ ದೂರು ಹೇಳಿದರು. ನಡೀರಿ. ಎಲ್ಲಿದಾನೋ ನೋಡೋಣ ಎಂದು ಹೇಳಿ ಅವರನ್ನೂ ಕರೆದುಕೊಂಡು ಹೊರಟೆ ಹುಡುಕಲಿಕ್ಕೆ. ಅವರ ಮಗನೂ ಜತೆಯಲ್ಲಿದ್ದ. ಅವನೇ ಹೋಗಿ ಅವರ ಮನೆಯಲ್ಲಿ ದೂರು ಹೇಳಿದ್ದು. ಬಿದಿರು ಮೆಳೆಯ ಹಿಂದೆ ಮಾಲು ಸಮೇತ ಆಸಾಮಿ ಸಿಕ್ಕಿಬಿದ್ದ. ಜತೆಯಲ್ಲಿ ಅದೇ ಕೇರಿಯ ಇನ್ನೂ ಕೆಲವರು ಹುಡುಗರು. ಇನ್ನೊಂದು ಆಶ್ಚರ್ಯದ ಸಂಗತಿಯೇನೆಂದರೆ ದುರ್ಗಾಬಾಬುಗಳ ಕಿರಿಯ ಮಗ ನರೋ ಸಹ ಆ ಹುಡುಗರ ನಡುವೆಯೇ ಇರಬೇಕೆ? ನಾವೆಲ್ಲ ಯಾಕೋ ಬಾತನ್ನು ಕೊಯಿದದ್ದು ಎಂದು ಕೇಳಿದರೆ ನೀಲೂ ಸ್ವಲ್ಪವೂ ಆತಂಕ

ತೋರಿಸದೆ, "ಹೌದು, ನಾವೆಲ್ಲ ಒಟ್ಟಿಗೇ ಸೇರಿ ಕೊಯಿದೆವು" ಎಂದು ಹೇಳಿಬಿಟ್ಟ. ಹೀಗೆ ಕೇಳಬಹುದು ಎಂದು ತಯಾರಾಗೇ ಇದ್ದಹಾಗೆ. ಆಮೇಲೆ ಇನ್ನೂ ಒತ್ತಾಯ ಮಾಡಿದ ಮೇಲೆ ಅವನ ಬಾಯಿಂದ ಹೊರಬಿದ್ದದ್ದೇನೆಂದರೆ, ನರೋವೇ ಖುದ್ದಾಗಿ ಮನೆಯಿಂದ ಚೂರಿ ತಂದುಕೊಟ್ಟನಂತೆ. ಕಡಿದದ್ದು ನೀಲೂ, ಕಡಿಯುವುದಕ್ಕೆ ಮೊದಲು ಅವನು ಅವರೆಲ್ಲರಿಗೂ ಕರಾರು ಮಾಡಿಸಿ ಒಪ್ಪಿಸಿದ – ಕೊಯ್ಯುವ ಸಮಯದಲ್ಲಿ ಉಳಿದವರೆಲ್ಲ ಅವನನ್ನ ಮುಟ್ಟಿಕೊಂಡಿರಬೇಕು. ಅವನು ಕೊಯ್ಯುತ್ತಿದ್ದ – ಅವನ ಹಿಂದೆ ನರೋ ಮತ್ತು ಇತರ ಹುಡುಗರು ಒಬ್ಬನ ಹಿಂದೆ ಒಬ್ಬ ರೈಲುಗಾಡಿಯ ಆಟದಲ್ಲಿ ಮಾಡಿದ ಹಾಗೆ ಮುಂದಿನವನ ಬೆನ್ನು ಹಿಡಿದು ನಿಂತಿರಬೇಕು. ಇಷ್ಟು ದೂರ ಹೋಗುತ್ತಿತ್ತು ಅವನ ಕೆಟ್ಟ ಬುದ್ಧಿ!

ನೀಲೂ ಬಲಿಷ್ಠ. ಅವನ ನೇರವಾದ ಮೈಕಟ್ಟು ಭಾವುಕತೆ ಇಲ್ಲದ ಮುಖ ಬಿಲೂ ಪಕ್ಕದಲ್ಲಿ ನಿಂತರೆ ಸರಿ ಕಾಣುವುದಿಲ್ಲ. ನೀಲೂ ಬಿಲೂವಿಗಿಂತ ದೊಡ್ಡವನಾಗಿ ಕಾಣುತ್ತಾನೆ. ಅವನ ಸ್ವಭಾವವೂ ಜೋರು. ಅವನ ಹಿಡಿದಿಡಲಾರದ ಸಾಹಸಕ್ಕೆ ಯಾವುದೂ ಕಷ್ಟವಲ್ಲ. ಯಾವ ಅಡ್ಡಿ, ಆತಂಕಗಳೂ ತುಚ್ಛವೆನ್ನಿಸುತ್ತವೆ. ಅವನ ಮುಂದೆ ಮಾತಾಡುವುದಕ್ಕೇ ನನಗೆ ಹೆದರಿಕೆ. ಅವನ ಬಾಯಿಗೆ ತಡೆಯೇ ಇಲ್ಲ. ಅದಕ್ಕೇ ಬಿಲೂ ವಿಷಯದಲ್ಲಿ ನನ್ನ ಭಾವನೆ ಬೇರೆ. ಅವನ ಸೂಕ್ಷ್ಮವಾದ ಮನಸ್ಸಿಗೆ ನೋವಾದೀತೇನೋ ಎಂದು ಎಷ್ಟೋ ಸಲ ಹಿಂಜರಿಯುತ್ತೇನೆ. ಏನಾದರೂ ಅಂದರೂ ಅವನು ಬಾಯಲ್ಲಿ ಏನೂ ಹೇಳುವುದಿಲ್ಲ. ಕಣ್ಣಲ್ಲಿ ಮಾತ್ರ ನೀರು ತುಂಬಿರುತ್ತದೆ. ಈ ನೀಲೂವೊ? ನನ್ನ ಮನಸ್ಸಿಗೆ ನೋವುಂಟು ಮಾಡುವ ಸುಯೋಗ ಸಿಕ್ಕಿದರೆ ಬಿಡುವುದಿಲ್ಲ ಅವನು. ಅವನು ಕಾಲೇಜಿಗೆ ಸೇರುವ ಮಾತು ಮೊದಲ ಬಾರಿ ಎತ್ತಿದಾಗ ನಾನು ಅಡ್ಡಿ ಮಾಡಲಿಲ್ಲ. ನನಗೆ ಗೊತ್ತು ಅವನಿಗೆ ಕಾಲೇಜು ಸೇರುವ ಆಸೆ ಇದೆಯೆಂದು. ಅವರಮ್ಮ ಮತ್ತು ಬಿಲೂ ಸಹ ಈ ಆಸೆಗೆ ಬೆಂಬಲವಾಗಿದ್ದರು. ಬಿಲೂ ವಿದ್ಯಾಪೀಠಕ್ಕೆ ಸೇರಿ ತೃಪ್ತನಾಗಿರಲಿಲ್ಲ. ಅವರಮ್ಮನ ದೃಷ್ಟಿಯಲ್ಲಂತೂ ವಿದ್ಯಾಪೀಠದ ಓದು, ಓದೇ ಅಲ್ಲ. ಎಲ್ಲಾ ನಿಶ್ಚಿತವಾಗಿತ್ತು. ಆಗ ನೀಲೂ ಒಂದು ಆಕ್ಷೇಪಣೆ ಎತ್ತಿದ. ತಾನು ಗಾಂಧಿ ಸೇವಾ ಸಂಘದ ಹಣ ಸಹಾಯದಿಂದ ಕಾಲೇಜಿಗೆ ಸೇರುವುದಿಲ್ಲವೆಂದ. ಎಂಥ ಮಾತು? ನನಗೆ ಬೇರೆ ಹಣ ಎಲ್ಲಿಂದ ಬರುತ್ತದೆ. ನೌಕರಿಯಲ್ಲಿದ್ದಾಗ ಯಾವ ಹಣ ಕೂಡಿ ಹಾಕಿದ್ದೆನೋ ಅದರಲ್ಲೇ ಅಲ್ಲವೇ ಇಷ್ಟು ದಿನ ಸಂಸಾರ ಕಳೆದದ್ದು, ತಿನ್ನುತ್ತ ಹೋದರೆ ಎಷ್ಟು ದಿನ ಬರುತ್ತದೆ. ಅಲ್ಲದೆ ಸ್ವಂತ ಹಣದಿಂದಲೇ ಅಲ್ಲವೆ ನಾನು ಈ ಆಶ್ರಮವನ್ನು ಇಷ್ಟು ದೊಡ್ಡದಾಗಿ ಬೆಳೆಸಿದ್ದು? ಎಷ್ಟು ಖರ್ಚಾಗಿದೆ ಇದಕ್ಕೆ! ಇದರ ಜತೆಯಲ್ಲಿ ಮೂರು ಸಲ ಸರ್ಕಾರ ಜುಲ್ಮಾನೆ ವಸೂಲು ಮಾಡಿದ್ದರಿಂದ ಸುಮಾರು ಒಂಬೈನೂರು ರೂಪಾಯಿ ಹೋಯಿತು. ಎಷ್ಟೋ ಜನ ಕಾಂಗ್ರೆಸಿನ ಹೆಸರಿನಲ್ಲಿ ನನಗೆ ಸಹಾಯ ಮಾಡಲಿಕ್ಕೆ ಬಂದರೂ ನಾನು ಅದನ್ನ ತೆಗೆದುಕೊಳ್ಳಲು ಒಪ್ಪಲಿಲ್ಲ. ಬೇರೆ ಆಶ್ರಮಗಳ ಹಾಗೆ ಚಂದಾ ಮುಂತಾದುವನ್ನು ಸಾರ್ವಜನಿಕರಿಂದ ವಸೂಲು ಮಾಡುವ ಪದ್ಧತಿ ನಮ್ಮ ಆಶ್ರಮದಲ್ಲಿ ಮೊದಲಿಂದಲೂ ನಿಷಿದ್ಧ. ಚಂದಾ ಹಣ ವಸೂಲು ಮಾಡಿದರೆ ಆತ್ಮ ಅಭಿಮಾನ ಕಾಪಾಡಿಕೊಳ್ಳಲು ಎಷ್ಟು ಅಸಾಧ್ಯವೋ

ನಿರ್ಭೀತಿಯಿಂದ ಮತ್ತು ನಿಷ್ಪಕ್ಷಪಾತವಾಗಿ ಆಶ್ರಮದ ಕೆಲಸಗಳನ್ನು ನಡೆಸುವುದೂ ಅಷ್ಟೇ ಅಸಂಭವ. ಕಡೆಗೆ ಹಣ ಸಾಲದೆ ನನ್ನ ಸಂಸಾರ ನಡೆಸುವುದೇ ಕಷ್ಟವಾಗಿ ಹೋಗಿತ್ತು. ಅಂಥಾ ಸಮಯದಲ್ಲಿ, ಗಾಂಧೀ ಸೇವಾ ಸಂಘದಿಂದ ನನಗೆ ತಿಂಗಳಿಗೆ ಎಪ್ಪತ್ತೈದು ರೂಪಾಯಿ ವೇತನ ಕೊಡಲು ನಿಶ್ಚಯವಾಗಿದೆಯೆಂಬ ಸುದ್ದಿ ಬಂತು. ಮಹಾತ್ಮಾಜಿಗೆ ಎಲ್ಲಾ ತಿಳಿದಿರಬೇಕು. ಈ ವೇತನ ಪಡೆಯದೆ ಹೋಗಿದ್ದರೆ, ಬಹುಶಃ ನನ್ನ ಸಂಸಾರದ ಖರ್ಚಿಗೆ ಆಶ್ರಮದ ಆದಾಯದ ಮೇಲೇ ನಂಬಬೇಕಾಗಿತ್ತು. ಆ ಆದಾಯ ತಾನೇ ಎಷ್ಟು ? ಎರಡು ಎತ್ತಿನ ಬಂಡಿಗಳು ಬಾಡಿಗೆಗೆ ಓಡುತ್ತವೆ. ಎರಡು ಎಣ್ಣೆ ಗಾಣಗಳಿವೆ. ಒಂದು ಗ್ರಾಮೋದ್ಯೋಗದ ಭಂಡಾರ, ಬಟ್ಟೆಗೆ ಹಾಕುವ ಸಾಬೂನನ್ನು ತಯಾರು ಮಾಡುವಿಕೆ ಮತ್ತು ಎರಡು ದೈನಿಕ ಪತ್ರಿಕೆಗಳ ಏಜೆನ್ಸಿ - ಇವಿಷ್ಟೇ ಆಶ್ರಮದ ಆದಾಯಕ್ಕೆ ಆಧಾರ. ಜೇನು ದುಂಬಿಗಳ ಮತ್ತು ರೇಶ್ಮೆ ಹುಳುಗಳು ವ್ಯವಸಾಯದಿಂದ ನಮ್ಮ ಆಶ್ರಮ ಎಂದೂ ಹೇಳಿಕೊಳ್ಳುವಷ್ಟು ಆದಾಯ ಸಂಪಾದಿಸಿಲ್ಲ. ಆದರೆ ತರಕಾರಿಯ ತೋಟದಿಂದ ಆಶ್ರಮದ ವಾಸಿಗಳ ಊಟಕ್ಕೆ ಕಾಯಿಪಲ್ಲೆಯ ಸರಬರಾಯಿ ಸಾಕಷ್ಟು ಆಗುತ್ತದೆ. ಆದರೆ ಇಷ್ಟು ಮಾಡಿದ ಮೇಲೂ, ಆಶ್ರಮದಲ್ಲಿ ಬರುವ ಆದಾಯದಿಂದ ಆಶ್ರಮದ ಸ್ವಯಂ ಸೇವಕರ ಊಟ, ತಿಂಡಿಗೇ ಸಾಲದು. ಇದರ ಜತೆಗೆ ನನ್ನ ಸಂಸಾರದ ಖರ್ಚನ್ನು ಅದರಿಂದಲೇ ವಸೂಲು ಮಾಡಿಬಿಟ್ಟರೆ ಆಮೇಲೆ ಆಶ್ರಮದ ಪಾಠಶಾಲೆ, ಜಿಲ್ಲಾ ಕಾಂಗ್ರೆಸಿನ ವಾರಪತ್ರಿಕೆ ಇವೆಲ್ಲ ನಡೆಯುವುದು ಹೇಗೆ ? ಜಿಲ್ಲಾ ಕಾಂಗ್ರೆಸಿನ ಇತರ ಖರ್ಚುಗಳಿಗೂ ಆಶ್ರಮದ ಆದಾಯಕ್ಕೂ ಯಾವ ಸಂಬಂಧವೂ ಇಲ್ಲದಿರಬಹುದು. ಹೇಗಾದರೂ ಸರಿ, ಈ ಸೇವಾಸಂಘದ ಕಡೆಯಿಂದ ಬಂದ ವೇತನ ನನ್ನ ದುಶ್ಚಿಂತೆಗಳನ್ನೆಲ್ಲ ಕಳೆದುಬಿಟ್ಟಿತ್ತು. ಈ ಹಣ ತೆಗೆದುಕೊಳ್ಳುವುದರಿಂದ ನನ್ನ ಗೌರವಕ್ಕೆ ಏನಾದರೂ ಕೊರತೆಯಾಗಬಹುದೆಂಬ ಯೋಚನೆ ನನ್ನ ಮನಸ್ಸಿಗೆ ಎಂದೂ ಬಂದಿರಲಿಲ್ಲ. ಈ ಹಣ ಯಾವ ಸಂಸ್ಥೆಯಾದರೂ ಕೊಟ್ಟಿರಲಿ, ಅಥವಾ ಯಾವ ಕೋಟ್ಯಧೀಶನ ದಾನವಾದರೂ ಏನು, ನನಗೆ ಇಷ್ಟು ಮಾತ್ರ ಗೊತ್ತು - ಏನೆಂದರೆ ಇದು ಮಹಾತ್ಮಾಜಿಯವರ ಆಶೀರ್ವಾದ ಅಷ್ಟೇ. ತಮ್ಮ ಸೇವಕನಿಗೆ ಅನನುಕೂಲವಾಗಿರುವುದೆಂದು ಯೋಚಿಸಿಯೇ ಅವರು ಈ ಏರ್ಪಾಡು ಮಾಡಿಸಿದ್ದಾರೆ. ಹೀಗಿರುವಾಗ ಈ ನೀಲೂ ಹೀಗೆ ಹೇಳಿಬಿಟ್ಟನಲ್ಲ. ಗಾಂಧಿ ಸೇವಾ ಸಂಘದಿಂದ ಬರುವ ಹಣದ ಸಹಾಯದಿಂದ ತಾನು ಕಾಲೇಜಿನ ಓದು ನಡೆಸುವ ಹಾಗಿದ್ದರೆ ತನಗೆ ಅಂಥಾ ಓದು ಬೇಡ ಅನ್ನುವುದ ? ಬಾಪು ಆಗೊಮ್ಮೆ ಜೈಸ್ವಾಲ್‌ಜೀಯವರ ಸೋದರಿಯ ಸಂಗಡ ಹೇಳಿದ ಮಾತು ಎಲ್ಲರಿಗೂ ಗೊತ್ತಿತ್ತು. ಯಾರೂ ಜೋರು ಮಾಡುವ ಹಾಗೂ ಇಲ್ಲ. ಬಿಲೂ ಮತ್ತು ಅವನ ತಾಯಿ ಸಹ ನೀಲೂ ಹೇಳುವುದನ್ನೇ ಸಮರ್ಥಿಸುವಂತ ಕಂಡು ಬಂತು.

ನನ್ನ ದೃಷ್ಟಿಕೋನದಿಂದ ಯಾರೂ ಈ ವಿಷಯವನ್ನು ನೋಡಲು ತಯಾರಿಲ್ಲವೆಂದು ತೋರಿತು. ನನಗೂ ಮತ್ತು ನನ್ನ ಕುಟುಂಬಕ್ಕೂ ಮಧ್ಯೆ ಇರುವ ವ್ಯತ್ಯಾಸ ಒಂದು ವಿಷಯದಲ್ಲಿ ಇಷ್ಟು ಗಾಢವಾಗಿದೆ ಎಂದು ನಾನೆಂದೂ ಯೋಚಿಸಿರಲಿಲ್ಲ. ನನ್ನ ಹೆಂಡತಿಯ ಸಹನ ಶಕ್ತಿಯನ್ನು ನಾನು ಉತ್ಸಾಹಪೂರ್ಣ

ಸಮ್ಮತಿಯೆಂದು ತಪ್ಪು ತಿಳಿದುಕೊಂಡಿದ್ದೆ. ನನ್ನ ಮಕ್ಕಳು ನನ್ನ ದಾರಿಗಿಂತ ಬೇರೆಯಾದ ರಾಜನೈತಿಕ ಪಥ ಆರಿಸಿರುವುದರಲ್ಲೂ ಬಹುಶಃ ಇದೇ ಆಂತರಿಕ ದ್ವಂದ್ವ ಇರಬೇಕು ಎಂದು ತೋರುತ್ತದೆ. ಕಡೆಗೂ ನೀಲೂ ನನ್ನ ಕಡೆಯಿಂದ ಒಂದು ಕಾಸನ್ನೂ ತೆಗೆದುಕೊಳ್ಳದೆ ಕಾಲೇಜಿಗೂ ಸೇರಿದ. ಅವನ ಕಾಲೇಜು ಫೀಜನ್ನು ಕೊಟ್ಟವನು ಬಿಲೂ. ಬಿಹಾರ್ ಭೂಕಂಪ ಪೀಡಿತರ ರಿಲೀಫ್ ಫಂಡನ್ನು ವಿನಿಯೋಗಿಸುವ ಭಾರವನ್ನು ಕಾಂಗ್ರೆಸ್ ಕೆಲಸಗಾರರಮೇಲೆ ವಹಿಸಲಾಗಿತ್ತು. ಬಿಲೂ ಅದಕ್ಕೆ ಪೂರ್ಣಿಯಾ ಜಿಲ್ಲೆಯ ಅಕೌಂಟೆಂಟ್ ಆಗಿ ನೇಮಿಸಲ್ಪಟ್ಟಿದ್ದ. ಅದಕ್ಕೆ ಅವನಿಗೆ ತಿಂಗಳಿಗೆ ಮೂವತ್ತು ರೂಪಾಯಿ ವೇತನ ಸಿಗುತ್ತಿತ್ತು. ಈ ಹಣವನ್ನು ಅವನು ನೀಲೂ ವ್ಯಾಸಂಗಕ್ಕೆ ಕೊಡುತ್ತಿದ್ದ. ಹೀಗೆ ಅಣ್ಣನ ಕೈಯಿಂದ ಹಣದ ಸಹಾಯ ಪಡೆಯುವುದಕ್ಕೆ ಅವನಿಗೆ ಯಾವ ಆಕ್ಷೇಪಣೆಯೂ ಕಂಡುಬರಲಿಲ್ಲ. ಆ ಆಕ್ಷೇಪಣೆ ನನ್ನ ಕೈಯಿಂದ ಬರುವ ಹಣಕ್ಕೆ ಮಾತ್ರ. ಇಷ್ಟು ಅವಮಾನಕರವಾದ ಪೆಟ್ಟನ್ನು ನನ್ನ ಜೀವಮಾನದಲ್ಲಿ ಬೇರೆ ಯಾರ ಕೈಯಿಂದಾಗಲೀ ಪಡೆದಿರುವುದು ಸಂದೇಹ. ಅದು ಹೋಗಲಿ! ಆದರೂ ನಾನೊಂದು ಹೇಳಬಲ್ಲೆ. ಓದು ಬರಹದ ಕ್ಷೇತ್ರವೊಂದು ಬಿಟ್ಟು ಬೇರೆ ಯಾವ ಕ್ಷೇತ್ರದಲ್ಲಾದರೂ ಬಿಡಲಿ, ಅದರ ಅತಿ ಮೇಲಿನ ಸ್ಥಾನಕ್ಕೆ ಅವನು ಏರುವುದರಲ್ಲಿ ಸಂಶಯವೇ ಇಲ್ಲ. ಅದೇ ನಮ್ಮ ಬಿಲೂ ಅದಕ್ಕೆ ಪೂರ್ತಿಯಾಗಿ ವ್ಯತಿರಿಕ್ತ. ವಿದ್ಯಾಭ್ಯಾಸ ಬಿಟ್ಟು ಬೇರೆ ಯಾವುದರಲ್ಲೂ ಅವನು ಮುಂದಕ್ಕೆ ಬರುವುದು ಕಷ್ಟ. ಎಷ್ಟು ವಿದ್ಯಾರ್ಥಿಗಳು ಈ ನನ್ನ ಕಡೆಯಿಂದ ಶಿಕ್ಷಣ ಪಡೆದು ಹೋಗಿದ್ದಾರೆ.... ಇಷ್ಟು ಮಾತ್ರ ಹೇಳುವುದಕ್ಕಾಗುವುದಿಲ್ಲವೆ ನನಗೆ ? ಆದರೆ, ಎಲವೋ ನೀಲೂ ನಿನ್ನ ಸ್ವಂತ ಅಣ್ಣನ ವಿರುದ್ಧವಾಗೇ ಸಾಕ್ಷ್ಯ ನುಡಿಯುವುದರ ಅರ್ಥ ನನಗಿನ್ನೂ ತಿಳಿಯಲಾಗಿಲ್ಲ. ನಿನ್ನ ಪಾರ್ಟಿಯೇ ನಿನಗೆ ಆ ಆದೇಶ ಕೊಟ್ಟಿರುವಲ್ಲಿ ನಾನು ಏನೂ ಹೇಳುವುದಿಲ್ಲ. ಮಹಾತ್ಮಾಜಿಯವರು ಆದೇಶ ಕೊಟ್ಟರೆ ನಾನು ಯಾವ ತ್ಯಾಗವನ್ನಾದರೂ ಮಾಡುವುದಕ್ಕೆ ಸಿದ್ಧನಾಗಿಲ್ಲವೆ ? ಆದರೆ ಯಾವ ರಾಜಕೀಯ ಪಾರ್ಟಿಯಾದರೂ ಇಂಥ ಆದೇಶ ಮಾಡುತ್ತದೆಯೆ ? ನೀಲೂ ಮತ್ತು ಬಿಲೂ ಇವರಿಬ್ಬರ ಪಾರ್ಟಿಗಳ ಗುರಿ ಒಂದೇ. ಕಾರ್ಯಕ್ರಮದಲ್ಲಿ ಸ್ವಲ್ಪ ವ್ಯತ್ಯಾಸ ಕಂಡುಬಂದಿದೆ ಅಷ್ಟೇ. ಅದರ ಫಲಿತಾಂಶ ಇಷ್ಟು ದೂರದವರೆಗೂ ಹೋಗಬೇಕೆ ? ಜನತೆಯ ಮತದ ಆಧಾರದ ಮೇಲೆ ಯಾವ ಪಾರ್ಟಿ ನಿಂತಿದೆಯೋ ಆ ಪಾರ್ಟಿಯ ಏಕಮಾತ್ರ ಕರ್ತವ್ಯ ಏನು ? ಜನತೆಯ ಬೇರೊಂದು ದಳದ ತಪ್ಪಿನ ವಿಷಯವನ್ನು ಜನರಿಗೆ ತಿಳಿಯಹೇಳುವುದಲ್ಲವೇ ಉಚಿತ ? ಹಾಗೆ ತಿಳಿಯ ಹೇಳಿ ತಪ್ಪು ಮಾರ್ಗದಲ್ಲಿ ಹೋಗುತ್ತಿರುವ ಆ ಜನರನ್ನು ತಮ್ಮ ಮಾರ್ಗವನ್ನು ಅನುಸರಿಸುವಂತೆ ಪ್ರೇರೇಪಿಸುವುದೇ ಸರಿಯಾದದ್ದು. ನೀಲೂ, ಖಂಡಿತವಾಗಿಯೂ, ನಿಮ್ಮ ಪಾರ್ಟಿಯ ಆದೇಶವನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ತಪ್ಪು ಮಾಡಿದ್ದೀಯೆ. ಮತ್ತು ಈ ತಪ್ಪಿನ ಫಲ ಈಗ ಅನುಭವಿಸಬೇಕಾಗುತ್ತದೆ. ನಿಮ್ಮ ಪಾರ್ಟಿಯ ಫಾರ್ಮುಲ ಯಾವುದಿದೆಯೋ ಅದರ ತರ್ಕ ಏನೋ ನನಗಿದುವರೆಗೆ ಅರ್ಥವಾಗಿಲ್ಲ, ನಿಜ. ಆದರೆ ನನಗಿರುವ ಅಲ್ಪ ಸ್ವಲ್ಪ ಬುದ್ಧಿಗೆ ಏನು ಅನ್ನಿಸಿದೆಯೋ, ಅದು ಸರಿಯೋ ಅಲ್ಲವೋ ಎನ್ನುವುದನ್ನು ನಿಮ್ಮ ಪಾರ್ಟಿಯ ಮುಂದಾಳುಗಳು

ಅನ್ನಿಸಿಕೊಳ್ಳುವವರನ್ನು ಕೇಳಿ ತಿಳಿದುಕೋ.... ಛೇ.... ಅದು ಸರಿಯಿರಲಿ, ತಪ್ಪಿರಲಿ, ಅದನ್ನು ತಿಳಿದುತಾನೇ ಈಗ ಏನು ಲಾಭ? ಅದರಿಂದ ಆಗಬೇಕಾದ ಹಾನಿ, ಅನ್ಯಾಯ ಆಗೇ ಹೋಗಿದೆ. ನಿನ್ನ ಜೀವನವಿಡೀ ಎದ್ದಾಗ ಕೂತಾಗ ನಿನ್ನ ಮನಸ್ಸನ್ನು ಚುಚ್ಚುತ್ತಲೇ ಇರುತ್ತದೆ. ಸ್ವಲ್ಪ ಸ್ವಲ್ಪವಾಗಿ ಪಶ್ಚಾತ್ತಾಪದ ಬೆಂಕಿ ನಿನ್ನನ್ನ ಸುಡುತ್ತಾ ಹೋಗುತ್ತದೆ. ಆದರೂ ನೀನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿದ ಹಾಗೆ ಆಗುವುದಿಲ್ಲ. ಛೇ ಏನು ಮಾಡುತ್ತ ಇದ್ದೇನೆ ನಾನು? ನನ್ನ ಸ್ವಂತ ಮಗನನ್ನೇ ಶಪಿಸುತ್ತ ಇದ್ದೇನಲ್ಲ ಏನು ಅನ್ಯಾಯ? ಇಲ್ಲ.... ಇಲ್ಲ, ನೀಲೂ ನೀನು ಮಾಡಿರುವುದು ತಪ್ಪು ಎಂದು ಎಂದೆಂದಿಗೂ ನಿನಗೆ ಅನ್ನಿಸದೆ ಇರುವ ಹಾಗೆ ಮಾಡಲಿ ದೇವರು. ನೀನು ನಿನ್ನ ಪಾರ್ಟಿಯ ಸಂಬಂಧವಾಗಿ ಏನು ಅರ್ಥ ಮಾಡಿಕೊಂಡಿದ್ದೀಯೋ ಅದೇ ಸರಿಯಾಗಿರಲಿ. ಏಕೆಂದರೆ ಅದರ ಮೇಲೆಯೇ ಪೂರ್ತಿಯಾಗಿ ನಂಬಿಕೊಂಡು ನಿಂತಿದ್ದೀಯೆ. ಇನ್ನೂ ನಿನ್ನ ಮನಸ್ಸಿನ ಶಕ್ತಿ ಎಷ್ಟೇ ಇದ್ದರೂ, ಯಾವತ್ತು ನೀನು ನಂಬಿಕೊಂಡಿರುವುದೆಲ್ಲ ತಪ್ಪು ಎಂದು ಅನ್ನಿಸಿತೋ ನೀನು ಆಗ ಕುಸಿದು ಬೀಳುತ್ತಿ. ನನಗೆ ಗೊತ್ತು ಕಣೋ, ನಿನಗೆ ನಿನ್ನಣ್ಣ ಅಂದರೆ ಪ್ರಾಣ ಅಂತ. ಅದು ಗೊತ್ತಿಲ್ಲದೆ ಇಲ್ಲ. ಅದಕ್ಕೆ.

"ಮಹಾಶಯಜೀ!"

ಕಣ್ಣೆತ್ತಿ ನೋಡಿದೆ. ಖೇದನ್ ಲಾಲ್‌ಜೀ ನನ್ನೆದುರಲ್ಲಿ ನಿಂತಿದ್ದಾರೆ.

"ನಿದ್ದೆ ಬರುತ್ತಿದೆಯಾ ತಮಗೆ?"

ಈತ ಈಗಿಲ್ಲಿ ಕೂಡದೆ ಇದ್ದರೆ ಒಳ್ಳೇದು. ಕೂತುಬಿಟ್ಟರೆ ಏಳುವ ಹಾಗಿಲ್ಲ. ಮಳೆ ಸುರಿಯುವ ಹಾಗೆ ನಿರರ್ಗಳವಾಗಿ ಮಾತಾಡಲಿಕ್ಕೆ ಶುರು ಮಾಡುತ್ತಾರೆ. ಈತನಿಗೆ ಮೂವರು ಗಂಡು ಮಕ್ಕಳು. ಸ್ವರಾಜ್ ಪ್ರಸಾದ್, ಸ್ವತಂತ್ರ ಪ್ರಸಾದ್, ಸಂಘಟನ ಪ್ರಸಾದ್– ಆಶ್ಚರ್ಯಕರವಾದ ಹೆಸರುಗಳು. ನನ್ನ ಮಕ್ಕಳ ಹೆಸರುಗಳೋ ನೀಲೂ ಬಿಲೂ ಅತಿ ಸಾಧಾರಣ ಹೆಸರುಗಳು. ಯೋಚನೆ ಮಾಡಿ ಅವರಿವರ ಸಲಹೆ ಕೇಳಿ ಇಟ್ಟ ಹೆಸರುಗಳಲ್ಲ. ನಮ್ಮ ತಂದೆ ಬಿಲೂವನ್ನ ಬಾಲಾಯಿ ಎಂದು ಕರೆದರು. ಅದು ಕ್ರಮೇಣ ಬಿಲೂ ಆಯಿತು. ನೀಲುವನ್ನು ಅಪ್ಪ ನೋಡೇ ಇಲ್ಲ. ನೀಲೂ ಹುಟ್ಟುವುದಕ್ಕೆ ಮುಂಚೆಯೇ ತೀರಿಕೊಂಡಿದ್ದರು. ಯೋಚನೆ ಮಾಡಿ ಹತ್ತು ಜನರ ಸಲಹೆ ಕೇಳಿ ಹೆಸರಿಡುವುದೂ ಒಂದು ಕಿರಿಕಿರಿ. ಖೇದನ್ ಲಾಲಜೀ ತಮ್ಮ ಎರಡನೆಯ ಮಗ ಸ್ವತಂತ್ರ ಪ್ರಸಾದನಿಗೆ ಪತ್ರ ಬರೆದಿದ್ದರು. ಆ ಕಾಗದದಲ್ಲಿ ತನ್ನ ಇತರ ಹುಡುಗರ ಹೆಸರುಗಳೂ ಇದ್ದುವು. ಜೈಲಿನ ಸಿ.ಐ.ಡಿ. ಏನು ಮಾಡಿದರೂ ಆ ಪತ್ರವನ್ನು ಕಳಿಸಲು ಒಪ್ಪಲಿಲ್ಲ. ಅವರು ಈ ಕಾಗದದಲ್ಲಿ ಯಾವುದೋ ಸಂಕೇತ ಭಾಷೆಯ ಮೂಲಕ ಏನೋ ರಾಜಕೀಯವಾದ ಸಮಾಚಾರವೋ ಸಲಹೆಯೋ ಬರೆಯಲ್ಪಟ್ಟಿದೆ ಎಂದು ಸಂಶಯ ಪಟ್ಟರು. ಆಗಲಿಂದಲೂ ಇವರಿಬ್ಬರಿಗೂ ಜಗಳ ನಡೆಯುತ್ತಿದೆ. ಒಳ್ಳೇ ಮಾತಲ್ಲಿ ವಿವರಿಸಿ ಹೇಳಿದ್ದರೆ ಬಹುಶಃ ಅವರಿಗೆ ಅರ್ಥವಾಗುತ್ತಿತ್ತು. ಸರಿಹೋಗುತ್ತಿತ್ತು. ಅದಿಲ್ಲ. ಇಬ್ಬರೂ ತಮ್ಮ ತಮ್ಮ ಛಲ ಸಾಧಿಸುವುದಕ್ಕೆ ಹೊರಟಿದ್ದರು.

ಈ ಖೇದನ್ ಲಾಲ್‌ಜೀ ತನ್ನ ಕಿರಿಯ ಮಗನಿಗೆ ಈ ಪತ್ರ ಬರೆದಿದ್ದಾರೆ. ಈ

ಜಿದ್ದಿನ ಫಲವಾಗಿ ಕಾಗದ ಹಾಗೇ ವಾಪಸು ಬಂದಿದೆ. ಕಾಗದದಲ್ಲಿ ಒಂದು ಪಂಕ್ತಿ ಹೀಗೆ ಬರೆಯಲಾಗಿತ್ತು: "ನಿಮಗೆ ಇದುವರೆಗೆ ನನ್ನಿಂದ ಯಾವ ಕಾಗದವೂ ತಲಪದಿದ್ದರೆ ಅದು ನನ್ನ ತಪ್ಪಲ್ಲ. ಆದರೆ ಈ ಕಾಗದವನ್ನು ಯಾವ ಗೂಬೆಯಾಗಲಿ, ಅದರ ಅಪ್ಪನಾಗಲಿ ತಡೆಯುವುದಕ್ಕಾಗುವುದಿಲ್ಲ." ಈ ಕಾಗದವೂ ಏಕೆ ವಾಪಸ್ಸು ಬಂತು ? ಕಾಗದದ ಜತೆಯಲ್ಲಿ ಒಂದು ಸಣ್ಣ ತುಕಡೂ ಕಾಗದದಲ್ಲಿ ಸಿ.ಐ.ಡಿ. ಸಾಹೇಬನ ಷ.ರಾ. ಬರೆದಿದ್ದದ್ದು ಹೀಗೆ -"ಈ ಕಾಗದದಲ್ಲಿ ಖೈದಿಯು ತನ್ನ ತಂದೆಯ ವಿಷಯವಾಗಿ ಸಂದೇಹಾಸ್ಪದವಾದ ಕೆಲವು ಮಾತುಗಳನ್ನಾಡಿದ್ದಾನೆ. ಈ ಕಾರಣದಿಂದ ಇದನ್ನು ಪಾಸ್ ಮಾಡಲಾಗಿಲ್ಲ."

ಇದೇನಿದು ಹಠಾತ್ತಾಗಿ ಈತ ಇಷ್ಟು ಬೇಗ ಎದ್ದು ಹೋಗುತ್ತಿದ್ದಾರೆ ? ಈಗ ತಾನೇ ನಾನು ಹೇಳಿದ ಮೇಲೆ ನನ್ನ ಕಂಬಳಿಯ ಮೇಲೆ ಕೂತಿದ್ದರು. ಮತ್ತೆ ಇದೇಕೆ ಎದ್ದು ಹೋಗುತ್ತಿದ್ದಾರೆ ? ಬಹುಶಃ ಬಾಯಿಂದ ನಾನೇನೂ ಮಾತಾಡಲಿಲ್ಲವೆಂದು ಅಸಮಾಧಾನ ಪಟ್ಟು ಎದ್ದು ಹೋಗಿದ್ದಾರೆ. ಏನೆಂದುಕೊಂಡರೋ ಏನೋ ಈ ಮನುಷ್ಯ ! ಹೋಗಿದ್ದೇ ಬೈಜ್‌ನಾಥನ ಕುರ್ಚಿಯ ಮೇಲೆ ಕೂತರು. ಬೈಜ್‌ನಾಥನ ದಳ ನಿದ್ದೆ ಹೋದರೇನೋ ಬಹುಶಃ. ಈಗ ಅಲ್ಲಿ ಕೂತಿರುವವರು ಖೇದನ್‌ಲಾಲ್‌ಜೀ, ಸೂರಜ್‌ಬಲ್ಲೀ ಬಾಬು, ಹರಿಹರ್‌ಜೀ ಮತ್ತು ರಾಮಶರಣ್‌ಜೀ. ಇವರೆಲ್ಲ ಸರದಿ ಮಾಡಿಕೊಂಡು ಜಾಗರಣೆ ಮಾಡುತ್ತಿದ್ದಾರೆ. ಹಾಗೆ ನೋಡಿದರೆ ಎಲ್ಲರೂ ಜಾಗರಣೆ ಮಾಡುತ್ತಿದ್ದಾರೆ. ಆದರೆ ನಾಲ್ಕು ಜನ ಆದ ಮೇಲೆ ಮತ್ತೆ ನಾಲ್ಕು ಜನ ಸರದಿ ಮಾಡಿಕೊಂಡು ನನ್ನ ಮಂಚದ ಪಕ್ಕದಲ್ಲಿ ಕುರ್ಚಿಗಳನ್ನು ಹಾಕಿಕೊಂಡು ಕೂತಿರುವುದೇಕೆ ? ಇದಕ್ಕೆಂದೇ ಬಹುಶಃ ಬೈಜ್‌ನಾಥನ ದಳ ಸ್ವಲ್ಪ ಹೊತ್ತಿಗೆ ಮುಂಚೆ ಕೂತಿದ್ದರು. ಸದಾಶಿವ್ ಮತ್ತು ಬೈಜ್‌ನಾಥ್ ಪರಸ್ಪರ ಗುಟ್ಟಿನ ವಿಷಯ ಮಾತನಾಡುತ್ತಿದ್ದುದು ಇದರ ಬಗ್ಗೆಯೇ ಈಗ ಚೆನ್ನಾಗಿ ಗೊತ್ತಾಯಿತು. ಇವರೆಲ್ಲ ಸೇರಿ ನನ್ನ ಕಡೆ ನಿಗಾ ಇಟ್ಟಿರಬೇಕೆಂದುಕೊಂಡಿದ್ದಾರೆ. ನಾನೇನಾದರೂ ಮಾಡಿಬಿಟ್ಟೇನು ಎಂದು ಹೆದರಿ ಪಹರೆ ಕೂತಿದ್ದಾರೆ ! ಇವರು ಅಂದು ಕೊಂಡಿರುವಷ್ಟು ನನ್ನ ಮನಸ್ಸು ತಳಮಳಗೊಂಡಿದೆಯೆ ? ನನ್ನ ಮಗನ ಬಗ್ಗೆ ನನಗೆ ಅಷ್ಟು ಪ್ರೀತಿಯಿದ್ದಿದ್ದರೆ, ಇವತ್ತು ಅವನು ಈ ಗತಿಗೆ ಬಂದಿಳಿಯುತ್ತಿದ್ದನೆ ? ಈ ಸದಾಶಿವನು ಮತ್ತೆ ಎಲ್ಲಿಗೆ ಹೋದ ? ನನ್ನ ಮಂಚದ ಮೇಲೆ ಕೂತಿದ್ದನಲ್ಲ ? ಓ, ಈಗ ನೋಡುತ್ತ ಇದ್ದೇನೆ ಅವನು ಹಾಗೇ ನನ್ನ ಹಾಸಿಗೆ ಮೇಲೆ ಒರಗಿಕೊಂಡು ನಿದ್ದೆ ಮಾಡುತ್ತಿದ್ದಾನೆ. ಬಹುಶಃ ತೂಕಡಿಕೆ ಬಂದುಬಿಟ್ಟಿತೇನೋ ! ಪಾಪ, ತಡೆಯುವುದಕ್ಕೆ ಆಗಲಿಲ್ಲ. ಅರೆ, ಸೊಳ್ಳೆಗಳು ಹೇಗೆ ಮುತ್ತಿಕೊಂಡಿವೆ ! ಅವುಗಳ ಕಾಟದಲ್ಲಿ ಏನು ನಿದ್ದೆ ಮಾಡಬಲ್ಲ ಇವನು ? ಸೊಳ್ಳೇ ಪರದೆಯಾದರೂ ಹಾಕಿಬಿಡೋಣ. ಸುಖವಾಗಿ ನಿದ್ದೆ ಮಾಡಲಿ. ನಾನು ಎದ್ದದ್ದು ನೋಡಿ ಸೂರಜ್ ಬಲ್ಲೀ ಬಾಬುವೂ ಹರಿಹರ್‌ಜೀಯೂ ಸಹ ಓಡಿಬಂದರು. "ಯಾಕೆ.... ಯಾಕೆ... ಏನಾಯಿತು ? ನೀವು ಯಾಕೆ ಎದ್ದಿರಿ ? ಬಿಡಿ, ನಾನು ಸೊಳ್ಳೇ ಪರದೆ ಕಟ್ಟುತ್ತೇನೆ ನೀವು ಹೋಗಿ ಕೂಡಿ." ಕೂಗಿಕೊಂಡು ಕೂಗಿಕೊಂಡೇ ಸೊಳ್ಳೇಪರದೆ ಕಟ್ಟಿದ್ದಾಯಿತು. ಆ ಕೂಗಿನಲ್ಲಿ ಸದಾಶಿವನಿಗೂ ಎಚ್ಚರವಾಗಿ ಹೋಗಿ ಅವನು

ಎದ್ದುಕೂತ. ಪಾಪ, ತಾನು ಇಷ್ಟು ಗಲಾಟೆಗೆ ಕೇಂದ್ರವಾದೆನಲ್ಲ ಎಂದು ನಾಚಿಕೊಂಡ. ಮತ್ತೆ ಬಂದು ನನ್ನ ಪಕ್ಕದಲ್ಲಿ ಕಂಬಳಿಯ ಮೇಲೆ ಕೂತು, "ಕೂಡಿ, ಸೂರಜ್‌ಬಲ್ಲೀ ಬಾಬು" ಎಂದ.

ಸೂರಜ್‌ಬಲ್ಲೀ ಬಾಬು ನನ್ನ ಪಕ್ಕದಲ್ಲಿ ಬಂದೂ ಕೂತರು. ಅವರನ್ನ ಕಂಡರೆ ತುಂಬಾ ಇಷ್ಟವಾಗುತ್ತದೆ. ಒಳ್ಳೇ ಗಂಭೀರ ಪ್ರಕೃತಿಯ ಮನುಷ್ಯ. ಆತನ ಒಬ್ಬನೇ ಮಗ ಹೋದ ಆಗಸ್ಟ್ ಆಂದೋಳನದಲ್ಲಿ ಬಂದೂಕಿನ ಗೋಲಿಗೆ ಬಲಿಯಾಗಿ ಸತ್ತು ಹೋಗಿದ್ದ. ಹತ್ತೇ ವರುಷದ ಹುಡುಗ. ಅವನ ತಂದೆಯನ್ನು ಅರೆಸ್ಟು ಮಾಡಿ ಪೋಲೀಸ್ ಠಾಣೆಗೆ ಕೊಂಡೊಯ್ದಾಗ ಜನ ಗುಂಪು ಗುಂಪಾಗಿ ಮೆರವಣಿಗೆ ಮಾಡಿಕೊಂಡು ಜಯಜಯಕಾರ ಮಾಡುತ್ತ ಅವರನ್ನು ಹಿಂಬಾಲಿಸಿದರು. ಅವನೂ ಆ ಗುಂಪಿನಲ್ಲಿ ಸೇರಿಕೊಂಡ; ತಾಲ್ಲೂಕಿನ ಊರಿಗೆ ಕಳಿಸಲ್ಪಡುವ ಮುನ್ನ ತಂದೆಯ ಮುಖ ನೋಡುವ ಉದ್ದೇಶ್ಯ. ಮನೆಯಲ್ಲಿ ಅವನ ಅಜ್ಜಿ ಅತ್ತು ಗೋಳಾಡಲು ತೊಡಗಿದ್ದಳು. ಅವನ ತಾಯಿ ಕಿಟಕಿಯ ಪಕ್ಕದಲ್ಲಿ ನಿಂತು ಕಣ್ಣೀರು ಸುರಿಸುತ್ತಿದ್ದಳು. ಆದರೆ ಹುಡುಗನಿಗೇನೋ ಉತ್ಸಾಹ. ಏನೋ ರೋಮ್ಯಾಂಚ! "ಜಯ್, ಸೂರಜ್‌ಬಲ್ಲೀ ಕಿ ಜೈ!" ಸಾವಿರಾರು ಕಂಠಗಳಿಂದ ಅವರ ಅಪ್ಪನ ಹೆಸರಲ್ಲಿ ಜಯಕಾರ! ಎಲ್ಲರ ಬಾಯಲ್ಲೂ ಅವರ ಅಪ್ಪನನ್ನ ಕುರಿತು ಪ್ರಶಂಸೆ. ಬೊಂಬಾಯಲ್ಲಿ ಕಾಂಗ್ರೆಸಿನ ದೊಡ್ಡ ಮೀಟಿಂಗು ಆಗಿತ್ತು. ಅವತ್ತು ಬೆಳಗ್ಗೆಯೇ ಅಪ್ಪ ಎಲ್ಲ ಜನರಿಗೂ ಸುದ್ದಿ ಕಳಿಸಿದ್ದ. ಮಹಾತ್ಮಾಜಿಯವರ ದಸ್ತಗಿರಿ ಆಗಿದೆಯೆಂದು. ಅದಾದ ಮೇಲೆ ಅವರ ದಸ್ತಗಿರಿ ಆದದ್ದು ಕೆಲವೇ ನಿಮಿಷಗಳಲ್ಲಿ. ಎಲ್ಲರ ಬಾಯಲ್ಲೂ ಅವರಪ್ಪನ ಮಾತೇ! ಅಪ್ಪನೂ ಮಹಾತ್ಮಾಗಾಂಧಿಯಂತೆಯೇ ದೊಡ್ಡವನಾಗಿ ಬಿಟ್ಟಿದ್ದಾನೆ. ಪೋಲೀಸ್‌ನವರ ಮೇಲೆ ಅವನಿಗೆ ಕೋಪ ಬರುತ್ತ ಇದೆ. ಅವರಪ್ಪನಿಗೆ ಅವರೆಲ್ಲ ಏನೋ ಮಾಡುತ್ತಾರೆ. ಜೈಲಿನ ಮಾತೆತ್ತಿದರೂ ಮೊದಲು ಮೊದಲು ಅವನಿಗೆ ತುಂಬ ಭಯವಾಗುತ್ತಿತ್ತು. ಆದರೆ ಅವನು ಕಂಡ ಹಾಗೆ ಹೋದ ಸತ್ಯಾಗ್ರಹದಲ್ಲಿ ಅಪ್ಪ ಜೈಲಿಗೆ ಹೋಗುವಾಗ ಜನ ಅವರ ಕೊರಳಲ್ಲಿ ಎಷ್ಟು ಶ್ಯಾವಂತಿಗೆ ಹೂಗಳ ಮಾಲೆಗಳನ್ನು ಹಾಕಿದ್ದರು. ಅಜ್ಜಿ ಅದಕ್ಕೆ ಬಹಳ ದಿನ ಹಿಂದೆ ಹೇಳುತ್ತಿದ್ದಳು. ಅವನ ಅಪ್ಪ ಇಂಗ್ಲಿಷರ ಯುದ್ಧಕ್ಕೆ ಒಂದು ಕಾಸೂ ಕೊಡುವುದಿಲ್ಲ. ಒಬ್ಬ ಮನುಷ್ಯನನ್ನೂ ಕಳಿಸುವುದಿಲ್ಲ ಎಂದು. ಇದೇ ಗರ್ಜನೆ ಮಾಡುತ್ತ ಪೋಲೀಸರ ಲಾಠಿ ಏಟುಗಳ ಜೋರಿಗೆ ಅವನ ಪ್ರಾಣವೇ ಈಚೆ ಬಂದು ಬಿಡುತ್ತದೆ ಎನ್ನುತ್ತಿದ್ದಳು. ಆದರೆ ಅವನು ನೋಡಿದ ಹಾಗೆ ಅದಕ್ಕೆ ವ್ಯತಿರಿಕ್ತವೇ ಆಯಿತು. ಆ ಸಮಯದಲ್ಲಿ ದರೋಗಾ ಸಾಹೇಬರು ಅಷ್ಟು ದೊಡ್ಡ ಅಧಿಕಾರಿಯಾದವರು ಸಹ, ಅಪ್ಪನನ್ನು ತಮ್ಮ ಬಂಗಲೆಗೆ ಬರಮಾಡಿಕೊಂಡು ಔತಣ ಮಾಡಿದ್ದರು. ಅವರ ಹೆಂಡತಿ ಸಹ ಅವನನ್ನು ಒಳಗೆ ಕರೆದುಕೊಂಡು ಹೋಗಿ ಒಳ್ಳೇ ತಿಂಡಿತಿನಿಸುಗಳನ್ನು ಕೊಟ್ಟಿದ್ದಳು.

ಅಪ್ಪ ಕೆಲವು ದಿನಗಳಾದ ಮೇಲೆ ಜೈಲಿನಿಂದ ಮರಳಿ ಬಂದಾಗ ಪೆಟ್ಟಿಗೆಯಲ್ಲಿ ತರಹೇವಾರಿ ಸಾಮಾನುಗಳನ್ನು ತಂದಿದ್ದರು. ಸಾಬೂನು, ಪೆನ್ಸಿಲ್, ರೂಲ್ ಹಾಕಿದ ಕಾಗದ, ಜೈಲಿನಲ್ಲಿ ಮುಖ ಕ್ಷೌರ ಮಾಡಿಕೊಳ್ಳುವ 'ಬಿಲೇಡ್' ಅದರಿಂದ ಅವನು ಒಂದು ಚೂರಿ ಸಹ ತಯಾರು ಮಾಡಿದ್ದ. ಆ ಪೆಟ್ಟಿಗೆಯೊಳಗೆ ಇನ್ನೊಂದು

ಸಾಮಾನಿತ್ತು 'ಬಿಲೇತಿ ದಾಂತೂನ್' (ಟೂಥ್ ಬ್ರಶ್). ಅಜ್ಜಿ ತಲೆ ಬೋಳಿಸಿಕೊಂಡಾದ ಹತ್ತು-ಹನ್ನೆರಡು ದಿನಗಳಾದ ಮೇಲೆ ಅವರ ಕೂದಲು ಹೇಗೆ ಕಾಣುತ್ತಿತ್ತೋ ಈ ದಾಂತೂನ್‌ದ ಕೂದಲು ಅದೇ ನಮೂನೆಯಾಗಿ, ಬೆಳ್ಳಗೆ ಇರುತ್ತಿತ್ತು. ಇದರ ಮೇಲೆ ಮೊಸರಿನಂಥ ಒಂದು ಪದಾರ್ಥ ಹರವಿ ಹಲ್ಲುಜ್ಜಿಕೊಳ್ಳತಕ್ಕದ್ದು. ತಂಗಿ ಧನ್‌ಧನಿಯಾ ಎಷ್ಟು ಮಡ್ಡಿ ಎಂದರೆ ಈ ದಾಂತೂನ್ ಅನ್ನು ಸ್ವಲ್ಪ ಬಾಯಲ್ಲಿಟ್ಟರೆ ಅತ್ತು ರಂಪ ಮಾಡಿಬಿಡುತ್ತ ಇದ್ದಳು. ಅವನು ಎಳೆಯವನಾಗಿದ್ದಾಗ ಅಜ್ಜನೂ ಅವನಿಗೇ ಇದೇ ರೀತಿ ಹೆದರಿಸುತ್ತ ಇದ್ದರು. ಪೊಲೀಸ್ ಠಾಣೆಯ ತಂತಿಯ ಕಾಂಪೌಂಡು ಸುತ್ತಲೂ ಎಷ್ಟು ದಟ್ಟವಾದ ಜನರ ಸಂದಣಿ! ಠಾಣೆಯ ಮಹಡಿ ಸರಿಯಾಗಿ ಕಾಣುವುದೇ ಇಲ್ಲ. ಹಾಗಿದ್ದರೆ ಅಪ್ಪನ ಮುಖ ಕಾಣಿಸುತ್ತಿತ್ತು. ಕಾಂಪೌಂಡಿನ ಗೋಡೆಯನ್ನು ಒಡೆದು ಹಾಕಿ ಜನರ ಗುಂಪು ಕೂಗುಹಾಕುತ್ತ ಠಾಣೆಯೊಳಗೆ ನುಗ್ಗಿತ್ತು. ಆ ಗುಂಪಿನ ನಡುವೆ ಸಿಕ್ಕಿಹಾಕಿಕೊಂಡ ಅವನೂ ಅವರೊಂದಿಗೇ ಮುಂದೆ ಹೋಗುತ್ತಿದ್ದಾನೆ. "ಬೋಲೋ ಸೂರಜ್‌ಬಲ್ಲೀ ಜೀ ಕಿ ಜೈ ಜೈ!" ಎಂದು ಅರಚುತ್ತ ಎಲ್ಲರೂ ಠಾಣೆಯ ದಿಕ್ಕಿನಲ್ಲಿ ಓಡುತ್ತಿದ್ದಾರೆ.... ಯಾಕೆ? ಆಮೇಲೆ....

ಅವತ್ತಿನ ಮಾರನೆಯ ದಿನ ರಾತ್ರಿ ಸೂರಜ್‌ಬಲ್ಲೀ ಬಾಬುವನ್ನು "ಲಾಕ್‌ಅಪ್" ಹೊರಗೆ ಕರೆದು ತಂದರು ಪೊಲೀಸರು. ಅವರನ್ನು ತಾಲೂಕು ಆಸ್ಪತ್ರೆಗೆ ಕೊಂಡೊಯ್ಯಲಾಯಿತು ಎಂದು ಕೇಳಿದೆ. ಆಹಾ, ಇವರಿಗೆ ಎಷ್ಟು ಅಪಾರ ಕರುಣೆ! ಕಡೆಯ ಗಳಿಗೆಯಲ್ಲಿದ್ದ ಮಗನನ್ನು ನೋಡಲು ಕೊಂಡುಹೋಗಿದ್ದರು. ಒಂದೆರಡು ಗಂಟೆಗಳ ತನಕ ಸ್ಮಶಾನದಲ್ಲಿ ಸಹ ನಿಂತಿರಲು ಬಿಟ್ಟಿದ್ದರು. ಹುಡುಗನ ಎಡಕಾಲನ್ನು ಮಂಡಿಯ ಮೇಲು ಭಾಗದಿಂದ ಕೊಯಿದು ಹಾಕಬೇಕಾಯಿತು. ಅದಾದ ಮೇಲೂ ಸಿವಿಲ್ ಸರ್ಜನರು ಹುಡುಗ ಇನ್ನು ಬದುಕಲಾರ ಎಂದು ತಿಳಿದುಕೊಂಡುಬಿಟ್ಟರು. ಮರುದಿನ ಸಂಜೆ ಸೂರಜ್‌ಬಲ್ಲೀ ಬಾಬು ನಮ್ಮಲ್ಲಿಗೆ ಬಂದಾಗ ಅವರ ಮುಂದೆ ಹೋಗುವುದಕ್ಕೇ ನನಗೆ ಮನಸ್ಸು ಬರಲಿಲ್ಲ. ಅವರ ಮುಖ ನೋಡುವುದು ಹೇಗೆ? ಮಾತೇ ಉಡುಗಿಹೋದ ಗಂಭೀರ ಪ್ರಕೃತಿಯ ಆ ಗೃಹಸ್ಥನನ್ನು ಸಮಾಧಾನ ಹೇಗೆ ಮಾಡುವುದು? ಅವತ್ತು ನಾನೂ ಸಹ ಅವರ ಮುಂದೆ ಇದೇ ರೀತಿ ಮಾತಿಲ್ಲದೆ ಸುಮ್ಮನೆ ಕೂತಿದ್ದ. "ಕೂತುಕೊಳ್ಳಿ" ಅಂದರು. ಎಷ್ಟೋ ಹೊತ್ತಾದ ಮೇಲೆ ಒಂದೇ ಒಂದು ಮಾತು ಹೇಳಿದ್ದರು. "ಕೆಲವೇ ಕೆಲವು ಗಳಿಗೆ ಮಾತ್ರ ಜ್ಞಾನ ಬಂದಿತ್ತು. ಆಗ ನನ್ನ ಕೊರಳನ್ನು ಅಪ್ಪಿಕೊಂಡು, 'ಉಹ್... ಎಷ್ಟು ಬಿಸಿಗಾಳಿ ಜೋರಾಗಿ ಬರತ್ತೆ! ಇಲ್ಲವಾ ಬಾಬೂಜೀ (ಅಪ್ಪ!)' ಅಷ್ಟೇ ಅಂದದ್ದು. ಅದಾದ ಎರಡು ಗಂಟೆಗಳ ಒಳಗೇ ಎಲ್ಲಾ ಮುಗಿದುಹೋಯಿತು" ಏನಿದ್ದು? ನನ್ನ ಕಣ್ಣಲ್ಲಿ ನೀರು ಬರುತ್ತಾ ಇದೆ? ಇಲ್ಲ.... ಈ ಕಣ್ಣೀರು ಸೂರಜ್‌ಬಲ್ಲೀ ಬಾಬುಗಳ ಬಗ್ಗೆ ಸಹಾನುಭೂತಿಯಿಂದ. ಬಿಲೂ ವಿಷಯವನ್ನು ಯೋಚಿಸಿದ್ದರಿಂದಲ್ಲ. ಸೂರಜ್‌ಬಲ್ಲೀ ಬಾಬುಗಳ ಕಣ್ಣಲ್ಲೂ ನೀರು ಬರುತ್ತಿರುವುದನ್ನು ಕಂಡೆ. ಒಬ್ಬರ ಕಣ್ಣಲ್ಲಿ ನೀರು ಬರುತ್ತಿದ್ದರೆ ಹತ್ತಿರ ಇರುವವರಿಗೂ ಕಣ್ಣೀರು ತಡೆಯುವುದು ಕಷ್ಟ. ಛೀ ಛಿ! ನನಗೇನು ಹೀಗಾಗಿದೆ? ಇಷ್ಟು ಮಟ್ಟಿಗೆ ನನ್ನನ್ನೇ ಹಿಡಿದಿಟ್ಟುಕೊಳ್ಳುವಷ್ಟು

ಶಕ್ತಿಯಿಲ್ಲವಲ್ಲ ನನಗೆ! ಮಹಾತ್ಮಾಜೀ ನನ್ನ ಮನಸ್ಸಿಗೆ, ನನ್ನ ಆತ್ಮಕ್ಕೆ ಶಕ್ತಿಕೊಡಿ. ಸೂರಜ್‌ಬಲ್ಲೀ ಬಾಬುಗಳು ಒಬ್ಬರು ಮಾತ್ರ ನನ್ನ ಮನಸ್ಸಿನ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬಲ್ಲರು.

ವರಾಂಡದ ಮೇಲುಗಡೆಯಿಂದ ಯಾರೋ ಈ ಕಡೆ ಓಡಿಬರುತ್ತ ಇದ್ದಾರೆ. ವಾರ್ಡರ್ ಸಿಂಗಜೀ ಏದುತ್ತ ಏದುತ್ತ ಬಂದು ಕಿಟಕಿಯ ಮುಂದೆ ಬಿದ್ದಿದ್ದ ಲಾಟೀನನ್ನು ಕೈಗೆತ್ತಿಕೊಂಡ. ಆಮೇಲೆ ಗಂಭೀರವಾಗಿ, ನಿಧಾನವಾಗಿ ಹೆಜ್ಜೆ ಹಾಕುತ್ತ ಬೇರೆ ಎಲ್ಲಿಗೋ ಹೊರಟುಹೋದ. ಒಂದೆರಡು ನಿಮಿಷಗಳಾದ ಮೇಲೆ ಅಸಿಸ್ಟೆಂಟ್ ಜೈಲರಾದ ಜಾಫರ್ ಸಾಹೇಬರು ಸಲಾಕೆಗಳ ಹೊರಗಡೆ ಬಂದು ನಿಂತರು. ನಮ್ಮೆಲ್ಲರ ಕಡೆ ತಿರುಗಿ ನಗುತ್ತ 'ಆದಾಬ್' ಎಂದರು. ಆಮೇಲೆ ಇನ್ನೊಂದು ಮಾತನ್ನೂ ಆಡದೆ ಇನ್ನೊಂದು ಕಡೆ ಹೊರಟುಹೋದರು. ಇವರು ಬಂದಿದ್ದು ರಾತ್ರಿಯ ಗಸ್ತು ಮಾಡುವುದಕ್ಕೆ. ಒಂದೊಂದು ದಿನವೂ ಅಸಿಸ್ಟೆಂಟ್ ಜೈಲರುಗಳು ಸರದಿಯ ಮೇಲೆ ಡ್ಯೂಟಿಗೆ ಬರುತ್ತಾರೆ. ಇವರು ಬರುತ್ತಾರೆಂಬ ಹೆದರಿಕೆ ಮೇಲೆ ಆ ವಾರ್ಡರು ಓಡಿ ಬಂದು ತನ್ನ ಲಾಟೀನು ತೆಗೆದುಕೊಂಡು ಹೋದದ್ದು. ಹೋಗಲಿ, ಆ ಮಾತು.

ಸೂರಜ್‌ಬಲ್ಲೀ ಬಾಬುಗಳನ್ನು ಅವರ ಮಗನ ದಹನ ಕ್ರಿಯೆಯಲ್ಲಿ ಭಾಗವಹಿಸಲು ಬಿಟ್ಟಹಾಗೆ ನನಗೂ ನನ್ನ ಮಗನ ದಹನ ಕಾರ್ಯ ನಡೆಸಲು ಅನುಮತಿ ಕೊಡುತ್ತಾರೆಯೆ ? ಬಹುಶಃ ಕೊಡುವುದಿಲ್ಲ. ಹಾಗೆ ಕೊಡುವ ಹಾಗಿದ್ದರೆ ಮೊದಲೇ ಹೇಳಿ ಕಳಿಸುತ್ತಿದ್ದರು. ಅನುಮತಿ ಕೊಟ್ಟರೆ ಕಡೆಯ ಸಲ ನಮ್ಮ ಬಿಲೂ ಮುಖ ನೋಡಬಹುದಾಗಿತ್ತು ಇನ್ನು ನೋಡುವುದೇನಿದೆ ? ಬಹುಶಃ ಅವನ ಕಡೆ ನೋಡಲು ಆಗುವುದೇ ಇಲ್ಲ.... ಇಲ್ಲ... ಇಲ್ಲ ಇನ್ನು ನೋಡುವುದೇನಿದೆ ? ಅವನ ಅಂದವಾದ ಆಕರ್ಷಕ ಮುಖ ಚಹರೆ ಈಗಾಗಲೇ ನನ್ನ ಹೃದಯದೊಳಗೆ ಅಚ್ಚಾಗಿಬಿಟ್ಟಿದೆ. ಅದೇ ಸಾಕು ನನಗೆ. ಆ ಸ್ವಾಭಾವಿಕವಾದ, ಪರಿಚಿತ ಮುಖವೇ ನನ್ನ ಹೃದಯದಲ್ಲಿ ಸದಾ ನಿಂತಿರಲಿ. ಮತ್ತೆ ಬೇರೇನು ನೋಡುವುದಿದೆ ? ಆದರೆ ನಾಳೆ ಒಂದು ಸಲ ಹೊರಗೆ ಹೋಗುವುದಕ್ಕೆ ಬಿಟ್ಟರೆ ನೀಲುವನ್ನು ನೋಡಿ ಬರಬಹುದು. ಅವನೊಡನೆ ಒಮ್ಮೆ ಭೆಟ್ಟಿಯಾಗುವುದು ಅತ್ಯಂತ ಅವಶ್ಯಕವಾಗಿದೆ. ಅವನ ಮನಸ್ಸಿನ ಅವಸ್ಥೆ ಹೇಗಿರುತ್ತದೋ ಈಗ! ಕಡೆಯಲ್ಲಿ ಏನು ತೋಚಿ ಏನು ದುಡುಕುತನ ಮಾಡಿಬಿಡುತ್ತಾನೋ ಎಂದು ದಿಗಿಲಾಗುತ್ತಿದೆ. ಒಬ್ಬನಂತೂ ಹೋದ. ಇನ್ನೊಬ್ಬನ ಹಣೇಬರಹ ಹೇಗಿದೆಯೋ.... ದೇವರೇ.... ನಿನಗೇ ಗೊತ್ತು. ನನಗಂತೂ ಏನಾಗಬೇಕಾಗಿತ್ತೋ ಆಯಿತು. ನನ್ನ ಚಿಂತೆ ಈಗ ಬಿಲೂ ತಾಯಿಯನ್ನು ಕುರಿತು. ಅವಳು ಖಂಡಿತ ಸ್ನಾನ, ಊಟ ಬಿಟ್ಟು ಗೋಳಾಡುತ್ತ ಇರುತ್ತಾಳೆ. ಅವಳಿರುವ ಜೈಲಿನಲ್ಲಿ ಸಮಾಚಾರ ತಿಳಿಯುವುದು ಎಷ್ಟು ಹೊತ್ತಾದೀತು! ಅವಳಿಗೆ ಎಲ್ಲಾ ತಿಳಿದುಹೋಗಿರುತ್ತದೆ. ನೀಲೂ ಅವನ ಅಣ್ಣನ ವಿರುದ್ಧ ಸಾಕ್ಷ್ಯ ಹೇಳಿದುದೂ ಅವಳಿಗೆ ತಿಳಿದಿರುತ್ತದೆ. ಈ ನೋವನ್ನು ಹೇಗೆ ತಾನೇ ಸಹಿಸಿಯಾಳು ? ಈ ರಾಜಕೀಯದ ತೊಡಕಿನ ರಂಗವನ್ನು ಅವಳೇನು ಇಷ್ಟದಿಂದ ಆರಿಸಿಕೊಂಡು ಪ್ರವೇಶಿಸಲಿಲ್ಲ. ಪ್ರವಾಹದಲ್ಲಿ ಕೊಚ್ಚಿಕೊಂಡು ಬಂದ ಹಾಗೆ ಬಂದು ಸೇರಿಕೊಂಡಳು, ಅಷ್ಟೆ. ಅವಳಿಗೆ ಸ್ವಾಭಾವಿಕವಾಗಿ ಹೊಂದಿಕೊಳ್ಳುವ ಸ್ಥಳ ಅವಳ

ಮನೆಗೆಲಸ, ಸಂಸಾರ ನಿರ್ವಹಣೆ. ಸದಾ ಸುಖದಿಂದ ತುಂಬಿರುವ ಹಾಗೆ ಸಂಸಾರವನ್ನು ಕೈಯಾರೆ ಅಚ್ಚುಕಟ್ಟಾಗಿ ಕಟ್ಟುವ, ಮನಸ್ಸಿಗೆ ತೃಪ್ತಿ ಕೊಡುವ ರಂಗ. ಆ ನಾಲ್ಕು ಗೋಡೆಗಳ ಮಧ್ಯೆ ಹೊರಗಡೆಯ ಸುಂಟರಗಾಳಿ ಪ್ರವೇಶ ಮಾಡುವುದಕ್ಕೇ ಎಡೆಯಿಲ್ಲ. ಆ ಸಂಸಾರದ ನಾಲ್ಕು ಗೋಡೆಗಳು ಹೊರಗಿನ ವಿರಾಟ, ಎಟುಕಲಾರದ ಜಗತ್ತನ್ನು ಸೀಮಿತ ಮಾಡಿ ನಿಶ್ಚಿತವಾಗಿ ಪ್ರತ್ಯಕ್ಷ ಮಾಡಿ ತಂದಿರಿಸುತ್ತವೆ. ಅವೇ ಅವಳಿಗೆ ಬೇಕಾಗಿರುವುದು. ಅಂತಹ ಸುರಕ್ಷಿತವಾದ ಸ್ಥಳದಿಂದ ನಾನು ಅವಳನ್ನು ಬಲವಂತ ಮಾಡಿ ಈ ಅಸ್ಪಷ್ಟ ಗುರಿಯುಳ್ಳ ಮುಳ್ಳು ದಾರಿಯಲ್ಲಿ ಎಳೆದುಕೊಂಡು ಬಂದಿದ್ದೇನೆ. ಬಾಯಿ ಬಿಚ್ಚಿ ಹೇಳದೆ ಹೋದರೂ ಅವಳು ಇದನ್ನು ಹೇಗೆ ಸೈರಿಸಬಲ್ಲಳು ? ಪಾಪ, ಇದುವರೆಗೆ ಎಷ್ಟು ಸಹಿಸಿಕೊಂಡಿದ್ದಾಳೋ! ಆದರೆ ಸಹನೆಗೂ ಒಂದು ಮಿತಿ ಬೇಡವೆ ? ಇವಳನ್ನಾದರೂ ನಾಳೆ ದಹನ ಕಾರ್ಯಕ್ಕೆ ಹೋಗಲು ಬಿಡುತ್ತಾರೆಯೆ ? ಬಿಡದೇ ಇದ್ದರೆ ಒಳ್ಳೆಯದು. ಅಧಿಕಾರಿಗಳು ಬಹುಶಃ ಯಾರನ್ನೂ ಹೋಗಲು ಬಿಡುವುದಿಲ್ಲ. ಬಹುಶಃ ಮಿಲಿಟರಿ ಲಾರಿಯಲ್ಲಿ ಶವ ದೇಹವನ್ನು ಕೊಂಡೊಯ್ಯಲಾಗುತ್ತದೆ ಮತ್ತು ಸೂಪರಿಂಟೆಂಡೆಂಟರು ವಿಶೇಷ ಅನುಗ್ರಹ ತೋರಿ ಬ್ರಾಹ್ಮಣ ವಾರ್ಡರುಗಳ ಕೈಯಿಂದ ದಹನ ಮಾಡಿಸುತ್ತಾರೇನೋ! ಜೈಲಿನ ನಾಲ್ಕೂ ಕಡೆ ಇವತ್ತೇನು ಇಷ್ಟು ಮಂದಿ ಸಶಸ್ತ್ರ ಪೋಲೀಸರ ಪಹರೆ ? ಅವರೆಲ್ಲ ಬಹುಶಃ ಇಷ್ಟು ಹೊತ್ತೂ ಗಸ್ತು ಹೊಡೆಯುತ್ತಿದ್ದರೆಂದು ಕಾಣುತ್ತದೆ. ಯಾಕೋ ಕಾಣೆ ಈ ವ್ಯರ್ಥ ಪರಿಶ್ರಮ ! ಇಷ್ಟು ಹುಷಾರಿ, ಇಷ್ಟು ಜಾಗರೂಕತೆಗೆ ಕಾರಣವೇ ಇಲ್ಲ. ಹೊರಗಡೆಯ ವಾತಾವರಣ ಹೇಗಿದೆಯೋ ಹೇಳಲಾರೆ. ಆದರೆ ಜೈಲಿನ ಒಳಗಡೆ ಮಾತ್ರ ಒಂದಿಷ್ಟು ಕಳವಳವಿಲ್ಲ. ಚಾಂಚಲ್ಯವಿಲ್ಲ. ಎಲ್ಲ ದಿನಗಳ ಹಾಗೇ ಇವತ್ತೂ ಸಹ. ಬೆಳಗ್ಗೆ ಬಹುಶಃ ಜೈಲ್ ಗೇಟಿನಲ್ಲಿ ಗುಂಪು ಸೇರುತ್ತದೆ. ನಿಷೇಧಾಜ್ಞೆಯನ್ನು ನಿರ್ಲಕ್ಷ್ಯ ಮಾಡಿಯಾದರೂ ಒಂದೆರಡು ಶೋಕ ಸಭೆಗಳಾಗುತ್ತವೆ. ಬಹುಶಃ ಶಹರಿನಲ್ಲಿ ಹರತಾಳ ಆಗುತ್ತದೆ. ಆದರೆ ಏನು ? ಇವೆಲ್ಲದರಿಂದಲೂ ನನಗಾಗಿರುವ ನಷ್ಟ ಸರಿ ಹೋದೀತೇನು ? ಕಳೆದುಕೊಂಡ ಮಗ ಮರಳಿ ಬಂದಾನೆ ? ಇವನ ತಾಯಿಯನ್ನು ಸಂತೈಸುವವರು ಒಬ್ಬರೂ ಇಲ್ಲ. ಅವಳ ತಂಗಿ ಬೃಂದಾವನದಲ್ಲಿ ಇರುತ್ತಾಳೆ. ಅವಳೋ, ಎಲ್ಲಾ ಬಿಟ್ಟವಳು. ಸಂಸಾರದ ಕಡೆ ಉದಾಸೀನ. ಅಕ್ಕನ ಮಕ್ಕಳನ್ನ ಗುರುತು ಹಿಡಿಯುವುದೂ ಕಷ್ಟ. ಇನ್ನು ಬಿಲೂ ಮಾವ ಇದ್ದಾನೆ. ಸೋದರ ಮಾವ, ಸರ್ಕಾರೀ ನೌಕರ. ಹೀಗೇ.... ಸ್ವಲ್ಪ ಯಾವುದನ್ನೂ ಹಚ್ಚಿಕೊಳ್ಳದ ಸ್ವಭಾವ. ವಿಜಯದಶಮಿಯ ದಿವಸ ಪದ್ಧತಿಯ ಪ್ರಕಾರ ಶುಭಾಕಾಂಕ್ಷೆಯ ಪತ್ರಕೂಡ ಕಳಿಸುವುದಿಲ್ಲ ಮನುಷ್ಯ. ಹೀಗಿರುವಾಗ, ಸಾಲದೆಂಬಂತೆ ನಮ್ಮ ರಾಜಕೀಯ ಗೊಂದಲ. ಇನ್ನು ಮೇಲಂತೂ ಅವನು ತನ್ನ ನೌಕರಿಗೆಲ್ಲಿ ಖೋತಾ ಬರುತ್ತೋ ಎಂಬ ದಿಗಿಲಿನಿಂದ ನಮ್ಮ ಸಂಬಂಧ ಸಹ ಒಪ್ಪಿಕೊಳ್ಳುವುದಿಲ್ಲ, ಗೊತ್ತು. ನೀಲೂ, ಬಿಲೂ, ಇಬ್ಬರಲ್ಲಿ ಯಾರೂ ಸೋದರ ಮಾವನ ಮನೆಗೆ ಹೋಗಲು ಇಷ್ಟಪಡುವುದಿಲ್ಲ. ದೊಡ್ಡವರಾದ ಮೇಲೆ ಒಂದುಸಲ ಹೋಗಿದ್ದರು. ಹಠಾತ್ತಾಗಿ ಒಂದು ದಿನ ನೋಡಿದರೆ, ಹೊರಟುಬಂದುಬಿಟ್ಟಿದ್ದಾರೆ ! ಯಾಕರೋ ಅಂದರೆ ಹೇಳಿದರೆ ತಾನೆ! ಆಮೇಲೆ ತಿಳಿಯಬಂತು. ಇವರ

ಸೋದರಮಾವ ನನ್ನನ್ನ ಕುರಿತು ಮಾತಾಡುತ್ತ ನಾನೊಬ್ಬ "ಪರ್‌ಫೆಕ್ಟ್ ವ್ಯಾಗಬಾಂಡ್!" (ಲಂಗು ಲಗಾಮಿಲ್ಲದೆ ಅಂಡಲೆಯುವ ಪೋಕರಿ) ಅಂದನಂತೆ. ಈ ಹುಡುಗರಿಗೆ ಅದು ಸಹನೆ ಆಗಲಿಲ್ಲ.... ಹೇಗೆ ಆಗುತ್ತದೆ ? ಆ ಮಾವ ಹೇಳಿದ್ದೂ ನಿಜವೇ. ಅವನ ದೃಷ್ಟಿಯಲ್ಲಿ ನಾನೊಬ್ಬ ಅಂಡಲೆಯುವ ಪೋಕರಿಯಲ್ಲದೆ ಬೇರೇನು ? ಸಂಸಾರದ ವಿಷಯದಲ್ಲಿ ನನಗೆಲ್ಲಿದೆ ಜವಾಬುದಾರಿ ಜ್ಞಾನ ? ಸಂಪಾದನೆಯಿಲ್ಲ – ಅಲ್ಲದೆ ಅಲ್ಲಿ, ಇಲ್ಲಿ ಅಲೆದಾಡಿಕೊಂಡು ಇರುತ್ತೇನೆ. ಲೆಕ್ಕಾಚಾರದ ಮನುಷ್ಯರು, ಲೌಕಿಕ ಬುದ್ಧಿಯವರು ನನ್ನಂಥವರನ್ನು ವ್ಯಾಗಬಾಂಡ್ ಎಂದು ಕರೆಯದೆ ಇನ್ನ್ಯಾರನ್ನು ಕರೆಯುತ್ತಾರೆ ? ಸಾಮಾನ್ಯವಾಗಿ ಇವರೆಲ್ಲ ನಮ್ಮಂಥವರನ್ನು ಹುಚ್ಚರೆನ್ನುತ್ತಾರೆ. ಏನೋ ಯಾವಾಗಲಾದರೂ ಗೌರವ ತೋರಿದಾಗ ಒಳ್ಳೆಯ ಮಾತಾಡಬೇಕು ಅನ್ನಿಸಿದಾಗ 'ವ್ಯಾಗಬಾಂಡ್' ಅಂತಾರೆ! ಇಂಗ್ಲೆಂಡಿನಲ್ಲಿ ಹಿಂದಿನ ಕಾಲದಲ್ಲಿ "ವ್ಯಾಗ್ರನರಿ ಲಾ" ಎಂಬ ಕಾನೂನು ಬಂದಿತ್ತು. ನಾನಂತೂ ಆ ಕಾನೂನಿಗೆ ಬದ್ಧನಾಗುತ್ತಿದ್ದೆ. ಇಲ್ಲಿ ಸಹ ಇನ್ನೂ ಅನಾಯಾಸವಾಗಿ ನಮ್ಮಂಥವರ ಹೆಸರಿನ ಮೇಲೆ ಬಿ.ಎಲ್. ಕೇಸು ಆಗಬಹುದಾಗಿತ್ತು. 1921-22ರಲ್ಲಿ ಎಷ್ಟೋ ದೊಡ್ಡದೊಡ್ಡ ಕಾಂಗ್ರೆಸ್ ನೇತಾರರ ವಿರುದ್ಧ ಬಿ.ಎಲ್. ಕೇಸುಗಳು ಜಾರಿಯಾಗಿ ಅವರಿಗೆ ಸಜಾ ಸಹ ಆಗಿತ್ತು. ನನ್ನ ಮಕ್ಕಳಿಗೆ ಸ್ವಲ್ಪ ಆವೇಶ ಹೆಚ್ಚು. ಅದಕ್ಕೆ ಅವರಿಗೇ ಆ ಮಾತು ಕೇಳಿ ಕೋಪಬಂತು. ನಾನಾಗಿದ್ದರೆ ನಕ್ಕು ಹಾರಿಸಿಬಿಡುತ್ತಿದ್ದೆ.... ಮತ್ತು ಈ ನೀಲೂ ? ಇವನು ತನ್ನ ತಂದೆಯ ವಿಷಯದಲ್ಲಿ ಎಂಥ ಗೌರವ ಇಟ್ಟಿದ್ದಾನೆ ಅನ್ನುವುದು ಮನೆಯಲ್ಲಿ ಎಲ್ಲರಿಗೂ ಗೊತ್ತಿರುವ ವಿಷಯ. ಹೊರಗಿನ ಜನ ಏನಾದರೂ ಆಡಬಾರದ್ದು ಅಂದರೆ ಸುಮ್ಮನೆ ಬಿಡುವವನಲ್ಲ. ಆದರೆ, ಒಂದು ವಿಷಯ. ನಾನು ಒಪ್ಪಿಕೊಳ್ಳಲೇಬೇಕು. ಏನೆಂದರೆ ಇದುವರೆಗೂ ಅವನು ನನ್ನ ಎದುರಿಗೆ ಒಂದು ಮಾತೂ ಆಡುವುದಿಲ್ಲ. ನನ್ನ ಮಾತಿಗೆ ಎದುರು ಜವಾಬು ಮಾತ್ರ ಇದುವರೆಗೆ ಕೊಟ್ಟಿಲ್ಲ, ಯಾವತ್ತೂ.

ಹೋಗೋಣ ಇನ್ನು.... ಸ್ವಲ್ಪ ಹಾಗೆ ತಣ್ಣೀರಲ್ಲಿ ಮುಖ ತೊಳೆದುಕೊಂಡು ಬರೋಣ. ಒಂದೇ ಕಡೆ ಕೂತು ಮುಖ, ಬೆನ್ನು, ಸೊಂಟ ಎಲ್ಲ ನೋಯಲಿಕ್ಕೆ ಶುರು ಆಗಿದೆ. ತಮ್ಮ ಮೈ, ಕೈ ನೋವಾದರೆ ಯಾರಾದರೂ ಬೇಕೆಂದು ಅವರ ವಿಷಯ ಯೋಚನೆ ಮಾಡುತ್ತಾ ಕೂಡುತ್ತಾರೆಯೆ ? ಆದರೆ ಇವರೆಲ್ಲ ಯೋಚನೆ ಮಾಡುವ ಹಾಗೆ ಮಾಡುತ್ತಾರೆ. ನಾನು ಎದ್ದೇಳುತ್ತಲೇ ಸೂರಜ್‌ಬಲ್ಲೀ ಬಾಬು "ಯಾಕೆ.... ಎಲ್ಲಿಗೆ ಹೊರಟಿರಿ ?" ಎಂದರು.

ನಾನು, "ಇಲ್ಲೇ ಡ್ರಮ್ಮಿನ ಬಳಿ ಮುಖ ತೊಳೆಯಲಿಕ್ಕೆ" ಎಂದೆ.

ಯಾವುದೋ ಏರೋಪ್ಲೇನಿನ ಶಬ್ದ ಆಗುತ್ತಾ ಇದೆ. ಇವುಗಳ ಓಡಾಟಕ್ಕೆ ವಿರಾಮವೇ ಇಲ್ಲ. ಎಷ್ಟು ಸಾವಿರಾರು, ಲಕ್ಷಗಟ್ಟಲೆ ಅವರ ಜನ ಯುದ್ಧದಲ್ಲಿ ಸಾಯುತ್ತಾ ಇರುವಾಗ ಅಂಥವರಿಗೆ ಒಂದು ಪ್ರಾಣದ ಬೆಲೆ ಹೇಗೆ ಗೊತ್ತಾಗುತ್ತದೆ ? ನನಗಾದರೆ ಬಿಲೂ ಮಗನಾಗಬೇಕು. ಆದರೆ ಇವರಿಗೆ ? ಯುದ್ಧಕಾಲದಲ್ಲಿ ಸಹ ಬೇರೆ ಸಮಯಗಳಲ್ಲಿ ಇರುವಂತೆಯೇ ಮೌಲ್ಯಗಳು ಇರುವುದಕ್ಕೆ ಸಾಧ್ಯವೆ ? ಇವತ್ತು ಸಾಮಾನ್ಯ ನಾಗರಿಕನಾದವನು, ರಕ್ತಮಾಂಸಗಳಿಂದ ಕೂಡಿದ ವಿಚಾರ,

ಬುದ್ಧಿಗಳಿರುವ ಮನುಷ್ಯನಲ್ಲ. ಇವತ್ತು ಅವನ ಪರಿಚಯವಾಗಬೇಕಾದರೆ ಐಡೆಂಟಿಟಿ ಕಾರ್ಡ್‌ನಿಂದ, ರೇಷನ್ ಟಿಕೆಟಿನ ನಂಬರಿನಿಂದ. ಯುದ್ಧದಲ್ಲಿ ನಿರತರಾದ ಸೈನಿಕರ ಮಾತುಬೇಡ. ಎಲ್ಲ ಕಡೆಯಲ್ಲೂ ಜನರು ಸ್ವಾಭಾವಿಕ ಜೀವನವನ್ನು ಮರೆತು ಹೋಗಿದ್ದಾರೆ. ಹಿಂದೆ ಎರಡು, ಮೂರು, ಏರೋಪ್ಲೇನುಗಳು ಆಕಾಶದಲ್ಲಿ ಹಾರಿಹೋಗುತ್ತಿದ್ದಾಗ ಜನ ಕುತೂಹಲದಿಂದ ತಲೆ ಎತ್ತಿ ನೋಡುತ್ತಿದ್ದರು. ಈಗಂತೂ ಎರಡು, ಮೂರು ಡಜನ್ ಏರೋಪ್ಲೇನುಗಳು ಹಾರಿ ಹೋಗುತ್ತಿದ್ದರೂ ಜನ ಆ ಕಡೆ ನೋಡುವುದಿಲ್ಲ. ಹಾಗಾದರೆ ಬಾಂಬುಗಳು ಬೀಳುತ್ತಿದ್ದಾಗ ಕಲಿಕತ್ತೆಯ ಜನರು ಇದೇ ಉದಾಸೀನತೆ ತೋರಿಸಿದರೇನು ? ಸ್ವಲ್ಪವೂ ಉದ್ರೇಕಗೊಳ್ಳಲಿಲ್ಲವೆ ? ಇಂಥ ಜನರಿಗೆ ನಮ್ಮ ಬಿಲೂ ವಿಷಯವನ್ನು ಕುರಿತು ಯೋಚನೆ ಮಾಡಲು ಅವಕಾಶವೆಲ್ಲಿದೆ ? ಸಾಧಾರಣ ಜನರಿಗೇ ಇದರ ಗೊಡವೆ ಬೇಡದೆ ಇರುವಾಗ ಸರ್ಕಾರವೇಕೆ ಇದನ್ನು ಕುರಿತು ತಲೆ ಕೆಡಿಸಿಕೊಳ್ಳಬೇಕು ? ಬಿಲೂ ಪಕ್ಷದವರು ಹೇಳುವುದು ನಿಜವೆ ? ಯಾರ ಹೃದಯವನ್ನು ಪರಿವರ್ತಿಸುವುದು ? ಹೃದಯ ಇದ್ದರೆ ತಾನೇ ಪರಿವರ್ತಿಸುವುದು. ಆದರೆ ಈ ಮಾತೂ ನಿಜ.... ಹಿಂಸೆ ಹೆಚ್ಚಾದಷ್ಟೂ ಸರ್ಕಾರದ ದಬ್ಬಾಳಿಕೆಯೂ ಅಷ್ಟಕ್ಕಷ್ಟೂ ಏರುತ್ತದೆ. ದಬ್ಬಾಳಿಕೆಯನ್ನು ಸೈರಿಸಿಕೊಳ್ಳುವ ಶಕ್ತಿ, ದೇಶದ ಜನತೆಗಿದೆಯೆ ? ನಮ್ಮ ಗುರಿಯನ್ನು ಮುಟ್ಟಲು ನಮಗಿರುವ ಹಂಬಲ ಅಷ್ಟು ತೀವ್ರ, ಅಷ್ಟು ಉತ್ಕಟವಾಗಿದ್ದರೆ, ಅದರ ಸಲುವಾಗಿ ತ್ಯಾಗ ಮಾಡಲು ಎಷ್ಟರವರೆಗೆ ಸಿದ್ಧವಾಗಿದೆ ದೇಶ ಎಂಬ ಆಳತೆಗೋಲಿನಿಂದಲೇ ಅದರ ಜಯಾಪಜಯಗಳನ್ನು ನಿಷ್ಕರ್ಷೆ ಮಾಡಬೇಕಾಗುತ್ತದೆ. ಈ ಸ್ಪಷ್ಟವಾದ ಮಾತನ್ನು ಬಿಲೂ ಪಕ್ಷದವರು ಅರ್ಥ ಮಾಡಿಕೊಳ್ಳುವುದಿಲ್ಲ. ಧುಮುಕುವುದಕ್ಕೆ ಮುಂಚೆ ತಮಗೆ ಸಾಮರ್ಥ್ಯ ಎಷ್ಟಿದೆ ಎಂಬ ಅರಿವು ಮನುಷ್ಯರಿಗೆ ಇರಬೇಕು.

ಕೈಕಾಲು, ಮುಖ ತೊಳೆದುಕೊಂಡು ಟವಲಿನಿಂದ ಒರೆಸಿಕೊಂಡು ಬಂದೆ. ಇದೇನು, ದಾಸಜೀ ಎದ್ದು ಕೂತಿದ್ದಾರೆ ? ನಾನು ಮುಖ ತೊಳೆದುಕೊಳ್ಳುವಾಗ ನೀರು ಎರಚುವ ಶಬ್ದದಿಂದ ಎಚ್ಚರ ಆಯಿತೇನೋ ಪಾಪ! ಇಲ್ಲ ಆಗಲೇ ಮೂರು ಗಂಟೆ ಹೊಡೆಯಿತಲ್ಲ. ಆದಕ್ಕೇ. ಈತನು ನಿತ್ಯವೂ ಬೆಳಗಿನ ಜಾವ ಮೂರು ಗಂಟೆಗೇ ಎಚ್ಚೆತ್ತು ಬಿಡುತ್ತಾರೆ. ಆಮೇಲೆ, ಚಳಿಯಾಗಿರಲಿ, ಸೆಕೆಯಾಗಿರಲಿ, ಬಾತ್ ಟಬ್ಬಿನಲ್ಲಿ ಅರ್ಧ ಗಂಟೆ ಕೂತಿರುತ್ತಾರೆ. ಎಷ್ಟೋ ಹಣ ಖರ್ಚು ಮಾಡಿ ಜೈಲಿನ ಫ್ಯಾಕ್ಟರಿಯಲ್ಲಿ ಜಲ ಚಿಕಿತ್ಸೆಯ ಟಬ್‌ಅನ್ನು ತಯಾರು ಮಾಡಿಸಲಾಗಿತ್ತು. ನೋಡಲಿಕ್ಕೆ ಅದೊಂದು ಆರಾಮ ಕುರ್ಚಿನಂತೆ ಕಾಣುತ್ತದೆ. ಅದರ ನಡುವೆ ಕುತ್ತಿಗೆವರೆಗೂ ಮುಳುಗಿ ಕೂತು ಬಾಯಿಂದ ಒಂದು ವಿಧವಾದ ಶಬ್ದ ಹೊರಡಿಸುತ್ತಾರೆ. ನೀರಿನ ಹೂಜಿಯ ಕೊಳವೆಯಿಂದ ನೀರು ಸುರಿಯುವಾಗ ಯಾವ ಶಬ್ದವಾಗುತ್ತದೋ ಹಾಗೆ. ಹಾಸಿಗೆಯ ಚಾದರದಿಂದ ಟಬ್ಬಿನ ಮೇಲೆ ನಾಲ್ಕು ಕಡೆಯೂ ಯಾರಿಗೂ ಕಾಣದಂತೆ ಒಂದು ಪರದೆ ಕಟ್ಟಿಕೊಂಡಿರುತ್ತಾರೆ. ಟಬ್ ಬಾತ್ ಪೂರೈಸಿಕೊಂಡ ಮೇಲೆ ಶಿರಸಾಸನ ಮಾಡುತ್ತಾರೆ. ಅರ್ಧ ಗಂಟೆವರೆಗೂ ತಲೆ ಕೆಳಗೆ, ಕಾಲು ಮೇಲೆ ಮಾಡಿಕೊಂಡು ಸ್ಥಿರವಾಗಿ ಇರುತ್ತಾರೆ. ನನಗೆ ಒಮ್ಮೊಮ್ಮೆ ಭಯ.... ಬಾಯಿಂದ ಮೂಗಿನಿಂದ ಹಠಾತ್ತಾಗಿ ಎಲ್ಲಿ ರಕ್ತ ಬರಲು ಶುರುವಾಗುತ್ತೋ ಎಂದು.

ಮುಖ ತೊಳೆದುಕೊಂಡು ನನ್ನ ಮಂಚದ ಬಳಿ ಮರಳಿ ಬಂದೆ. ಸೂರಜ್‌ಬಲ್ಲೀ ಬಾಬು ಇನ್ನೂ ಕೂತಿದ್ದರು. ಈಗ ಬಿಲೂ ಏನು ಮಾಡುತ್ತಿರುತ್ತಾನೋ! ಬಹುಶಃ, ಭಯದಿಂದಲೂ, ಚಿಂತೆಯಿಂದಲೂ ದಿಕ್ಕುತೋಚದೆ ಸುಮ್ಮನೆ ಅತ್ತಿಂದಿತ್ತ ಅಡ್ಡಾಡುತ್ತಿರುತ್ತಾನೆ. ನನ್ನನ್ನೇನಾದರೂ ನೆನೆಸಿಕೊಳ್ಳುತ್ತಾನೆಯೆ ಒಂದುಸಲ ವಾದರೂ? ನನ್ನನ್ನು ಕುರಿತು ಬಿಲೂ ಕಡೆಯ ಗಳಿಗೆಯಲ್ಲಿ ಯಾವ ಅಭಿಪ್ರಾಯ ಇಟ್ಟುಕೊಂಡಿರುತ್ತಾನೆ ಎಂದು ಗೊತ್ತಾಗುವ ಹಾಗಿದ್ದರೆ! ನೀಲೂವನ್ನು ಅವನು ದೂರುವುದಿಲ್ಲ. ಅವನನ್ನು ಖಂಡಿತ ಕ್ಷಮಿಸಿರುತ್ತಾನೆ. ಈ ಮಾತನ್ನು ನಾನು ಜೋರಾಗಿ ಹೇಳಬಲ್ಲೆ. ಈ ಸಮಯದಲ್ಲಿ ಅವನ ಮನಸ್ಸಿನ ಅವಸ್ಥೆ ಹೇಗಿದೆಯೋ ದೇವರಿಗೇ ಗೊತ್ತು. ಬಹುಶಃ ಹುಚ್ಚನ ಹಾಗೆ ಆಗಿಬಿಟ್ಟಿರುತ್ತಾನೆ. ಕೆದರಿದ ತಲೆಗೂದಲನ್ನು ಸುಮ್ಮನೆ ಕಿತ್ತುಕೊಳ್ಳಲು ಪ್ರಯತ್ನಿಸುತ್ತಿರುತ್ತಾನೇನೋ! ಸಲಾಕೆಯ ಮೇಲೆ ಸುಮ್ಮನೆ ತಲೆ ಹೊಡೆದುಕೊಳ್ಳುತ್ತಿರುತ್ತಾನೇನೋ! ಬಹುಶಃ ಎಳೇ ಹುಡುಗನ ಹಾಗೆ ಬಾಗಿಲು ತೆಗೆಯೆಂದು ವಾರ್ಡರನ್ನು ಬೇಡಿಕೊಳ್ಳು ತ್ತಾನೇನೋ!.... ಇಲ್ಲ ಇಲ್ಲ! ಛೇ... ನಾನೇಕೆ ಹೀಗೆಲ್ಲ ಊಹೆ ಮಾಡಬೇಕು. ನಮ್ಮ ಬಿಲೂ ಹಾಗೆಲ್ಲ ಎಂದಿಗೂ ಮಾಡಲಾರ. ತಡೆಯಲಾರದ ಮರ್ಮ ವೇದನೆಯಿಂದ ಎದೆ ಒಡೆಯುವಂತಿದ್ದರೂ ಮುಖದ ಮೇಲೆ ಯಾವ ಭಾವವನ್ನೂ ತೋರಗೊಡುವುದಿಲ್ಲ ಅಂಥವನು ಬಿಲೂ. ಕಡೆಯ ಗಳಿಗೆವರೆಗೂ ತನ್ನ ದೊಡ್ಡ ಆದರ್ಶದ ಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನಿಸದೆ ಇರುವುದಿಲ್ಲ. ಸೂಪರಿಂಟೆಂಡೆಂಟರಿಗೆ ಕಾಣಿಸುವ ಹಾಗೆ ಕಡೆಯ ಗಳಿಗೆಯಲ್ಲೂ ನಗು ಮುಖದಲ್ಲೇ ಇರುವಂತೆ ಪ್ರಯತ್ನಿಸುತ್ತಾನೆ.

ಜೈಲರ ಸಂಗಡ ತಮಾಷೆ ಮಾತು ಸಹ ಆಡಲು ಹೋಗುತ್ತಾನೆ. ಫಾಸಿ ಕಂಭವನ್ನೇರಲು ಮೆಟ್ಟಲು ಹತ್ತುತ್ತ ಆಫೀಸರುಗಳಿಗೆಲ್ಲ ತಾನು ಫಾಸಿಯಾಗುವಾಗ, ಶುಕ್ರ ತಾರೆಯು ಸಾಕ್ಷಿ ಇರುವ ಹಾಗೆ ಅಂತಹ ಸುಂದರ ಸನ್ನಿವೇಶವನ್ನು ಏರ್ಪಾಡು ಮಾಡಿದುದಕ್ಕಾಗಿ ವಂದನೆ ಅರ್ಪಿಸುತ್ತಾನೆ. ಅಷ್ಟೇ ಹೊರತು ಅವನಂತೂ ಏನಾದರೂ ಸರಿ, ತನ್ನ ಪಾರ್ಟಿಗೆ ಕಳಂಕ ಬರುವ ಹಾಗೆ ಯಾವ ದೌರ್ಬಲ್ಯವನ್ನೂ ತೋರಗೊಡುವುದಿಲ್ಲ. ಅವನು ಯಾರು? ನನ್ನ ಮಗ. ನನ್ನ ಹಿರೇ ಮಗ! ನಾವೆಲ್ಲ ಇದ್ದು ಏನ ಪ್ರಯೋಜನ.... ನಾವೆಲ್ಲ ಅವನನ್ನ ಪ್ರೀತಿಸಿದೆವು. ಆದರೆ ಏನು ಬಂದ ಹಾಗೆ ಆಯಿತು? ಹರದಾ ಗ್ರಾಮದ ದುಬೇ ದಂಪತಿ ನಮ್ಮ 'ಬಿಲೂ' ಅಂದರೆ ಎಷ್ಟು ಹುಚ್ಚಾಗುತ್ತಿದ್ದರು! ಸಹದೇವನ ತಾಯಿಯಂತೂ ಅವನನ್ನು ಸ್ವಂತ ಮಗನಿಗಿಂತಲೂ ಹೆಚ್ಚಾಗಿ ಹಚ್ಚಿಕೊಂಡಿದ್ದಳು. ಜಿತೇನಿನ ತಾಯಿಯೂ ಸಹ. ಇವರಿಗೆಲ್ಲ 'ಬಿಲೂ' ಅಂದರೆ ಪ್ರಾಣ. ಆದರೆ ಬಿಲೂ ಇಷ್ಟೇ ಜನಕ್ಕಲ್ಲ ಬೇಕಾಗಿದ್ದುದು. ಅವನನ್ನು ಇಷ್ಟಪಡದೆ ಇರುವವರು ಯಾರು? ಜಿತೇನನ ತಾಯಿ ನಮ್ಮ ಮನೆಯುವಳೇ. ಅವಳು ಇವನನ್ನ ಪ್ರೀತಿಸುವುದು ದೊಡ್ಡದಲ್ಲ. ಯಾರ್ಯಾರಿಗೆ ಅವನು ಅಷ್ಟು ಬೇಕಾಗಿದ್ದನೋ ಅವರೆಲ್ಲರಿಗೂ ಅವನು ತೋರಿಸುವ ಸ್ನೇಹಾದರಗಳು ಸಾಮಾನ್ಯವೇ? ಎಲ್ಲರಿಗೂ ಅವನು ಬೇಕಾಗಿದ್ದರೆ, ಅವನಿಗೂ ಎಲ್ಲರೂ ಬೇಕು. ಇವತ್ತು 'ಹೋಳಿ' ಬಂತು. ಆದೆಷ್ಟು ಮನೆಗಳಿಗೆ ಹೋಗಿ ಹೋಳಿ

ಪ್ರಣಾಮ ಹೇಳಿ ಬರಬೇಕೋ.... ಮನೆಯಲ್ಲೇ ಇರುವುದಿಲ್ಲ ಅವತ್ತು.... ಯಾರ್‍ಯಾರಿಗೋ ಆಶ್ರಮದ ನಿಂಬೇಗಿಡದ ನಿಂಬೇ ಹಣ್ಣನ್ನು ಕಳಿಸುತ್ತ ಇರುತ್ತಾನೆ. ಊರೆಲ್ಲ ನೆಂಟರೇ. ಆ ನೆಂಟಸ್ತನಕ್ಕೆ ಯಾವ ಆಧಾರವೂ, ಯಾವ ಉಪಕಾರದ ನೆನಪೂ ಬೇಕಾಗಿಲ್ಲ. ಅವರಲ್ಲಿ ಎಷ್ಟೋ ಜನದ ಜೊತೆಯ ಬಂಧುತ್ವಕ್ಕೆ ಬಹುದಿನದ ಪರಿಚಯವೂ ಇರಬೇಕಾಗಿರಲಿಲ್ಲ. ಇದೇನೋ ಒಂದು ಬಗೆಯಾದ ಹುಚ್ಚು. ಎಲ್ಲರ ಪ್ರೀತಿಯನ್ನೂ ಸಂಪಾದಿಸಬೇಕೆಂಬ ಒಂದು ಹುಚ್ಚು ಹಂಬಲು. ಮನೆಯಲ್ಲಿ ಹೆತ್ತ ತಾಯಿ ತೋರುವ ಪ್ರೀತಿ ಸಾಲದೆ ಬೇರೆಯವರಿಂದಲೂ ಆದರ ಪಡೆಯಬೇಕೆಂಬ ಆಸೆಯೇನೋ! ಅದಕ್ಕೇ ಅವನ ಮಾತುಕತೆಯೂ ಅಷ್ಟು ಸವಿ. ನಮ್ಮ ನೀಲೂ ಇದಕ್ಕೆ ಪೂರ್ತಿಯಾಗಿ ವ್ಯತಿರಿಕ್ತ.... ಅವನಿಗೆ ಜನರ ಸಂಪರ್ಕವೇ ಬೇಕಿಲ್ಲ. ಯಾರ ಮನಸ್ಸನ್ನೂ ಒಲಿಸಿಕೊಳ್ಳುವ ಗೋಜಿಗೇ ಹೋಗುವುದಿಲ್ಲ ಅವನು. ಯಾರೊಡನೆಯಾದರೂ ಸರಿ, ಸವಿ ಮಾತಾಡಲೇಬೇಕೆಂಬ ದರದಿಲ್ಲ ಅವನಿಗೆ. ಇದ್ದರೆ ಇರುತ್ತಾರೆ, ನನಗೇನು ಎಂಬ ಉದಾಸೀನ. ತನ್ನ ಅಭಿಪ್ರಾಯಗಳನ್ನೂ, ಇಷ್ಟಗಳನ್ನೂ ಏನಾದರೂ ಸರಿ, ಬಿಟ್ಟುಕೊಡುವವನಲ್ಲ. ಯಾರ ಸ್ನೇಹಕ್ಕಾಗಲೀ, ಅವರ ಉಪಕಾರಕ್ಕೆ ಕೃತಜ್ಞತಾ ಪೂರ್ವಕವಾಗಲಿ, ಅವರಿಗೆ ಸಣ್ಣ, ಪುಟ್ಟ ಸೇವೆಗಳನ್ನು ಮಾಡುವ ಪಾಪಕ್ಕೇ ಹೋಗುವುದಿಲ್ಲ.

ಅದನ್ನೆಲ್ಲ ಮಾಡಲಿಕ್ಕೆ ಅವನಿಗೆ ಪುರಸತ್ತೆಲ್ಲಿದೆ ? ತನ್ನ ಸ್ವಂತ ಅಭಿಪ್ರಾಯಗಳನ್ನೇ ಶಾಶ್ವತ ಸತ್ಯವೆಂದು ನಂಬಿಕೊಂಡು ಅವನ್ನು ವ್ಯಕ್ತಪಡಿಸುವುದರಲ್ಲೇ ವ್ಯಸ್ತನಾಗಿರುತ್ತಾನೆ. ಅವುಗಳನ್ನು ವಿಮರ್ಶೆ ಮಾಡುವುದರಲ್ಲೇ ಅವನಿಗೆ ಮಹಾದನಂದ. ನಮ್ಮ ಬಿಲೂ ಆದರೆ ತನ್ನ ಸವಿಮಾತುಗಳಿಂದ, ಆಚರಣೆಯಿಂದ ಲೋಕವನ್ನೇ ಮುಗ್ಧ ಮಾಡಬಲ್ಲ. ನಮ್ಮ ತಂದೆಯನ್ನು ಹೇಗೆ ಮುಗ್ಧ ಮಾಡಿಬಿಟ್ಟಿದ್ದ ಅವನು ? ನಮ್ಮ ತಂದೆ – ಪಾಪ ಅವರೀಗ ಸ್ವರ್ಗದಲ್ಲಿದ್ದಾರೆ, ನಾನು ಹೇಳುವುದು ಸರಿಯಲ್ಲವೇನೋ – ತುಂಬಾ ಕೋಪಿಷ್ಠರಾಗಿದ್ದರು. ನಾನೆಷ್ಟು ಸಲ ನೋಡಿದ್ದೇನೆ. ಊಟಕ್ಕೆ ಕೂತಿರುತ್ತಾರೆ. ಅಡಿಗೆ ರುಚಿಸುತ್ತ ಇಲ್ಲ. ಸ್ವಲ್ಪ ಹೊತ್ತು ಕಿರಿಕಿರಿ ಮಾಡುತ್ತ ಇರುತ್ತಾರೆ. ಆಮೇಲೆ ಹಠಾತ್ತಾಗಿ 'ರೆಚಡ್ ಡಯಟ್' ಅನ್ನುತ್ತ ತಟ್ಟೆಯನ್ನು 'ಖಟ್' ಎಂದು ನೆಲದ ಮೇಲೆ ಬಡಿದು ಹಾಗೇ ಅರೆ ಹೊಟ್ಟೆಯಲ್ಲೇ ಎದ್ದು ಹೊರಟು ಹೋಗುತ್ತಾರೆ. ಹಾಗೇ ಆಫೀಸಿಗೂ ಹೊರಟುಹೋಗುತ್ತಾರೆ. ಈ ಕಡೆ ನಮ್ಮ ಅಮ್ಮನೂ ಊಟ ಮಾಡದೆ ಸಂಜೆಯವರೆಗೂ ಹಾಗೇ ಇದ್ದು ಬಿಡುತ್ತಿದ್ದರು. ಚಹಾ ಕುಡಿಯುತ್ತಿರುವಾಗಲೂ ರುಚಿಸದೆ ಹೋದರೆ, "ಏನು ಚಹಾ ಮಾಡಾಟವೋ ಥೂ!" ಅಂದದ್ದೇ ಕಪ್ ಸಾಸರುಗಳನ್ನು ಒಂದು ಕಡೆ ಒಗೆದು ಹೊರಟು ಹೋಗುವುದೇ! ಇದೇ ದೃಶ್ಯ ಎಷ್ಟು ಸಲ ನೋಡಿಬಿಟ್ಟಿದ್ದೇನೋ! ಮುದಿ ವಯಸ್ಸಲ್ಲಿ ಕೋಪ ಇನ್ನೂ ಹೆಚ್ಚಾಗಿ ಹೋಗಿತ್ತು. ಅವರ ಕೊನೆಗಾಲದಲ್ಲಿ ಸ್ವಲ್ಪ ಬುದ್ಧಿಯೂ ಕೆಟ್ಟು ಹೋಗಿ ಹುಚ್ಚರಂತೆ ವರ್ತಿಸುತ್ತಿದ್ದರು. ಕಾಲುಗಳೆರಡೂ ಬರುತ್ತಾ ಬರುತ್ತಾ ಸ್ವಾಧೀನ ತಪ್ಪಿಹೋಗಿದ್ದುವು. ಆಗ ಕಾಶಿಯನ್ನು ಬಿಟ್ಟು ಪೂರ್ಣೆಯಾಗ ಬಂದು ನಮ್ಮ ಸಂಗಡ ಇರಬೇಕಾಯಿತು. ಮೈ ಕೈ ಎಲ್ಲ ಸ್ವಾಧೀನ ತಪ್ಪಿ ಹೋದಷ್ಟೂ ಕೋಪವೂ ಹೆಚ್ಚಾಗುತ್ತ ಬಂತು. ಆ ಸಮಯದಲ್ಲೇ ಬಿಲೂ ಹುಟ್ಟಿಬಂದ.

ಅವನು ಬಂದದ್ದೇ, ನಮ್ಮಪ್ಪ ಹಗಲು ಇರುಳೂ ಅವನನ್ನ ಹಿಡಿದುಕೊಂಡೇ ಇರುತ್ತಿದ್ದರು. ಓಡಾಟ ಸಾಧ್ಯವಿರಲಿಲ್ಲ. ಸದಾ ಆರಾಮ ಕುರ್ಚಿಯ ಮೇಲೆ ಒರಗಿಕೊಂಡು ಇರುತ್ತಿದ್ದರು. ಆದರೂ 'ಬಾಲಾಯಿ' (ಬಿಲೂ)ಯನ್ನು ಕಣ್ಣಿಗೆ ಮರೆಯಾಗದಂತೆ ಇಟ್ಟುಕೊಳ್ಳುತ್ತಿದ್ದರು. ಬೇರೆ, ನೆರೆಹೊರೆಯ ಹೆಣ್ಣು ಮಕ್ಕಳು ಬಂದರೆ ಅವರನ್ನು, "ಡಾಕಿನಿಗಳು ದೆವ್ವಗಳು ಬಾಲಾಯಿಯನ್ನು ಮರುಳು ಮಾಡಲಿಕ್ಕೆ ಬಂದಿದ್ದಾರೆ" ಅನ್ನುತ್ತಿದ್ದರು. ಅವರನ್ನ ಮನೆಗೆ ಬರಮಾಡಿದ್ದಕ್ಕೆ ನನ್ನ ಹೆಂಡತಿಯನ್ನು ಸುಮ್ಮನೆ ಬೈಯುವರು. ಕಡೆಯಲ್ಲಿ ಹಾಸಿಗೆ ಹಿಡಿದು ಮಲಗಿದಾಗ ಬುದ್ಧಿ ಪೂರ್ತಿ ಕೆಟ್ಟುಹೋಯಿತು. ಅವರ ಮಂಚದ ಸುತ್ತಲೂ ಮರದಲ್ಲಿ ಚೌಕಟ್ಟು ಹಾಕಿಸಿದ್ದೆ ಹೊರಳಿಕೊಂಡು ನೆಲದ ಮೇಲೆ ಬೀಳದೆ ಇರಲೆಂದು. ಮಾತು ಮುಕ್ಕಾಲೆಲ್ಲ ನಿಂತುಹೋಗಿತ್ತು. ಕಣ್ಣು ಎಳೆದುಕೊಂಡು ಬರುತ್ತಿತ್ತು. ತಿಳಿವೂ ಸ್ವಲ್ಪ ಸ್ವಲ್ಪವಾಗಿ ಉಡುಗಿಹೋಗುತ್ತ ಬರುತ್ತಿತ್ತು. ಅಂಥ ಸಮಯದಲ್ಲೂ ಕೋಪ ಮಾತ್ರ ಹೋಗಲಿಲ್ಲ. ನನ್ನ ಹೆಂಡತಿಯನ್ನೂ ನನ್ನನ್ನೂ ಎಷ್ಟು ಗೋಳಾಡಿಸಿದ್ದಾರೋ! ಅನ್ನ ತಿನ್ನಿಸುತ್ತ ಇರುವಾಗ ಕೈ ಬೆರಳನ್ನು ಕಚ್ಚಿಬಿಡುತ್ತಿದ್ದರು. ಅಂಥ ಸಮಯದಲ್ಲಿ ಬಿಲೂವನ್ನು ಕರೆತಂದು ಪಕ್ಕದಲ್ಲಿ ಕೂಡಿಸಿಬಿಟ್ಟೊಡನೆ ಕೋಪ ಎಲ್ಲಾ ಮಾಯವಾಗಿ ಹೋಗುತ್ತಿತ್ತು. ಹುಚ್ಚು ಕೋಪದಲ್ಲಿ ಹಾಸಿಗೆ ಮೇಲೆ ಎಳೇ ಮಗುವಿನಂತೆ ಹೊರಳಾಡುತ್ತ ಇರುವಾಗ ಬಿಲೂವನ್ನು ಎತ್ತಿಕೊಂಡು ಬಂದು ಅವನ ಎಳೆಯ ಕೈಗಳನ್ನು ಅವರ ಮುಖದ ಮೇಲೆ ಸ್ವಲ್ಪ ತಗುಲಿಸಿದರೆ ಸಾಕು, ಪುಂಗಿ ಬಾರಿಸಿದೊಡನೆ ಹಾವು ತಣ್ಣಗಾಗುವ ಹಾಗೆ ತಣ್ಣಗಾಗಿ ಬಿಡುತ್ತಿದ್ದರು. ಒಮ್ಮೊಮ್ಮೆ ಸುಮ್ಮನೆ ಕಣ್ಣು ಮುಚ್ಚಿಕೊಂಡು ನಿದ್ದೇಹೋದಂತೆ ನಟಿಸುತ್ತ ನಾವು ಎಷ್ಟು ಕೂಗಿದರೂ ಕಣ್ಣು ತೆಗೆಯುತ್ತಿರಲಿಲ್ಲ. ಎಷ್ಟು ಒಳ್ಳೆಯ ಮಾತಿನಿಂದ ಬೇಡಿಕೊಂಡರೂ ಕೇಳದೆ ಎಳೆಯ ಮಗುವಿನಂತೆ ಹಟ ಹಿಡಿಯುತ್ತಿದ್ದಾಗ ನಾನು ಬಿಲೂವನ್ನು ಕೂಗಿ, "ಬಿಲೂ, ನಿಮ್ಮ ಅಜ್ಜನನ್ನ ಕೂಗಪ್ಪ!" ಎಂದೊಡನೆ, ಆಶ್ಚರ್ಯ, ಆ ಅರ್ಧಂಮರ್ಧ ಜ್ಞಾನದಲ್ಲೂ ಬಿಲೂ ಕರೆಯುತ್ತಿದ್ದಾನೆ ತಮ್ಮನ್ನು ಎಂದು ಹೊಳೆದು ಎರಡು ಕೈಗಳನ್ನು ಚಾಚಿ ತಡಕಾಡುತ್ತ "ಎಲ್ಲೀ.... ಎಲ್ಲೀ ಬಾಲಾಯೀ!" ಎಂದು ಕಣ್ಣು ತೆಗೆದು ನೋಡುತ್ತಿದ್ದರು.

ಅವತ್ತಿನ ದಿನ ಎಲ್ಲಾ ಮುಗಿದು ಹೋಗಿಬಿಟ್ಟಾಗ ಅಪ್ಪನ ಕಿವಿಯ ಬಳಿ ಬಾಯಿಟ್ಟು, "ಅಪ್ಪಾ ಬಾಲಾಯಿ ಕರೆಯುತ್ತಾನಪ್ಪಾ ನಿಮ್ಮ ಬಾಲಾಯೀ" ಎಂದು ನಾನು ಬಿಕ್ಕಳಿಸಿದಾಗಲೂ ನನ್ನ ಮನಸ್ಸಿನಲ್ಲಿ ಏನೋ ಒಂದು ಕ್ಷೀಣವಾದ ಆಸೆ ಬಾಲಾಯಿ ಎಂದು ಅವನ ಹೆಸರು ಕೇಳಿದೊಡನೆ ಉತ್ತರ ಕೊಡುತ್ತಾರೇನೋ ಎಂದು. ಆದರೆ ಎಲ್ಲಿ? ಅಷ್ಟು ಹೊತ್ತಿಗಾಗಲೇ ಅವರು ಯಾರ ಕೂಗನ್ನೂ ಕೇಳಿಸಿಕೊಳ್ಳದ ಜಾಗಕ್ಕೆ ಹೊರಟುಹೋಗಿದ್ದರು. ಆಶ್ಚರ್ಯಕರವಾಗಿತ್ತು ಬಿಲೂವಿನ ಬುದ್ಧಿ ಆಗ. ಎಷ್ಟು ವಯಸ್ಸು ಅವನಿಗೆ ಮಹಾ? ತನ್ನನ್ನು ಬಿಟ್ಟು ಬೇರೆ ಯಾರೂ ಅಜ್ಜನ ಮನಸ್ಸನ್ನು ವಶ ಮಾಡಿಕೊಳ್ಳಲಾರರು ಎಂಬ ಜ್ಞಾನ ಇತ್ತು ಅವನಿಗೆ, ಅಷ್ಟು ಎಳೆಯ ವಯಸ್ಸಲ್ಲೂ. ಅಜ್ಜನನ್ನು ತಣ್ಣಗೆ ಮಾಡುವುದಕ್ಕಾಗಿಯೋ, ಅವರಿಗೆ ಸಮಾಧಾನವಾಗಿ ಊಟ ಮಾಡಿಸುವುದಕ್ಕಾಗಿಯೋ ತಾನು ಅಲ್ಲಿ

ಹಾಜರಿರುವುದರಿಂದ ಪ್ರಯೋಜನವಿದೆಯೆಂದು ಅವನನ್ನು ಕೂಗಿದಾಗಲೇ ತಿಳಿದುಕೊಂಡುಬಿಡುತ್ತಿದ್ದ. ಆಗ ತತ್‌ಕ್ಷಣ ಓಡಿ ಬರದೆ ಬೇಕೆಂದೇ ಸ್ವಲ್ಪ ಉದಾಸೀನ ತೋರುತ್ತ ಕಪಟ ಗಾಂಭೀರ್ಯದ ಸೋಗು ಹಾಕುತ್ತಿದ್ದ. ತನ್ನ ಸಹಾಯ ಬೇಕಾದರೆ ತನ್ನನ್ನು ಅಮ್ಮ ಸ್ವಲ್ಪ ಮುದ್ದಾಡಬೇಕೆಂದು ಅವನ ನಿರೀಕ್ಷೆ. ಬಿಲೂ ಈಗ ಹಾಗಾದರೆ ಅವನ ಅಜ್ಜನನ್ನು ನೋಡಲು ಹೋಗುತ್ತಿದ್ದಾನೆಯೆ ? ಅಪ್ಪಾ.... ಏನಪ್ಪಾ ? ಕಡೆಗೂ ನಿನ್ನ ಮುದ್ದಿನ ಬಾಲಾಯಿಯನ್ನು ಹೀಗೆ ಮಾಡಾದರೂ ನಿನ್ನ ಬಳಿಗೆ ಎಳೆದುಕೊಳ್ಳಬೇಕೇ ?

ಮನಸ್ಸೇಕೋ ತುಂಬಾ ಚಡಪಡಿಸುತ್ತ ಇದೆ. ಹಾಲಿನಲ್ಲಿ ಇದೇನು ಇಷ್ಟು ಮಂದಿ ? ಎಲ್ಲರೂ ಎಚ್ಚರವಾಗಿಬಿಟ್ಟಿದ್ದಾರೆ. ಹಾಲಿನ ಹೊರಗಡೆ ವಾರ್ಡರು. ಒಳಗಡೆ ಜನರ ಗುಸುಗುಸು ಮಾತುಗಳು ಕಡಮೆಯಾಗಿದ್ದರೂ ಪೂರ್ತಿಯಾಗಿ ನಿಂತು ಹೋಗಿಲ್ಲ. ದಾಸ್‌ಜೀ ಸ್ನಾನ ಮಾಡುತ್ತಿರುವ ಶಬ್ದ ಕೇಳಿಬರುತ್ತಿದೆ. ಒಳಗಡೆ ಸ್ವಲ್ಪ ತಂಪಾಗಲು ತೊಡಗಿದೆ. ಹೊರಗಡೆ ನಾಯಿ ಬೊಗಳುವ ಶಬ್ದ ಕೇಳಿಬರುತ್ತಿದೆ. ಆದರೂ ಎಲ್ಲೆಲ್ಲೂ ಗಾಳಿಯಲ್ಲೂ ಆಕಾಶದಲ್ಲೂ ಈ ಸ್ತಬ್ಧವಾದ ಭಾವ ಏಕೆ ?

ಸಲಾಕೆಗಳ ನಡುವಣಿಂದ ಒಳಗಡೆಯ ಬೆಳಕು ಹೊರಗಡೆಯ ವರಾಂಡದ ಮೇಲೆ ಬೀಳುತ್ತಿದೆ. ಅದು ಯಾರು ಅಲ್ಲಿ.... ಯಾರೋ ಸೀರೆ ಉಟ್ಟಿರುವ.... ಓ ಯಾರೂ ಅಲ್ಲ. ಅದು ರಾಶಿ ಹಾಕಿರುವ ಒಲೆ ಉರಿಸುವ ಸೌದೆ.... ಅದರ ಮೇಲೆ ಬೆಳಕು ಬಿದ್ದು ಅದು ಈ ಭ್ರಮೆ ಹುಟ್ಟಿಸುತ್ತ ಇದೆ. ಈ ಸೌದೆಯನ್ನು ಬಿಷುನ್‌ದೇವಜೀ ಅಡಿಗೆ ಮನೆಯ ಉಪಯೋಗಕ್ಕೆಂದು ಶೇಖರ ಮಾಡಿಟ್ಟಿದ್ದಾರೆ. ಅವರೇಕೆ, ಜೈಲಿನಲ್ಲಿ ಇರುವವರೆಲ್ಲ ಒಂದಲ್ಲ ಇನ್ನೊಂದನ್ನು ಶೇಖರ ಮಾಡುವ ಅಭ್ಯಾಸ ಮಾಡಿಕೊಂಡಿದ್ದಾರೆ. ಹರಿದ ಜುಬ್ಬಾ ಹಳೆಯ ಮರದ ಮೆಟ್ಟುಗಳು ಇಂಥವನ್ನೆಲ್ಲ ಜಮಾಯಿಸಿ ಇಟ್ಟುಕೊಳ್ಳುತ್ತಾರೆ. ಜೈಲಲ್ಲಿ ಇದ್ದುಕೊಂಡಿದ್ದರೆ ಈ ಬಗೆಯ ಮನೋಭಾವ ಬರುತ್ತದೆ. ಅದು ಹೋಗಲಿ, ಸೌದೆಯ ರಾಶಿ ನೋಡಿದೊಡನೆ ನನಗೇಕೆ ಹೀಗೆ ಭ್ರಮೆಯಾಗಬೇಕಾಗಿತ್ತು ? ಆಶ್ರಮದ ಅಡಿಗೇ ಮನೆಯ ವರಾಂಡದಲ್ಲಿ ಹೀಗೇ ಸೌದೆಯ ರಾಶಿ ಮತ್ತು ಬೆರಣಿಗಳ ಕುಪ್ಪೆ. ಅಡಿಗೆ ಮನೆಯೊಳಗಡೆ ನನ್ನ ಹೆಂಡತಿ ಅಡಿಗೆ ಮಾಡುತ್ತ ಇದ್ದಾಳೆ. ಬಿಲೂ ಎಲ್ಲೋ ಹೋಗುವ ಅವಸರದಲ್ಲಿದ್ದಾನೆ.

ಅದಕ್ಕೇ ಏನೋ ಇಷ್ಟು ಬೇಗ ಊಟಕ್ಕೆ ಕೂತಿದ್ದಾನೆ.... ಅದೆಷ್ಟು ಬೇಗ ಬೇಗ ಊಟ ಮಾಡುತ್ತಾನೆ.... ಸರಿಯಾಗಿ ಅಗಿಯುವುದೇ ಇಲ್ಲ. ಕೆದರಿಹೋದ ಒರಟು ಕೂದಲು. ಜೈಲಿನ ಖೈದಿಗಳ ಉಡುಪು – ಪಟ್ಟೆ ಪಟ್ಟೆ ನೀಲಿ ಬಣ್ಣದ ಬನಿಯನ್ ತೊಟ್ಟಿದ್ದಾನೆ ಮತ್ತು ಚಡ್ಡಿ. ರೋಗಿಷ್ಠನಂತೆ ಮೈ ಬಡಕಲಾಗಿದೆ. ಮುಖದಲ್ಲಿ ರಕ್ತವೇ ಇಲ್ಲ.

ದೇವರೇ.... ಗಾಂಧೀಜೀ ! ನಿಮ್ಮ ನಾಮ ಸ್ಮರಿಸಿಕೊಂಡರೂ ಏಕೋ ಏನೋ ಮನಸ್ಸಿಗೆ ಧೈರ್ಯ ಬರುತ್ತ ಇಲ್ಲ. ಮತ್ತೆ ಚರಖಾ ಕೈಯಲ್ಲಿ ಹಿಡಿದು ಕೂತೆ. ಇದೇ ನನ್ನ ಕಡೆಯ ಆಸರೆ. ಕುರುಡನ ಊರುಗೋಲು, ನನ್ನ ಜಪದ ಮಾಲೆ. ಟಿಬೆಟ್ಟಿನಲ್ಲಿ "ಜಾರ್‌ಬೇದಾ ಚಕ್ರ" ದಂತಹ ಗಾಲಿಯೊಂದನ್ನು ತಿರುವುತ್ತ ನಾಮ ಜಪ

ಮಾಡುತ್ತಾರೆ. ಸೂರಜ್‌ಬಲ್ಲೀ ಬಾಬುಗಳ ಕಡೆ ದೃಷ್ಟಿ ಹೋಗುತ್ತದೆ. ಆತನು ಅತ್ಯಂತ ಚಿಂತಾಕ್ರಾಂತನಾಗಿ ನನ್ನ ಕಡೆಯೇ ಸುಮ್ಮನೆ ನೋಡುತ್ತಿದ್ದಾನೆ. ನನ್ನ ಮುಖ, ಕಣ್ಣುಗಳಲ್ಲೂ, ವ್ಯವಹಾರದಲ್ಲೂ ಏನೋ ವಿಲಕ್ಷಣವಾದ ಭಾವ ತೋರಿಸಿಕೊಳ್ಳುತ್ತಿರಬೇಕು.... ಈ ಹತ್ತಿಯೋ ಎಷ್ಟು ಕೆಟ್ಟಿದೆ. ದಾರ ಸುಮ್ಮನೆ ಕಿತ್ತುಕಿತ್ತು ಹೋಗುತ್ತಿದೆ.... ಮನೆ ಬಿಟ್ಟು ಹೊರಗೆಲ್ಲೋ ಬಂದು ಸ್ವಲ್ಪ ಕಾಯಿಲೆ ಬಿದ್ದು ಬಿಟ್ಟರೆ ಸಹ ಎಷ್ಟು ಒದ್ದಾಡಿ ಬಿಡುತ್ತಾರೆ ಜನ! ಮನೆಯ ಆಪ್ತೇಷ್ಟರನ್ನು ನೋಡಲು ಇಷ್ಟವಾಗುತ್ತದೆ. ಮನೆಯವರ ಅನುಕಂಪದಿಂದ ಕೂಡಿದ ಸೇವೆ ಶುಶ್ರೂಷೆಗಳಿಗಾಗಿ ಕಾತರರಾಗುತ್ತಾರೆ. ಇಂಥ ದಿನ ಸಹ ನಮ್ಮ ಬಿಲೂ ತನ್ನ ಸ್ವಂತ ಜನರನ್ನು ಹತ್ತಿರ ಇರುವಂತೆ ಮಾಡಲಾಗಲಿಲ್ಲ. ಇವತ್ತು ಅವನು ತನ್ನ ಮನಸ್ಸಿನಲ್ಲಿರುವ ಮಾತುಗಳನ್ನೆಲ್ಲ ಯಾರಲ್ಲಾದರೂ ಹೇಳಿಕೊಳ್ಳಲು ಬಯಸುತ್ತಾನೆ. ಬಹುಶಃ ಮಕ್ಕಳಿಗೆ ಏನಾದರೂ ಸ್ವಲ್ಪ ಮೈ ಚೆನ್ನಾಗಿಲ್ಲದಿದ್ದರೂ ಸಹ ನನ್ನ ಹೆಂಡತಿ ಸ್ನಾನ, ಊಟ ಬಿಟ್ಟುಬಿಡುತ್ತಾಳೆ. ಹಗಲು, ರಾತ್ರಿ ಅವರ ಹಾಸಿಗೆ ಪಕ್ಕದಲ್ಲೇ ಇರುತ್ತಾಳೆ. ವಿರಾಮವೇ ಇಲ್ಲದೆ ಗಾಳಿ ಹಾಕುತ್ತ ಇರುತ್ತಾಳೆ. ಕಾಯಿಲೆ ವಾಸಿಯಾದ ಮರುದಿನ ಇನ್ನು ಪಥ್ಯಾಪಥ್ಯಗಳನ್ನು ಕುರಿತು ಯೋಚನೆ. ಜ್ವರ ಬಿಟ್ಟ ಮಾರನೆಯ ದಿನ ಬರೇ ಶುಕ್‌ತೋ* ಅದರ ಮಾರನೆಯ ದಿನ ಹಾಲು, ಬ್ರೆಡ್ (ಪಾವ್ ರೊಟ್ಟಿ), ಅದರ ಮಾರನೆಯ ದಿನ ಗೋಧಿ ರೊಟ್ಟಿ, ಅದರ ಎರಡನೆಯ ದಿನದಿಂದ ಅನ್ನ – ಇದಕ್ಕೆ ವ್ಯತಿಕ್ರಮವಿಲ್ಲ ಎಂದಿಗೂ. ಇದು ನೀಲೂ, ಬಿಲೂ ಇಬ್ಬರಿಗೂ ಚೆನ್ನಾಗಿ ಗೊತ್ತು. ಇಷ್ಟು ಮುತುವರ್ಜಿಯಿಂದ ಸಾಕಲ್ಪಟ್ಟ ಈ ಹುಡುಗರಲ್ಲಿ ಈಗ ಬಿಲೂ ಎಂಥ ಅವಸ್ಥೆಗೆ ಇಳಿಯುವ ಹಾಗೆ ಮಾಡಿಬಿಟ್ಟಿದ್ದೇನೆ ನಾನು. ಇವನ ಈ ಕಡೆಯ ಗಳಿಗೆಯಲ್ಲಿ ಸಹ ಇವರಮ್ಮ ಇವನ ಹತ್ತಿರ ಇರುವ ಹಾಗಿಲ್ಲವಲ್ಲ! ಎಷ್ಟೋ ಕೆಲವು ಪ್ರಾಣಿಗಳಿವೆಯಂತೆ ಹುಟ್ಟಿದ ತತ್‌ಕ್ಷಣ ತಮ್ಮ ಮರಿಗಳನ್ನೇ ತಿಂದುಬಿಡುತ್ತವೆ. ನಾನೂ ಅಂಥದೊಂದು ಪ್ರಾಣಿಯೇ ಹಾಗಾದರೆ? ಅರೆ, ಮತ್ತೆ ದಾರ ಕಿತ್ತುಹೋಯಿತು! ಬಹಳ ಸಣ್ಣದಾಗಿ ತೆಗೆಯುತ್ತಿದ್ದೇನೆ ಬಹುಶಃ ಅದಕ್ಕೇ ಬಾರಿಬಾರಿಗೂ ಕೀಳುತ್ತ ಇರುತ್ತದೆ. ಇಲ್ಲ, ಇನ್ನು ಇದಕ್ಕಿಂತ ದಪ್ಪನಾಗಿ ತೆಗೆದರೆ ಜಮಖಾನೆಯ ದಾರ ಆಗಿಹೋದೀತು.

ನೇಪಾಳದಲ್ಲಿ ಒಂದು ಪದ್ಧತಿಯಿದೆಯೆಂದು ಕೇಳಿದ್ದೇನೆ. ಒಬ್ಬರ ಬದಲಾಗಿ ಬೇರೊಬ್ಬ ಸರ್ಕಾರ ವಿಧಿಸುವ ಶಿಕ್ಷೆಯನ್ನು ಅನುಭವಿಸಬಹುದಂತೆ. ನಿಜವೋ, ಸುಳ್ಳೋ ಗೊತ್ತಿಲ್ಲ. ಆದರೆ ಕೇಳಿರುವ ವಿಷಯ ಏನೆಂದರೆ ಕೆಲವು ದೊಡ್ಡ ಮನುಷ್ಯರು ತಪ್ಪು ಮಾಡಿದರೆ ಅದಕ್ಕೆ ವಿಧಿಸುವ ಶಿಕ್ಷೆಯನ್ನು ತಮ್ಮ ಬಳಿ ಇರುವ ಅನೇಕ ನೌಕರರಲ್ಲಿ ಯಾವನಾದರೂ ಒಬ್ಬ ಅದನ್ನು ಅನುಭವಿಸಲು ಒಪ್ಪಿಕೊಂಡು ಜೈಲಿಗೆ ಹೋಗುವ ಸೌಕರ್ಯವಿದೆಯಂತೆ. ಆ ವಿಧವಾದ ವ್ಯವಸ್ಥೆ ಇಲ್ಲೇನಾದರೂ ಇದ್ದಿದ್ದರೆ ನಾನು ಬಿಲೂ ಸ್ಥಳದಲ್ಲಿ ಹೋಗಿ ನಿಲ್ಲಬಹುದಾಗಿತ್ತು.

ಎಷ್ಟು ಕತೆಗಳನ್ನು ಕೇಳಿದ್ದೇನೆ ನಾನು – ಒಬ್ಬನ ರೋಗವನ್ನು ಇನ್ನೊಬ್ಬ ಇಷ್ಟಪಟ್ಟು ತನ್ನ ಮೇಲೆ ತಂದುಕೊಂಡು ಅವನನ್ನು ರೋಗದಿಂದ ಬಿಡುಗಡೆ

*ಶುಕ್‌ತೋ ಅಂದರೆ ಸಪ್ಪೆ ಪಲ್ಯ – ಕಾಯಿಲೆಯಿಂದ ಎದ್ದವರಿಗೆ ಪಥ್ಯ

ಮಾಡುತ್ತಿದ್ದ ಎಷ್ಟೋ ನಿದರ್ಶನಗಳಿವೆ. ಬಾಬರನು ತನ್ನ ಮಗ ಹುಮಾಯೂನನು ಸಾಯುವ ಸ್ಥಿತಿಯಲ್ಲಿದ್ದಾಗ ದೇವರನ್ನು ಪ್ರಾರ್ಥಿಸಿ ತಾನು ಅವನ ಬೇನೆಯನ್ನು ತಂದುಕೊಂಡು ಮಗನ ಜೀವ ಉಳಿಸಲಿಲ್ಲವೆ ? ಯುದ್ಧ ಕಾಲದಲ್ಲಿ ಒತ್ತೆಯಾಳಾಗಿ ಹಿಡಿದಿಡುವ ಪದ್ಧತಿ ಕೆಲವು ಪಾಶ್ಚಾತ್ಯ ದೇಶಗಳಲ್ಲಿ ಇತ್ತಲ್ಲ. ಅದು ಒಂದು ಪ್ರಾಣದ ಬದಲಾಗಿ ಇನ್ನೊಂದು ಪ್ರಾಣವನ್ನು ಒತ್ತೆಯಿಡುವುದಲ್ಲದೆ ಮತ್ತೇನು ?

ಇನ್ನೂ ಒಂದು ಬಾರಿ ದಾರ ಕಿತ್ತುಹೋಯಿತು. ಹತ್ತಿಯೇ ಬಹುಶಃ ತುಂಬಾ ಹಳೆಯದಾಗಿ ಹೋಗಿರುವ ಹಾಗಿದೆ. ಇಷ್ಟು ಸಲ ದಾರ ಕೀಳುತ್ತಿದ್ದರೆ ಇನ್ನು ಚರಖಾ ತಿರುಗಿಸಿ ಮಾಡುವುದೇನು ? ಇದೇ ಹತ್ತಿಯಿಂದ ಹಿಂದೆಯೂ ದಾರ ತೆಗೆದಿದ್ದೇನೆ, ಎಷ್ಟೋ ಬಾರಿ. ಆಗ ಹೀಗೆ ಕಿತ್ತುಹೋಗುತ್ತಿರಲಿಲ್ಲ. ಇಲ್ಲ, ಹತ್ತಿಯ ತಪ್ಪಲ್ಲ. ನನ್ನ ಕೈಗಳು ನಡುಗುತ್ತಿವೆ. ಹತ್ತಿಯ ಹಂಜಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಎಳೆಯುವುದಕ್ಕೆ ಆಗುತ್ತಿಲ್ಲ. ಅದಕ್ಕೇ ಹೀಗೆ.... ಕಣ್ಣು ಗುಡ್ಡೆಗಳು ಸಹ ಅಲ್ಲಾಡುತ್ತಿವೆ ಬಹುಶಃ... ದಾರ ಹತ್ತಿಯಾಗಿ ಹೋಗುತ್ತಿದೆ. ಲಾಟೀನಿನ ಎಣ್ಣೆ ಬಹುಶಃ ಮುಗಿದುಹೋಗುತ್ತಿದೆ. ಕಣ್ಣಿನ ದೃಷ್ಟಿತಾನೇ ಇನ್ನೆಷ್ಟು ದಿನ ಇದ್ದೀತು ? ವಯಸ್ಸಿಗೇನು ಕಮ್ಮಿಯೆ ? ಇಲ್ಲ ವೃಥಾ ನನ್ನನ್ನು ನಾನೇ ಮೋಸ ಮಾಡಿಕೊಳ್ಳುತ್ತಿದ್ದೇನೆ.... ನನ್ನ ಈಗಿನ ಮಾನಸಿಕ ಅವಸ್ಥೆಯಲ್ಲಿ ಚರಖಾ ತಿರುಗಿಸುವುದು ಸಾಧ್ಯವೆ ? ಸೊಹ್ರಾಬ್ ರುಸ್ತುಮರ ಕತೆ ಎಲ್ಲ ಕಾಲ್ಪನಿಕ. ಅವರ ಹಿಂದೆ ಯಾವ ಐತಿಹಾಸಿಕ ಮೂಲವೂ ಇರುವುದಿಲ್ಲ. ತಂದೆ ಮಕ್ಕಳ ಮಧ್ಯೆ ಎಂದಾದರೂ ಹೀಗೆ ಜರುಗೀತೆ ? ಯಾಕೆ ಜರುಗಬಾರದು ? ಪ್ರಪಂಚದಲ್ಲಿ ಯಾವುದು ತಾನೇ ಅಸಾಧ್ಯ ? ಸಿಂಹಾಸನಕ್ಕೋಸ್ಕರ ತಂದೆ ಮಕ್ಕಳ ಯುದ್ಧವಾಗುವುದೇ ಹಳೆಯ ಇತಿಹಾಸದ ಸಾಧಾರಣ ಧಾರೆ. ಆದರೆ ನನಗೆಂತಹ ಶಿಕ್ಷೆ ಆಗಿದೆ ಈಗ ? ಸಿಕ್ ಗುರು ಬಾಂದಾ ಎಂಬವನಿಗೆ ಹಿಂದೆ ಶಾಸ್ತಿಯಾಗಿರಲಿಲ್ಲವೆ.... ಪ್ರಾಣಕ್ಕಿಂತಲೂ ಪ್ರಿಯನಾದ ಮಗನನ್ನು ಕೊಲ್ಲಬೇಕೆಂಬ ಶಿಕ್ಷೆ.. "ಅಬ್ಬ ಏನು ರಕ್ತ.... ಚಿಮ್ಮಿ ಚಿಮ್ಮಿ ಮೇಲಕ್ಕೆ ಬರುತ್ತಿತ್ತು ರಕ್ತ ಎದೆಯಾಳದಿಂದ !"

"ಏನಾದರೂ ಹೇಳಿದಿರೇನು ?" ಸೂರಜ್‌ಬಲ್ಲೀ ಬಾಬು ಕೇಳಿದರು. ನಾನು ಬೆಚ್ಚಿಬಿದ್ದು ತಟಕ್ಕನೆ ಉತ್ತರ ಕೊಟ್ಟೆ. "ಇಲ್ಲ.... ಹಾ.... ಇಲ್ಲವಲ್ಲ! ನಾನೇನೂ ಹೇಳಲಿಲ್ಲ" ಬಹುಶಃ ಕಡೆಯ ಮಾತನ್ನು ಅನ್ಯ ಮನಸ್ಕನಾಗಿ ಸ್ವಲ್ಪ ಜೋರಾಗೇ ಹೇಳಿಬಿಟ್ಟೆ ಎಂದು ಅನ್ನಿಸುತ್ತದೆ. ಸೂರಜ್‌ಬಲ್ಲೀ ಬಾಬು ಸ್ವಲ್ಪ ತಡೆದು ತಡೆದು "ಚರಖಾ ತಿರುಗಿಸಿ.... ತಿರುಗಿಸಿ.... ಸ್ವಲ್ಪ ಆ.... ಸ್ವಲ್ಪ ಜೋಮು ಹಿಡಿದಿರುತ್ತೆ..... ಹಾಗಾದರೆ ಇನ್ನು ಸಾಕು ಮಾಡಬಾರದೆ ?" ಎಂದರು.

"ಇಲ್ಲ.... ಇಲ್ಲ ಸರಿಯಾಗೇ ಇದ್ದೇನೆ" ಎಂದೆ.

ಏನೋ ಅನ್ಯಾಯವಾದ ಕೆಲಸ ಮಾಡಲು ಹೋಗಿ ಸಿಕ್ಕಿಬಿದ್ದ ಹಾಗೆ, ಪ್ರಶ್ನೆಗೆ ಉತ್ತರ ಕೊಡಲು ಹೋಗಿ ಬಾಯಲ್ಲಿ ಮಾತೇ ಬರದ ಹಾಗೆ ಆಯಿತು. ಹೇಗೋ ಈ ಜುಜುಬಿ ಮಾತನ್ನು ಮುಗಿಸಿಬಿಟ್ಟು ದಾರದ ಕಡೆ ನಿಗಾ ಇಡಬಲ್ಲೆನಾದರೆ ಬದುಕಿದ ಹಾಗೆ! ಹತ್ತಿಯ ಹಂಜಿ ಕಡೆಯಿಂದ ದಾರ ಬರುತ್ತಿದೆ ಹೊರಗೆ....

ಕಷ್ಟಪಟ್ಟು ಅದರ ಕಡೆಯೇ ನೋಡತೊಡಗಿದೆ. ಹಾಗಾದರೂ ಯಾರ ಕಡೆಯೂ ನೋಡಲು ಅಗತ್ಯ ಬರದೆ ಇರಲಿ ಎಂದು. ಏನು ಮಾಡಲಿ! ಈ ಹಾಳು ಕಣ್ಣೀರು ಕಣ್ಣನ್ನೇ ಒಡೆದುಕೊಂಡು ಹೊರಗೆ ಬರುತ್ತಿದೆ ಸುಮ್ಮನೆ. ರಾತ್ರಿಯಲ್ಲಿ ಜಾಗರಣೆ ಮಾಡಿದ್ದರಿಂದಲೇ ಖಂಡಿತ. ಬೇರೆ ಯಾವ ಕಾರಣಕ್ಕೂ ಅಲ್ಲ. ರಾತ್ರಿ ನಿದ್ದೆ ಮಾಡದೆ ಜಾಗರಣೆ ಮಾಡಿದರೆ ಕಣ್ಣು ಉರಿಯುವುದಿಲ್ಲವೆ? ಮಹಾತ್ಮಾಜೀ ನನಗೆ ಧೈರ್ಯ ಕೊಡಿ.... ಬಲ ಕೊಡಿ.... ನನ್ನ ಸಂಯಮದ ಕಟ್ಟೆ ಒಡೆದು ಬೀಳುತ್ತ ಇದೆ. ಇನ್ನು ನನ್ನನ್ನು ನಾನೇ ಹಿಡಿದಿಟ್ಟುಕೊಳ್ಳಲಾರೆ ಎಂದು ಅನ್ನಿಸುತ್ತದೆ.

"ಮಾಸ್ಟರ್ ಸಾಬ್!.... ಮಾಸ್ಟರ್ ಸಾಬ್.... ಓ ಮಾಸ್ಟರ್ ಸಾಬ್!"

ಸೂರಜ್‌ಬಲ್ಲೀ ಬಾಬುಗಳ ದನಿ, ಎಲ್ಲೋ ದೂರ...... ಬಹು ದೂರದಿಂದ ಬರುತ್ತಿರುವಂತಿದೆ. ಅರೆ ನಿದ್ದೆಯ ಜೋಂಪಿನಲ್ಲಿ ದೂರದ ರೈಲುಗಾಡಿಯ ಕೂಗು ಕೇಳುತ್ತದಲ್ಲ, ಹಾಗೆ. ಸೂರಜ್‌ಬಲ್ಲೀ ಬಾಬು ಕೂಗುತ್ತಿದ್ದಾರೆ.... ಅದು ಗೊತ್ತಾಯಿತು ನನಗೆ. ಆದರೆ ಉತ್ತರ ಕೊಡಲು ಇಷ್ಟವಾಗುತ್ತಿಲ್ಲ. ಸೂರಜ್‌ಬಲ್ಲೀ ಬಾಬು ಮೃದುವಾಗಿ ಬೆನ್ನ ಮೇಲೆ ಕೈಯಿಟ್ಟರು. ಅಷ್ಟು ಮರುಕ ತುಂಬಿದ ಕೈಯ ಸ್ಪರ್ಶವಾದರೆ ತಡೆಯುವುದು ಹೇಗೆ..... ಸಹನೆಯ ಕಟ್ಟೆ ಮುರಿದುಬಿತ್ತು. ಇನ್ನು ತಡೆಯಲು ಸಾಧ್ಯವಿಲ್ಲ.... "ಬಿಲೂ.... ಬಿಲೂ!" ಚರಖಾ, ಹತ್ತಿ ಎಲ್ಲಾ ಒಗೆದು ಎರಡು ಕೈಗಳಿಂದಲೂ ಸೂರಜ್‌ಬಲ್ಲೀ ಬಾಬುಗಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡುಬಿಟ್ಟೆ. ಇಬ್ಬರ ಬಾಯಿಂದಲೂ ಮಾತಿಲ್ಲ. ಆತನ ಕಣ್ಣಿಂದಲೂ ಕಣ್ಣೀರು ಕೋಡಿ ಹರಿಯುತ್ತಿದೆ. ಕುರ್ಚಿಗಳಿಂದ ಎದ್ದು ನಾಲ್ಕು ಜನ ಓಡಿ ಬಂದರು. ಛೆ.... ಎಂಥ ಕೆಲಸ ಮಾಡಿಬಿಟ್ಟೆ! ಜನ ನೆರೆದುಬಿಟ್ಟರು. ಕೂಡಲೇ ಕೈ ಬಿಟ್ಟುಬಿಟ್ಟೆ. ಮತ್ತೆ ಚರಖಾ ತಿರುಗಿಸುವ ಪ್ರಯತ್ನ ಮಾಡುತ್ತೇನೆ. ವ್ಯರ್ಥ ಪ್ರಯತ್ನ. ಸದಾಶಿವನು ಮತ್ತೆ ಬೀಸಣಿಗೆಯಿಂದ ಗಾಳಿ ಬೀಸುವುದಕ್ಕೆ ಶುರು ಮಾಡಿದ. ಅವನು ಬಹುಶಃ ನಿದ್ದೆ ಹೋಗಿಬಿಟ್ಟಿದ್ದನೇನೋ! ಮತ್ತೆ ಯಾವಾಗ ಎಚ್ಚರವಾಗಿ ಎದ್ದನೋ! ಸ್ವಸ್ಥವಾಗಿರುವ ಮನುಷ್ಯನಿಗೇಕೆ ಗಾಳಿ ಹಾಕುವುದು? ಇವರೆಲ್ಲ ಏನು ಅಂದುಕೊಂಡಿದ್ದಾರೆ? ನಾನೆಲ್ಲಾದರೂ ಜ್ಞಾನತಪ್ಪಿ ಬೀಳುತ್ತೇನೆ ಎಂತಲೇ?

ಆಗ ಸದಾಶಿವನಿಗೆ ಹೇಳಿದೆ, "ಚೆನ್ನಾಗಿ ಗಾಳಿ ಬರುತ್ತಿದೆ - ತಣ್ಣಗೆ.... ಇನ್ನು ನೀನು ಗಾಳಿ ಹಾಕುವುದು ಬೇಡ?"

ನನ್ನ ಮಾತು ಕೇಳುವವರು ಯಾರು? ಸ್ವಲ್ಪ ಹೊತ್ತಾದಮೇಲೆ ಸೂರಜ್‌ಬಲ್ಲೀ ಬಾಬು ಹತ್ತಿರ ಬಂದು ಬಹಳ ಮೆಲ್ಲಗೆ, "ಸ್ವಲ್ಪ ಗೀತೆ ಓದಲಾ? ಕೇಳುತ್ತೀರಾ?" ಎಂದರು.

ಇಷ್ಟು ಮರುಕ ಸೂಸುತ್ತಿರುವ ಸವಿಯಾದ ಮೃದುವಾದ ಮಾತು. ಹೇಗೆ ಬೇಡ ಅನ್ನಲಿ. "ಹೂ.... ಓದಿ" ಎಂದೆ. ಮತ್ತೆ ಚರಖಾ ತಿರುಗಿಸಲು ಕೂತೆ. ಆತನು ಗೀತಾಪಠನ ಮೊದಲು ಮಾಡಿದರು. ಅವರು ಯಾಕೆ ನನ್ನ ಮುಂದೆ ಗೀತಾಪಠನ ಮಾಡುತ್ತಿರುವುದು ಎಂದು ಗೊತ್ತಾಯಿತು ನನಗೆ. ನನ್ನ ಮನಸ್ಸಿಗೆ ಧೈರ್ಯ ನೀಡಲೆಂದಲ್ಲ. ಮರುಕ ತೋರುವುದಕ್ಕಲ್ಲ. ತಮ್ಮ ಸ್ವಂತ ದುಶ್ಚಿಂತೆಗಳನ್ನೇ ದೂರ ಮಾಡುವುದಕ್ಕೂ ಅಲ್ಲ. ಶವದೇಹವನ್ನು ಹೊತ್ತುಕೊಂಡು ಹೋಗುವ ಮಿಲಿಟರಿ

ಲಾರಿಯ ಮತ್ತು ಡಾಕ್ಟರ್ ಸಾಹೇಬರ ಮೋಟರ್ ಕಾರಿನ ಶಬ್ದಗಳು ನನ್ನ ಕಿವಿಗೆ ಬೀಳದೆ ಇರಲಿ ಎಂಬುದೇ ಅವರ ಉದ್ದೇಶ್ಯ. ಇದಕ್ಕೆ ಮುಂಚೆ ಎಷ್ಟು ಫಾಸಿಗಳು ನಡೆದಿವೆಯೋ. ಅವು ನಡೆಯುವ ಪ್ರತಿ ಬಾರಿಯೂ ನಾವು ಭಯ ಕಾತರಗಳಿಂದ ಈ ಶಬ್ದಗಳನ್ನು ಕೇಳಲು ಕಿವಿಯಾನಿಸಿ ಕೂತಿರುತ್ತಿದ್ದವು. ಮೋಟಾರ್ ಗಾಡಿಯ ಹಾರನ್ ಶಬ್ದ ನಮ್ಮ ಎದೆಯನ್ನು ಹೊಕ್ಕು ರಕ್ತನಾಳಗಳನ್ನು, ಸ್ನಾಯುಗಳನ್ನು ತಳಮಳಗೊಳಿಸಿಬಿಟ್ಟಿದ್ದಂತೆ ಅನ್ನಿಸುತ್ತಿತ್ತು. ಅದಾದ ಸ್ವಲ್ಪ ಹೊತ್ತಾದಮೇಲೆ ಎಲ್ಲೆಲ್ಲೂ ಜೈಲಿನ ಪ್ರತಿಯೊಂದು ಮೂಲೆ ಮೂಲೆಯಲ್ಲೂ ಏನೋ ಒಂದು ಭಯಂಕರ ಮೌನ.... ಸ್ತಬ್ಧತೆ ಹರಡಿದಂತೆ – ನಮ್ಮ ನಮ್ಮ ಹೃದಯದ ಮಿಡಿತ ಸಹ ಕೇಳಿಬರುವ ಹಾಗೆ. ಆಗ ಸಮಯ ಮುಂದಕ್ಕೇ ಹೋಗುತ್ತಿಲ್ಲ ಅನ್ನಿಸುತ್ತಿತ್ತು. ಬೆಳಗ್ಗೆಯೇ ಆಗುವ ಹಾಗಿಲ್ಲ ಅನ್ನಿಸುತ್ತಿತ್ತು. ಮತ್ತೆ ಮೋಟಾರ್ ಲಾರಿಯ ಹಾರನ್ ಕೇಳಿದೊಡನೆ, ಜನ ತಿಳಿಯುತ್ತಿದ್ದರು - ಈಗ ಶವ ಜೈಲಿನಾಚೆಗೆ ಸಾಗಿಸಲಾಯಿತು ಎಂದು. ಆಮೇಲೆ ಒಂಬತ್ತು ಗಂಟೆಯ ಗಂಟೆ ಬಾರಿಸಲಾಗುತ್ತದೆ - ಖೈದಿಗಳನ್ನು ಎಚ್ಚರಗೊಳಿಸುವುದಕ್ಕೆ. ಫಾಸಿಯಾಗುವ ದಿನ ಜೈಲಿನ ಎಲ್ಲಾ ಖೈದಿಗಳೂ ಎಚ್ಚತ್ತೇ ಇರುತ್ತಾರೆ. ಆದರೂ ನಿಯಮ ಅಂದರೆ ನಿಯಮ ನಡಯಲೇ ಬೇಕಲ್ಲ! ಇದಾದ ಮೇಲೆ ಮತ್ತೆ ಎರಡು ಬಾರಿ ಗಂಟೆಗಳು ಬಾರಿಸಲ್ಪಡುತ್ತವೆ. ಒಂದು ಬೆಳಗ್ಗೆ ಲೆಕ್ಕದ ತನಿಖೆ ಮಾಡುವ ಗಂಟೆ. ಆ ಧ್ವನಿಯು, ರಾತ್ರಿ ಎಷ್ಟು ಜನ ಖೈದಿಗಳು ಒಳಗೆ ಕೂಡಲ್ಪಟ್ಟಿದ್ದರೋ, ಬೆಳಗ್ಗೆ ಅಷ್ಟೇ ಸಂಖ್ಯೆ ಇರುತ್ತಾರೆ ಒಂದು ಹೆಚ್ಚಾಗಿಲ್ಲ, ಒಂದು ಕಡಮೆಯಾಗಿಲ್ಲ ಎಂದು ಎಲ್ಲರಿಗೂ ತಿಳಿಯಹೇಳುತ್ತದೆ. ಪ್ರತಿಯೊಂದು ವಾರ್ಡಿನ ವಾರ್ಡರುಗಳೂ ತಮ್ಮ ತಮ್ಮ ಸುಪರ್ದಿನಲ್ಲಿರುವ ಖೈದಿಗಳ ಸಂಖ್ಯೆಯನ್ನು ಗೋಪುರದ ವಾರ್ಡರಿಗೆ ಕೇಳುವ ಹಾಗೆ ಕೂಗಿ ಹೇಳುತ್ತಾರೆ. ಈ ಸಂಖ್ಯೆಗಳ ಮೊತ್ತ ರಾತ್ರಿಯ ಸಂಖ್ಯೆಗೆ ಹೊಂದಿಕೆಯಾಗಿ ಬಿಟ್ಟರೆ ಈ ಅಸಾಧಾರಣ ಸತ್ಯವನ್ನು ಎರಡು ಗಂಟೆಗಳಾದ ಮೇಲೆ ಲೋಕಕ್ಕೆಲ್ಲ ವಿದಿತ ಮಾಡಿ ಹೇಳಲಾಗುತ್ತದೆ. ಜೈಲರ್ ಸಾಹೇಬನು ಬೀಗದ ಕೈಗೊಂಚಲನ್ನು ಜಮಾದಾರನಿಗೆ ಕೊಡುತ್ತಾನೆ. ಆಗ ಎಲ್ಲ ವಾರ್ಡುಗಳ ಬಾಗಿಲುಗಳೂ ತೆರೆಯಲ್ಪಡುತ್ತವೆ. ಇರುವೆ ಸಾಲುಗಳ ಹಾಗೆ ಪ್ರತಿ ವಾರ್ಡಿನಿಂದಲೂ ಹೊರಗೆ ಸಾಲು ಸಾಲಾಗಿ ಬರುತ್ತಾರೆ ಖೈದಿಗಳೆಲ್ಲ. "ಜೋಡಾಫೈಲ್ ಜೋಡಾಫೈಲ್...." (ಜೋಡಿಲೈನ್.... ಜೋಡಿಲೈನ್) ಎಂದು ವಾರ್ಡರರ ಕೂಗುಗಳು ಕೇಳಬರುತ್ತವೆ. ನಿಗದಿಯಾದ ಸಜಾದಿಂದ ಒಂದು ದಿನ ಕಳೆಯಿತು. ಹೊಸ ದುಡಿಮೆಯಿಂದ, ಕಳೆಯಲು ಸಾಧ್ಯವಾದ ಹೊರೆಯಂತಿರುವ ಇನ್ನೊಂದು ದಿನವನ್ನು ಹೇಗಾದರೂ ಮಾಡಿ ಕಳೆಯಲು ಹೊರಟಿರುತ್ತಾರೆ ಖೈದಿಗಳು ಬೆಳಗ್ಗೆ ಎದ್ದು. ಪ್ರತಿ ಒಂದು ಗಂಟೆಯೂ ಅವರಿಗೆ ಒಂದು ದಿನಕ್ಕೆ ಇಪ್ಪತ್ತು ನಾಲ್ಕು ಗಂಟೆಗಳಿವೆ ಎಂಬುದನ್ನು ಅರಿವು ಮಾಡಿಕೊಡುತ್ತ ಇರುತ್ತದೆ. ಒಂದು ದಿನ ಕಳೆದು ಹೋಯಿತು. ಇನ್ನೂ ಇಂತಿಷ್ಟು ದಿನಗಳು ಬಾಕಿ ಇವೆ.

ನನ್ನನ್ನು ಇವರೆಲ್ಲ ಮರೆಯಿಸಲು ಯತ್ನಿಸುತ್ತಿರುವಂತೆ ತೋರುತ್ತದೆ. ಆದರ ಇವತ್ತಿನ ದಿನ, ಅದರಲ್ಲೂ ಬಿಲೂವನ್ನು ಕುರಿತು ಮರೆಯುವುದಕ್ಕೆ ಸಾಧ್ಯ ಆದೀತ? ಈಗ ಪ್ರಯತ್ನಪಟ್ಟರೂ ಸಹ ಬೇರೆ ಕಡೆ ಮನಸ್ಸು ತಿರುಗಿಸುವುದಕ್ಕಾದೀತ?

ಹಾಗಾಗುವ ಹಾಗಿದ್ದರೆ ಎಷ್ಟೋ ಚೆನ್ನಾಗಿತ್ತು. ಭಗವಂತನ ಕರುಣೆಯೇ ಇರಬೇಕೇನೋ, ಒಂದೇ ಸಲ ಒಂದು ವಿಷಯಕ್ಕಿಂತ ಹೆಚ್ಚಾಗಿ ಯಾರೂ ಯೋಚನೆ ಮಾಡುವುದಕ್ಕಾಗುವುದಿಲ್ಲ. ಬಿಲೂಗೆ ಸಾಧ್ಯವಾಗುವ ಹಾಗಿದ್ದರೆ? ಕೊನೆಯ ಗಳಿಗೆಯಲ್ಲಿ ತನ್ನ ಸಾವನ್ನು ಬಿಟ್ಟು ಬೇರೆ ಯಾವ ವಿಷಯವನ್ನು ಕುರಿತಾಗಲಿ ಯೋಚನೆ ಮಾಡಲು ಶಕ್ತನಾಗಿದ್ದರೆ, ತನ್ನ ಮಾನಸಿಕ ಅಶಾಂತಿ ಮತ್ತು ಕಳವಳದಿಂದ ಬಿಡುಗಡೆ ಆಗಬಹುದಾಗಿತ್ತು. ತನ್ನ ನೋವನ್ನು ಮರೆಯಬಲ್ಲವನು ಆಗಬಹುದಾಗಿತ್ತು. ದೇವರೆ, ಇದುವರೆಗೂ ನಿನ್ನಿಂದ ನಾನು ಯಾವ ವಸ್ತುವನ್ನೂ ಬೇಡಿಲ್ಲ. ಆದರೆ ಇವತ್ತು ಈ ಕಠಿಣ ವಿಪತ್ತಿನ ಗಳಿಗೆಯಲ್ಲಿ ನನ್ನ ಸಿದ್ಧಾಂತ, ನಿಯಮಗಳನ್ನೆಲ್ಲ ಬಿಸಾಟು ನಿನ್ನ ಮುಂದೆ ನನ್ನ ಆಂತರಿಕವಾದೊಂದು ಭಿಕ್ಷೆ ಬೇಡುತ್ತಿದ್ದೇನೆ. ಬಿಲೂ ತನ್ನ ಕೊನೆ ಗಳಿಗೆಯಲ್ಲಿ ಬೇರೆ ಯಾವುದಾದರೂ ವಿಷಯವನ್ನು ಕುರಿತು ಯೋಚಿಸುವಂತೆ ಮಾಡು. ಬೇರೆ ವಿಷಯವನ್ನು ಕುರಿತು ಯೋಚನೆ ಮಾಡುವುದಕ್ಕೆ ಶಕ್ತಿ ಕೊಡು, ದೇವರೆ ಇದೊಂದೇ ನಾನು ಬೇಡುವ ಭಿಕ್ಷೆ. ಕಡೆಯ ಗಳಿಗೆಯು ಬರುವುದಕ್ಕೆ ಮುನ್ನವೇ ಸಾವಿನ ಭಯದಿಂದ ಕಣಕಣವಾಗಿ ಅವನು ಸಾಯದಿರಲಿ. ಟೆಲಿಪಥಿ (ಮನೋಸಂಪರ್ಕ) ಸತ್ಯವಾಗಿದ್ದರೆ! ನಾನು ಮಾಡುತ್ತಿರುವ ಈ ಯೋಚನೆ ಅವನಿಗೆ ತಲುಪುವ ಹಾಗಿದ್ದರೆ? ನನ್ನ ಮನಸ್ಸಿನ ಆಸೆ, ಆಕಾಂಕ್ಷೆ ಅವನ ಮನಸ್ಸಿನಲ್ಲಿ ಪ್ರತಿಧ್ವನಿಸುವ ಹಾಗಿದ್ದರೆ? ಬಿಲೂ, ನಿಮ್ಮಪ್ಪ ನೋಡೋ, ನಿನ್ನ ಸಲುವಾಗಿ ತನ್ನ ಮುಂದೆ ತಾನೇ, ಅಲ್ಲದೆ ದೇವರ ಮುಂದೆಯೂ ಎಷ್ಟು ಸಣ್ಣವನಾಗಿ ಮಾಡಿಕೊಂಡುಬಿಟ್ಟೆ.

ಸೂರಜ್‌ಬಲ್ಲೀ ಬಾಬು ಗೀತಾ ಪಠನ ಮಾಡುತ್ತಾ ಇದ್ದಾರೆ. ಅತಿ ಪರಿಚಿತವಾದ ಆ ಶ್ಲೋಕಗಳು ಕೇಳಿಸಿದರೂ ಕೇಳಿಸಿದಂತೆ ಆಗುತ್ತಿಲ್ಲ. ಕೇಳಿಸಿಕೊಂಡರೂ ತಲೆಗೆ ಹೋಗುತ್ತಿಲ್ಲ. ವಿರಾಟ ಯುದ್ಧಕ್ಷೇತ್ರದ ಮುಂದೆ ನಿಂತು ಕಿವಿಯಾರೆ ಕೇಳಿ ಅರ್ಥ ಮಾಡಿಕೊಳ್ಳುವುದಕ್ಕೆ ದ್ವಾಪರಯುಗದಲ್ಲಿ ಸಾಧ್ಯ ಆಗುತ್ತಿತ್ತು. ನಾನಂತೂ ಅರ್ಜುನನಲ್ಲ. ನಾವೆಲ್ಲ ಗೀತೆಯ ಮರ್ಮವನ್ನು ಅರ್ಥ ಮಾಡಿಕೊಂಡಿದ್ದೇವೇನು? ಆ ನಾಸ್ತಿಕನಾದ ಬಿಲೂ ನಾನು ಕಳಿಸಿದ ಗೀತೆಯ ಪುಸ್ತಕ ವಾಪಸು ಕಳಿಸಿಬಿಟ್ಟಿದ್ದ. ಆದರೆ ಅವನೇ ಕರ್ಮಯೋಗದ ಮೂಲಮಂತ್ರವನ್ನು ಅರ್ಥ ಮಾಡಿಕೊಂಡಿದ್ದಾನೆ. ತನ್ನ ಕಾರ್ಯದಲ್ಲಿ ಪೂರ್ತಿಯಾಗಿ ತನ್ನನ್ನೇ ಲೀನ ಮಾಡಿಬಿಟ್ಟಿದ್ದಾನೆ ಮತ್ತು ನೀಲೂ ಅವನು ಯಾರಿಗೆ ಕಡಮೆ? ಅವನು ತನ್ನ ಕಠೋರ ಕರ್ತವ್ಯಜ್ಞಾನದ ಎದುರು ಸ್ನೇಹ, ಮಮತೆ, ಆತ್ಮೀಯತೆಯ ಹಕ್ಕುಬಾಧ್ಯತೆ, ಜನರ ಮೆಚ್ಚುಗೆ, ಅತ್ಯಂತ ಪ್ರಿಯನಾದ ಅಣ್ಣ - ಎಲ್ಲಾ ತುಚ್ಛವೆಂದು ಎಣಿಸಿದ್ದಾನೆ. ಇಂಥವರನ್ನೇ ನಾನು ನಾಸ್ತಿಕರೆಂದು ಕರೆದದ್ದು! ಈಶ್ವರನಲ್ಲಿ ನಂಬಿಕೆಯಿಡುವುದರಿಂದ ನಮ್ಮ ಮನಸ್ಸಿಗೆ ಬಲ ಬರುತ್ತದೆ ನಿಜ. ಆದರೆ ಈಶ್ವರನಲ್ಲಿ ನಂಬದೇ ಇರುವುದು ಇವರಲ್ಲಿ ದುರ್ಬಲತೆಯನ್ನೇನೋ ಹುಟ್ಟಿಸಿಲ್ಲ! ಬೇರೆ ಜನ ಯಾವುದರಿಂದ ಹಾಳಾಗಿ ಹೋಗುವರೋ, ತಾಂತ್ರಿಕ ಸಾಧಕರು ಅವರಿಂದ ಸಿದ್ಧಿ ಪಡೆಯುತ್ತಾರೆ.

"ಆ್ಯಂಂಂಂಂಮ್!" ಮತ್ತೆ ಬೆಚ್ಚಿದ್ದೆ. ಕೈಯಿಂದ ಹತ್ತಿಯ ಹಂಜಿ ಕೆಳಗೆ ಬಿದ್ದು ಹೋಯಿತು. ಚರಖಾದ ಘುರ್ ಘುರ್ ಶಬ್ದವನ್ನು, ಗೀತಾಪಠನದ ಏಕತಾನದ

ಶಬ್ದವನ್ನು ಬೇರೆಲ್ಲ ಶಬ್ದಗಳನ್ನೂ ಕೊಚ್ಚಿಕೊಂಡು ಮೋಟಾರ್ ಲಾರಿಯ ಹಾರ್ನ್ ಶಬ್ದ ಕೇಳಿಬಂತು. ಆಮೇಲೆ ಮೋಟಾರ್ ನಿಂತ ಶಬ್ದ. ನನ್ನ ಎದೆಯ ಮೇಲಿಂದಲೇ ಮೋಟಾರ್ ಲಾರಿ ರಭಸವಾಗಿ ಹೋದಂತಾಯಿತು. ಅದನ್ನು ಎಳೆದು ಹಾಗೇ ನಿಲ್ಲಿಸಲು ಸಾಧ್ಯವಾಗಿದ್ದರೆ! ನನ್ನ ದೇಹಬಲದಿಂದ.... ಎಷ್ಟಿದೆ ನನ್ನ ಈ ಬಡಮೈಯಲ್ಲಿ ಬಲ? ಸಾಧ್ಯವಾಗಿದ್ದರೆ? ಜಲ್ಲೀ ಕಲ್ಲುಗಳು ತುಂಬಿದ ರಸ್ತೆಯ ಮೇಲಿಂದ ನನ್ನನ್ನೂ ಎಳೆದುಕೊಂಡು ಹೋಗುತ್ತಿದೆ. ಲಾರಿಯ ಚಕ್ರಗಳನ್ನು ಹಿಡಿದು ನಿಲ್ಲಿಸೋಣವೆಂದರೆ ಅಷ್ಟು ಬಲ ಇದೆಯ ನನ್ನ ತೋಳುಗಳಿಗೆ? ಲಾರಿ ನಿಂತುಕೊಂಡಿತು. ನನ್ನ ಹೃದಯದ ಮಿಡಿತದೊಂದಿಗೆ ಶ್ರುತಿ ಸೇರಿಸಿಕೊಂಡು ಮೋಟಾರ್ ಇಂಜನ್ನಿನ ಶಬ್ದ ಆಗುತ್ತಿದೆ. ಕೃದ್ಧ, ಹಿಂಸ್ರ ಮೃಗದ ಗರ್ಜನೆಯಂತೆ. ಸದಾಶಿವನು ಬೆನ್ನ ಮೇಲೆ ಕೈಯಾಡಿಸುತ್ತ ಇದ್ದಾನೆ. ನಾಲ್ಕೂ ಕಡೆಯಿಂದ ಎಲ್ಲರೂ ಓಡಿ ಬಂದು ನನ್ನ ಸುತ್ತ ನಿಂತಿದ್ದಾರೆ. ರಸ್ತೆಯಲ್ಲಿ ಯಾರಾದರೂ ಗಾಡಿಗೆ ಸಿಕ್ಕಿ ಬಿದ್ದುಬಿಟ್ಟರೆ ಮಂದಿ ಸುತ್ತ ನೆರೆಯುತ್ತಾರಲ್ಲ ಹಾಗೆ.

ಆಗ ಸದಾಶಿವ, "ಬನ್ನಿ, ಎಲ್ಲರೂ ಸೇರಿ ಪ್ರಾರ್ಥನೆ ಮಾಡೋಣ" ಎಂದ. ಎಲ್ಲರೂ ಅಲ್ಲೇ ಕೂತರು. ಬೈಜ್‌ನಾಥನ ದಳ ಫಾರ್‌ವರ್ಡ್ ಬ್ಲಾಕಿನ ದಳ, ಕಿಸಾನ್ ಸಭೆಯ ಹುಡುಗ ಕಮ್ಯೂನಿಸ್ಟ್ ಪಾರ್ಟಿಯ ಹುಡುಗ ಮತ್ತು ಉಳಿದವರೆಲ್ಲ ಎಲ್ಲರೂ ಸೇರಿದ್ದರು. ಮೆಹರ್‌ಚಂದ್‌ಜೀ "ರಾಷ್ಟ್ರ ಗಗನ ಕೀ ದಿವ್ಯ ಜ್ಯೋತಿ" ಹಾಡನ್ನು ಶುರು ಮಾಡಿದ. ಇವತ್ತು ಯಾರ ಅಡ್ಡಿಯೂ ಇಲ್ಲ – ಯಾರೂ ಅಣಕ ಮಾಡಿ ಹಾಸ್ಯದ ಪದ್ಯ ಹೇಳುವವರಿಲ್ಲ. ಮೆಹರ್‌ಚಂದ್‌ಜೀ ನಿತ್ಯ ಮರೆತು ಹೋಗುತ್ತಿದ್ದ ಪಂಕ್ತಿಯನ್ನು ಮೊದಲೇ ಎಲ್ಲರೂ ಸೇರಿ ಹಾಡಿಬಿಟ್ಟರು. ಅವನು ಜೇಬಿನಿಂದ ಕಾಗದ ತೆಗೆದು ನೋಡಬೇಕಾಗಿರಲಿಲ್ಲ. ಎಲ್ಲರೂ ಉಸಿರೆಲ್ಲ ಬಿಟ್ಟು ದೊಡ್ಡ ದನಿಯಲ್ಲಿ ಹಾಡುತ್ತಿದ್ದಾರೆ. ಇಷ್ಟು ದೊಡ್ಡ ಅರಚಾಟದಲ್ಲಿ ಇನ್ನು ಮ್ಯಾಜಿಸ್ಟ್ರೇಟರ ಮತ್ತು ಜೈಲ್ ಡಾಕ್ಟರ ಮೋಟಾರ್ ಕಾರುಗಳ ಹಾರ್ನ್ ಹೇಗೆ ಕೇಳಿಬರುತ್ತದೆ? ಅದೇ ಉದ್ದೇಶ್ಯದಿಂದಲ್ಲವೇ ಇವರೆಲ್ಲ ಪ್ರಾರ್ಥನೆ ಮಾಡಲು ಕೂತಿರುವುದು? ಮೆಹರ್‌ಚಂದ್‌ಜೀ ತಮ್ಮ ಹಾಡು ಮುಗಿಸಿದರು. ಕೂಡಲೇ ಸದಾಶಿವನು ಶುರುಮಾಡಿದ – "ರಘುಪತಿ ರಾಘವ ರಾಜಾರಾಮ್!"

ಮಹಾತ್ಮಾಜಿಗೆ ಪ್ರಿಯವಾದ ಭಜನೆ ಇದು. ಎಷ್ಟು ಹಿತವಾದ, ಸವಿಯಾದ ಭಜನೆ! ಬಿಲೂ ದಳದವರಿಗೆ ಇವತ್ತು ಭಜನೆ ಹಾಡಿನ ವಿರುದ್ಧ ಆಕ್ಷೇಪಣೆಯೇ ಇಲ್ಲ. ಮೊದಲ ಪ್ರಾರ್ಥನೆಯಂತೂ ರಾಷ್ಟ್ರಧ್ವಜವನ್ನು ಉದ್ದೇಶಿಸಿ ಹಾಡಿದ್ದು. ಈ ಹಾಡಿಗೂ ರಾಜಕೀಯಕ್ಕೂ ಸಂಬಂಧವೇ ಇಲ್ಲ. ಬಿಲೂವಿನ ಅಂತಿಮ ಮುಹೂರ್ತದಲ್ಲಿ ಅವನ ಆತ್ಮಕ್ಕೆ ಶಾಂತಿಯನ್ನು ಕೋರಿ, ಮತ್ತು ಬಿಲೂ ತಂದೆಗೆ ಮಗನ ವಿಷಯವನ್ನು ಮರೆಯುವುದಕ್ಕಾಗಿ ಇವರೆಲ್ಲ ತಮ್ಮ ಪಕ್ಷ ವೈಷಮ್ಯವನ್ನು ತಾತ್ಕಾಲಿಕವಾಗಿ ಮರೆಯಲು ಸಿದ್ಧರಾಗಿದ್ದಾರೆ, ಬಿಲೂ ದಳ! ಇಷ್ಟು ಸಹ ಮಾಡಲಾರರೆ ಇವರು? ಆದರೆ ನೀಲೂ? ಅವನೂ ಸಹ ಈ ಭಜನೆಯಲ್ಲಿ ಸೇರಿಕೊಳ್ಳುತ್ತಿದ್ದನೆ? ಎಂದಿಗೂ ಇಲ್ಲ. ಅವನು ಒಂದೇ ಸಲ ಮುರಿದು ಬೀಳಬಹುದು. ಆದರೆ ಎಂದು ಬಾಗುವುದಿಲ್ಲ. ನೀಲೂ ಮತ್ತು ಬಿಲೂ ಹಿಂದೆ

ಒಂದು ಕಾಲದಲ್ಲಿ ಇದೇ ಭಜನೆಯನ್ನು ಎಷ್ಟು ಚೆನ್ನಾಗಿ ಹಾಡುತ್ತಿದ್ದರು? ಮಹಾತ್ಮಾಜಿಯವರ ಮುಂದೆಯೂ ಹಾಡಿದ್ದರು. ಮಾನಸಿಕ ಉದ್ವೇಗವನ್ನು ಮರೆಮಾಚಲು ಇವರೆಲ್ಲ ಅಸ್ವಾಭಾವಿಕ ದನಿಯಲ್ಲಿ ಹಾಡುತ್ತ ಇದ್ದಾರೆ. ಇವತ್ತು ಏನಾದರೂ ಆಗಲಿ ಹಾಡು ಮುಗಿಸುವುದೇ ಇಲ್ಲ. ಬೆಳಗ್ಗೆಯಾಗುವವರೆಗೂ ಹಾಡುತ್ತಲೇ ಇರೋಣ ಎಂದು ಮನಸ್ಸು ಮಾಡಿರುವ ಹಾಗಿದೆ. ಹಾಡಲು ಆಗುವವರೆಗೂ ಹಾಡುತ್ತಲೇ ಹೋಗೋಣ ಎಂದಿದ್ದಾರೆ. ಅಗೋ, ಫಾಸೀ ಸ್ತಂಭದ ಏಣಿ ಹತ್ತುತ್ತಾ ಇದ್ದಾನೆ ಬಿಲೂ. ಅಯ್ಯೋ, ಬರಿಗಾಲಲ್ಲಿ ಎಡವಿದ್ದಾನೆ, ಪಾಪ. ಎಷ್ಟು ಬಡವಾಗಿ, ಬಲಹೀನವಾಗಿ ಹೋಗಿದ್ದಾನೆ ನಮ್ಮ ಬಿಲೂ? ಕೊರಳಂತೂ ಹಕ್ಕಿಯ ಕೊರಳಂತೆ ಸಣ್ಣದಾಗಿ, ತೆಳುವಾಗಿಬಿಟ್ಟಿದೆ. ಮೂಗು ಕತ್ತಿಯ ಅಲಗಿನಂತೆ ಆಗಿಬಿಟ್ಟಿದೆ. ಕೆಳಗಡೆ ಗಾಢವಾದ ಕತ್ತಲು, ಕಗ್ಗತ್ತಲು, ಅಗೋ, ಹಗ್ಗ ಜಗ್ಗಿತು... ಬಿಲೂ... ಬಿಲೂ ಬಿಲೂ ಹೋದ! ಬಿಲೂ ಹೋದ ಏನಾಗುತ್ತದೆ? ನನ್ನ ಬಳಿ ಇಷ್ಟು ಮಂದಿ ಬಿಲೂಗಳನ್ನು ಬಿಟ್ಟುಹೋಗಿದ್ದಾನಲ್ಲ! ಭಗವಂತಾ! ಮಹಾತ್ಮಾಜೀ! ಬಿಲೂ ತಾಯಿಗೆ ಈ ಪೆಟ್ಟನ್ನು ಈ ನೋವನ್ನು ಸಹನೆ ಮಾಡಿಕೊಳ್ಳುವ ಶಕ್ತಿಯನ್ನು ಕೊಡಿ. ನಮ್ಮ ನೀಲೂ ಮನಸ್ಸಿಗೆ ಬಲಕೊಡಿ. ಬಿಲೂ ಆತ್ಮಕ್ಕೆ ಶಕ್ತಿ ಕೊಡಿ. ಭಜನೆ ಆಗುತ್ತಲೇ ಇದೆ -

ರಘುಪತಿ ರಾಘವ ರಾಜಾರಾಂ!
ಪತಿತ ಪಾವನ ಸೀತಾರಾಂ!
ಜಯ ರಘುನಂದ ಜಯ ಘನಶ್ಯಾಮ!
ಜಾನಕಿ ವಲ್ಲಭ ಸೀತಾರಾಮ್!

ಜೋರಾಗಿ ಇನ್ನೂ ಜೋರಾಗಿ!

# ಹೆಂಗಸರ ವಾರ್ಡ್

ಸರಸ್ವತಿ ಹೊರಟು ಹೋದಳು. ಬಾಗಿಲು ಮುಚ್ಚುವ ಸಮಯ ಅಂತ ಕಾಣುತ್ತದೆ, ಅದಕ್ಕೇ ಹೋದಳು. ಹ್ಞಾ.... ಹೌದು... ಊರಿನ ಜಮಾದಾರಿಣಿಯ ಮಾತು ಕೇಳಬರುತ್ತಿದೆ. ಸರಸ್ವತಿ ನನ್ನ ತಲೆ ನೀವುತ್ತ ಇದ್ದಳು ಇದುವರೆಗೂ. ತುಂಬಾ ಹಾಯಾಗಿತ್ತು. ಅವಳ ಕೈಬೆರಳುಗಳು ಎಷ್ಟು ಮೆತ್ತಗಿವೆ! ಎರಡು ಕಪೋಲಗಳನ್ನೂ ಗಟ್ಟಿಯಾಗಿ ಹಿಡಿದು, ಆಮೇಲೆ ಮೆಲ್ಲ ಮೆಲ್ಲಗೆ ಬೆರಳುಗಳನ್ನು ಹತ್ತಿರ ಹತ್ತಿರ ತರುವುದು.... ಹುಬ್ಬುಗಳ ಮೇಲೆ... ಆಮೇಲೆ ಮೂಗಿನ ಮೇಲು ಭಾಗದಲ್ಲಿ ಮೆಲ್ಲಗೆ ಒತ್ತುವುದು.... ಮತ್ತೆ ಮೆಲ್ಲ ಮೆಲ್ಲಗೆ ಒತ್ತುತ್ತ ಹಣೆಯ ಕೆಳ ಭಾಗದಲ್ಲಿ ಕಪೋಲ ಸ್ಥಳದಲ್ಲಿ ಅದುಮಿ ಹಿಡಿದುಕೊಳ್ಳುವುದು.... ಹೀಗೆ ಸ್ವಲ್ಪ ಹೊತ್ತು ಮಾಡುತ್ತಿದ್ದರೆ ಕಪೋಲಗಳ ಜಾಗದಲ್ಲಿನ ನೋವು ಎಷ್ಟೋ ಕಡಮೆಯಾಗುತ್ತದೆ.

ಈಗಲೂ ಹಾಗೇ ಆಯಿತು. ಮತ್ತು ತಲೆಯಲ್ಲಿ ಇದುವರೆಗೆ ಸೇರಿಕೊಂಡಿದ್ದ ಭಾರವಾದ ಭಾವವೂ ಅದರ ಜೊತೆಯಲ್ಲೇ ಮಾಯವಾಯಿತು. ಈ ಜಮಾದಾರಿಣಿಯು ಅವಳನ್ನು ಒಂದು ನಿಮಿಷ ಹೆಚ್ಚಾಗಿ ಕೂಡಗೊಳಿಸಿದರೆ ತಾನೆ? .....ನಮ್ಮನ್ನೆಲ್ಲ ಕಂಡರೆ ಅವಳು ಸ್ವಲ್ಪ ಗೌರವದಿಂದಲೇ ಮಾತಾಡಿಸುತ್ತಾಳೆ. ಆದರೆ ಸರಸ್ವತಿಯು 'ಸಿ' ಕ್ಲಾಸಿನವಳಲ್ಲ? ಅವಳ ವಾರ್ಡಿನಲ್ಲಿ ಸಿಗುವ ಮರ್ಯಾದೆಯೇ ಬೇರೆ. ಸರಸ್ವತಿಯನ್ನು ಇದುವರೆಗೂ ಇಲ್ಲಿ ಇರುವುದಕ್ಕೆ ಬಿಟ್ಟಿದ್ದಳಲ್ಲ... ಅದೇ ಒಂದು ದೊಡ್ಡ ವಿಷಯ. ಈ ಸರಸ್ವತಿ ಮತ್ತೆ ಜೈಲಿಗೆ ಬಂದು ಸೇರಿಕೊಂಡಳಲ್ಲ.... ಯಾಕೆ? ....ನನಗೆ ಕಾರಣಗೊತ್ತಿಲ್ಲದೆ ಇಲ್ಲ. ನನ್ನಿಂದ ಆ ವಿಷಯವನ್ನು ಮರೆಮಾಡುವುದಕ್ಕೆ ಸಾಧ್ಯವೆ? ಮೊದಲೇ ನನಗೆ ಇದು ಗೊತ್ತಿದ್ದರೆ..... ಎಷ್ಟು ಚೆನ್ನಾಗಿತ್ತು. ಸಹದೇವನ ತಾಯಿ ಪ್ರಸ್ತಾವ ಎತ್ತಿದಾಗಲೇ ಒಪ್ಪಿಕೊಂಡುಬಿಡುತ್ತಿದ್ದೆ.... ಹಾಗೆ ಆಗಿದ್ದರೆ... ಆಗ... ಆಗ ನಮ್ಮ ಬಿಲೂಗೆ ಈ ದಶೆ ಬರುತ್ತಿತ್ತೆ?.....ಅಯ್ಯೋ.... ನಾನೇಕೆ ಒಪ್ಪಿಕೊಳ್ಳಲಿಲ್ಲ... ?....ಹೇಗೆ, ಹೇಗ ಒಪ್ಪಿಕೊಳ್ಳಲಿ? ....ನನ್ನ ಜಾಯಮಾನವೇ ಹಾಗೆ! ದೇವರು ನನ್ನನ್ನು ಸೃಷ್ಟಿ ಮಾಡಿರುವುದೇ ಹಾಗೇ!..... ಹಾಗಾದರೆ ಇಡೀ ಊರಿನವರನ್ನೆಲ್ಲ ನನ್ನ ಹೊಟ್ಟೆಯಲ್ಲೇ ತುಂಬಿಸಿಕೊಂಡು ಹೇಗೆ ಇರತಾ ಇದ್ದೆ? ....ಗಾದೆಯೇ ಇದೆಯಲ್ಲ....ಪಾಪಿ ಸಮುದ್ರ ಹೊಕ್ಕರೂ ಮೊಣಕಾಲುದ್ದ ನೀರು ಅಂತ? ನನಗೆ ಆಗಿರುವುದೂ ಹಾಗೇ ಈಗ. ಸರಸ್ವತಿಯ ಹಣೆಯಲ್ಲಿ ಬರೆದಿರುವುದೂ ಅದೇ. ಮದುವೆ ಆಗಿದ್ದರೂ ಅವಳಿಗೂ ನನ್ನ ದಶೆಯೇ ಬರತಾ ಇತ್ತು. ನಾನು ಆಗ ಬಿಲೂ ಇಷ್ಟ ಹೇಗಿದೆ ಅಂತ ಕೇಳಲೂ ಇಲ್ಲ. ಹುಡುಗಿ ಆಗ ಇನ್ನೂ ಶಾಲೆಯಲ್ಲಿ ಓದುತಾ ಇದ್ದಳು. ಈಗಿನ ಕಾಲದ ಹುಡುಗರು ಅಷ್ಟು ಸಣ್ಣವರನ್ನ ಮದುವೆ ಆಗತಾರೆಯೆ?

ಹೀಗಂದದ್ದು ಸಹದೇವನ ತಾಯಿಗೆ ಮುಖ ಕಪ್ಪಾಗಿತ್ತು, ಆದರೆ ಅವಳು ಆಗ ನನಗೇನೂ ಅನ್ನಲಿಲ್ಲ. ಸುಮ್ಮನೆ ನನ್ನ ಕಡೆ ಆಶ್ಚರ್ಯದಿಂದ ದುರ ದುರ ನೋಡಿ ಮಾತೇ ಆಡದೆ ಹೊರಟು ಹೋಗಿದ್ದಳು. ಆದರೆ ಈ ಸಹದೇವ ಸುಮ್ಮನೆ ಇರತಾನೇ ? ಆಮೇಲೆ ಬಂದು ನನ್ನ ಮುಂದೆ ಅಂದೇ ಬಿಟ್ಟ – "ನಾವು ಹಳ್ಳಿಗಾಡಿನವರು. ನನ್ನ ತಂಗಿ ಮಿಡಲ್ ಸ್ಕೂಲ್ ಪರೀಕ್ಷೆ ಪಾಸು ಮಾಡದಿದ್ದರೆ ಏನೀಗ ? ಸರೋಜಿನಿನಾಯ್ಡು ಅಥವಾ ವಿಜಯಲಕ್ಷ್ಮಿ ಪಂಡಿತರ ಹಾಗೆ ವಿದ್ವಾಂಸಳಾಗಬೇಕಾಗಿಲ್ಲ ಅವಳು. ಅದು ಹೋಗಲಿ ಬಿಲೂ ಬಾಬೂ ತಾನೇ ಅಂಥ ಪಾಸು ಏನು ಮಾಡಿರೋದು ? ಕಾಶೀವಿದ್ಯಾಪೀಠದ ಶಾಸ್ತ್ರಿ ಅಷ್ಟೇ ತಾನೇ" – ಹೀಗೆಂದು ಬಿಡೋದೇ ಹುಡುಗ ? ....ಸಹದೇವ ನೋಡಲಿಕ್ಕೆ ತುಂಬಾ ಸಾಧು. ಸಾಮಾನ್ಯವಾಗಿ ಏನೂ ತಿಳಿಯದವನ ಹಾಗೆ ಸುಮ್ಮನೆ ಇರುತ್ತಾನೆ. ಮಾತಾಡಿದ ಅಂದರೆ ಜ್ಞಾಪಕ ಇಟ್ಟುಕೋಬೇಕು. ಹಾಗೆ ಚುಚ್ಚುವ ಹಾಗೆ ಮಾತಾಡತಾನೆ. ಅಲ್ಲ.... ಇವನ ಮಾತಿಗೆ ನಾನೇಕೆ ಬೆಲೆ ಕೊಡಬೇಕು ? ನನ್ನ ಮಗನ ಮದುವೆ ನನ್ನ ಇಷ್ಟ ಬಂದ ಕಡೆ ಮಾಡತೇನೆ. ಬೇರೆಯವರು ಯಾಕೆ ಮನಸ್ಸಿಗೆ ಬಂದ ಹಾಗೆ ಮಾತಾಡಬೇಕು ? ...ನಾನು ಯಾಕೆ ಬೇಡ ಅಂದೆ ? ಇಬ್ಬರಿಗೂ ಜೋಡಿ ಸರಿಯಾಗುವುದಿಲ್ಲ ಅಂತ ಅಲ್ಲವೆ ? ಹಿಂದೂಸ್ಥಾನಿಯವರಿಗೂ ಬಂಗಾಳಿಗಳಿಗೂ ಹೇಗೆ ಸರಿಹೋಗುತ್ತೆ ? ಒಂದು ಗಿಡದ ತೊಗಟೆಯನ್ನು ಇನ್ನೊಂದು ಗಿಡಕ್ಕೆ ಅಂಟಿಸಲಿಕ್ಕಾದೀತೆ ? ನಾನು 'ಸರಸ್ವತಿ' ಅಂತೇನೆ – ಅವರು 'ಸರಸಯೋತಿ' - ಅಂತಾರೆ. ಸರಸ್ವತಿಗೆ ಶುಕತೋ ಅಡಿಗೆ ಮಾಡಲಿಕ್ಕಾಗತ್ತೆ ? ಗೋಕುಲ್ ಪೀಟ್* ಹೆಸರಾದರೂ ಕೇಳಿದ್ದಾಳಾ ? ಬಿಲೂ ತೊಗರಿ ಬೇಳೆ ತಿನ್ನುವುದಿಲ್ಲ. ಇವರಿಗೆ ಅದಿಲ್ಲದೆ ಹೋದರೆ ಆಗುವುದೇ ಇಲ್ಲ. ಈ ಜನ ಮಸೂರ್ ಬೇಳೆ ತಿನ್ನುವುದು ಯಾವಾಗ ಅಂದರೆ ಹೆಣ್ಣು ಬಾಣಂತಿಯರಾಗಿರುವಾಗ. ಒಂದು ಸಲ ಬಹುರಿಯಾಜೀಗೆ ದಂಟಿನ ಹುಳಿ ಮಾಡಿಕೊಟ್ಟಿದ್ದೆ. ಅವರು, "ಹಾಮಿ ಡಾಂ ಟಾ ಚಚ್ಚಡಿ ಖುಬ್ ಪನನ್ ಕರೇ" ಅಂತ ತಪ್ಪು ತಪ್ಪು ಬಂಗಾಳಿಯಲ್ಲಿ ಹೇಳಿದರು. ದಂಟಿನ ಹೋಳುಗಳನ್ನು ಬಾಯಲ್ಲಿ ಇಟ್ಟುಕೊಂಡು ನಾಲಗೆಯಲ್ಲಿ ಚೀಪಿ ಬಿಸಾಡಿದರು. ಅಗಿಯಲಿಲ್ಲ. ಅಗಿದರೆ ಅಲ್ಲವೆ ಅದರ ರುಚಿ ಗೊತ್ತಾಗುವುದು ! ಇನ್ನು ಬಂಗಾಳಿ ಬರದಿದ್ದರೂ ಬಂಗಾಳಿಯಲ್ಲಿ ಮಾತಾಡುವ ಖಯಾಲಿ. ಇವರಿಗೆ ಸಿಹಿತಿಂಡಿ ಮಾಡಲಿಕ್ಕೆ ಬರತ್ತೇನು ? ಯಾವುದು ಬರತ್ತೆ ಹೇಳಲಿ ? ಜೈಲಿನಲ್ಲಿ ನೋಡತಾ ಇದ್ದೇನಲ್ಲ ? ಇಂಥವರ ದೇಶದಲ್ಲೇ ಇಡೀ ಬದುಕೆಲ್ಲ ಕಳೆದಾಯಿತು ನಾನು. ಇವರ ಸೀಯೆಲ್ಲ "ಪೂಯಾ" ಒಂದು – ಎಲ್ಲ ಪೂಜೆ, ಅರ್ಚನೆಗಳಲ್ಲೆಲ್ಲ ಇದೇ ನೈವೇದ್ಯ. ನೀರಲ್ಲಿ ಹಿಟ್ಟು ಕಲಸಿದ, ಒಂದಿಷ್ಟು ಬೆಲ್ಲ ಹಾಕಿದ. ಅದನ್ನು ಬೇಯಿಸೋ, ಹುರಿದೋ ಹಾಕಿದರೆ ಆಯಿತು "ಪೂಯಾ". ಅದನ್ನು ಸಕ್ಕರೆ ಪಾಕದಲ್ಲಿ ಹಾಕೋದಿಲ್ಲ ಏನೂ ಇಲ್ಲ. ಎರಡು ತರಕಾರಿ ಸೇರಿಸಿ ಪಲ್ಯ ಮಾಡಿಬಿಟ್ಟರೆ, 'ಇದೇನು' ಅಂತಾರೆ. ಇಂಥವರ ಮನೆ ಹುಡುಗಿಯನ್ನು ನಮ್ಮ ಬಿಲೂಗೆ ಮಾಡಿಕೊಳ್ಳಬೇಕಾಗಿತ್ತಂತೆ. ಮದುವೆ ಅಂದರೆ ಸಾಮಾನ್ಯವೇ ? ಒಂದು ದಿನ,

* ಒಂದು ಬಗೆಯ ಹಿಟ್ಟಿನ ತಿಂಡಿ.

ಎರಡು ದಿನದ ವ್ಯವಹಾರ ಅಲ್ಲ. ಇಡೀ ಜೀವಮಾನದ ಸಮಾಚಾರ. ಅಲ್ಲ, ನಮ್ಮ ಹುಡುಗ ಜೀವಮಾನವೆಲ್ಲ ಬೆಳ್ಳುಳ್ಳಿ, ಮೆಣಸು ತಿಂದುಕೊಂಡು ಇರಲಿಕ್ಕಾದೀತೆ, ಬಂಗಾಳಿ ಹುಡುಗನಾದವನು ?

ಇಷ್ಟಾದರೂ, ಸರಸ್ವತಿಯನ್ನ ಕಂಡರೆ ನನಗೆ ತುಂಬ ಇಷ್ಟವೇ. ಮನೆಸೊಸೆಯಾಗಿ ಮಾಡಿಕೊಳ್ಳಲಿಕ್ಕೆ ಆಗಲಿಲ್ಲ ಅಂದರೆ ಹುಡುಗಿ ಇಷ್ಟವಾಗಲಿಲ್ಲ ಅಂತ ಅಲ್ಲ. ಅವಳನ್ನು ಇವತ್ತು, ನಿನ್ನೆ ನೋಡಿದ್ದೇನೇನು ? ಸಣ್ಣ ಹುಡುಗಿಯಾಗಿದ್ದಾಗಲಿಂದ ನೋಡತಾ ಇದ್ದೇನೆ. ಅವಳ ತಂದೆ ಕಪಿಲದೇವರ ಸಂಗಡ ಬಂದು ಎಷ್ಟು ದಿನ ಎಷ್ಟು ಸಲ ನಮ್ಮ ಆಶ್ರಮದಲ್ಲಿ ಇಳಿದುಕೊಳ್ಳುತ್ತ ಇದ್ದಳು. ಬಿಲೂ, ನೀಲೂಗಳಂತೆ ಸಹದೇವನೂ, ಸರಸ್ವತಿಯೂ ನನ್ನ ಕೈಯಲ್ಲೇ ಬೆಳೆದು ದೊಡ್ಡವರಾದರು ಎಂದು ಹೇಳಿದರೂ ಉತ್ಪ್ರೇಕ್ಷೆಯಲ್ಲ. ಏನಿತ್ತು ಅವಳ ವಯಸ್ಸು ಆಗ ? ಚೋಟುದ್ದದ ಹುಡುಗಿ.

ನಮ್ಮ ಆಶ್ರಮದ ಅಡಿಗೆ ಮನೆಯ ವರಾಂಡದಲ್ಲಿ ಬಣ್ಣದ ಬೃಂದಾವನೀ ಖದ್ದರ್ ಸೀರೆಯುಟ್ಟು ಆ ಚೇಷ್ಟೆ ಹುಡುಗಿ ಬಿದಿರು ಕಂಬವನ್ನು ಹಿಡಿದುಕೊಂಡು ಅದರ ಸುತ್ತ ಸುತ್ತು ಹಾಕುತ್ತ ಇರುತ್ತಿದ್ದಳು. ಕೂದಲು, ತುರುಬು, ಸೆರಗು ಸುಮ್ಮನೆ ಗಾಳಿಯಲ್ಲಿ ಅಸ್ತವ್ಯಸ್ತವಾಗಿ ಹೋಗುತ್ತಿದ್ದರೂ ಅವಳಿಗಲ್ಲಿ ಆಕಡೆ ಲಕ್ಷ್ಯ ? ನಾನು, "ಸಾಕು ನಿಲ್ಲಿಸೇ... ತಲೆ ತಿರುಗಿ ಬಿದ್ದು ಕೈಕಾಲು ಮುರಕೊಂಡೀಯ.... ತಲೆ ತಿರುಗಿ ವಾಂತಿಬರತ್ತೆ ಕಣೆ... ನಿಲ್ಲಿಸು ಒಳ್ಳೇ ಮಾತಲ್ಲಿ" ಅಂತ ಎಷ್ಟು ಹೇಳಿದರೂ ಅವಳೆಲ್ಲಿ ಕೇಳುತ್ತಾಳೆ ? "ಸರಸೋಯತೀ ಕೀ ಇಸ್ಕೂಲ್.... ವೆರಿ ಬ್ಯಾಡ್ ವೆರಿಬ್ಯಾಡ್ ಟೀಚರ್ ಕೂಲ್" ಎಂದು ಪದ್ಯ ಹೇಳುತ್ತ ಹೇಳುತ್ತ ಬಿಲೂ ಅಡಿಗೇ ಮನೆಯ ವರಾಂಡದಲ್ಲಿ ಬಂದು ನಿಂತ. ಆಗಲೂ ಈ ಹುಡುಗಿಯ ಸುತ್ತಾಟ ನಿಂತರೆ ತಾನೆ ! ಹಾಗೆ ಸುತ್ತುತ್ತ ಸುತ್ತುತ್ತಲೇ ಬಿಲೂ ಹಾಡುತ್ತಿದ್ದ ಪದ್ಯಕ್ಕೆ ಉತ್ತರವಾಗಿ ತಾನೂ ಒಂದು ಪದ್ಯ ಹೇಳತೊಡಗಿದಳು-

"ಮ್ಯಾಂವ್ ಮ್ಯಾಂವ್ ಮ್ಯಾಂವ್‌ಕೂ
ಬಿಲ್ಲೀ ಭೈಯಾ ಥ್ಯಾಂಕ್ಯೂ !"

ಬಿಲೂ ಅವಳ ಹಾಡಿನೊಂದಿಗೆ ದನಿಕೂಡಿಸುತ್ತ "ಮುರಗೀ ಭೈಯಾ ಕೀ ಠ್ಯಾಂಗ್ ಖಾವ್ವೋ" ಎಂದು ಹಾಡಿದ. ಆಗ ಹುಡುಗಿಯು ಸುತ್ತಾಡುವುದನ್ನು ನಿಲ್ಲಿಸಿ ನಗುನಗುತ್ತಲೇ ವರಾಂಡದ ಮೇಲೆ ಬೋರಲಾಗಿ ಬಿದ್ದುಕೊಂಡಳು ....ಹಾಗೆ ಸುತ್ತಿದರೆ ತಲೆ ತಿರುಗುವುದಿಲ್ಲವೇ ?

ಒಳ್ಳೇ ಪುಷ್ಟಿಯಾಗಿ ಬೆಳೆದಿದ್ದ ಹುಡುಗಿ. ಕೆಲಸಮಾಡಿಸಿಕೊಳ್ಳುತ್ತಾ ಇದ್ದೆ ಅವಳ ಕೈಲಿ. ಬಂಗಾಳಿ ಗೃಹಸ್ಥರ ಮನೆ ಹುಡುಗಿ ಆಗಿದ್ದರೆ ಕಾಂಗ್ರೆಸ್ ಆಶ್ರಮದ ಕೆಲಸ ಮಾಡುತ್ತಿದ್ದಳೆ ಅವಳು ? ...ಆಶ್ರಮ ? ಆಶ್ರಮ ಅನ್ನುವುದು ಯಾಕೆ, ಹೋಟಲು ಅನ್ನಬೇಕು ಅದನ್ನ. ಕೋರ್ಟು ವ್ಯಾಜ್ಯಗಳಲ್ಲಿ ಮುಳುಗಿರುವ ಎಷ್ಟೋ ಜನ ಹಳ್ಳಿ, ಗ್ರಾಮಗಳ ಕಡೆಯಿಂದ ಕೋರ್ಟು ಹೀರಿಂಗಿಗೆ ಬರುವವರೆಲ್ಲ ನಮ್ಮ ಆಶ್ರಮದಲ್ಲೇ ಇಳಿದುಕೊಳ್ಳಬೇಕು. ಸರಿ, ಮೀಟಿಂಗುಗಳಂತೂ ಇದ್ದೇ ಇರುತ್ತವೆ. ಸಮಯವಿಲ್ಲ, ಅಸಮಯವೂ ಇಲ್ಲ.... ರಾತ್ರಿ ಇಲ್ಲ, ಹಗಲೂ ಇಲ್ಲ.... ಜನ ಬರತಾನೇ ಇರುತ್ತಾರೆ.

ವಿರಾಮವೇ ಇಲ್ಲದೆ. ನಾನಾದ್ದಕ್ಕೆ ಸೈರಿಸಿಕೊಂಡೇ ಹೋದೆ. ಬೇರೆ ಯಾರಾದರೂ ಆಗಿದ್ದರೆ ಅತ್ತು ಗೋಳಾಡಿ ಸಾಯುತಾ ಇದ್ದರು... ಸರಸ್ವತಿ ಅಡಿಗೆ ಮಾಡಿದಾಗ ನಮ್ಮ ಬಿಲೂ ಎಷ್ಟೋ ಸಲ ಹೊಟ್ಟೆ ತುಂಬಾ ಊಟವೇ ಮಾಡುತ್ತಿರಲಿಲ್ಲ. ಅವನಿಗೆ ನಾನು ಅಡಿಗೆ ಮಾಡಿದ ಪಲ್ಯ ತಿನ್ನಲಿಕ್ಕೆ ತುಂಬಾ ಇಷ್ಟ.... ಕೂತರೆ ಚೆನ್ನಾಗಿ ಊಟಮಾಡುತಾ ಇದ್ದ.... ಎಷ್ಟು ಅನ್ನ ಇದ್ದರೆ ಅಷ್ಟೇ ಪಲ್ಯವೂ ಇರಬೇಕು. ಹಾಗೆ ಅವನು ತಿನ್ನತಾ ಇದ್ದದ್ದರಿಂದಲೇ ಇವತ್ತು ಮೈಕೈ ಗಟ್ಟಿಯಾಗಿ ಹೇಗೋ ಇದ್ದಾನೆ.... ಇನ್ನ ಬರೀ ಅನ್ನವೇ ತಿಂದುಕೊಂಡಿದ್ದರೆ ಆ ಕತೆಯೇ ಬೇರೆ ಇರತಾಯಿತ್ತು. ....ಪಲ್ಯ ಅಷ್ಟು ಇಲ್ಲದೆ ಹೋದರೆ ಏನಿದೆ ತಿನ್ನೋದು... ಹಕ್ಕಿ ಕೆದಕಿದ ಹಾಗೆ ನಾಲ್ಕು ತುತ್ತು ಬಾಯಿಗಿಟ್ಟರೆ ಮುಗಿದು ಹೋಯಿತು. ಇನ್ನು ಈ ಸರಸ್ವತಿ ಮನೆಯವರಂತೂ ಗೊತ್ತೇ ಇದೆ. ಇವರಿಗೆಲ್ಲ ತರಕಾರಿ ತಿನ್ನುವ ಅಭ್ಯಾಸ ಎಲ್ಲಿದೆ? ಇವರುಗಳಲ್ಲಿ ಲಕ್ಷಾಧೀಶ್ವರರಾದವರು ಜಂಬದಿಂದ ಹೇಳಿಕೊಳ್ಳುತ್ತಾರೆ.... ಏನು ಅಂದರೆ ತಾವು ಅನ್ನದ ಜತೆಗೆ ಎರಡು ಮೂರು ವಿಧವಾದ ತರಕಾರಿ ತಿನ್ನದೇ ಹೋದರೆ ಆಗುವುದೇ ಇಲ್ಲವಂತೆ. ಆ ಪಾಳೆಯದ ಜನರೆಲ್ಲ ಇದೊಂದು ದೊಡ್ಡ ಸಂಗತಿಯೆಂದು ಪರಸ್ಪರ ಚರ್ಚೆಮಾಡುತ್ತಾರೆ, ಲಕ್ಷಾಧೀಶ್ವರರು ಹಾಗಾದರೆ, ಇನ್ನು ಸಾಧಾರಣ ಗೃಹಸ್ಥರ ಊಟ ಹೇಗೆ! ಸೊಂಟದುದ್ದ ಇರುವ ಹಿತ್ತಾಳೆ ತಟ್ಟೆಯ ತುಂಬ ಕೆಂಪಕ್ಕಿಯ ಅನ್ನ ತುಂಬಿ ಅದರ ನಡುವೆ ಒಂದು ಸಣ್ಣ ಹಳ್ಳದ ಹಾಗೆ ಮಾಡಿ ಅದರಲ್ಲಿ ಒಂದು ಸೌಟು ಬೇಳೆ ತೊವ್ವೆ-ಮತ್ತು ತಟ್ಟೆಯ ಒಂದು ಅಂಚಿನಲ್ಲಿ ಬೊಟ್ಟಿನಷ್ಟು ಒಂದು ತುಣುಕು ಪಲ್ಯ. ಖುಷಿಯಿಂದ ಇದಷ್ಟು ತಿಂದು, ಕಪಿಲದೇವನೂ, ಸಹದೇವನೂ ಒಂದೊಂದು ತಂಬಿಗೆ ನೀರು ಕುಡಿದು ತೃಪ್ತಿಯಾಗುತ್ತಾರೆ.

ಅರೆ, ಯಾರಿದು? ನನ್ನ ಕಾಲುಗಳನ್ನು ಎಳೆಯೋರು ಯಾರು ಮತ್ತೆ? ಯಾರೇ ಅದು? ಮನ್‌ಬಾನಿಯಾ? ಯಾಕೆ? ಕಾಲಿಗೆ ಎಣ್ಣೆ ಯಾಕೆ ಸವರುತಾ ಇದ್ದೀಯೆ? ಯಾರು ಹೇಳಿದರು? ಖಂಡಿತ, ಈ ಬಹುರಿಯಾಜಿ ಇರಬೇಕು. ಆಕೆಯೇ....! ತಾನು ಹೋಗಿ ರಾಮಾಯಣ ಪಠಣದಲ್ಲಿ ಕೂತಿದ್ದಾಳೆ.... ಮತ್ತೆ ಇವಳನ್ನು ಕಳಿಸಿದ್ದಾಳೆ. ನನ್ನ ಪ್ರಾಣ ತೆಗೆಯೋದಕ್ಕೆ. ರಾಮಾಯಣ ಪಠಣ ತುಂಬ ಜೋರಾಗೆ ನಡೆಯುತ್ತ ಇದೆ.... ಗೊತ್ತು. ಬಹುರಿಯಾಜೀ ಓದುತ್ತಾಳೆ. ಉಳಿದ ಹದಿನೇಳು ಜನ ದನಿ ಸೇರಿಸುತ್ತಾರೆ. ಕಿವಿ ಚಿಟ್ಟೆನ್ನಿಸಬೇಕು ಕೇಳತಾ ಇದ್ದರೆ.... ಅಬ್ಬ! ನಮ್ಮಲ್ಲೂ ಇಲ್ಲವೇ, ಯಾರಾದರೂ ಒಬ್ಬರು ರಾಮಾಯಣವೋ, ಮಹಾಭಾರತವೋ ಓದುವುದು, ಉಳಿದವರೆಲ್ಲ ತಲೆದೂಗುತ್ತ ಕೇಳುವುದು... ಹಾಗೆ? ಆಗಾಗ ಒಬ್ಬಿಬ್ಬರು 'ಆಹಾ' 'ಓಹೋ' ಅನ್ನುತ್ತಾರೆ. ಅಷ್ಟೇ. ಏನೇ, ಮನ್‌ಬಾನಿಯಾ? ನನ್ನ ಕಾಲಿಗೆ ಎಣ್ಣೆ ಉಜ್ಜು ಅಂತ ಹೇಳಿದವರು ಯಾರೆ?

ಅವಳಂತಾಳೆ, "ಸರಸೋತಿಜೀ ಹೋಗೋ ಸಮಯದಲ್ಲಿ ಹೇಳಿ ಹೋಗಿದ್ದರು. ಕೆಲವು ದಿನಗಳಿಂದ ಪಿತ್ತ ಆಗಿ ಅಮ್ಮಾವರ ಕೈ ಕಾಲು ಉರೀತದೆ ಅಂತೆ. ಅದಕೇ ನಿಮ್ಮ ಕಾಲಿಗೆ, ಕೈಗೆ ಎಣ್ಣೆ ಹಚ್ಚಿ ತಿಕ್ಕಬೇಕಂತೆ! ಅಮ್ಮಾವರೆ, ನೀವು ರೇಗತೀರಿ ಅಂದು ಬಿಟ್ಟು ಇಷ್ಟೊತ್ತು ಸುಮ್ಮನೇನೇ ಇದ್ದೆ ಹೊಸಲ ಹತ್ತಿರ – ಈಗ ತಾನೇ ಜಮಾದಾರಿಣಿ ಬಂದದ್ದೇ ಗದರಿ ಹೋದಳು. 'ಹ್ಹಾ- ಆಗಲೇ ನಿದ್ದೆ ಮಾಡಲಿಕ್ಕೆ

ಏರ್ಪಾಡಾಗತಾ ಇದೆಯಾ ಹಾಂ ಹೂಂ ಅಂತ' ಅಮ್ಮಾವ್ರರ ಸೇವೆಗೆ ಅಂತ ನಿನಗೇ, ಗಲಕಟ್ಟೀಗೆ ಡ್ಯೂಟಿ ನೇಮಿಸಿದ್ದಾಗಿದೆ. ಆಗಲೇ ಬಂದು ಬಾಗಿಲ ಹತ್ತಿರ ಕುಂತುಬಿಟ್ಟೆಯಾ? ಅರ್ಧರಾತ್ರಿ ನೀನು ಎಚ್ಚರ ಇರಬೇಕು.... ಇನ್ನರ್ಧ ರಾತ್ರಿ ಗಲಕಟ್ಟಿ ಎಚ್ಚರ ಇರಬೇಕು. ಹೀಗಂತ ಕೂಗಿ ಬಿಟ್ಟು ಅವಳು ದಡಬಡ ಅಂತ ಹೊರಟು ಹೋದಳು. ಅಮ್ಮಾ-ಸರಕಾರಿ ಜೈಲಿನಾಗೆ ಬಿದ್ದುಕೊಂಡಿದೀನಿ. ಇನ್ನು ನೀವೇನು ಹೇಳತೀರೋ ಹಂಗೆ ಮಾಡದೆ ಹೋದರೆ ಆಗತ್ತಾ? ಏನೇನು ಪಾಪ ಮಾಡಿದ್ದೀನೋ, ಬ್ರಾಂಬರ ಮನೇಲಿ ಹುಟ್ಟಿ ಅಂತಿಂತೋರ ಕಾಲು ನೀವಿಕೊಂಡು ಇರಬೇಕಲ್ಲವಾ? ಅವರು ಹುಕುಂ ಮಾಡಿದರು ಅಂತ ನಿಮ್ಮ ಕಾಲು ನೀವಲಿಕ್ಕೆ ಬಂದೆ. ಇನ್ನ ನೀವೂ ರೇಗ್ ಬಿಟ್ಟರೆ ಹೆಂಗೆ ಅಮ್ಮಾವ್ರರೆ?...."

ಮೂವತ್ತೋ ಮೂವತ್ತೊಂದೋ ವಯಸ್ಸಿರಬೇಕು ಮನೋಚನಿಯಾಗೆ! ಅವಳು 'ಸಿ' ಕ್ಲಾಸಿನ ಸಾಧಾರಣ ಖೈದಿ. ಒಳ್ಳೇ ಚೆನ್ನಾಗಿದಾಳೆ ನೋಡಲಿಕ್ಕೆ. ಅವಳು ಹೇಳಿದ ಹಾಗೇ ಬ್ರಾಹ್ಮಣರ ಮನೆಯ ಬಾಲ ವಿಧವೆ. ಸ್ವಲ್ಪ ಕಾಲಕ್ಕೆ ಹಿಂದೆ ಒಂದು ಮಗು ಆಯಿತಂತೆ. ಬಿದಿರು ಮೆಳೆಯ ಹಿಂದೆ ಒಂದು ಮಣ್ಣಿನ ಮಡಕೆಯಲ್ಲಿ ಆಗತಾನೇ ಹುಟ್ಟಿದ ಮಗುವಿನ ಹೆಣ ಬಿದ್ದಿದ್ದನ್ನ ಯಾರೋ ನೋಡಿದರಂತೆ. ಮಗುವಿನ ಕೊರಳಲ್ಲಿ ದೊಡ್ಡ ದೊಡ್ಡ ಬೆರಳುಗಳ ಗುರುತು. ಅಯ್ಯೋ ಪಾಪ, ಬೆಣ್ಣೆಯ ಹಾಗೆ ಮೆತ್ತಗಿರುವ ಮಗುವಿನ ಚರ್ಮ ರಕ್ತ ಕಟ್ಟಿ ನೀಲಿ ನೀಲಿಯಾಗಿಬಿಟ್ಟಿತ್ತಂತೆ! ಇನ್ನೂ ಅಂಗೈ ಅಗಲದ ಕೂಸು! ಅದಕ್ಕೇ ಮನೋಚನಿಯಾಗೆ ಹತ್ತುವರುಷ ಸಜಾ ಆಗಿದೆ. ಅವರಮ್ಮನಿಗೆ ಎರಡು ವರುಷ. ಚೆನ್ನಾಗಾಯಿತು ತುಂಬ ಚೆನ್ನಾಗೇ ಆಯಿತು, ಹೋಗು. ಅಲ್ಲೇ, ಹಾಳಾದವಳೆ... ನೀನು ಹೆತ್ತ ಕೂಸಲ್ಲವೇನೆ? ನಿನ್ನ ಹೊಟ್ಟೆಯದೇ ಅಲ್ಲವೇನೆ? ಅದಿನ್ನೂ ಸರಿಯಾಗಿ ಅಳೋದೇ ಕಲಿತಿರಲಿಲ್ಲವಲ್ಲೇ? ಅಂಥಾ ಕೂಸನ್ನೇನೇ ನೀನು ಕುತ್ತಿಗೆ ಹಿಚುಕಿ ಸಾಯಿಸೋದು? ನೀನು ಎಂಥ ಅಮ್ಮನೆ? ನಿನ್ನಂಥ ಅಮ್ಮನಿಗೆ ಕೈಕಾಲೂ ಕಡಿದು ನೆಲ್ಲು ಹೊಟ್ಟಿನ ಬೆಂಕಿಯಲ್ಲಿ ಸುಡಬೇಕು. ಅದೇ ಸರಿಯಾದ ಶಿಕ್ಷೆ ನಿಮಗೆ.... ಛೆ, ಇರಲಾರದು. ಅವಳೇ ಖುದ್ದಾಗಿ ಈ ಕೆಲಸ ಮಾಡಿರಲಾದಳು. ಜ್ಞಾನ ಎಲ್ಲಿರತ್ತೆ ಮೈಮೇಲೆ? ಜ್ಞಾನಾಜ್ಞಾನವಾಗಿ ಬಿದ್ದು ಕೊಂಡಿರತಾಳೆ... ಏಳೋದಕ್ಕೇ ತ್ರಾಣ ಇರೋದಿಲ್ಲ. ಆ ಕೆಲಸ ಮಾಡಿರೋದು ಅವಳಮ್ಮನೇ. ಆ ರಂಡೇದೆ ಈ ಕೆಲಸ.... ಆದರೆ ಅಂಥಾ ರಾಕ್ಷಸಿಗೆ ಎರಡೇ ವರುಷ ಸಜಾನೇ? ಇವರುಗಳ ಕಾನೂನು ಕಟ್ಟಳೆಗೆ ಏನಾದರೂ ಅರ್ಥಪರ್ಥ ಇದೆಯೆ? ಸರಿ, ತಪ್ಪು ಜ್ಞಾನ ಇದೆಯ, ವಿವೇಚನೆ ಇದೆಯೆ? ಹ್ಯಾಗಿರತ್ತೆ.... ಇದ್ದಿದ್ದರೆ ನಮ್ಮ ಬಿಲೂಗೆ ಇಂಥ ಕಠಿಣ ಶಿಕ್ಷೆ ಆಗತಾಯಿತ್ತೇ? ಯಾಕೆ... ಯಾಕೆ ಅಂತೀನಿ... ಯಾರನ್ನಾದರೂ ಕುತ್ತಿಗೆ ಹಿಚುಕಿ ಸಾಯಿಸಿದನೇ ಅವನು? ಅಥವಾ ಸಾಯ ಬಡಿಯಲಿಕ್ಕೆ ಹೋದನಾ?... ಕಾಂಗ್ರೆಸಿನ ಕೆಲಸ ಮಾಡಿದ ಅಷ್ಟೇ. ಅದಕ್ಕೆ ಜೈಲಿಗೆ ಹಾಕು, ಜುಲ್ಮಾನೆ ಹಾಕು. ಆದರೆ ಫಾಸಿ? ದೇವರು ಹೇಗೆ ಸಹಿಸತಾನೆ ಇಂಥಾ ಅನ್ಯಾಯ?....

"ಅಮ್ಮಾವ್ರರೆ.... ನಿಮ್ಮ ಅಂಗೈಗೆ ಸ್ವಲ್ಪ ಎಣ್ಣೆ ಹಾಕಿ ತಿಕ್ಕಲೀ?" ಸಾಕೇ... ಸಾಕು.. ಸಾಕು ಮಾಡು ನಿನ್ನ ದಮ್ಮಯ್ಯ... ನನ್ನ ಇನ್ನು ಗೋಳುಹುಯಕೋ ಬೇಡ

ಹೋಗು... ನೀವ್ಹೋದು ಬೇಡ ಏನೂ ಬೇಡ. ನಿನ್ನ ಕೆಲಸ ನೋಡಿಕೋ ಏನು ಹಾಳು... ಇವರು ಮಾಡುವ ಹಿತ ಸನ್ನ ತಿನ್ನತ್ತೆ. ಯಾರಿಗೆ ಬೇಕು ಇವರ ಸೇವೆ ಶುಶ್ರೂಷೆ? ನನ್ನ ಸಂಕಟ ನನಗೆ. ಒಂದು ನಿಮಿಷ ಆರಾಮವಾಗಿ ಇರೋಣ ಅಂದರೂ ಬಿಡೋದಿಲ್ಲ. ಎಲ್ಲರೂ ಸೇರಿಕೊಂಡು ನನ್ನ ತಲೆ ಹಿಡಿದಿದಾರೆ! ಇನ್ನು ಸುಮ್ಮನೆ ನನ್ನ ಸತಾಯಿಸಬೇಡ. ಒರೆದು ಗಳಿಗೆ ನಾನೊಬ್ಬಳೇ ಒಂಟಿಯಾಗಿರತೇನೆ.... ಸ್ವಲ್ಪ ಆರಾಮವಾಗಿ... ಇಪ್ಪತ್ತು ನಾಲ್ಕು ಗಂಟೆಯೂ ಮೂವತ್ತಾರು ಮಂದಿ ನನ್ನ ಸುತ್ತು ಹಾಕಿಕೊಂಡು ಜಾತ್ರೆ, ಭಜನೆ ಮಾಡಲಿಕ್ಕೆ ಬರತಾರೆ. ನನ್ನನ್ನಾಗಲೇ ತುಳಿಸೀ ಕಟ್ಟೆಮೇಲೆ ಮಲಗಿಸಿ ಬಿಟ್ಟ ಹಾಗೆ... ಹೊತ್ತುಕೊಂಡು ಹೋಗೋಕೆ ಮುಂಚೆ! ಆಕಡೆ ರಾಮಾಯಣ ಪಠಣ ಶುರು ಆಗಿದೆ.... ಎಲ್ಲಾ ಅಲ್ಲಿ ನೆರೆದುಬಿಟ್ಟಿದ್ದಾರೆ. ಒಂದು ಕ್ಷಣ ನಿಶ್ಚಿಂತೆಯಾಗಿರೋಣ ಅಂತ ಇದ್ದರೆ.... ಇಕೋ ಇವಳೊಬ್ಬಳು ಬಂದಳು – ಕೈನೀವಲೇ ಕಾಲು ನೀವಲೇ ಅಂತ! ಅಬ್ಬಬ್ಬ, ಏನು ಮೈಯುರಿಸುತಾರಪ್ಪ! ಮನ್‌ಚನಿಯಾ ಹೋಗುವಾಗ ಹೇಳಿದಳು – "ಅಮ್ಮಾವರೆ, ಇವತ್ತು ಬೆಳಗ್ಗೆ ನೀವು ಮೂರು ದಿನದಿಂದ ಉಪಾಸ ಮಾಡಿದ್ದಿರಲ್ಲ, ನಾಳೆ ನೀವು ಏನೂ ಊಟಮಾಡದೆ ಹೋದರೆ ಆವಾಗ ಜೋರು ಮಾಡಿ ತಿನ್ನಿಸತಾರಂತೆ, ಸೂಜಿ (ಇಂಜೆಕ್ಷನ್) ಹಾಕಿ ನಿಮ್ಮ ಮೂಗಿನೊಳಗೆ ರಬ್ಬರ್ ಕೊಳವೆ ಇಟ್ಟು ಕೋಳಿ ಮೊಟ್ಟೆ ಹಾಲಲ್ಲಿ ಕಲಿಸಿ ಒಳಗೆ ಬಿಡುತಾರಂತೆ ಗೊತ್ತಾ?"

"ಹೋಗ್ ಹೋಗೇ – ತಿನ್ನಿಸತಾರಂತೆ! ಈಗ ತಿನ್ನೋದೇ ಮುಖ್ಯವೇ ನನಗೆ? ಅದು ಹ್ಯಾಗೇ ತಿನ್ನಿಸತಾರೆ ನಾನು ತಿನ್ನದೇ ಹೋದರೆ?"

"ನಿಮಗೆ ಗೊತ್ತಿಲ್ಲ ಅಮ್ಮಾವರೆ! ನರ್ಮದಾಬಹೆನ್ ಮಲಗತಾ ಇದ್ದ ಮಂಚ ಇತ್ತಲ್ಲ ನವಾರು ಕಟ್ಟೋ ಮಂಚ! ಅಂಥ ನವಾರು ಮಂಚದ ಮೇಲೆ ಇಬ್ಬರು ಮೂವರು ಜಮಾದಾರಿಣೀರು ನಿಮ್ಮನ್ನು ಹಿಡಕೊಂಡು ನವಾರು ಹಗ್ಗದಿಂದ ಕಟ್ಟಿಬಿಡತಾರೆ, ನಿಮ್ಮ ಹಾಸಿಗೆ ಜೊತೇಗೆ ಕಟ್ಟಿಬಿಡತಾರೆ."

"ಅರೇ ಹೋಗೇ.... ನನ್ನ ಕಟ್ಟಿಬಿಟ್ಟರೆ ಏನಾಯಿತ್ತೇ? ನಾನು ನುಂಗದೇ ಹೋದರೆ ಇವರು ಹೇಗೇ ನುಂಗೋ ಹಾಗೆ ಮಾಡತಾರೆ? ಹೋಗು ಹೋಗು... ಹರಟಬೇಡ ಸುಮ್ಮನೆ?"

ಅವಳನ್ನ ಮರೆಸುವುದಕ್ಕೆ ಸಾಧ್ಯವೇ? ತನ್ನಲ್ಲೇ ಮಾತಾಡಿಕೊಳ್ಳುವ ಹಾಗೆ ಹೇಳಿಕೊಂಡು ಹೋದಳು – "ಅದೇ ಹಾರೀನ್ ಮಘಾಯಿಯಾ ಡೋಮಿನ್ ಇದಾಳಲ್ಲ, ಅಮ್ಮಾವರೆ.... ಅವಳ ಮೂಗಿನ ಮೇಲೆ ಗುಳಿ ಇದೆ ಈಗಲೂ, ಗೊತ್ತಾ? ಅವಳಿಗೆ ಆಗಾಗ ರಕ್ತ ಬೀಳತಾ ಇರತ್ತೆ ಆ ಗುಳಿಯಿಂದ. ಹೋದ ವರಷ ನೀವು ಬರಲಿಕ್ಕೆ ಮೊದಲು ಉಪವಾಸ ಮಾಡಿದ್ದಳು. ಯಾಕೆ ಗೊತ್ತಾ? ಅವಳಿಗೆ ಕಕ್ಕಸು ತೊಳೆಯೋ ಕೆಲಸಕ್ಕೆ ಹಾಕಿದ್ದರು ಅದಕ್ಕೇ. ಅವಳು ರಾಜಾ ಹರಿಶ್ಚಂದ್ರನ ಕಾಲದವಳಂತೆ ಅವರ ಜಾತೀಲೆ ಅವರಿಗೆ ದೊಡ್ಡ ಹೆಸರು ಇದೆಯಂತೆ. ಅವಳು ಎಂದಿಗಾದರೂ ಕಚಡಾ ತೊಳೆಯೋ ಅಂತವಳೇ? ಅವರ ಜಾತಿಯಲ್ಲಿ ಹೆಣ ಮುಟ್ಟೋದಿಲ್ಲವಂತೆ. ಮತ್ತೆ ಯಾರು ಚರಂಡಿ ಗುಡಿಸತಾರೆ ಅವರ ಜತೆ ಕೂತುಕೊಂಡು ಊಟ ಮಾಡೋದಿಲ್ಲವಂತೆ. ಅವಳು ಹೇಳೋದು ಈ ಜೈಲಿನಲ್ಲಿ

ಯಾವಾಗಲೂ ಅಂತ ಕೆಲಸ ಮಾಡೋದು ಸಂತಾಲಿ ಜನ ಅಂತೆ. ಹ್ಞಾ.... ಉಪವಾಸ ಮಾಡಿದಳು ಅಂತ ಅವಳಿಗೆ ಮೂಗಿನಲ್ಲಿ ನಳ ಹಾಕಿ ಕೋಳಿ ಮೊಟ್ಟೆ ರಸ ಕುಡಿಸಿದರು. ಆದರೆ ಕುಡಿಸಿದರೆ ಏನು ? ಅವಳು ನುಂಗಬೇಕಲ್ಲ. ಅವಳ ಜಾತಿ ಗುಣ ಅಂಥದು. ಆಮೇಲಿಂದ ಡಾಕ್ಟರು ಕೋಳಿಮೊಟ್ಟೆ ಹೆಸರು ಹೇಳದೆ ಇದ್ದರೂ ಅವಳಿಗೆ ಸುಮ್ಮನೆ ವಾಂತಿಗೆ ಬರತಾ ಇತ್ತು. ಕಡೇಗೆ ಸರ್ಕಾರಾನೇ ಸೋತು ಹೋಯಿತು. ಆಮೇಲಿಂದ ಅವಳಿಗೆ ಪಾಯಖಾನೆ ತೊಳೆಯೋ ಕೆಲಸಕ್ಕೆ ಹಾಕ ಕೂಡದು ಅಂತ ಸಾಹೇಬರ ಹುಕುಂ ಆಯಿತು. ಗಾಂಧೀ ಮಹಾತ್ಮಾ ಕೂಡ ಮಾಡೋಕೆ ಆಗಲಿಲ್ಲ. ಆದರೆ ಈ ಹೆಂಗಸು ಎಷ್ಟು ಬೇಗ ಸರಕಾರಾನೇ ತಣ್ಣಗೆ ಮಾಡಿಬಿಟ್ಟಳು. ಕಲೆಕ್ಟರ್ ಸಾಹೇಬರು ಬಂದು 'ಸೂಪರೆನ್' ಸಾಹೇಬರಿಗೆ ಎಷ್ಟು ಬೈದಾಡಿದರು ಗೊತ್ತಾ ? ಚಮಾಯಿನ್ ಜಮಾದಾರಿಣಿ ನನ್ನ ಹತ್ತಿರ ಬಂದು ಎಲ್ಲಾ ಹೇಳಿದಳು. ಅಂತೂ ಒಂದು ಪೀಡೆ ಕಳೀತು. ಆದರೆ ಅವತ್ತಿಂದ ಅವಳ ಮೂಗಿಂದ ರಕ್ತ ಸೋರತದೆ."

ಫಾಸೀ ಕಂಬದಿಂದ ತೂಗು ಹಾಕುವಾಗ ಮೂಗಲ್ಲಿ ಬಾಯಲ್ಲಿ ರಕ್ತ ಸೋರುತ್ತದೆಯೆ ? ಮನೌಚನಿಯಾಳನ್ನ ಕೇಳಿ ತಿಳಕೋಬೇಕು.... ಅವಳು ತನ್ನ ಹಸು ಕೂಸನ್ನ ಕೊರಳು ಹಿಚಿಕಿದಾಗ ಅದರ ಬಾಯಿಂದ ರಕ್ತ ಬಂದಿತ್ತೇನು ? ಛೇ..... ಬೇಡಮ್ಮ... ನಾನೊಬ್ಬ ತಾಯಿ ಆಗಿ ಇನ್ನೊಬ್ಬ ತಾಯಿಯಾಗಿದ್ದವಳನ್ನು ಅಂಥ ಮಾತು ಹೇಗೆ ಕೇಳಲಿ ? ಅವಳು ನಿಜವಾಗೂ ತನ್ನ ಕೈಯಾರೆ ಈ ಕೆಲಸ ಮಾಡಿದ್ದರೆ ಆಗ ಹಸು ಕಂದನ ಮುಖ ನೋಡಲಿಕ್ಕೆ ಆಗತಾ ಇತ್ತೇ ?

ನಮ್ಮ ದುರ್ಗಾ ಇದ್ದಳಲ್ಲ - ಅವಳ ಸಣ್ಣ ಮಗುನಿಗೆ ಏನು ಗತಿ ಆಯಿತು ? ನನ್ನ ತೊಡೆ ಮೇಲೇ ಅಲ್ಲವೇ ಅದು ಪಾಪ, ಪ್ರಾಣ ಬಿಟ್ಟದ್ದು ? ಜ್ವರದಿಂದ ನರಳೀ ನರಳೀ ಅದರ ಮುಖ ಹೇಗಾಗಿಬಿಟ್ಟಿತ್ತು.... ನರಗಳೆಲ್ಲ ಮೇಲಕ್ಕೆ ಕಾಣಿಸಿಕೊಂಡುಬಿಟ್ಟಿದ್ದುವು. ಹೊಟ್ಟೆ ಒಳಗೆ ಹೋಗಿ ಬಿಟ್ಟಿತ್ತು. ಹಠಾತ್ತಾಗಿ ದುರ್ಗಾಳ ತಾಯಿ ಕೂಗು ಹಾಕಿದ್ದೇ ತಡ, ನಾನು ಹಾಗೇ ಪಲ್ಯದ ಬಾಣಲೆ ಕೆಳಗಿಟ್ಟಿದ್ದೇ, ಓಡಿದೆ ಅವಳ ಮನೆಗೆ. ದುರ್ಗಾ ತಾಯಿ ಸ್ವಲ್ಪ ಐಲುಪೈಲು. ಎಲ್ಲರೂ ಅವಳನ್ನ ಕಂಡರೆ ಹೆದರುವವರು. ಊರೆಲ್ಲ ಕೇಳುವ ಹಾಗೆ ಅತ್ತೂ ಅರಚೀ ಎಲ್ಲರೂ ಓಡಿ ಬರುವ ಹಾಗೆ ಮಾಡಿದಳು. ಅಲ್ಲ... ಸೃಷ್ಟಿ ಮಾಡಿದ ದೇವರ ಕಡೆಯಿಂದಲೇ ಕರೆ ಬಂದಿರುವಾಗ ಅತ್ತೂ ಕೂಗಿ ರಂಪ ಮಾಡುವುದೆ ? ಒಂದು ಗಳಿಗೆ ನೆಮ್ಮದಿಯಾಗಿ ಕೂತುಕೊಳ್ಳುವುದಕ್ಕೇನು ಇವಳಿಗೆ ? ಹೋಗಿ ನೋಡತೇನೆ, ದುರ್ಗಾ ಕಲ್ಲಿನ ಹಾಗೆ ಅಲ್ಲಾಡದೆ ಕೂತಿದ್ದಾಳೆ ಕೂಸಿನ ಪಕ್ಕದಲ್ಲಿ. ಅದಕ್ಕೋ ಈಗಲೋ ಆಗಲೋ ಅನ್ನುವ ಹಾಗಿದೆ ಅವಸ್ಥೆ. ಹತ್ತಿರ ಹೋಗಿ ಕೂತು ಮಗುವನ್ನ ತೊಡೆ ಮೇಲೆ ಮಲಗಿಸಿಕೊಂಡೆ. ಗಂಟಲಲ್ಲಿ ಆಗಲೇ ಗೊರ್ ಗೊರ್ ಅಂತ ಶಬ್ದ ಬರುತಾ ಇದೆ. ಕಣ್ಣಿನ ಬಿಳೇಗುಡ್ಡೆ ಮೇಲೇರುತ್ತಿದೆ. ಕಷ್ಟದಿಂದ ಉಸಿರಾಡಲು ಪ್ರಯತ್ನಿಸುತ್ತಿದೆ ಮಗು, ಅಷ್ಟು ಸಣ್ಣ ಕೂಸಿಗೂ ಬದುಕಿರಬೇಕೆಂಬ ಆಕಾಂಕ್ಷೆ ಹೇಗೆ ಕಾಣಿಸಿಕೊಳ್ಳುತ್ತಿದೆ. ಒಂದೆರಡು ಗಳಿಗೆಗಳಲ್ಲೇ ಅದರ ಉಸಿರಾಡುವ ಪ್ರಯತ್ನವೆಲ್ಲ ಹಾಗೇ ಉಡುಗಿಹೋಯಿತು. ಔಷಧಿಯೇಕೆ, ಒಂದು ತೊಟ್ಟು ನೀರು ಸಹ ಅದರ

ಗಂಟಲಲ್ಲಿ ಇಳಿಯಲು ಅಸಾಧ್ಯವಾಯಿತು. ಆದರೆ ಎಲ್ಲಕ್ಕಿಂತಲೂ ಆಶ್ಚರ್ಯ ಏನೆಂದರೆ. ಅದರ ಮೂಗಿಂದ, ಬಾಯಿಂದ ರಕ್ತ ಸೋರಿ ಸೋರಿ ನನ್ನ ಸೀರೆಯೆಲ್ಲ ರಕ್ತದಿಂದ ತೋಯ್ದುಹೋಯಿತು. ಹೀಗೆ ನಾನು ಎಂದೂ ನೋಡಿರಲಿಲ್ಲ. ದುರ್ಗಾ ತಾಯಿ ಆಗ ಅತ್ತೂ ಅರಚೀ ಮನೆಯ ಸೂರು ಬೀಳುವ ಹಾಗೆ ಕೂಗುತಾ ಇದ್ದಾಳೆ. ದುರ್ಗಾ ಮೊದಲಿನ ಹಾಗೇ ಸದ್ದೇ ಇಲ್ಲದೆ ಕಲ್ಲಿನ ಬೊಂಬೆ ಹಾಗೆ ಕೂತಿದ್ದಾಳೆ. ಆಗ ಟೇಂಪಿಯ ತಾಯಿ ಅವಳನ್ನು, "ಏನೇ ದುರ್ಗಾ, ಬೆಳಗ್ಗೆ ಮಗು ಏನಾದರೂ ಪಪ್ಪಾಯಿ ಹಣ್ಣೋ, ತಾಟೀನುಂಗೋ ತಿಂದಿತ್ತೇನೇ?" ಅಂತ ಕೇಳತಾಳೆ... ಆಶ್ಚರ್ಯ!

ನಮ್ಮ ಬಿಲೂ ಹುಟ್ಟಿದಾಗ ಹೇಗಿದ್ದ, ಏನು ಕತೆ! ಮೈಕೈ ತುಂಬಿಕೊಂಡು ಇಡೀ ತೊಡೇ ಉದ್ದ ಇದ್ದ. ಹುಟ್ಟಿದಾಗಲೇ, ಹೆಡ್ ಪಂಡಿತರ ಹೆಂಡತಿ ನೋಡಲಿಕ್ಕೆ ಬಂದಿದ್ದರು. ಸೂಲಗಿತ್ತಿ ರುಕ್ಮಿಣಿ ಕೂಸಿನ ಕೆನ್ನೆ ಮೇಲೆ ಅಷ್ಟಗಲ ದೃಷ್ಟಿ ಮಚ್ಚೆ ಬಳಿದಿದ್ದಳು. ಅವಳು ಆಮೇಲೆ ನನ್ನ ಹತ್ತಿರ ಹೇಳಿದ್ದಳು - "ನಿಮಗೆ ಗೊತ್ತಿಲ್ಲ. ಅಮ್ಮಾವರೆ, ಈ ಪಂಡಿತರ ಹೆಂಡತಿ ಎಂತಾ ನಮೂನೆ ಹೆಂಗಸರು ಗೊತ್ತಾ? ಡಾಕಿನೀ ಜಾತಿ ಅಂತಾರಲ್ಲ ಹಂಗೆ! ಅವರ ಕಣ್ಣು ದೃಷ್ಟಿ ಬಿದ್ದ ತತ್‌ಕ್ಷಣ ಹಾಗೇ ಸುಟ್ಟು ಬೂದಿ ಆಗಿ ಬಿಡಬೇಕು ಅಂತವರು. ಕೆನ್ನೆ ಮೇಲೆ ಕಾಡಿಗೆ ಮಚ್ಚೆ ಹಾಕದೆ ಹೋದರೆ ಏನಾಗತ್ತೆ ಗೊತ್ತಾ. ಕೂಸು ದಿನ ದಿನಕ್ಕೂ ಬರತಾ ಬರತಾ ಒಣಗಿಕೊಂಡು ಒಣಗಿಕೊಂಡು ಬಡಕಲಾಗಿ ಕಡ್ಡಿಹಂಗೆ ಆಗಿಬಿಡತದೆ." – ಆ ಮುದಿ ಸೂಲಗಿತ್ತಿ ಆಗ ಇಪ್ಪತ್ತು ನಾಲ್ಕು ಗಂಟೆಯೂ ನನ್ನ ಮೇಲ್ವಿಚಾರಣೆ ಮಾಡಿಟ್ಟುಕೊಂಡಿದ್ದಳು. ಅವಳು ಹೇಳಿದ ಹಾಗೇ ಕೇಳಬೇಕು. ಹೀಗೇ ಮಾಡು. ಹಾಗಲ್ಲ ಮಾಡಬೇಡ. ಒಂದೇ? ಕೂಡುವುದಕ್ಕಿಲ್ಲ, ಏಳುವುದಕ್ಕಿಲ್ಲ.... ಏನು ಮಾಡುವುದು ನಾನು. ಹಾಗೇ ಆಗಲಮ್ಮ.... ನೀನು ಹೇಗೆ ಹೇಳಿದರೂ ಹಾಗೇ! ಬಿಲೂ ಹುಟ್ಟಿದ್ದು ವಿಜಯ ದಶಮಿ ದಿನ. ಹೆಡ್‌ಪಂಡಿತರ ಹೆಂಡತಿ ನೋಡಲಿಕ್ಕೆ ಬಂದದ್ದು ನವರಾತ್ರಿ ರಜ ಮುಗಿದಾದ ಮೇಲೆ. ಅವರು ಅದುವರೆಗೂ ತಮ್ಮೂರಿನಲ್ಲೇ ಇದ್ದರು. ಹೆಡ್ ಪಂಡಿತರು ಮೊದಲಸಲ ಸಂಸಾರ ಕರಕೊಂಡು ಬಂದಿದ್ದು ಆಗತಾನೇ. ಆಕೆಗೆ ನಂಬಲಿಕ್ಕೇ ಸಾಧ್ಯವಿಲ್ಲ – ಬಿಲೂಗೆ ಇನ್ನೂ ಇಪ್ಪತ್ತೇ ದಿವಸ ವಯಸ್ಸಾಗಿರೋದು ಅಂತ. ಆಕೆ ಅವನ ಕೆಂಪಾನೆಯ ದೊಡ್ಡ ದೊಡ್ಡ ಕೈಕಾಲುಗಳನ್ನು ದೃಷ್ಟಿ ಹಾಕುತಾ ನೋಡತಾಯಿದ್ದರೆ, ಮುದಿ ಸೂಲಗಿತ್ತಿ ಅಲ್ಲೇ ಇದ್ದವಳು ಗೊಣಗುತ್ತ ಗೊಣಗುತ್ತ ತಟಕ್ಕಂತ ಬೊಂತೆಯಿಂದ ಮಗುವನ್ನು ಚೆನ್ನಾಗಿ ಹೊದಿಸಿಬಿಟ್ಟಳು.

ಆಮೇಲಿಂದ ಬಿಲೂ ಮೈಕೈ ಹೇಗಾಗಿಹೋಯಿತು... ಗುರುತಿಸಲಿಕ್ಕೇ ಆಗಲಿಲ್ಲ. ಡಬಲ್ ನಿಮೋನಿಯಾ ಬಂದುಬಿಟ್ಟು ಎಲುಬೆಲ್ಲ ಕಾಣಿಸುತ್ತ ಇರುತ್ತಿತ್ತು. ಆಗ ಅವನ ವಯಸ್ಸಿನ್ನೂ ಎಷ್ಟು? ಎರಡೂವರೆ ವರುಷ. ನಮ್ಮ ಮಾವನವರು ಆಗ ಹಾಸಿಗೆ ಹಿಡಿದಿದ್ದರು. ಅವರ ಪಾದಗಳೆರಡೂ ಬರತಾ ಬರತಾ ಸ್ವಾಧೀನ ತಪ್ಪಿ ಹೋಗಿತ್ತು. ಅದೇ ಸಮಯದಲ್ಲೇ ಬಿಲೂಗೂ ಕಾಯಿಲೆ ಬರಬೇಕೆ? ಕಾರ್ತೀಕದಿಂದ ಕಾರ್ತೀಕಕ್ಕೆ ಎರಡು ವರುಷ-ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ, ಚೈತ್ರ - ಹೀಗೆ ಅವನಿಗಾಗ ಎರಡು ವರುಷ ಐದು ತಿಂಗಳು. ಈಗಂತೂ ಹಾಳು, ನನಗೆ

ವರುಷ, ತಿಂಗಳುಗಳ ನೆನಪೇ ಬರುವುದಿಲ್ಲ. ಟೇಂಪಿಯ ತಾಯಿ ಇಲ್ಲಿದ್ದರೆ ತತ್‌ಕ್ಷಣ ನನ್ನ ಲೆಕ್ಕದಲ್ಲಿ ತಪ್ಪು ತೋರಿಸಿಬಿಡತಾಯಿದ್ದಳು. ಅವಳ ಎದುರಿಗೆ ಏನಾದರೂ ಮಾತಾಡಲಿಕ್ಕೆ ಸಾಧ್ಯವೆ? ಒಂದು ಮಾತು ಸಹ ಬಾಯಲ್ಲಿ ಬರಲಿಕ್ಕೇ ಬಿಡುವುದಿಲ್ಲ..... ಮೊದಲ ದಿನ ಬಿಲೂ ಹಣೆ ಬಿಸಿ ಬಿಸಿಯಾಗಿದ್ದು ನೋಡಿ ನನ್ನ ಎದೆ ಹೊಡೆದುಕೊಳ್ಳುವುದಕ್ಕೆ ಶುರು ಆಯಿತು. ಇಡೀ ರಾತ್ರಿ ಮಗು ಸುಮ್ಮನೆ ಅಳತಾನೆ, ಹೊರಳತಾನೆ... ಒಂದು ನಿಮಿಷ ಕಣ್ಣು ಮುಚ್ಚಿದ್ದರೆ ಸರಿ. ಪಕ್ಕದ ಕೋಣೆಯಲ್ಲೇ ಮಾವನವರು ಮಲಗಿದ್ದರು. ಅವರು ಅಲ್ಲಿಂದಲೇ ಸುಮ್ಮನೆ ರೇಗತಾರೆ, ಬೈತಾರೆ. ರೇಗತಾರೆ, ಬೈತಾರೆ! ಈ ಮಗುವನ್ನಂತೂ ಏನು ಮಾಡಿದರೂ ಸುಧಾರಿಸಲಿಕ್ಕೆ ಆಗಲಿಲ್ಲ. ನಮ್ಮ ಯಜಮಾನರು ನಾಳೆ ಬೆಳಗ್ಗೆ ಹರಗೋವಿಂದ್ ಡಾಕ್ಟರಿಗೆ ತೋರಿಸಿದರೆ ಸರಿ ಹೋಗುತ್ತೆ ಅಂತ ಅಂದರು. ನಮ್ಮ ಮಾವನವರೋ ಬೆಂಕಿಯಾಗಿ ಬಿಟ್ಟರು. ನಾಳೆ ಬೆಳಗ್ಗೆಯಂತೆ ನಾಳೆ ಬೆಳಗ್ಗೆ – ಹೋಗಿ. ಈಗಲೇ ಕರಕೊಂಡು ಬಂದು ತೋರಿಸುವುದಕ್ಕೇನು ನಿಮಗೆ ಬಂದಿರೋದು? ಅಂತ ಮನಸ್ವೀ ಬೈಯಲಿಕ್ಕೆ ಶುರುಮಾಡಿದ ಮೇಲೆ ಡಾಕ್ಟರಿಗೆ ಹೇಳಿ ಕಳಿಸಿದ್ದಾಯಿತು. ಡಾಕ್ಟರು ರಾತ್ರಿ ಬರಲಿಕ್ಕೆ ಆಗುವುದಿಲ್ಲ. ಬೆಳಗ್ಗೆ ಆಗಲಿ, ನೋಡೋಣಂತೆ ಅಂತ ಹೇಳಿ ಕಳಿಸಿದರು. ಆಗ ಮಾವನವರು ಸಿಡಿದು ಸಿಡಿದು ಬೀಳುತಾರೆ. "ಯಾವನೋ ಅವನು ಡಾಕ್ಟರು.... ಹಾಗೆ ಹೀಗೆ....! ಈ ಕ್ಷಣ ಗವರ್ನ್‌ಮೆಂಟಿಗೆ ರಿಪೋರ್ಟು ಮಾಡಿ ಅವನ ಡಾಕ್ಟರಗಿರಿ ಎಷ್ಟು ದಿನ ಇದ್ದೀತು ನೋಡೇ ಬಿಡುತೇನೆ. ಆತ ರಾತ್ರಿ ಒಂದು ಗಂಟೆತನಕಾ ಸೀತಾಪತಿ ಅಂಗಡಿಯಲ್ಲಿ ಕೂತು ಪಗಡೆ ಆಡತಾ ಇರತಾನೆ! ರೋಗಿ ಸಾಯತಾ ಬಿದ್ದಿದ್ದರೂ ರಾತ್ರಿ ಬಂದುನೋಡುವುದಿಲ್ಲ ಅಂತಾನಲ್ಲ ಅವನು ಡಾಕ್ಟರಾ ದಕಾಯತನಾ? ಈಗೇನು ಮಳೆಯೇ, ಮಂಜೇ, ಬರುವುದಕ್ಕಾಗುವುದಿಲ್ಲ ಅನ್ನಲಿಕ್ಕೆ? ಇವರೆಲ್ಲ ಕೊಲೆಪಾತಕರು, ದರೋಡೆಕಾರರು – ಡಾಕ್ಟರಂತೆ ಡಾಕ್ಟರು!" ಮಾವನವರಿಗೆ ಹಾಸಿಗೆಯಿಂದ ಏಳಲಿಕ್ಕೆ ಆಗದು. ತಗೊಂಡು ಬಾ, ಕಾಗದ, ಮಸೀಕುಡಿಕೆ, ಲೇಖನಿ... ತಗೊಂಡು ಬಾ... ಹೇಳತೇನೆ ಅಂತ ಕೂಗಾಡಿದ ಮೇಲೆ, ಸರಿ.... ಲಾಟೀನು, ಚಾಳೀಸ, ಕಾಗದ, ಮಸೀ ಕುಡಿಕೆ, ಲೇಖನಿ ಎಲ್ಲಾ ಮುಂದೆ ಇಟ್ಟದ್ದಾಯಿತು. ಸರಕಾರಕ್ಕೆ ರಿಪೋರ್ಟು ಬರೆಯಲಿಕ್ಕೆ! ಹಾಗಾದರೂ ಸುಮ್ಮನೆ ಇರಿಸೋಣ ಅಂತ. ಆಮೇಲೆ ಕೂಸಿನ ಹತ್ತಿರ ಬಂದೆ. ಸ್ಕೂಲಿನ ದರವಾನ (ಕಾವಲುಗಾರ), ನನಕೂವನ್ನ ಕರೆದು ಡಾಕ್ಟರ ಹತ್ತಿರ ಮತ್ತೆ ಕಳಿಸಿದ್ದಾಯಿತು. ಪಾಪ, ನನಕೂ ಆ ನಡುರಾತ್ರಿಯಲ್ಲಿ ಹೋಗಿ ಡಾಕ್ಟರಿಗೆ ಏನೇನೋ ಹೇಳಿ ಪುಸಲಾಯಿಸಿ ಕರೆದುಕೊಂಡೇ ಬಂದ.

ಇವತ್ತಿಗೂ ಬರತಾ ಇರತಾನೆ ನನಕೂ, ದೊಣ್ಣೆ ಊರಿಕೊಂಡು "ಅಮ್ಮಾವರನ್ನ ನೋಡಿ ಹೋಗಲಿಕ್ಕೆ ಬಂದೆ" ಅಂತ... ಹರಿಗೋವಿಂದ ಡಾಕ್ಟರು ಬಂದದ್ದೇ ಮಗುವಿನ ನಾಡಿನೋಡಿ ಮುಖ ಸೊಟ್ಟಗೆ ಮಾಡಿಕೊಂಡಾಗಲೇ ನಾನು ಬಿಲೂ ಆಸೆ ಬಿಟ್ಟುಬಿಟ್ಟಿದ್ದೆ. ಆಮೇಲಿಂದ ಎಷ್ಟು ದಿನ ನಡೆಯಿತು ಯಮನಿಗೂ ಮನುಷ್ಯನಿಗೂ ಲಡಾಯಿ. ಒಂದು ದಿನವಂತೂ ಎಲ್ಲಾ ಮುಗಿದೇ ಹೋಯಿತು ಅಂತ ಅನ್ನಿಸಿತ್ತು. ಆಸೆ ಬಿಟ್ಟದ್ದೂ ಆಗಿತ್ತು. ಆಗಲೇ ಮೊದಲ ಸಲ ನೋಡಿದೆ

ಮೃಗನಾಭಿಯ ಗುಣ.... ಕೈಕಾಲೆಲ್ಲ ಹಿಮದ ಹಾಗೆ ತಣ್ಣಗಾಗಿ ಬಿಟ್ಟಿತ್ತು. ಹರಿಗೋವಿಂದ ಡಾಕ್ಟರು ನಾಡಿ ಹಿಡಿದುಕೊಂಡು ಗಂಭೀರ ಮುಖ ಹಾಕಿಕೊಂಡು ಕೂತಿದ್ದರು. ಏನು ಮಹಿಮೆ ಔಷಧಿಯದು! ನೋಡತಾ ನೋಡತಾ ಮಗುವಿನ ಮೈಕೈ ಅದೇನು ಬೆವರು ಸುರಿಯಾಟ.... ಹಾಸಿಗೆ ಬಟ್ಟೆ ಎಲ್ಲಾ ನೆನೆದು ಹೋಯಿತು. ಈ ಎಲುಬಿನ ಗೂಡಿನ ಹಾಗೆ ಆಗಿರುವ ಎಳೇ ಹುಡುಗನ ಮೈಕೈ ಒರೆಸುವುದೊಂದು ಸುಮ್ಮನೆ ಆಗಿಹೋಯಿತೆ? ಅದರಲ್ಲೂ ಅವನ ಎದೆ ಮೇಲೆ, ಬೆನ್ನ ಮೇಲೆ ಪೋಲ್ಟೀಸಿನ ಪಟ್ಟಿ ಬೇರೆ.... ಬೆಳಗ್ಗೆ ಆಗುತ್ತಲೂ ಡಾಕ್ಟರು ಹೇಳಿದರು. "ನಿಮ್ಮ ಮಗನಿಗೆ ಹೊಸ ಜೀವ ಕೊಟ್ಟಿದ್ದೇನೆ" ಅಂತ. ಸ್ವಲ್ಪವೂ ಉತ್ಪ್ರೇಕ್ಷೆ ಇಲ್ಲ ಅವರ ಮಾತು. ಡಾಕ್ಟರು ಹರಿಗೋವಿಂದರು ಸಾಕ್ಷಾತ್ ಧನ್ವಂತರಿಯೇ ಅನ್ನಬೇಕು. ಆದರೆ ಈ ನಾಟೀ ಔಷಧಿ ಕುಡಿದಮೇಲೆ ಒಂದು ತಿಂಗಳ ವರೆಗೂ ಹುಡುಗನಿಗೆ ಮೈಕೈ ಎಲ್ಲಾ ಉರಿ... ಏನೇನು ಮಾಡಿದರೂ ಹೋಗಲಿಲ್ಲ. ಹಗಲು, ರಾತ್ರಿ ಸುಮ್ಮನೆ ಒದ್ದಾಡುತ್ತಿದ್ದ. ಇಡೀ ರಾತ್ರಿ ಅವನಿಗೆ ಹಗ್ಗದಿಂದ ಎಳೆಯುವ ಪಂಖಾದಿಂದ ಗಾಳಿ ಬೀಸುವ ಏರ್ಪಾಡು ಮಾಡಲಾಯಿತು. ....ಅದಾದ ಮೇಲೆ ನಿಧಾನವಾಗಿ ಹುಡುಗನಿಗೆ ವಾಸಿಯಾಗತೊಡಗಿತು. ....ಆದರೆ ಹಿಂದೆ ಇದ್ದ ಆ ಮೈ ಎಲ್ಲಿ ಈಗ? ಆ ದುಂಡ ದುಂಡಗೆ ಹೃಷ್ಟ ಪುಷ್ಟನಾಗಿದ್ದ ಹುಡುಗ ಈಗೆಲ್ಲಿ? ಆ ಮೈ ಹೋಯಿತು ಇನ್ನು, ಆಮೇಲಿಂದ ಅವನ ಮೈಮೇಲ ಮಾಂಸವೇ ಕೂಡಲಿಲ್ಲ. ನರಪೇತಲ ನಾರಾಯಣನಾಗಿಬಿಟ್ಟ. ದಿನ ಬೆಳಗಾದರೆ ಕಾಯಲೆ... ಆಗಿನ ಆರೋಗ್ಯವೇ ಇಲ್ಲ, ಅದರ ತರುವಾಯ.

ದೊಡ್ಡ ಮನುಷ್ಯರ ಮನೆಯಾಗಿದ್ದರೆ ಗಾಜಿನ ಪೆಟ್ಟಿಗೆಯಲ್ಲಿ ದ್ರಾಕ್ಷಿ ಇಟ್ಟಿರುವ ಹಾಗೆ ಆದರ, ಲಾಲನೆಗಳಿಂದ ಬೆಳೆಸಬಹುದಾಗಿತ್ತು. ಆದರೆ ಅವನ ಹಣೆಯಲ್ಲಿ ಬರೆದದ್ದು ಬೇರೆ – ಅಂಥ ಲಾಲನೆ, ಪಾಲನೆ ಅವನ ಪಾಲಿಗೆ ಒಂದು ದಿನ ಸಹ ಸಿಗುವಂತಿರಲಿಲ್ಲ. ಹರಿಗೋವಿಂದ ಬಾಬು ಇವನನ್ನ ಯಾಕಪ್ಪಾ ಬದುಕಿಸಿದರು ಅನ್ನಿಸತ್ತೆ. ಯಾಕೆ ಇಷ್ಟು ದೊಡ್ಡವನಾಗುವವರೆಗೂ ಬದುಕುವ ಹಾಗೆ ಮಾಡಿದರು? ದೇವರೇ, ಆ ಹುಡುಗನ್ನ ನಿನ್ನ ಹತ್ತಿರ ಕರೆಸಿಕೊಳ್ಳುವ ಇಷ್ಟ ಇದ್ದಿದ್ದರೆ ಯಾಕೆ ಕರೆಸಿಕೊಳ್ಳಲಿಲ್ಲ ಆಗಲೇ? ಅವನ ಮೇಲೆ ನನ್ನ ಲೋಭ ಬೆಳೆಯುವ ಹಾಗೆ ಮಾಡಿದ್ದು ಯಾಕೆ? ಇಂಥ ರಾಕ್ಷಸರ ಬಾಯಿಗೆ ಹಾಕಬೇಕು ಅಂತ ಇತ್ತೇ ನಿನಗೆ? ಅಯ್ಯೋ – ದೇವರೆ, ನಾನೇನು ಪಾಪಗಳನ್ನ ಮಾಡಿದ್ದೇನೋ? ಭಗವಂತಾ, ನನ್ನ ಪಾಪಗಳೇನಿದ್ದರೂ ನನಗೆ ಶಾಸ್ತಿ ಮಾಡಬಾರದಾಗಿತ್ತೇ.... ನನ್ನ ಪಾಪಗಳಿಗೆ ಆಗಬೇಕಾದ ಶಾಸ್ತಿ ಅವನಿಗೇಕೆ ಮಾಡಬೇಕು? ಆಗಲೇ ಅವನು ಹೋಗಿ ಬಿಟ್ಟಿದ್ದರೆ ಆಗ ಎಷ್ಟು ಗೋಳಾಡಿದರೂ ಆಮೇಲೆಲ್ಲ ಮರೆತುಬಿಟ್ಟು ಇರುವವನೊಬ್ಬನೇ ಮಗ ಅಂದುಕೊಂಡು ಈ ನೀಲೂ ಒಬ್ಬನನ್ನೇ ಕಂಕುಳಲ್ಲಿ ಎತ್ತಿಕೊಂಡು ತೃಪ್ತಿಯಾಗಿರುತ್ತಿದ್ದೆನಲ್ಲಾ? ಇಷ್ಟು ದಿನಗಳಾದ ಮೇಲೆ ಅವನನ್ನ ಮರೆತೂ ಬಿಟ್ಟಿರುದ್ದೇನೋ! ಅವನೊಬ್ಬ ಹುಡುಗನೇ? ಸಾವಿರ ಹುಡುಗರ ಹಾಗೆ ಅವನ ರೂಪ, ಅವನ ಚೇಷ್ಟೆಗಳು, ಅವನ ತೊದಲು ನುಡಿಗಳು ಅವನ ಜಾಣತನ, ಅವನ ಝೋಕು. ಅವನ ಸಾವಿರ ನಮೂನೆ ಮಾತುಕತೆಗಳು, ತಮಾಷೆಗಳು, ಆಟಪಾಠಗಳು

- ಇವೆಲ್ಲ ಮನಸ್ಸಲ್ಲಿ ನಾಟಿ ಹೋಗಿವೆ. ಒಬ್ಬ ಹುಡುಗ ಸಾವಿರ ಹುಡುಗರ ಸಮಾನ. ಎಷ್ಟು ನೆನಪುಗಳು, ಸಣ್ಣಪುಟ್ಟ ಎಷ್ಟು ವಿಚಿತ್ರ ಸಂಗತಿಗಳು, ಎಷ್ಟು ಮುದ್ದಿನ, ಪ್ರೀತಿಯ ಚೆಲ್ಲಾಟಗಳು - ಅವುಗಳು ಸಿನಿಮಾ ಬೊಂಬೆಗಳ ಹಾಗೆ ನನ್ನ ಕಣ್ಣಮುಂದೆ ಇಪ್ಪತ್ತು ನಾಲ್ಕು ಗಂಟೆಗಳೂ ಫಳ ಫಳ ಅಂತ ಹೊಳೆಯುತ್ತ ಓಡಾಡುತ್ತವೆ. ಅವಕ್ಕೇನು ಲೆಕ್ಕವಿದೆಯೆ ? ಮನಸ್ಸು ಮಾಡಿ ಇವುಗಳನ್ನೆಲ್ಲ ಹಾಗೇ ಹಿಡಿದಿಟ್ಟುಕೊಳ್ಳುವ ಹಾಗಿದ್ದರೆ ಎಷ್ಟು ಚೆನ್ನಾಗಿತ್ತು! ಆಗುವ ಹಾಗಿದ್ದರೆ ಎದೆಯೊಳಗಡೆ ಭದ್ರವಾಗಿ ಇಟ್ಟುಕೊಂಡು ಬಿಡುತ್ತಿದ್ದೆ. ಒಂದೊಂದು ಸಲ ಅನ್ನಿಸತ್ತೆ - ಬಿಲೂ ನನ್ನ ಎದೆಯೊಳಗಡೆಯೇ ಇದ್ದಾನೆ. ಅವನನ್ನು ಹಿಡಿದುಕೊಡೇ ಇದ್ದೇನೆ. ಮೈಮೇಲೆ ಕೈಯಿಂದ ನೇವರಿಸುತ್ತಲೇ ಇದ್ದೇನೆ. ಬಿಗಿಯಾಗಿ ಅಪ್ಪಿಕೊಂಡಿದ್ದೇನೆ. ಏನು ಮಾಡಿದರೂ ಬಿಡುವುದಿಲ್ಲ. ತಾಯ ಎದೆಯ ಮೇಲಿಂದ ಅವನನ್ನ ಕಿತ್ತುಕೊಂಡು ಹೋಗಲಿಕ್ಕೆ ಯಾವನಿಗೆ ಸಾಧ್ಯವಿದೆ ? ಬರಲಿ ನೋಡೋಣ !

ದೊಡ್ಡದಾಗಿ ದನಿಯೆತ್ತಿ ಇವರೆಲ್ಲ ರಾಮಾಯಣದ ಆರತಿ ಹಾಡನ್ನು ಒಟ್ಟಿಗೆ ಹಾಡುವುದಕ್ಕೆ ಶುರು ಮಾಡಿದ್ದಾರೆ. ಇದರ ಜತೆಯಲ್ಲೇ ಈಸಲ ರಾಮಾಯಣದ ಪಠಣ ಮುಗಿಯುತ್ತೆ. ಇವರು ಇದಕ್ಕೆ 'ಆರತಿ' ಅನ್ನುವುದಿಲ್ಲ 'ಆರ್ತಿ' ಅನ್ನುತ್ತಾರೆ. ಇದು ಮಾಡುವಾಗ ಬರೇ ಅರಚಾಟವೇ. ಜೈಲಿನೊಳಗೆ ಬಂದಾಗಿನಿಂದ ಈ ಮೂವತ್ತೂ ದಿನಗಳೂ ಕಿವಿ ಚಿಟ್ಟೆನ್ನಿಸಿಬಿಟ್ಟಿದೆ. ಮನಸ್ಸು ಬೇಸರವಾಗಿ ಬಿಟ್ಟಿದೆ.

ಆರತಿ ಆಗುತ್ತಿದೆ. ಮಂದಿ ಒಟ್ಟಿಗೆ ಹಾಡುತ್ತಿದ್ದಾರೆ. ಹಾಡಿನ ಮಾತುಗಳೆಲ್ಲ ಅರ್ಥವಾಗುತ್ತಿಲ್ಲ:

ಆರತಿ ಶ್ರೀರಾಮಾಯಣ ಅ-ಜಿ-ಕೀ
ಕೀರತಿ-ಕಲಿತ-ಲಲಿತ-ಅ-ಸಿಯಾ ಪೀ ಕೀ
ಗಾಬಯತ-ಅ-ಬ್ರಹ್ಮ-ದಿಕ-ಅ-ಮುನಿನಾರದ-ಅ
ವಾಲ್ಮೀಕ ವಿಜ್ಞಾನ-ವಿಸಾರದ-ಅ
ಶುಕ-ಸನಕಾದಿಶೇಷು ಅರು ಸಾರದ-ಅ
ಬರನಿ ಸವನ ಸುತಾ-ಕೀರತನೀ-ಈ-ಈ-ಕೀ
ಕೀರತನೀ-ಕಿ-ರಾಮಾ-ಕೀರತನೀ-ಕಿ
ಗಾಬಯತ-ಅ ವೇದ-ಪುರಾಣ-ಅ
ಅಷ್ಟಾದಶ-ಅ
ಛಯೋ ಶಾಸ್ತ್ರ-ಅ ಸಬ-ಅ ಗ್ರಂಥ-ಅ
ನಹಕೋ ರಸ-ಅ
ಮುನಿಜನ ಧನ-ಅ ಸಂತನ-ಹಕೋ
ಸರಬಸ-ಅ
ಸಾಧ-ಅ ಅಂಶ-ಅ ಸಮ್ಮತಿ ಸಬ-ಈ
ಹೇ-ಕಿ
ಸಮ್ಮತಿ ಸಬ-ಓ ಕಿ ರಾಮಾ
ಸಮ್ಮತಿ ಸ ಬಹೀ-ಕಿ ಈ

ಆರತ-ಅ ಶ್ರೀರಾಮಾಯಣ-ಅ ಜೀ-ಕಿ
ಕೀರತ-ಕಲಿತ-ಅ ಲಲಿತ-ಅ
ಸಿಯಾಪೀ-ಕಿ
ಗಾವೊಯತ ಅಂತತ-ಅ ಶಂಭು ಭವಾನೀ!
ಕಾಗಾಭೂಖಂಡಿ ಗರುಡಾಕೇ
ಹೀ-ಇಕೀ-ಈ
ಅರತ-ಅ ಶ್ರೀರಾಮಾಯಣ-ಅ ಜೀ-ಕಿ
ಕೀರತಿ-ಇ
ಕಲಿತ-ಅ ಲಲಿತ-ಅ ಸಿಯ ಪೀ-ಕೀ

ಆಮೇಲೆ ಇನ್ನೊಂದು ಹೊಸ ರಾಗದಲ್ಲಿ ಹಾಡು ಶುರು ಆಯಿತು:

ಆಜ-ಕಥಾ-ಇತನೀ ಭಈ ಸುನಹ
ಬೀರ-ಅ ಹನುಮಾನ್
ರಾಮ-ಅ ಲಕ್ಷ್ಮಣ-ಅ ಸಿಯಾ-ಅಜಾನಕೀ
ಸದಾ-ಅ ಕರಹು-ಕಲ್ಯಾಣ್

ಈ ಬಾರಿ ಮನೆ ಒಡೆಯುವ ಹಾಗೆ ಚೀತ್ಕಾರ ಮಾಡುತ್ತ ಹಲವಾರು ಕೊರಳುಗಳಿಂದ ಈ ಹಾಡು:

ಅಯೋಧಿಯಾ ರಾಮಲಾಲಾಕಿ ಜಯ್
ವೃಂದಾವನ ಬಿಹಾರೀ ಲಾಲಕೀ ಜಯ್
ಉಮಾಪತಿ ಮಹಾದೇವಕೀ ಜಯ್
ರಮಾಪತಿ ರಾಮಚಂದ್ರಜೀ ಕೀ ಜಯ್
ಪವನಸುತಾ ಹನುಮಾನಕೀ ಜಯ್
ಮಹಾತ್ಮಾ ಗಾಂಧೀಕಿ ಜಯ್
ಸರ್ವಸಂತಾನ ಹೀ ಕಿ ಜಯ್-
ಜಯ್ ಜಯ್-ಹೋ-ಓ ಓ-ಓ-ಓ-

ಎಲ್ಲರೂ ಒಮ್ಮೆ ಎರಡು ಕೈಗಳಿಂದಲೂ ಚಪ್ಪಾಳೆ ತಟ್ಟುತ್ತ ಪ್ರಣಾಮ ಮಾಡುತ್ತಾರೆ. ಈ ಸಲ ಎಲ್ಲರೂ ಎದ್ದು ನಿಂತರು.

ಲೂಸಿ ಜಮಾದಾರಿಣಿಯು ಸಂತಾಲ ಜಾತಿಯ, ಕ್ರಿಶ್ಚಿಯನ್. ಆದರೆ ದೇವರ ನಾಮಕ್ಕೂ ಜಾತಿಗೂ ಏನು ಸಂಬಂಧ? ಅವಳಿಗೆ ದೇವರೆಂದರೆ ತುಂಬ ಭಕ್ತಿ. "ಆರತಿ ಶ್ರೀ ರಾಮಾಯಣಜೀಕಿ-ಕೀರತ-ಕಲಿತ-ಲಲಿತ-ಸಿಯಾ ಪೀಕಿ-" ಎಂಬ ಈ ಪಂಕ್ತಿ ಅವಳಿಗೆ ಬಾಯಿಪಾಠ ಆಗಿಬಿಟ್ಟಿದೆ. ಜಯಕಾರ ಹೇಳುವ ಸಮಯದಲ್ಲಿ ಮತ್ತು ಈ ಪಂಕ್ತಿ ಹಾಡುವಾಗ ಅವಳೂ ಹೊರಗಡೆ ನಿಂತುಕೊಂಡೇ ಎಲ್ಲರ ಜತೆ ದನಿ ಸೇರಿಸಿ ಅರಚುವುದನ್ನ ಮರೆಯುವುದಿಲ್ಲ. ದನಿಗಳಲ್ಲೆಲ್ಲ ದೊಡ್ಡ ದನಿಯೆಂದರೆ ಗರುಡಜೀದೇ - ಅವಳ ನಿಜವಾದ ಹೆಸರು ಸಂಧ್ಯಾದೇವಿ. ರಾಮಾಯಣ ಪಠಣದ ಸಮಯದಲ್ಲಿ ಅವಳ ದನಿ ಬೇರೆಲ್ಲರ ದನಿಗಳನ್ನೆಲ್ಲ ಮುಳುಗಿಸಿಬಿಡುತ್ತದೆ. ಆರತಿ ಹಾಡಿನಲ್ಲಿ "ಗರುಡ ಹೇಕೀ" ಅನ್ನುವಾಗಲಂತೂ ಅವಳ ದನಿ ಸಪ್ತಮಕ್ಕೇರಿ

ಬಿಡುತ್ತದೆ. ಅದಕ್ಕೆ ತಕ್ಕಂತೆ ಅವಳ ಮೂಗು ಸಹ ಗರುಡನ ಮೂಗಿನಂತೆ. ಇದರ ಸಲುವಾಗಿ ಎಲ್ಲರೂ ಅವಳನ್ನು ಹಾಸ್ಯಕ್ಕೆ 'ಗರುಡಜೀ' ಎಂದು ಕರೆಯುತ್ತಾರೆ. ಈಗ ಎಲ್ಲಿಯವರೆಗೆ ಬಂದಿದೆ ಎಂದರೆ ಎಲ್ಲರೂ ಅವಳ ನಿಜವಾದ ಹೆಸರನ್ನೇ ಮರೆತು ಬಿಟ್ಟಿದ್ದಾರೆ. ಜಮಾದಾರಿಣಿಯರು ಸಹ ಅವಳನ್ನು 'ಗರುಡಜೀ' ಎಂತಲೇ ಕರೆಯುತ್ತಾರೆ. ಮೊದಲು ಮೊದಲು ಅವಳು ರೇಗುತ್ತಿದ್ದಳು. ಈಗ ಅವಳಿಗೆ ವಾಡಿಕೆಯಾಗಿ ಬಿಟ್ಟಿದೆ. ಒಂದು ದಿನ ಲೂಸಿ ಜಮಾದಾರಿಣಿಯು ಬಟ್ಟೆಗಳ ಗುದಾಮಿನಿಂದ ಗರುಡಜೀ ಹೆಸರಿನಲ್ಲಿ ಸೀರೆ ತಂದಿದ್ದಾಗ ಅದೇನು ರಗಳೆಯಾಯಿತೋ! ಸಾಮಾನು ತೆಗೆದುಕೊಂಡ ಮೇಲೆ ರಿಜಿಸ್ಟರಿನಲ್ಲಿ ರುಜುಮಾಡುವ ಸ್ಥಳದಲ್ಲಿ ನೋಡುವಲ್ಲಿ ಹೀಗೆ ಬರೆದಿತ್ತು. "ಗರುಡಜೀ - ಒಂದು ಸೀರೆ" ಅದನ್ನ ತಿಳಿದು ಆಗ ಆ ಹೆಂಗಸು ಪಾಪ, ಅನ್ನ ನೀರು ಬಿಟ್ಟು ಅಳುತ್ತ, ಜಮಾದಾರಿಣಿ ಬೇಕೆಂದೇ ತನಗೆ ಅವಮಾನ ಮಾಡಿದಳೆಂದು ಜೈಲರ್ ಸಾಹೇಬರ ಬಳಿ ದೂರು ಮಾಡಿದಳು. ಆ ರಿಪೋರ್ಟಿನಲ್ಲಿ ಲೂಸಿ ಜಮಾದಾರಿಣಿ ಖೈದಿಗಳಿಗೆ ಬೀಡಿಗಳನ್ನೂ ತಂಬಾಕಿನ ಪುಡಿಯನ್ನು ಮಾರುತ್ತಾಳೆಂದೂ ದೂರಿದ್ದಳು. ಲೂಸಿ ಇದೆಲ್ಲ ಕೇಳಿ ತಬ್ಬಿಬ್ಬಾಗಿಬಿಟ್ಟಳು. ಜೈಲರ್ ಸಾಹೇಬರು ಬಂದು ಲೂಸಿಯನ್ನು ಗರುಡಜೀ ಬಳಿ ಕ್ಷಮೆ ಬೇಡಬೇಕೆಂದು ಹುಕುಂ ಮಾಡಿದರು. ಅವಳು ಕ್ಷಮೆ ಬೇಡಿದ ಮೇಲೆ ಎಲ್ಲ ತಣ್ಣಗಾಯಿತು. ಆದರೇನು, ಗರುಡಜೀ ಹೆಸರು ಬದಲಾಯಿಸಲಿಲ್ಲ.

ನಮ್ಮ ಬಿಲೂ ಚಿಕ್ಕ ವಯಸ್ಸಲ್ಲಿ ಎಷ್ಟು ರಾಮಾಯಣ, ಮಹಾಭಾರತಗಳನ್ನು ಓದಿ ಹೇಳುತ್ತಿದ್ದನೋ. ಅವನಿಗೆ ಬೆಳಗ್ಗೆ ಶಾಲೆಯಿದ್ದ ಸಮಯದಲ್ಲಿ ಮತ್ತು ಬೇಸಿಗೆ ರಜದ ಸಮಯದಲ್ಲಿ ಮಧ್ಯಾಹ್ನದ ಬಿಸಿಲಲ್ಲಿ ಓದುತ್ತಾ ಓದುತ್ತಾ ಇರುವಾಗ ಟೇಂಪಿಯ ತಾಯಿ, ಜಿತೇನನ ತಾಯಿ ಮತ್ತು ದುರ್ಗಾಳ ತಾಯಿ -ಆಶ್ರಮಕ್ಕೆ ಬರುತ್ತಾಯಿದ್ದರು. ಬಿಲೂ ಓದುವುದನ್ನು ಕೇಳುವುದಕ್ಕೆಂದೇ ಬರುತ್ತಿದ್ದರು. ಬಿಲೂಗೆ ಮಾತ್ರ ರಾಮಾಯಣ ಓದುವುದಕ್ಕೆ ಇಷ್ಟವಾಗುತ್ತಿರಲಿಲ್ಲ. ಆದರೆ ಜಿತೇನನ ತಾಯಿ ಬಂದದ್ದೇ, "ಲೋ, ಬಾರೀಂದಿರಿ ಬ್ರಾಹ್ಮಣರ ಹುಡುಗ, ನಾನು ಆಗಲೇ ಹೇಳಿರಲಿಲ್ಲವೇನೋ, ನಾವು ಅಷ್ಟು ಪುಣ್ಯವಂತರಲ್ಲ. ಕಾಶೀರಾಮ ದಾಸರ ಭಾರತ ಕೇಳುವುದಕ್ಕೆ ನಮಗೆ ಇಷ್ಟ ಇಲ್ಲ. ತಗೊಂಡು ಬಾ ರಾಮಾಯಣ, ಅಲ್ಲೋ ರಾಮಾಯಣವೆಲ್ಲಿ.... ಇದೆಲ್ಲಿ ?" ಎಂದು ಹೇಳಿದಾಗ ಬಿಲೂ ಸುಮ್ಮನಿರದೆ, "ಸಾಕು ಬಿಡಿ ದೊಡ್ಡಮ್ಮ ಇದಿಷ್ಟು ಓದಿ ಮುಗಿಸಿ ಬಿಡತೇನೆ ಇರಿ" ಎಂದುಬಿಟ್ಟು ತಲೆಯನ್ನೂ ಮೈಯನ್ನೂ ತೂಗಿಸುತ್ತ ಓದಲು ತೊಡಗುವನು – "ಕಾಂದೇ ಯಾಜ್ಞಸೇನಿ ತಿತಿಲ ಅವನೀ ನಯನೇರಾ-ಅ ನೀರ್-ಅ ಝುರೇ-"

ಬಿಲೂ ಕಣ್ಣುಗಳಿಂದ ನೀರು ಸುರಿಯುತ್ತದೆ. ಅವನು ಈ ಪಂಕ್ತಿ ಓದುವಾಗೆಲ್ಲ ಅವನ ಕಣ್ಣುಗಳಿಂದ ನೀರು ಬರುತ್ತದೆ. ಆಗಲೇ ಟೇಂಪಿಯ ತಾಯಿ, "ಆಹಾ, ವಿಜಯದಶಮಿ ದಿನ ಹುಟ್ಟಿದವನಲ್ಲ, ಹುಡುಗ – ಅದಕ್ಕೇ... ಅವನ ಮನಸ್ಸು ಅಷ್ಟು ಮೆತ್ತಗಿದೆ" ಅನ್ನುವಳು. ನಿಜವಾಗಿ, ಓದುತ್ತ ಓದುತ್ತ ಎಷ್ಟು ಕಡೆ ಅವನು ಕಣ್ಣೀರು ಸುರಿಸುತ್ತಿದ್ದನೋ ಲೆಕ್ಕವೇ ಇಲ್ಲ. ನಾವೋ ಮುದಿಗೂಬೆಗಳು. ಮಕ್ಕಳ ತಾಯಿಯರು ಷಷ್ಠೀ, ಮಂಗಳವಾರ ವ್ರತ ಮಾಡುತ್ತೇವೆ.

ಧರ್ಮ-ಕರ್ಮಗಳ ಕತೆಗಳನ್ನು ಓದುತೇವಲ್ಲ, ನಮಗೆಲ್ಲ ಹೀಗೆಲ್ಲ ಕಣ್ಣೀರು ಸುರಿಯುತ್ತೆ? ಅಥವಾ ಈ ಸುಟ್ಟ ಹಣಬರಹದವಳ ಕಣ್ಣಲ್ಲಿ ನೀರು ಬರುತ್ತದೇ, ಎಂದಾದರೂ? ಬಿಲೂ ಮಗ್ಗುಲಿಗೆ ತಿರುಗಿ ಎಲ್ಲರಿಗೂ ಮರೆಯಾಗುವ ಹಾಗೆ ಕಣ್ಣೊರಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಆ ಕಡೆ ನೀಲೂ ಸ್ವಲ್ಪ ದೂರದಲ್ಲೇ ಅಂಗತ್ತನಾಗಿ ಮಲಗಿಕೊಂಡು ಎಲ್ಲಾ ನೋಡಿ ನಗುತ್ತಾನೆ. ಆಮೇಲೆ ನನ್ನನ್ನು ಕೂಗಿ ಹೇಳುತ್ತಾನೆ, "ಅಮ್ಮಾ ಅಲ್ನೋಡು ನೋಡು, ಅಣ್ಣ ಏನು ಮಾಡುತ್ತಿದ್ದಾನೋ!" – ಜಿತೇನನ ತಾಯಿ – ನಾನು ಅಕ್ಕ ಅನ್ನುತ್ತೇನೆ – ಅವಳು ಅವನನ್ನ ಗದರಿಸುತ್ತ "ಬಾಯಿ ಮುಚ್ಕೋ ಸಾಕು – ನಿನಗೆಲ್ಲ ಗೊತ್ತಿದೆ ಅಲ್ಲವಾ" ಅನ್ನುತ್ತಾಳೆ. ಆದರೆ ನೀಲೂ ಬಾಯಿ ಮುಚ್ಚಿಸುವುದಕ್ಕಾಗುತ್ತಾ? ಅವನು ಗಹಗಹನೆ ನಕ್ಕು ಅರಚುತ್ತಾನೆ – ಮಹಾಭಾರತದ ಪುಸ್ತಕವನ್ನು ನನಗೂ ಬೈಂಡ್ ಹಾಕಿಸಿ ತಂದುಕೊಟ್ಟಿದ್ದ, ಸ್ಕೂಲಿನ 'ಧಫ್ತರಿ' ಕೈಯಿಂದ. ಅದರ ಮೊದಲನೆಯ ಪುಟದಲ್ಲಿ ಬಿಲೂ ಕೈಯಿಂದ ಬರೆದ ಎರಡು ಪಂಕ್ತಿ, "ಇದರ ಮಾಲೀಕರು - ಅಮ್ಮ - ರುಜು - ಬಿಲೂ!" ಅದರ ಮೇಲೆಲ್ಲ ಎಷ್ಟೋ ಆಂಗ್ಲ ಪಾಂಡಿತ್ಯದ ಪ್ರದರ್ಶನ ಸಹ ಬರೆಯಲ್ಪಟ್ಟಿತ್ತು.

ದುರ್ಗಾಳ ತಾಯಿ ಹೇಳಿದಳು: "ಏನಕ್ಕಾ ಈಸಲ ಅವನ ಜುಟ್ಟು ಬಿಡಿಸಿ. ತಲೆಯ ಮೇಲೆ ಒಂದು ಗಂಟು ಬರಲಿ. ಮಹಾಭಾರತ ಓದುವಾಗ ಆ ಗಂಟು ಅಲ್ಲಾಡತಾ ಇದ್ದರೆ ಚೆನ್ನಾಗಿರತ್ತೆ ಲೋ, ಸಂಕ್ರಾಂತಿ ಬ್ರಾಹ್ಮಣಾ, ಚೆನ್ನಾಗಿ ಮೈ ತೂಗಿಸಿಕೊಂಡು ತೂಗಿಸಿಕೊಂಡು ಓದುತ್ತೀ, ಗೊತ್ತಾ?"

ಬಿಲೂಗೆ ನಾಚಿಗೆಯಿಂದ ಅವರ ಮುಖಗಳ ಕಡೆ ನೋಡುವುದಕ್ಕೆ ಆಗಲಿಲ್ಲ. ನೀಲೂ ಈ ಕಡೆ ಅರಚುತ್ತ ನಗುತ್ತಿದ್ದಾನೆ – "ಟಿಕೀ ಧರೇ ಮಲರ ಖೋ ಟಾನ್ – ಉಡೇ ಜಾಬಿ ವರ್ಧಮಾನ್" (ಜುಟ್ಟು ಹಿಡಿದು ಎರಡು ಬಿಟ್ರೇ, ವರ್ಧಮಾನಕ್ಕೆ ಹಾರಿಬಿಟ್ಟ) ಜಿತೇನನ ತಾಯಿಯೂ (ಅಕ್ಕ) ಹೇಳಿದಳು – "ಹೌದು ಕಣೆ, ಈ ಸಲ ಅವನಿಗೆ ಮುಂಜಿ ಮಾಡಿಬಿಡು."

ಅಂದ ಹಾಗೆ, ಈ ಬಿಲೂಗೆ ಮೊದಲು ದೇವರು ದಿಂಡರಲ್ಲಿ ಅಷ್ಟು ಭಕ್ತಿ ಇತ್ತಲ್ಲ, ಎಲ್ಲಿ ಹೋಯಿತೋ ಈಗ, ಕರ್ಪೂರ ಗಾಳಿಯಲ್ಲಿ ಮಾಯವಾದ ಹಾಗೆ. ಬಿಲೂ ಹೇಗೋ, ನೀಲೂ ಸಹ ಹಾಗೇನೇ. ಅವನಿಗೆ ಮುಂಜಿ ಮಾಡುವವರೆಗೂ, ಅದಿಲ್ಲದೆ ಹೋದರೆ ಜೀವನವೇ ವ್ಯರ್ಥ ಅನ್ನಿಸತಾ ಇತ್ತು. ಅವನಿಗೆ ಯಾವಾಗಲೂ ಅದೇ ಮಾತೇ. "ಅಲ್ಲ, ಮುಂಜಿ ಯಾಕೋ ಮಾಡದೆ ಇರೋದು? ಒಂಬತ್ತು ವರುಷ ಆಗೋದಕ್ಕೆ ಮೊದಲೇ ಮಾಡಬೇಕು. ಅದು ಮುಗಿಯೋದಕ್ಕೆ ಇನ್ನು ಒಂದೇ ದಿನ ಬಾಕಿ ಇದೆ" ಅನ್ನುತ್ತಿದ್ದ.... ಮುಂಜಿ ಅಂತೂ ಮಾಡಿದ್ದಾಯಿತು. ಅದಾದ ಮೇಲೂ ಅವನ ಶ್ರದ್ಧೆ ಹೇಳತೀರದು. ಕಾಲಕಾಲಕ್ಕೆ ಸಂಧ್ಯಾವಂದನೆ-ಗಾಯತ್ರಿ ಜಪ-ಪೂಜೆ ಏಕಾದಶಿ ಉಪವಾಸ – ಎಲ್ಲಾ. ಎಷ್ಟೋ ಕಾಲದವರೆಗೂ ಊಟದ ಸಮಯದಲ್ಲಿ ಮಾತೇ ಇಲ್ಲ. ಪೇಟೆಯಲ್ಲಿ ಮಾರುವ ತಿಂಡಿ ಪದಾರ್ಥಗಳನ್ನು ತಿನ್ನುತ್ತಿರಲಿಲ್ಲ. ಯಾರ ಮನೆಗೂ ಊಟಕ್ಕೆ ಹೋಗುತ್ತಿರಲಿಲ್ಲ. ಅದೇನು ನಿಷ್ಠೆ! ಎಷ್ಟು ಮಡಿ-ಆಚಾರ! ಚಿಕ್ಕ ವಯಸ್ಸಿಂದಲೂ ಅವನಿಗೆ ಪೂಜೆ, ಅರ್ಚನೆಗಳಲ್ಲಿ ತುಂಬ ಇಷ್ಟ. ಎಷ್ಟು ಶ್ಲೋಕಗಳು, ಸ್ತೋತ್ರಗಳು ಅವನ ಬಾಯಲ್ಲೇ ಇರುತ್ತಿದ್ದುವು. ನಾಲ್ಕು

ವರುಷಗಳ ಹುಡುಗನಾಗಿದ್ದಾಗ ಕೃಷ್ಣ ಅಷ್ಟೋತ್ತರ-ಶತನಾಮ ಮತ್ತು 'ದೇವಿ ಸುರೇಶ್ವರಿ ಭಗವತೀ ಗಂಗೆ' ಶ್ಲೋಕ ಪೂರ್ತಿಯಾಗಿ ಬಡಬಡ ಅಂತ ಒಂದೇ ಸಮನಾಗಿ ಹೇಳಿಬಿಡುತ್ತಿದ್ದ. ದೊಡ್ಡವನಾದ ಮೇಲೆ ಸಹ, ಅಂದರೆ ಮುಂಜಿಯಾಗುವುದಕ್ಕೆ ಒಂದು ವರುಷದ ಹಿಂದೆ, ನಾನೊಂದು ದಿನ ಅಡಿಗೆ ಮನೆಯಲ್ಲಿದ್ದೇನೆ. ಈ ಇಬ್ಬರು ಅಣ್ಣಾ, ತಮ್ಮಂದಿರೂ ಹಾಸಿಗೆಯನ್ನು ತುಳಿಯುತ್ತ ಇದ್ದಾರೆ ಮತ್ತು ಹತ್ತಿರದ ತಲೆದಿಂಬನ್ನ ತಗೊಂಡು ದುರ್ಯೋಧನನ ಊರು ಭಂಗ ಮಾಡುತ್ತಾ ಇದ್ದಾರೆ. ಇಷ್ಟರಲ್ಲೇ ಬಿಲೂ ಕಿರಿಚಿದ ಶಬ್ದ ಕೇಳಿತು. "ಅಮ್ಮಾ ಅಮ್ಮಾ... ಬೇಗ ಬಾ!"

ಏನಪ್ಪ ಆಯಿತು ಹೇಳು.... ಅಂದದ್ದೇ ಎದ್ದೆ. ಹಾವು, ಚೇಳು ಏನಾದರೋ ಕಚ್ಚಿತೇ? ಕೈ ಕಾಲೇನಾದರೂ ಮುರಿದುಕೊಂಡರೆ? ಎದೆ ಡವ ಡವ ಅಂತ ಹೊಡೆದುಕೊಳ್ಳಲಿಕ್ಕೆ ಶುರು. ಒಲೆ ಮೇಲೆ ಇದ್ದ ಪಲ್ಯ, ಒಲೇ ಮೇಲೇ ಇತ್ತು. ಬಿದ್ದನೋ, ಸತ್ತನೋ ಅಂತ ಓಡಿ ಹೋಗಿ ನೋಡತೇನೆ, ನೀಲೂ ನೆಟ್ಟಗೆ ಕದಲದೆ ಹಾಸಿಗೆ ಮೇಲೆ ಕೂತಿದ್ದಾನೆ. ಕ್ಷೌರಿಕನ ಮುಂದೆ ತಲೆ ಬೋಳಿಸಿಕೊಳ್ಳೋಕೆ ಮುಂಚೆ ಕೂತಿರುತಾರಲ್ಲ ಹಾಗೆ ಕೂತಿದ್ದಾನೆ. ಬಿಲೂ ನೀಲೂವನ್ನ ಬಿಗಿಯಾಗಿ ಹಿಡಿದುಕೊಂಡು ಕೂತಿದ್ದಾನೆ. ಇಬ್ಬರೂ ದಿಗಿಲಿನಿಂದ ಮರಗಟ್ಟಿದ ಹಾಗೆ ಇದ್ದಾರೆ. ಬಿಲೂ ಒಂದು ಕೈಯಿಂದ ನೀಲೂವಿನ ಮೊಳಕೈಮೇಲೆ ಏನೋ ಒತ್ತಿಹಿಡಿದುಕೊಂಡಿದ್ದಾನೆ. ನಾನು ಹೋಗಿ ನೋಡುತ್ತೇನೆ. ನೀಲೂ ಕೈಮೇಲೆ ಕಟ್ಟಿದ್ದ ಪೂರ್ಣೇಶ್ವರಿ ದೇವಿಯ ಮಂತ್ರಿಸಿದ ಯಂತ್ರ-ರುದ್ರಾಕ್ಷಿಯೊಂದು, ಚಕ್ರದ ಹಾಗೆ ಕತ್ತರಿಸಿರುವ ಆಳಲೇಕಾಯಿ – ಇವೆಲ್ಲ ದಾರದಲ್ಲಿ ಕಟ್ಟಿದ್ದದ್ದು. ದಾರ ಕಿತ್ತು ಹೋಗಿದೆ. ಇಬ್ಬರಿಗೂ ಗೊತ್ತು-ಯಂತ್ರ ಕೈಯಿಂದ ಕಿತ್ತು ಹಾಕಿದರೆ ಒಂದು ಕಾಲು ಮುಂದೆ ಇಡುವ ಹಾಗಿಲ್ಲ. ಇಟ್ಟರೆ ನೀಲೂಗೆ ಅಮಂಗಳ ಆಗತ್ತೆ. ಬಿಲೂ ಕೂಗಿದ. "ಅಮ್ಮಾ ಬೇಗ ಒಂದು ದಾರ ತಗೊಂಡು ಬಾ" – ಸರಿ ಅಂತೂ ದಾರ ತಗೊಂಡು ಬಂದು ಮತ್ತೆ ಕಟ್ಟಿದ್ದಾಯಿತು. ಆಮೇಲೆ ಇಬ್ಬರು ಭೂಪತಿಗಳೂ ಹಾಸಿಗೆ ಬಿಟ್ಟು ಈಚೆಗೆ ಬಂದರು.

ಆಗೊಂದು ಸಲ ಮಹಾತ್ಮಾ ಗಾಂಧಿಯವರು ಪ್ರವಾಸ ಮಾಡಿದ ಸಮಯ. ಸರಿಯಾಗಿ ಮಾನ್‌ಹಾಸೀ ಸೇತುವೆಯ ಮೇಲೆ ನಾವು ಕೂತಿದ್ದ ಮೋಟರ್ ಗಾಡಿ ಹೋಗತಾ ಇತ್ತು. ಎದುರುಗಡೆಯೇ ಮೈ ಕ್ಯಾ ಧೂಳಿನಿಂದ ತುಂಬಿದ್ದ ಇಬ್ಬರು ಬೆತ್ತಲೆ ಹುಡುಗರು... ಮೋಟರನ್ನು ನೋಡಿ ಹೆದರಿ ಓಡಿ ಹೋಗಲು ತೋಚದೆ ಹಾಗೆ ನೆಲದ ಮೇಲೆ ಹೊರಳಿ ಬಿದ್ದೇ ಬಿಟ್ಟರು. ಸೀದಾ ರಸ್ತೆ ನಡುವೆ ಗಾಡಿಯ ಮುಂದುಗಡೆ ಬಿದ್ದುಬಿಟ್ಟರು. ಮಾಡೋದೇನು? ಸದ್ಯಃ, ದೇವರ ದಯೆ – ಅವರಿಗೇನೂ ಆಗಲಿಲ್ಲ. ಗಾಡಿಯ ಡ್ರೈವರ್ ತತ್‌ಕ್ಷಣ ನಿಲ್ಲಿಸಿಬಿಟ್ಟಿದ್ದ. ನಾನು ಕೂಡಲೇ ಗಾಡಿಯಿಂದ ಇಳಿದು ಹತ್ತಿರಹೋಗಿ ನೋಡತೇನೆ – ಹುಡುಗರಿಬ್ಬರೂ ದಿಗಿಲಿನಿಂದ ತತ್ತರಿಸುತ್ತಾ ಇದಾರೆ, ಕಣ್ಣು ಮುಚ್ಚಿಕೊಂಡು. ಏನು ಮಾಡಿದರೂ ತೆಗೆಯುವುದಿಲ್ಲ ಅಂತಾರೆ. ಅವರನ್ನ ಕಂಡ ತತ್‌ಕ್ಷಣ ನಮ್ಮ ಬಿಲೂ, ನೀಲೂ ಜ್ಞಾಪಕಕ್ಕೆ ಬಂತು, ಕಣ್ಣನಲ್ಲಿ ನೀರು ತುಂಬಿಕೊಂಡು ಬಂತು. ಅವರಿಬ್ಬರನ್ನು

ಕರೆದುಕೊಂಡು ಹೋಗಿ ಅವರ ಗುಡಿಸಲಿಗೆ ತಲಪಿಸಬಿಟ್ಟಮೇಲೆ ಮನಸ್ಸಿಗೆ ನೆಮ್ಮದಿ ಆಯಿತು. ....ಅಬ್ಬ....ಒಂದು ಕ್ಷಣ ತಪ್ಪಿದ್ದರೆ ಏನು ಅನಾಹುತ ಆಗಿ ಹೋಗತಾ ಇತ್ತೋ! ಇದಾದ ಮೇಲೆ ಎಷ್ಟೋ ಸಲ ಬಿಲೂ, ನೀಲೂ–ಇಬ್ಬರ ಜ್ಞಾಪಕವೂ ಒಂದೇ ಸಲ ಮನಸ್ಸಿಗೆ ಬಂದಾಗ ಜತೆಯಲ್ಲೇ ಈ ಇಬ್ಬರು ಧೂಳು ಮುಚ್ಚಿಕೊಂಡಿದ್ದ ತಬ್ಬಲಿ ಹುಡುಗರ ಚಿತ್ರವೂ ಕಣ್ಣ ಮುಂದೆ ನಿಲ್ಲುತ್ತದೆ.

ದೇವರೇ, ಬಿಲೂ ನೀಲೂ ಇಬ್ಬರಿಗೂ ನಿನ್ನ ಮೇಲೆ ಎಷ್ಟು ವಿಶ್ವಾಸ ಇತ್ತು – ಆ ವಿಶ್ವಾಸ ಕಿತ್ತುಕೊಂಡುಬಿಟ್ಟೆಯಲ್ಲಾ ಯಾಕೆ? ಬಿಲೂ ಒಂದು ದಿನ ಸಂಜೆ ಆಶ್ರಮದ ಭಜನೆಗೆ ಹೋಗಲಿಲ್ಲ – ನಾನಂದುಕೊಂಡೆ ತಲೆಗಿಲೆ ನೋವು ಇರಬಹುದು, ಪಾಪ, ಅಂತ. ಹೋಗಿ ಕೇಳಿದೆ – ಏನೋ ಸಮಾಚಾರ, ಏನಾಗಿದೆಯೋ ಅಂತ. ಏನೂ ಇಲ್ಲ, ಹುಷಾರಾಗೇ ಇದ್ದೇನೆ ಅಂದ. ಮೈಮುಟ್ಟಿ ನೋಡಿದೆ. ಇಲ್ಲ ಜ್ವರ ಗಿರ ಏನೂ ಇಲ್ಲ. ಮತ್ತೆ ಏನಾಗಿದೆ ಇವನಿಗೆ? ಭಜನೆಗೆ ಯಾಕೆ ಹೋಗಲಿಲ್ಲ? ಆಮೇಲೆ ನಿಜವಾದ ಕಾರಣ ಗೊತ್ತಾಗಿ ಎಷ್ಟು ಪೇಚಾಡಿಬಿಟ್ಟೆನೋ? ಅಂತೂ ಹೀಗಾಗಿ ಹೋದನಲ್ಲ, ನಮ್ಮ ಬಿಲೂ ಅಂತ. ಹೇಗಿದ್ದವನು? ಬಿಲ್ಲೂನೇ ಹೀಗಾಗಿಬಿಟ್ಟರೆ, ಇನ್ನು ಪ್ರಪಂಚದಲ್ಲಿ ಏನು ತಾನೇ ಆಗಲಿಕ್ಕೆ ಸಾಧ್ಯವಿಲ್ಲ? ಇದು ನೀಲೂ ತನ್ನ ಜನಿವಾರ ಕಿತ್ತುಹಾಕಿದ ಹಾಗೆ ತೆಗೆದು ಹಾಕುವ ಮಾತಲ್ಲ. ನೀಲು ವಿಷಯವೇ ಬೇರೆ. ಅವನು ಮೊದಲಿಂದಲೂ ಸ್ವಲ್ಪ ಪುಂಡನೇ. ಅವನ ಇಷ್ಟವೇ ಇಷ್ಟ. ಯಾರ ಮಾತೂ ಕೇಳುವವನಲ್ಲ. ಹಠಮಾರಿ ಬೇರೆ. ಅವನು ಕಣ್ಣು ಕೆಂಪಗೆ ಮಾಡಿಕೊಂಡು ಬಿಸಿ ಬಿಸಿಯಾಗಿ ಮಾತಾಡತಾ ಬಂದರೆ ನಾನು ಒಳಗೊಳಗೇ ನಗತಾ ಇದ್ದೆ. ಗೊತ್ತು ಕಣೋ, ನಿನ್ನ ಬಂಡವಾಳ ನನಗೆ ಗೊತ್ತಿಲ್ಲದೆ ಇಲ್ಲ. ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದವನೋ, ಅಥವಾ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದವಳೋ? ನಿನ್ನ ಹುಟ್ಟುಗುಣ ನನಗೆ ಗೊತ್ತಿರುವ ಹಾಗೆ ಇನ್ಯಾರಿಗೆ ಗೊತ್ತಿದೆ? ಇವತ್ತು 'ಹಾಂ ಹೂಂ' ಅಂದುಬಿಟ್ಟು ಹುಚ್ಚು ಹುಚ್ಚಾಗಿ ಕೂಗುತೀ. ನಾಳೆ? ನಾಳೆ ಎಲ್ಲಿ ಹೋಗಿರುತ್ತೆ ನಿನ್ನ ಕೋಪ ಎಲ್ಲಾ? ಚಿಕ್ಕವಯಸ್ಸಿಂದಲೂ ನಿನ್ನ ಆರ್ಭಟ, ಹಾರಾಟ ಎಲ್ಲಾ ನೋಡತಾ ಬಂದಿದ್ದೇನೆ. ಇವತ್ತಲ್ಲ. ಇನ್ನೂ ಜ್ಞಾಪಕ ಇದೆ.... ಒಂದುಸಲ ಬೀದಿಯಲ್ಲಿ ಬಿದ್ದಿದ್ದ ಅಂಗಡಿಯವನು ಕಟ್ಟಿದ್ದ ಪೊಟ್ಟಣದ ಕಾಗದ ನೋಡದೆ ಕಾಲಿಂದ ಒದ್ದದ್ದಕ್ಕೆ ಅಲ್ಲೇ ಬಗ್ಗಿ ನಮಸ್ಕಾರ ಮಾಡತಾ ಇದ್ದ ನೀಲೂ, ಸರಸ್ವತೀನ ಒದ್ದು ಬಿಟ್ಟೆನಲ್ಲ ಅಂತ. ನೋಡದೆ ಮರೆತು ಪಂಚಾಂಗ ಬಿಸಾಡಿ ಬಿಟ್ಟರೆ ಮಂಕು ಮುಖ ಹಾಕಿಕೊಂಡು ನನ್ನ ಹತ್ತಿರ ಬಂದು, 'ಅಮ್ಮಾ ಪಾಪ ಮಾಡಿಬಿಟ್ಟೆ' ಅಂತ ತಪ್ಪು ಒಪ್ಪಿಕೊಂಡು ಬಿಡುತಾ ಇದ್ದ. 'ತಿಳಿಯದೆ ಮಾಡಿದ ಪಾಪ, ಪಾಪ ಆಗುವುದಿಲ್ಲ ಅಲ್ಲವೇನಮ್ಮ'– ಎಂದು ನನ್ನಿಂದ ಸಮಾಧಾನಪಡಿಸಿಕೊಂಡು ಹೋಗತಾ ಇದ್ದ – ಈ ನೀಲೂ. ಒಂದು ದಿನ ರಾತ್ರಿ ನಾನು ಅಡಿಗೆ ಮನೆಯೊಳಗೆ ಇದ್ದೆ, ಯಥಾಪ್ರಕಾರ – ಆಗತಾನೇ ಅಡಿಗೆ ಮನೆ ಕೆಲಸ ಮುಗಿಸಿದ್ದೆ. ಆಗ ಬಿಲೂ ಕೂಗಿದ್ದು ಕೇಳಿಸಿತು – "ಅಮ್ಮಾ ಬಾಯಿಲ್ಲಿ, ನೋಡು ಈ ನೀಲೂ ಮಾಡಿರುವ ಕೆಲಸಾ!" ಹುಡುಗರಿಬ್ಬರದೂ ಪರೀಕ್ಷೆ ಎಲ್ಲಾ ಮುಗಿದು ಹೋಗಿದೆ. ಇನ್ನೇನು ಓದಿಕೊಳ್ಳುವ ಹಂಗೇ ಇಲ್ಲ - ಈ

ನೀಲೂ ತಲೆಯಲ್ಲಿ ಹೊಸದೇನೋ ಘಟಿಂಗತನ ಹೊಕ್ಕಿದಯೇನೋ ಅಂದುಕೊಂಡೆ. ಹೋಗಿ ನೋಡತೇನೆ - ಫ್ರೇಮು ಹಾಕಿ ಗೋಡೆಗೆ ತಗುಲಿ ಹಾಕಿದ್ದ ಸರಸ್ವತಿಯ ಚಿತ್ರವನ್ನು ಕಿತ್ತು ನೆಲದ ಮೇಲೆ ಹಾಕಿ ಅದರ ಮೇಲೆ ಮನೆಯಲ್ಲಿರುವ ಚಪ್ಪಲಿ, ಮೆಟ್ಟು ಎಲ್ಲಾ ಹೇರಿಸಿದ್ದಾನೆ! ಏನು ಕೆಟ್ಟ ಬುದ್ಧಿ ಬಂತು ಇವನಿಗೆ - ಅಂತ ನಾನು ಮೂಗಿನ ಮೇಲೆ ಬೆರಳಿಟ್ಟುಕೊಂಡೆ. ಎಲ್ಲಾದರೂ ಉಂಟೆ - ಹೀಗೆ? ನೀಲೂ ಕೂಡ ಎಂದಿಗಾದರೂ ಇಂಥ ಕೆಲಸ ಮಾಡಲಿಕ್ಕೆ ಸಾಧ್ಯವೆ? ಯಾಕೆ, ಮೊನ್ನೆ ಮೊನ್ನೆ ಪರೀಕ್ಷೆಗೆ ಹೋಗುವುದಕ್ಕೆ ಮೊದಲು ನನಗೆ ನಮಸ್ಕಾರ ಮಾಡಿ ಆಮೇಲೆ ಸರಸ್ವತಿಯ ಪಟಕ್ಕೆ ನಮಸ್ಕಾರ ಮಾಡಿಯೇ ಹೋಗುತ್ತಿದ್ದುದು. ಪ್ರತಿ ವರುಷವೂ ಸರಸ್ವತಿ ಪೂಜೆಯ ದಿನ ಈ ಪಟಕ್ಕೆ ಪೂಜೆ ಆಗತಾಯಿತ್ತು. ಆಗ ಅದಕ್ಕೆ ಹಚ್ಚುತಾಯಿದ್ದ ಗಂಧದ ಗುರುತು ಇನ್ನೂ ಕಾಣುತ್ತಾ ಇದೆ.

ಎಲೋ, ಕಳ್ಳಮುಂಡೇದೇ! ದೇವರ ಪಟದ ಮೇಲೆ ಚಪ್ಪಲಿ ಹೊರೆ ಹಾಕಲಿಕ್ಕೆ ನಿನಗೇನು ಬಂತೋ ಇವತ್ತು – ದೆವ್ವ ಪಿಶಾಚಿ ಹಿಡಿದಿದೆಯೇನೋ, ಪ್ರಾರಬ್ಧವೇ! ಅಂತ ಚೆನ್ನಾಗಿ ಛೀಮಾರಿ ಹಾಕಿದೆ – ಆಗ ಬಿಲೂ ಹೇಳಿದ – "ಅಮ್ಮಾ – ಇವನಿಗೆ ಲೆಕ್ಕದಲ್ಲಿ ಫೇಲಾಗಿದೆ ಅಂತ ನೀಲೂ ಈ ಕೆಲಸ ಮಾಡಿದಾನೆ, ರೇಗಿ" ಅಲ್ಲ, ಲೆಕ್ಕದಲ್ಲಿ ಇವನಿಗೆ ಫೇಲಾದರೆ ದೇವರದೇ ತಪ್ಪು? ಈ ಹಾಳಾದವನ ಹುಚ್ಚು ಕೋಪಕ್ಕೆ ಅರ್ಥವಿದೆಯೆ? ಮಳೆಯಾಗಲಿ, ಬಿಸಿಲಾಗಲಿ ಓದುವುದಿಲ್ಲ, ಬರೆಯುವುದಿಲ್ಲ – ಮೂರು ಹೊತ್ತೂ ಆಟ, ಆಟ.... ಅದಕ್ಕೇನು ಸಮಯವೇ ಇಲ್ಲ, ಇನ್ನು ಫೇಲಾಗದೆ ಇನ್ನೇನಾಗುತ್ತೆ? ಎಷ್ಟು ಸಲ ಹೇಳಿ ಹೇಳಿ ತಲೆ ಬೇಜಾರಾಗಿ ಬಿಟ್ಟಿದೆ – ಹೋಗೋ, ಇವರ ಹತ್ತಿರ ಕೇಳಿ ಸ್ವಲ್ಪ ಲೆಕ್ಕ ಹೇಳಿಸಿಕೊಳ್ಳೋ ಅಂತ – ಅದಕ್ಕೇನಂತಾನೆ ಈ ದುಷ್ಟ ಹುಡುಗ ಗೊತ್ತೆ- "ಓದಿ ಪಾಸು ಮಾಡಿದರೆ ಸರಸ್ವತಿಗೆ ಪೂಜೆ ಮಾಡೋದು ಯಾಕೆ? ಅವಳಿಗೆ ಯಾಕೆ ಖುಷಿ ಪಡಿಸಬೇಕು? ಓದದೇ ಇರೋ ಹುಡುಗರಿಗೆ ಪಾಸು ಮಾಡಿಸದೆ ಹೋದರೆ ದೇವರು ಹೇಗೆ ಆಗತಾಳೆ?" ಹೀಗೆ ಹೇಳಿದ್ದೇ ಮುಸುಡಿ ಬಿಗಿಸಿಕೊಂಡು ಗುಮ್ ಅಂತ ಮೂಲೆಯಲ್ಲಿ ಹೋಗಿ ಕೂತ ಆ ಪುಂಡ. ಕಡೆಗೆ ಬಿಲೂ ಆ ಚಪ್ಪಲಿ, ಎಕ್ಕಡಗಳನ್ನೆಲ್ಲಾ ತೆಗೆದು ಹಾಕಿ ಒಳಗಡೆಯಿಂದ ಗಂಗೆ ನೀರನ್ನು ತಂದು ಚೆನ್ನಾಗಿ ಚಿಮುಕಿಸಿ ಪಟ ತೊಳೆದು ಒರೆಸಿ ಗೋಡೆಗೆ ತಗುಲಿ ಹಾಕಿದ. ನಾನು ಐದು ಪೈಸೆ ಸರಸ್ವತಿ ದೇವಿಯ ಪಟಕ್ಕೆ ಮುಟ್ಟಿಸಿ "ಕಾಪಾಡಮ್ಮ ತಾಯಿ" ಅಂತ ಹೇಳಿ ತೆಗೆದಿಟ್ಟೆ – ಮುಡಿಪಾಗಿ. "ಈ ಹುಡುಗನ ಕೆಟ್ಟ ಕೋಪ ಕಳೆದು ಹೋಗಲಿ, ತಾಯಿ" ಅಂತ ಬೇಡಿಕೊಂಡೆ. ಇಂಥ ವಿವೇಕ, ವಿವೇಚನೆ ಇಲ್ಲದ ಹುಡುಗ ದೇವರ ಮೇಲೆ ಉದಾಸೀನನಾಗುವುದು ತಲೆಗೆ ಹಚ್ಚಿಕೊಳ್ಳುವ ವಿಷಯ ಅಲ್ಲ. ಆದರೆ ನಮ್ಮ ಬಿಲೂ ಅಂಥವನು ಪೂಜೆ, ಅರ್ಚನೆ ಬಿಟ್ಟರೆ, ಕೀರ್ತನೆ, ಭಜನೆಗಳಿಗೆ ಹೋಗದೇ ಇದ್ದರೆ, ದೇವರು, ಬ್ರಾಹ್ಮಣರ ಕಡೆ ಭಕ್ತಿ ಶ್ರದ್ಧೆ ಕಳೆದುಕೊಂಡರೆ ನನಗೆ ಯೋಚನೆಯಿಂದ ತಲೆ ಕೆಡತ್ತೆ. ಅವನಿಗೆ ದೇವರ ಮೇಲೆ ನಂಬಿಕೆ ಎಷ್ಟು ಮಟ್ಟಿಗೆ ಇತ್ತು ಅನ್ನುವುದು ಹೇಳುವುದಕ್ಕಾಗುವುದಿಲ್ಲ. ಚಿಕ್ಕ ವಯಸ್ಸಲ್ಲಿ ನಾನು ಲಕ್ಷ್ಮೀ ಪೂಜೆ ಮಾಡುವ ದಿನ ನನಗೋಸ್ಕರವಾಗಿ ಅವನ ಬುಗುರಿಗಳ ಮೇಲೆ, ಗೋಲಿಗಳ ಸಹಾಯದಿಂದ ದೇವರ ಪಟದ ಕೆಳಗಡೆ ರಂಗೋಲಿ

ಹಾಕಿಕೊಡುತ್ತಿದ್ದ. ಇಲ್ಲದೆ ಹೋದರೆ ಅಷ್ಟು ಗೋಲಿಗಳು, ಬುಗುರಿಗಳು ಇರುವುದು ಹೇಗೆ? ಅದೂ ನನ್ನ ಮುಂದೆಯೇ... ನಾನು ಮೂರು ಹೊತ್ತು ದೇವರ ಮುಂದೆ ಕೂತು ಧ್ಯಾನದಲ್ಲಿ ಮುಳುಗಿದ್ದರೆ ಅವನು ಈ ಕೆಲಸ ಮಾಡತಾ ಇದ್ದ. ಅಂಥ ಬಿಲೂಗೆ ಏನು ಮಾಡಿಬಿಟ್ಟೆ ದೇವರೇ ಅಂತ ನಾನು ಇಪ್ಪತ್ತು ನಾಲ್ಕು ಗಂಟೆಯೂ ದೇವರಿಗೆ ಮೊರೆ ಇಟ್ಟುಕೊಳ್ಳುತಾ ಇದ್ದೆ. ಅವರ ತಂದೆಗೆ ಇದು ತಿಳಿಯದೆ ಇರಲಿ, ನೊಂದುಕೊಂಡಾರು ಅಂತ ನಾನು ಅವರಿಂದ ಇದನ್ನ ಮರೆಮಾಚಲಿಕ್ಕೆ ಎಷ್ಟು ಪ್ರಯತ್ನ ಮಾಡಿದೆನೋ! ಆದರೆ ಈ ಹುಡುಗ ಆಶ್ರಮದ ಕೀರ್ತನೆಗೆ ಹೋಗತಾ ಇಲ್ಲ ಅನ್ನುವುದನ್ನ ಮರೆಯಾಗಿಡುವುದು ಹೇಗೆ? ಎಷ್ಟು ದಿನ ಸಾಧ್ಯ? ನಾನು ಅವನಿಗೆ ತಿಳಿಯದೆ ಅವನು ಕುಡಿಯುವ ನೀರಿನ ಜತೆಯಲ್ಲಿ ದೇವಿ ಪೂರ್ಣೇಶ್ವರಿಯ ಕತ್ತಿ ಮತ್ತು ಪಾದ ತೊಳೆದ ನೀರನ್ನು ಸೇರಿಸಿಬಿಟ್ಟು, "ಅಮ್ಮಾ ತಾಯೇ, ನಮ್ಮ ಬಿಲೂ ಮಾಡಿದ ತಪ್ಪನ್ನ ಮನ್ನಿಸಿಬಿಡು. ಅವನಿನ್ನೂ ಹುಡುಗ. ಅರಿಯದವನು" ಅಂತ ಪ್ರಾರ್ಥನೆ ಮಾಡಿಕೊಂಡೆ.

ಅಲ್ಲ, ನಮ್ಮ ಇವರು ಮಾತ್ರ ಮನಸ್ಸಿಗೆ ಏನೂ ಹಚ್ಚಿಕೊಳ್ಳದೆ ಇರುವುದೆ? "ಅವನೇನೋ ಇನ್ನೂ ಎಳೆಯವ. ಆದರೆ ನೀವು ಹಡೆದ ತಂದೆ ಅಲ್ಲವೆ? ಅವರು ತಪ್ಪು ಹೆಜ್ಜೆ ಇಟ್ಟರು ಅಂತ ನೀವು ಸರಿ ಮಾಡದೆ, ಬುದ್ಧಿ ಹೇಳದೆ ಕೂತಿದ್ದರೆ ಜನ ಯಾರನ್ನ ಅಂತಾರೆ? ನೀವು ಒಂದು ಮಾತಾಡಿ ದಾರಿ ತೋರಿಸಿಕೊಟ್ಟರೆ ಅವರು ನಿಮಗೆ ಎದುರು ಹೇಳುತ್ತಾರೇ?" ಅಂತ ನಾನೆಷ್ಟು ಹೇಳಿದರೂ ಅವರು ಬಾಯಿತೆರೆದು ಏನಾದರೂ ಹೇಳಿದರೆ ಸರಿ. ಮಕ್ಕಳನ್ನು ತಿದ್ದುವ ಕೆಲಸ, ನನ್ನದೊಬ್ಬಳದೇ. ಅವರು ಒಂದು ಮಾದರಿಯ ಮನುಷ್ಯರು. ಏನು ಹೇಳಿ ಏನು ಪ್ರಯೋಜನ?

ಅಗೋ, ಇವರೆಲ್ಲ ಮತ್ತೆ ನನ್ನ ತಲೆ ತಿನ್ನೋದಕ್ಕೆ ಬರತಾ ಇದ್ದಾರೆ. ಈಗಂತೂ ನನಗೆ ಜನರನ್ನು ಕಂಡರೆ ಮೈಯೆಲ್ಲ ಉರಿಯುತ್ತೆ. ಈ ಮಾತನ್ನು ಇವರಿಗೆ ಹೇಗೆ ತಿಳಿಯುವ ಹಾಗೆ ಮಾಡಲಿ – ನನಗೇನೂ ತೋಚುತ್ತ ಇಲ್ಲ.

ಈ ಕಮಲಾದೇವಿ ಬಂದು ನನ್ನ ನಾಡಿಯನ್ನು ಹಿಡಿದು ನೋಡಿದಳು. ಇವಳಿಗೇನೋ ನಾಡೀ ಪರೀಕ್ಷೆ ಬಹಳ ತಿಳಿದಿರುವ ಹಾಗೆ! ನನಗೆ ಗೊತ್ತಿಲ್ಲದೆ ಇಲ್ಲ –ಇವಳಿಗೇನು ಬರತ್ತೆ, ಏನು ಬರುವುದಿಲ್ಲ ಅಂತ. ಇವಳ ಗಂಡ ಡಿಸ್ಟ್ರಿಕ್ಟ್ ಬೋರ್ಡಿನ ಡಾಕ್ಟರು. ಮಾತು ಮಾತಿಗೆ ಇವಳು ತನಗೂ ಸ್ವಲ್ಪ ಡಾಕ್ಟರಿ ಬರದೇ ಇಲ್ಲ ಅಂತ ತೋರಿಸಿಕೊಳ್ಳುತಾ ಇರತಾಳೆ. ಈ ಸುಳ್ಳು ಬಡಾಯೆಲ್ಲ ಯಾಕೆ? ನಮ್ಮ ಇವರೂ ಶಾಲಾ ಮಾಸ್ಟರಾಗಿದ್ದರಲ್ಲ. ನಾನು ಒಂದು ದಿನವೂ ಅಂದುಕೊಂಡಿಲ್ಲ – ಅವರ ಕುಟುಂಬ ಆದಮೇಲೆ ನಾನೂ ಒಬ್ಬ ಪಂಡಿತಳು ಅಂತ. ಅವರಿಗೆ ಕಾಂಗ್ರೆಸ್ ವಿಷಯ ಎಷ್ಟೋ ಗೊತ್ತು – ಹಾಗಂತ ನಾನೂ ಹೇಳಲೇ ನನಗೂ ಗೊತ್ತಿದೆ ಅಂತ.

ಕಮಲಾದೇವಿ, "ಈಗ ನಿಮಗೆ ಹೇಗಿದೆ?" ಅಂತ ಕೇಳುತಾಳೆ. ಕೋಪದಿಂದ ಮೈ ಉರಿದು ಹೋಗತ್ತೆ. ನಿಮಗೆಲ್ಲ ನನ್ನ ವಿಷಯವಾಗಿ ಎಷ್ಟರ ಮಟ್ಟಿಗೆ ಚಿಂತೆ ಅನ್ನುವುದು ಗೊತ್ತು ನನಗೆ – ಆದರೆ ಈ ನಟನೆ ಎಲ್ಲ ಯಾಕೆ? ಕೋಪ ನೆತ್ತಿಗೇರಿ ತತ್‌ಕ್ಷಣ ಜವಾಬು ಕೊಟ್ಟುಬಿಟ್ಟೆ ಅವಳಿಗೆ, "ನನಗೇನೂ ಅಂಥಾದ್ದು ಆಗಿಲ್ಲ.

ನೀವಂದುಕೊಳ್ಳುವ ಕಡೆಗಾಲ ಇನ್ನೂ ಬಂದಿಲ್ಲ. ಇನ್ನೂ ನಿಧಾನವಿದೆ ಅದಕ್ಕೆ 'ಓಂ ನಮೋ ನಾರಾಯಣಾ' ಅಂತ ಇಷ್ಟು ಬೇಗ ಸ್ವರ್ಗಕ್ಕೆ ಪ್ರಯಾಣ ಮಾಡುವ ಅವಸರ ಏನಿಲ್ಲ ನನಗೆ ಗೊತ್ತಾ? ಹಾಗಿದ್ದಿದ್ದರೆ ಚೆನ್ನಾಗೇ ಇರತಾ ಇತ್ತು. ಆದರೆ ನನಗಿನ್ನೂ ಎಷ್ಟೋ ಇಷ್ಟ ಕೀರಿಸಿಕೊಳ್ಳುವುದಿದೆಯಮ್ಮ – ಅದಕ್ಕೆ ಮುಂಚೆ ನಾನು ಹೋಗುವುದಕ್ಕೆ ತಯಾರಿಲ್ಲ."

ಕಮಲಾದೇವಿಯ ನಾಡಿನೋಡುವಿಕೆ ನನಗೇಕೋ ತಲೆಗೇರಿಬಿಟ್ಟಿತು. ಅವಳ ಕೈ ಹಾಗೇ ಜೋತು ಬಿದ್ದು ಹೋಯಿತು. ಟಪ್ಪೆಂದು ನನ್ನ ಕೈ ಹಾಸಿಗೆ ಮೇಲೆ ಬಿದ್ದು ಹೋಯಿತು. ಕೈಯಲ್ಲಾಗುತ್ತಿದ್ದ ರಕ್ತದ ಓಟ ಹಾಗೇ ಇದ್ದು ಹೋಗಿದೆ. ಉಹ್...ಹೋದೆ...ಹೋದೆ! ಏನು ನೋವಾಗತಾ ಇದೆ ಕೈಯಲ್ಲಿ. ತಲೆಯ ಎಡಗಿವಿಯ ಹಿಂದೆ, ತಲೆ ಒಳಗೆ, ಸ್ವಾಧೀನ ತಪ್ಪಿಹೋದ ಹಾಗೆ ಅನ್ನಿಸತಾ ಇದೆ. ತಲೆ ದಿಂಬಿನ ಮೇಲಿಂದ ತಲೆ ಎತ್ತುವುದಕ್ಕೆ ಹೋದರೆ ಎಡಭಾಗಕ್ಕೇನೋ ಆದಹಾಗೆ ಅನ್ನಿಸಿ ಟಪ್ಪಂತ ದಿಂಬಿನ ಮೇಲೆ ಬಿದ್ದು ಹೋಯಿತು ಹಾಗೇ. ಕಿವಿ ಹತ್ತಿರ ಯಾವುದೋ ಜೀರು ದುಂಬಿ ಶಬ್ದ ಮಾಡಿದ ಹಾಗೆ 'ಜೀಜೀ' ಅಂತ ಕೂಗತ್ತೆ ಒಂದೇ ಸಮನಾಗಿ. ಚೆನ್ನಾಗೇ ತಿಳಿಯುವ ಹಾಗೆ ಹೇಳಿಬಿಟ್ಟೆ ಕಮಲಾದೇವಿಗೆ. ಅವಳ ಮುಂದಾಳತ್ವದ ಫಲ ಏನಾದರೇನು, ಈ ರಾಮಾಯಣದ ದಳದವರ ನಡುವೆ ಎಷ್ಟು ಜನ ಇದ್ದಾರೆ ನಿಮ್ಮ ಮಾತುಗಳನ್ನು ಅರ್ಥಮಾಡಿಕೊಳ್ಳುವರು ಅಂತ ಕೇಳಿದೆ. ಅವರಲ್ಲಿ ಎಷ್ಟೋ ಜನ ಸರಿಯಾಗಿ ಕೇಳುವುದೂ ಇಲ್ಲ, ಅರ್ಥಮಾಡಿಕೊಳ್ಳುವುದೂ ಇಲ್ಲ. ಅವತ್ತೊಂದು ದಿನ ಅನಸೂಯಾದೇವಿಗೆ ಚಹಾ ಮಾಡಿಕೊಟ್ಟಿದ್ದೆ. "ನೆಗಡಿ ಆಗಿದೆ, ಸ್ವಲ್ಪ ಉಪ್ಪು ಹಾಕಿ ಚಹಾ ಮಾಡಿಕೊಡಿ" ಅಂತ ಕೇಳಿದಳು. ತನ್ನ ಪಾತ್ರೆಯಲ್ಲೇ ಚಹಾ ಮಾಡಿಸಿಕೊಂಡು ತಗೊಂಡಳು. ಆಮೇಲೆ ಹೇಗೆ ಪಾತ್ರೆಯಿಂದ ತುಟಿಗಳಿಗೆ ಮುಟ್ಟಿಸದೆ ನೀರು ಕುಡಿಯುತ್ತಾಳೋ ಹಾಗೆ ಬಿಸಿ ಬಿಸಿ ಚಹಾವನ್ನ ಗಂಟಲಲ್ಲಿ ಗಳ ಗಳ ಅಂತ ಸುರಿದುಕೊಂಡು ಬಿಡೋದೆ? ಇನ್ನು ಬಾಯಿ, ಗಂಟಲು ಸುಡದೇ ಇರುತ್ತೆಯೆ? ಚಹಾ ಮಾಡುವುದು ಗೊತ್ತಿಲ್ಲ ಒಪ್ಪಿದೆ. ಆದರೆ ತಯಾರು ಮಾಡಿ ಕೊಟ್ಟಿರುವ ಚಹಾವನ್ನು ಸರಿಯಾಗಿ ಕುಡಿಯುವುದಕ್ಕೂ ಬರದೇ ಹೋದರೆ.... ಅಂಥವರಿಗೆ ಮತ್ತೆ ವಿದ್ಯೆ ಇದೆ ಅಂತ ಜಂಬ ಬೇರೆ. ಆ ದಳದವರೆಲ್ಲ ಒಂದೇ ಸಮ. ಇನ್ನೊಬ್ಬ ಹೆಂಗಸಿದ್ದಾಳೆ ಸರಳಾದೇವಿ ಅಂತ. ಅವಳಿಗಾದರೂ ಸ್ವಲ್ಪ ಬುದ್ಧಿಗಿದ್ಧಿ ಇದೆಯೆ? ಅವಳ ತವರು ಮನೆ ರೂಪೋಲಿ ಥಾನಾದ ಬುಡಹೀ ಯಾಧನ್ ಕಟ್ಟಾ ಗ್ರಾಮದಲ್ಲಿ. ಆ ಗ್ರಾಮ ತುಂಬ ದೊಡ್ಡದಂತೆ. ಎಷ್ಟು ದೊಡ್ಡದು ಅಂತ ವರ್ಣಿಸಲಿಕ್ಕೆ ಹೋಗಿ ಹೇಳತಾಳೆ – ಗ್ರಾಮದಲ್ಲಿ ಹಾಕಿಮ್ ಹುಕುಂ, ದರೋಗಾ ಪೋಲೀಸ್, ಪೈಜಾರ್ ಡಾಕ್ಟರ್ ಇಂಥ ಅಧಿಕಾರಿಗಳೆಲ್ಲ ವರುಷವೆಲ್ಲ ಹೋಗತಾ ಬರತಾ ಇರುತಾರಂತೆ. ಅದು ಎಷ್ಟು ಅಭ್ಯಾಸವಾಗಿ ಹೋಗಿದೆ ಅಂದರೆ ಊರಿನ ಬೀದಿ ನಾಯಿಗಳು ಸಹ ಖಾಕೀಚಡ್ಡಿಯವರನ್ನು ನೋಡಿದರೆ ಬಗುಳುವುದೇ ಇಲ್ಲವಂತೆ.

ಆಹಾ-ಏನು ಅಸಾಧಾರಣ ಗ್ರಾಮ....! ಎಂಥ ಅದ್ವಿತೀಯ ಊರು-ಊರೆಷ್ಟು ಅದ್ವಿತೀಯವೋ ಬುದ್ಧಿಯೂ ಅದ್ವಿತೀಯವೇ. ಇಂಥವರನ್ನೆಲ್ಲ ಕಟ್ಟಿಕೊಂಡೇ

ಕಮಲಾದೇವಿ ತನ್ನ ಮುಖಂಡತ್ವ ಮಾಡುವುದು, ಅಲ್ಲವಾ..... ಇಂಥವರನ್ನು ಸೇರಿಸಿಯೇ ತನ್ನ ದಳ ಕಟ್ಟಿರುವುದು! ಕಮಲಾದೇವಿ ಅಸೆಂಬ್ಲಿ ಮೆಂಬರಲ್ಲವೆ? ಆದರೆ ಇಂಗ್ಲಿಷೇ ಗೊತ್ತಿಲ್ಲ. ಅಲ್ಲಿ ಏನು ಮಾಡತಾಳೋ – ಆಗಾಗ ಕೈ ಎತ್ತುವುದೊಂದು ಬಿಟ್ಟು ಬೇರೆ ಏನು ಕೆಲಸ ಮಾಡುತಾಳೋ ಗೊತ್ತಿಲ್ಲ. ಅವತ್ತು ನರ್ಮದಾ ಬಹೆನ್ ಹೇಳತಾ ಇದ್ದರು – ಕಮಲಾದೇವಿಗೆ ಬಿಹಾರಿನ ಯಾವ ವಿದ್ಯಾವಂತ ಹೆಂಗಸರೂ ಕಾಂಗ್ರೆಸಿಗೆ ಸೇರುವುದು ಇಷ್ಟವಿಲ್ಲವಂತೆ. ಸೇರಿಬಿಟ್ಟರೆ ಇವಳ ಪ್ರಾಮುಖ್ಯ ಕಡಮೆ ಆಗಿ ಬಿಡುತ್ತಲ್ಲ, ಅದಕ್ಕೆ ಅದರ ಸಲುವಾಗೇ ಅವಳು ಈ ಮಂಕುಗಳನ್ನೆಲ್ಲ ಜಮಾಯಿಸಿರುವುದು. ಅವಳು ಹೇಳಿದ ಮಾತು ನಿಜವೇ.... ಅದೇ ನರ್ಮದಾ ಬಹೆನ್ ಹೇಳಿದ ಮಾತು. ಕಮಲಾದೇವಿ ವಿಲಾಯತಿಯಿಂದ ಬರುವ ಹಾಲಿನ ಪುಡಿಯ ಟಿನ್ನನ್ನು "ಮೇಮಿಯಾಕೆ ದೂದ್" (ಮೇಮ್ ಸಾಹೇಬರ ಹಾಲು) ಅಂತಾಳೆ. ಟಿನ್ನಿನ ಬೆಣ್ಣೆಯನ್ನು ಇಲ್ಲಿ ಯಾರಿಗೂ ತಿನ್ನಗೊಡಿಸುವುದಿಲ್ಲ. ಅದರಲ್ಲಿ ಕೋಳಿಮೊಟ್ಟೆಯನ್ನು ಮಿಶ್ರಮಾಡಿರುತ್ತಾರಂತೆ! ಹಾಗಿಲ್ಲದೆ ಹೋದರೆ ಬೆಣ್ಣೆ ಎಲ್ಲಾದರೂ ಹಳದೀ ಬಣ್ಣಕ್ಕೆ ಇರುತ್ತಾ? ಅವಳ ಜತೆಯಲ್ಲಿ ವಾದ ಮಾಡುವವರು ಯಾರು?

"ಇದೇನಮ್ಮಾ ಕಮಲಾದೇವಿ... ಬಿಕ್ಕಿ ಬಿಕ್ಕಿ ಅಳುತ್ತ ಇದ್ದೀಯಲ್ಲ? ಛೀ ಛೀ ನಾನೆಂಥ ಬುದ್ಧಿ ಇಲ್ಲದ ಕೆಲಸ ಮಾಡಿದೆ. ಏನೇನೋ ಹುಚ್ಚು ಹುಚ್ಚಾಗಿ ಅಂದುಬಿಟ್ಟೆನಲ್ಲ!"

ಎದ್ದು ಕೂತು ಕಮಲಾದೇವಿಯ ಕೈ ಹಿಡಿದುಕೊಳ್ಳುತ್ತೇನೆ.

"ಕಮಲಾ.... ಇಲ್ಲಿ ಕೇಳು ಕಮಲಾ ನಾನು ನಿಮ್ಮ ತಾಯಿಯ ವಯಸ್ಸಿನವಳು. ಏನೋ ಒದರಿ ಬಿಟ್ಟೆ ಕಮಲಾ.... ಏನೂ ತಿಳಿದುಕೋ ಬೇಡ. ನಾನು ಯಾವ ಸ್ಥಿತಿಯಲ್ಲಿದ್ದೇನೆ ಈಗ - ನೀನೇ ಹೇಳು.... ನಾನು ಮೊದಲಿನ ನಾನೇ ಅಲ್ಲ ಹೌದೋ ಅಲ್ಲವೋ ಹೇಳು. ನನ್ನ ತಲೆಯಲ್ಲಿ ಏನು ಹೊಕ್ಕಿದೆಯೋ ನಿನಗೇ ಗೊತ್ತು.... ಏನೋ ಹೇಳೋದಕ್ಕೆ ಹೊರಟು ಏನೇನೋ ಒದರಿಬಿಟ್ಟೆ....." ಹೀಗೆ ಹೇಳುತ್ತ ಅವಳ ತಲೆಯನ್ನು ನೇವರಿಸಿದೆ. ಅವಳು ಹೇಗೋ ಕಣ್ಣಿನ ನೀರು ಒರೆಸಿಕೊಂಡು ತುಟಿಯ ಮೇಲೆ ನಗು ತಂದುಕೊಳ್ಳಲು ಪ್ರಯತ್ನಿಸಿದಳು.

"ನನ್ನನ್ನು ಕ್ಷಮಿಸಿದ್ದೀಯಾ?" ಎಂದು ಕೇಳಿದೆ.

"ಏನು ಮಾತಾಡತೀರಿ ನೀವು ಹ್ಹೂ.... ಮಲಗಿಕೊಳ್ಳಿ ಇನ್ನು" ಎಂದು ಹೇಳಿದಳು.

ಬಲವಂತವಾಗಿ ನನ್ನನ್ನು ಹಾಸಿಗೆ ಮೇಲೆ ಮಲಗಿಸಿದಳು. ಅವಳ ಮುಖದ ಮೇಲೆ ಮತ್ತು ಕಣ್ಣಲ್ಲಿ ನನ್ನ ಪರವಾಗಿ ಸಹಾನುಭೂತಿ ಒಡೆದು ಕಾಣುತ್ತಿತ್ತು. ಮಗಳಾದವಳು ತಾಯಿಯ ಸೇವೆ ಮಾಡುತ್ತಿರುವ ಹಾಗೇ ಇತ್ತು- ಎಲ್ಲದರಲ್ಲೂ. ಯಾಕಾಗಬಾರದು? ನನಗಂತೂ ಮಗಳಿಲ್ಲ. ಇರುವವರು ಇಬ್ಬರು ಗಂಡು ಮಕ್ಕಳು. ಬಿಲ್ಲೂ, ನೀಲೂ. ಆಹಾ... ಮಗಳೊಬ್ಬಳಾದರೂ ಇದ್ದಿದ್ದರೆ? ಮಗಳ ಮೇಲಿನ ಆಸೆಯನ್ನು ಗಂಡು ಮಕ್ಕಳ ಕಡೆಯಿಂದ ತೀರಿಸಿಕೊಳ್ಳಲಾಗುತ್ತದೆಯೆ? ಮಗಳ ಮಾತು ನೆನೆಸಿಕೊಂಡಾಗೆಲ್ಲ ತತ್‌ಕ್ಷಣ ಬಿಲ್ಲೂನೇ ನನ್ನ ಮಗಳು, ನೀಲೂನೆ ನನ್ನ

ಮಗ ಅನ್ನಿಸುತ್ತೆ. ಬಿಲೂ ಸ್ವಭಾವ ಹುಡುಗಿಯ ಸ್ವಭಾವದ ಹಾಗೇ.... ತುಂಬ ಮೃದು. ಅವನ ವ್ಯವಹಾರವೂ ಹಾಗೆಯೇ.... ತುಂಬ ದಯಾಪರ. ಹೆಂಗಸಿನ ಹಾಗೇ ಸಹನೆ ಮಾಡುವ ಶಕ್ತಿ... ಮತ್ತು ಹೆಂಗಸಿನ ಹಾಗೇ ಅವನ ಕಣ್ಣಲ್ಲಿ ಸ್ವಲ್ಪಕ್ಕೇ ನೀರು ಬಂದು ಬಿಡುತ್ತದೆ.

ಈಗ....ನಾನೆಷ್ಟು ಕ್ರೂರವಾದ ಮಾತುಗಳಾಡಿ ಬಿಟ್ಟೆ ಕಮಲಾದೇವಿ ಮುಂದೆ? ಅವಳಿಗೆ ಸ್ವಲ್ಪವೂ ಕೋಪ ಬರಲಿಲ್ಲವಲ್ಲ. ಅದೇ ಆಶ್ಚರ್ಯ. ಮಾತಿಗೆ ಸರಿಯಾಗಿ ಎದುರು ಜವಾಬು ಕೊಡಬಹುದಾಗಿತ್ತು. ಅವಳ ಬಾಯಿ ಅಷ್ಟೇನೂ ಸಣ್ಣದಲ್ಲ. ಅವತ್ತಿನ ದಿನ ಭತ್ಯ(ರೇಷನ್)ದ ಗುದಾಮಿನ ಅಸಿಸ್ಟೆಂಟ್ ಜೈಲರಿಗೆ ಅಳು ಬರುವ ಹಾಗೆ ಮಾಡಿಬಿಟ್ಟಿದ್ದಳು ಇದೇ ಹೆಂಗಸು. ಈ ವಾರ್ಡಿನಲ್ಲಿರುವವರೆಲ್ಲ ನನ್ನನ್ನು ಕಂಡರೆ ಎಷ್ಟು ಆದರ ತೋರಿಸತಾರೆ. ನನಗೋಸ್ಕರ ಎಷ್ಟು ಪೇಚಾಡುತಾರೆ. ಎಷ್ಟು ಸೇವೆ ಮಾಡುತಾರೆ. ಅಂಥವರಿಗೆ ನಾನು ಹೀಗೆಲ್ಲ ಹೀಯಾಳಿಸಿದೆನಲ್ಲ. ಮನಸ್ಸಿಗೆ ಬಂದ ಹಾಗೆ, ಒಳ್ಳೇದೋ, ಕೆಟ್ಟದ್ದೋ ನೋಡದೆ ಏನೇನೋ ಒದರಿಬಿಟ್ಟೆನಲ್ಲ. ಯಾಕೆ ಹೀಗೆ ಮಾಡಿದೆ? ಹೀಗೆ ಇರಲಿಲ್ಲವಲ್ಲ ನಾನು? ನನ್ನ ಜೀವನದಲ್ಲಿ ಇದುವರೆಗೂ ಯಾರ ಸಂಗಡವೂ ಜಗಳ ಆಡೇ ಇಲ್ಲ. ಈ ಜೈಲಿನಲ್ಲಿ ಯಾಕೋ ನನ್ನ ಸ್ವಭಾವವೇ ಬದಲಾಯಿಸಿ ಬಿಟ್ಟಿದೆ. ಈಗ ಯಾಕೋ ನನ್ನ ಮನಸ್ಸು ಮತ್ತು ಬಾಯಿ ಸ್ವಾಧೀನದಲ್ಲೇ ಇಲ್ಲದಿರುವ ಹಾಗೆ ಕಾಣುತ್ತೆ....

ಕಮಲಾ ಇಲ್ಲೇ ಕೂತು ನನಗೆ ಗಾಳಿ ಹಾಕುತ್ತಿದ್ದಾಳೆ. ಹಾಗೇ, "ಏನಮ್ಮಾ ಸ್ವಲ್ಪ ಕಲ್ಲು ಸಕ್ಕರೆ ಶರಬತ್ತು ಮಾಡಿ ಕೊಡಲೆ? ಸ್ವಲ್ಪ ಯಾಕೆ ಕುಡೀಬಾರದು?" ಅಂತಾಳೆ. "ಬೇಡ" ಮತ್ತೆ ಶುರು ಆಯಿತು. ಒಂದೆರಡು ಒಳ್ಳೇ ಮಾತು ಹೇಳಿ ಬಿಟ್ಟೆ-ಅದಕ್ಕೆ ಮತ್ತೆ ತಲೆ ಮೇಲೆ ಕೂಡುವುದಕ್ಕೆ ಬರುತಾಳೆ.... ಇವರನ್ನ ಕಟ್ಟಿಕೊಂಡು ಏನು ಮಾಡಲಿ.... ನನಗೇನೂ ತೋಚುವುದಿಲ್ಲ. ಹಸಿವಾದರೆ ನಾನೇ ನುಂಗತೇನೆ. ಯಾರೇನು ಹೇಳಬೇಕು ನನಗೆ? ಯಾರೂ ನನಗೆ ಉಪಚಾರ ಮಾಡಬೇಕಾಗಿಲ್ಲ. ಲೂಸಿ ಜಮಾದಾರಿಣಿ ಹೇಳಿಬಿಟ್ಟು ಹೋಗಿದ್ದಳು – ಮೊನ್ನೆ ಡಾಕ್ಟರು ಹೇಳಿ ಹೋಗಿದ್ದಾರಂತೆ. ಇಪ್ಪತ್ತನಾಲ್ಕು ಗಂಟೆಯೂ ನನ್ನ ಹಾಸಿಗೆ ಪಕ್ಕದಲ್ಲಿ ತಿಂಡಿ, ತಿನಿಸು ಏನಾದರೂ ಇಟ್ಟೇ ಇರಬೇಕಂತೆ, ಯಾವಾಗ ತಿನ್ನಲಿಕ್ಕೆ ಇಷ್ಟವಾದರೆ ತಿನ್ನುವುದಕ್ಕೆ ಅನುಕೂಲ ಆಗುವ ಹಾಗೆ. ಏನು ಹೇಳೋಣ ಇದಕ್ಕೆ! ನಗುವುದೋ ಅಳುವುದೋ.... ನಗುವೂ ಬರತ್ತೆ-ಅಳುವೂ ಬರತ್ತೆ. ಅವರೆಲ್ಲ ಏನು ತಿಳಿದುಕೊಂಡಿದ್ದಾರೆ.... ಆ ಹೆಂಗಸು ಯಾರು ಅದೇ ಡೋಮಿನ್ ಜಾತಿಯ ಹಾರಿನ್ ಮಘಾಯಿಯಾ ಅಂತ ಒಬ್ಬ ಖೈದಿ ಉಪವಾಸದ ಮುಷ್ಕರ ಮಾಡಿದಳಲ್ಲ ಹಾಗೆ ಅಂತ ತಿಳಿದುಕೊಂಡಿದ್ದಾರೇನೋ ಪಾಪ. ಬ್ರಾಹ್ಮಣ ಹೆಂಗಸರ ವಿಷಯ ಏನು ಗೊತ್ತು ಇವರಿಗೆ - ಚಿಕ್ಕಂದಿನಿಂದ ಅದೆಷ್ಟು ವ್ರತ-ಉಪವಾಸಗಳನ್ನು ಮಾಡಿ ಬೆಳೆದು ಬಂದಿದ್ದೇವೋ. ಎರಡು ಮೂರು ದಿನ ಉಪವಾಸ ಇರುವುದೊಂದು ನಮ್ಮ ಮೈಗೆ ಅಂಟಿಬಂದಿರುವುದು ಅಂತ ಏನು ಗೊತ್ತು?

ಟಂಗ್-ಟಂಗ್-ಟಂಗ್ ಎಂದು ವಾರ್ಡಿನ ಗಂಟೆ ಹೊಡೆಯುತ್ತ ಇದೆ. ರಾತ್ರಿ ಇಷ್ಟು ಹೊತ್ತಿನಲ್ಲಿ ಯಾರು ಬಂದರೋ? ವಾರ್ಡಿನ ಬಾಗಿಲನ್ನು ಮುಚ್ಚಿ

ಜಮಾದಾರಿಣಿ ಗೋಡೆ ದಾಟಿ ಬೀಗದ ಕೈಯನ್ನು ಜೈಲರ್ ಸಾಹೇಬರಿಗೆ ಒಪ್ಪಿಸುವಳು. ನಮ್ಮ ವಾರ್ಡಿನ ಹೊರ ಬಾಗಿಲು ಇಪ್ಪತ್ತನಾಲ್ಕು ಗಂಟೆಯೂ ಒಳಗಣಿಂದಲೇ ಮುಚ್ಚಿ ಇರುತ್ತದೆ. ಯಾರಿಗೇನಾದರೂ ಹೇಳುವುದಿದ್ದರೆ ಹೊರಗಣಿಂದ ಹಗ್ಗ ಎಳೆಯುತ್ತಾರೆ. ಒಳಗಡೆ ಗಂಟೆ ಹೊಡೆಯುತ್ತದೆ. ಇಗೋ, ಈ ಲೂಸಿ ಯಾರೊಡನೆಯೋ ಮಾತಾಡುತ್ತ ಇದ್ದಾಳೆ. ಮತ್ತೆ ಏನಾದರೂ ಗಲಾಟೆ-ಗಲಭೇ ಆಯಿತೋ ಏನೋ! ಈ ಲೂಸಿ ಇದ್ದಾಳಲ್ಲ.... ಅವಳೇನು ಸಾಮಾನ್ಯ ಅಲ್ಲ. ಇಡೀ ದಿನ 'ಬೇಕೋ ಬಿಟ್ಟೆ'ಯಾಗಿ ಅಲೆದಾಡತಾ ಇರುತ್ತಾಳೆ. ವಾರ್ಡರುಗಳೆಲ್ಲರ ಜತೆಯಲ್ಲೂ ಹರಟೆ ಹೊಡೆಯುತ್ತ ಇರುತ್ತಾಳೆ. ಅದೇ ನಾನು ಒಂದು ದಿನ ಬಿಲೂಗೆ ಪದ್ಯ ಮಾಡಿ ಕಳಿಸೋಣ, ಇವಳ ಸಂಗಡ ಅಂದುಕೊಂಡು ಅವನ ಸೆಲ್ಲಿಗೆ ಹೋಗಿ ಕೊಟ್ಟು ಬರುತೀಯೇನೆ ಅಂತ ಕೇಳಿದೆ. ಅದಕ್ಕೆ ಮುಖ, ಕಣ್ಣು ಅಷ್ಟಗಲ ಮಾಡಿಕೊಂಡು, "ಅಯ್ಯಮ್ಮಾ –ಹೇಗೆ ಸಾಧ್ಯ ಅಮ್ಮಾವರೆ, ಇಪ್ಪತ್ತನಾಲ್ಕು ಗಂಟೆಯೂ ಪಹರೆ ಇರತವರೆ, ಯಾರೂ ಏನೂ ತಲಪಿಸೋ ಹಂಗಿಲ್ಲ ಅಲ್ಲಿ–ನಾನೇನಾದರೂ ಹೋದರೆಗೀದರೆ ನನ್ನ ಚಾಕರಿ ಉಳಿತದಾ?" ಅಂತ ಗೊಣಗಿದಳು. ಅರೇ ಹೋಗೇ ಬಂದಳು ಇವಳೊಬ್ಬಳು. ಧರ್ಮರಾಯನ ಮೊಮ್ಮಗಳು ಮಹಾ! ಇವಳಿಗೆ ವಾರ್ಡರುಗಳನ್ನ ಕಂಡರೆ ಭಯವಂತೆ! ಯಾರಿಗೆ ಕಲಿಸಿಕೊಡುತಾಳೆ? ಇವಳ ನಾಟಕ ಯಾರಿಗೆ ಗೊತ್ತಿಲ್ಲ ಇಲ್ಲಿ? ಹಗಲು, ರಾತ್ರಿ ಅವರುಗಳ ಜತೆ ಸರಸ, ಸಲ್ಲಾಪ, ನಗು, ಚೆಲ್ಲಾಟ ಇಂಥವಳು? ...ನಾನೀಗ ಒಂಧು ಉಪಕಾರ ಮಾಡೇ ಅಂತ ಕೇಳಿದೆನಲ್ಲ. ಅದಕ್ಕೆ ಈ ಹತ್ತಾರು ನೆಪಗಳು – ಆಗೋದಿಲ್ಲ ಅನ್ನೋದಕ್ಕೆ. ಅಲ್ಲವೇ, ನೀನೂ ಕೂಡ ಒಬ್ಬ ಮಗುವಿಗೆ ತಾಯಿ ಅಲ್ಲವೇನೆ? ತಾಯಿ ಮನಸ್ಸು, ತಾಯಿ ಎದೆ ಹೇಗೆ ಹೊಡೆದುಕೊಳ್ಳುತ್ತೆ ಗೊತ್ತಿರುವುದಿಲ್ಲವೇನೆ ನಿನಗೆ? ನೀನೇ ನನ್ನ ಚಪಲ ಅರ್ಥಮಾಡಿಕೊಳ್ಳದೆ ಹೋದರೆ ಬೇರೆ ಯಾರನ್ನು ಅನ್ನಲಿ, ಅರ್ಥ ಮಾಡಿಕೊಳ್ಳಲಿಲ್ಲ ಅಂತ? ದೇವರು ನನ್ನ ಅವಸ್ಥೆ ನಿನಗೆ ಎಂದಿಗೂ ಬರದ ಇರುವ ಹಾಗೆ ಮಾಡಲಿ.... ಆದರೆ ಅಂಥ ಅವಸ್ಥೆ ಬಂದರೆ ಆಗ ಗೊತ್ತಾಗತ್ತೆ ನಿನಗೆ. ಮೊನ್ನೆ ತಾನೇ ಬಂದು ನನ್ನ ಹತ್ತಿರ ಮೂವತ್ತೆರಡುಹಲ್ಲು ಕಿರಿಯುತ್ತ ನಿಮ್ಮ ಮಗನಿಗೆ ಇವತ್ತು ಪ್ರತ್ಯೇಕವಾಗಿ ಆಲೂಗಡ್ಡೆ ಪಲ್ಯ ಮಾಡಿ ಊಟಮಾಡಿಸಿದರು ಅಂತ ಹೇಳಿದೆಯಲ್ಲಾ? ಏನು ಸಾಮ್ರಾಜ್ಯ ಕೊಳ್ಳೆ ಹೊಡೆದು ತಂದು ಹಾಕಿದರೇನೆ? –ಸುದ್ದಿ ಏನೋ ಬಂದು ಹೇಳಿದೆ.... ಪರವಾಇಲ್ಲ – ಅಂದುಕೊಳ್ಳೋಣ. ಸರಕಾರದ ಭಂಡಾರಾನೇ ದೋಚಿಕೊಂಡು ಬಂದು ಇಲ್ಲೊಂದು ಧರ್ಮಸತ್ರ ಕಟ್ಟಿದ್ದಾರೆ. ಇದರಲ್ಲಿ ಅವನಿಗೆ ಏನೋ ಮೃಷ್ಟಾನ್ನ ಭೋಜನ ಮಾಡಿಸಿಬಿಟ್ಟರಂತೆ ಒಂದು ದಿನ.... ಆಹಾಹಾ! ಆ ಸಮಾಚಾರ ಹೇಳಿಬಿಟ್ಟೆ ಅಂತ ಅದೇನು ಆನಂದದ ಸಮುದ್ರದಲ್ಲೇ ಮುಳುಗಿಹೋದಳು.

ಬಾಗಿಲ ಹೊರಗಡೆಯಿಂದ ಲೂಸಿ ಕೂಗು ಹಾಕುತಾಳೆ - "ಕಮಲಾದೇವಿ ಅಮ್ಮಾವರೆ"

"ಏನೇ? ಯಾರು ಬಂದಿದ್ದರೇ?"

"ಯಾರಿಲ್ಲ-ರಾತ್ರಿ ಡ್ಯೂಟಿಯ ಡಾಕ್ಟರ್ ಬಾಬುಗಳು. ಬಂಗಾಳಿ ಅಮ್ಮಣ್ಣೆ

ಹೆಂಗವರೆ ಅಂತ ಕೇಳಿದರು. ಏನಾದರೂ ಸರಿ ಇಲ್ಲದೆ ಹೋದರೆ, ಹಟಗಿಟ ಮಾಡಿದರೆ ಆಸ್ಪತ್ರೆಗೆ ಅವರ ಬಳಿ ಹೇಳಿ ಕಳಿಸಬೇಕಂತೆ. ಗ್ಯಾನಗೀನ ತಪ್ಪಿ ಹೋದರೆ ಹಸಿರು ಶೀಷೆ ಅದಲ್ಲ, ಅದನ್ನ ವಾಸನೆ ನೋಡಿಸಬೇಕಂತೆ –ಹೇಳಿದರು. ಏಯ್ ಮನ್‌ಚನಿಯಾ – ಗಲಕಟ್ಟೀ – ಇಬ್ಬರೂ ಕೇಳಿಸಿಕೊಂಡಿರಿ – ಹುಷಾರ್! ಇಬ್ಬರೂವೆ ಒಟ್ಟಿಗೇ ಮನೀಕ್ಕೊಂಡು ಬಿಟ್ಟರಾ ಆಗಲೇ ?"

ಆಹಾಹಾ.... ಏನು ಕನಿಕರ, ಏನು ಕಕ್ಕುಲಾತಿ.... ಮನುಷ್ಯರಿಗೆ! ಆ ಡಾಕ್ಟರೂ ಅಷ್ಟೇ, ಈ ಲೂಸಿಯೂ ಅಷ್ಟೇ. ನೀವಿಬ್ಬರೂ ಎಂಥವರು ಅಂತ ಗೊತ್ತಿಲ್ಲದ ಇಲ್ಲ ನನಗೆ. ನನಗೇ ಕಲಿಸಿಕೊಡಲಿಕ್ಕೆ ಬರಬೇಡಿ. ನಿಮ್ಮೆಲ್ಲರದೂ ಒಂದೊಂದು ನರ, ನಾಡಿ ಹೇಗೆ ಅಂತ ಗೊತ್ತಿದೆ.... ಇವತ್ತೂ ಹುಟ್ಟಿದವಳಲ್ಲ ನಾನು. ನಿಮ್ಮಗಳ ಮನಸ್ಸಲ್ಲಿ ಒಂದು, ಬಾಯಲ್ಲಿ ಇನ್ನೊಂದು. ಮೇಲಿನಿಂದ ಹಿಡಿದು ಕೆಳಗಿನವರೆಗೂ ಎಲ್ಲ ಒಂದೇ ಸಮ ನೀವುಗಳು. ಆ ದರೋಗ ಸಾಹೇಬನ ಮಾತೇ ತಗೊಳ್ಳೋಣ. ಅವತ್ತಿನ ದಿನ ಬಿಲೂ ತಂದೆಯನ್ನು ದಸ್ತಗಿರಿ ಮಾಡಿದರು. ಅವತ್ತೇ ಜಿಲ್ಲಾ ಕಾಂಗ್ರೆಸ್ ಆಫೀಸಿಗೆ ಬೀಗ ಹಾಕಿ ಬೀಗದ ಕೈ ತಗೊಂಡು ಹೋದರು. ಆಮೇಲೆ ನನ್ನ ಹತ್ತಿರ ಬಂದು, "ಅಮ್ಮಾ ನೀವು ಈಗ ನೀವಿರೋ ಮನೆಯಲ್ಲೇ ಇದ್ದುಕೊಂಡಿರಬಹುದು. ಅದನ್ನ ಸರಕಾರ ಜಪ್ತಿ ಮಾಡಿಲ್ಲ. ಜಪ್ತಿ ಮಾಡಿರೋದು ಕಾಂಗ್ರೆಸ್ ಆಫೀಸನ್ನ" ಅಂತ ಹೇಳಿ ಹೋದರು. ಹಾಗೆ ಹೇಳಿ ಹೋದವರು, ಇನ್ನೂ ಮೂರು, ನಾಲ್ಕು ದಿನ ಆಗಿಲ್ಲ, ಆಗಲೇ ಬಂದರು ಯಮದೂತರ ಹಾಗೆ - ಬಂದದ್ದೇ ನನ್ನನ್ನು ದಸ್ತಗಿರಿ ಮಾಡೋದೆ ? ಪೊಲೀಸ್ ಠಾಣೆಗೆ ಕರಕೊಂಡು ಹೋದರು. ಸೀದಾ ಕರಕೊಂಡು ಹೋದರು ಠಾಣೆಗೆ. ಹೇಳತಾರೆ, ಮಾಸ್ಟರ್ ಬಾಬುಗಳನ್ನ ಮಾಡಿದ ಹಾಗೆ ನಿಮ್ಮನ್ನೂ ಬಂಧನದಲ್ಲಿ ಇಟ್ಟಿರಲಿಕ್ಕೆ ಹುಕುಂ ಆಗಿದೆ ಅಂತ... ಸರಿ, ಅಂದೆ ಠಾಣೆಗೆ ನಾನು ಬಂದಾಗ ಅದೆಷ್ಟು ಮರ್ಯಾದೆ ನನಗೆ! ದರೋಗ ಬಾಬುಗಳ ಮನೆಯೊಳಗೆ ಕರೆದುಕೊಂಡು ಹೋದರು. ಅಲ್ಲೂ ಅಷ್ಟೆ. ಅವರ ಹೆಂಡತಿ ಸಹ ನನ್ನ ಕಂಡರೆ ಎಷ್ಟು ಆದರ, ಎಷ್ಟು ಉಪಚಾರ! ನನಗೆ ಜಪಕ್ಕೆ ಸಹ ಸಿದ್ಧ ಮಾಡಿಕೊಟ್ಟರು. "ಆರಾಮವಾಗಿ ಜಪಮಾಡಿ" ಅಂತ. ಗಂಡ, ಹೆಂಡತಿ – ಇಬ್ಬರೂ "ಅಮ್ಮಾ...ಅಮ್ಮಾ" ಅಂತ ಬಾಯಲ್ಲಿ ಬೆಣ್ಣೆಯೇ! ಅವಳೋ, ಅಪ್ಪಟ ಮುತ್ತೈದೆ ಹಾಗೇ ಮಗುವನ್ನ ತಂದು ತೊಡೆ ಮೇಲೆ ಮಲಗಿಸಿ "ಹರಸಿ ಅಮ್ಮಾ ಈ ಮಗೂನ ಚಿರಂಜೀವಿಯಾಗಿರಲಿ ಅಂತ" ಅಂದಳು. ಏನು ನಯ, ಏನು ವಿನಯ! ಹೇಳತಾಳೆ, "ಅಮ್ಮಾ...ದೇಶ ಇಡೀ ಜನರ ಶಾಪಗಳು ಎಷ್ಟು ಕೂಡಿಹಾಕಿಕೊಂಡಿದೆಯೋ. ಈ ಹಾಳು ಚಾಕರಿ ಅಂಥಾದ್ದು. ನೀವು ಮನಸ್ಫೂರ್ತಿಯಾಗಿ ಆಶೀರ್ವಾದ ಮಾಡೀಮ್ಮಾ -ನೂರು ವರುಷ ಬಾಳಿ ಬದುಕಲಿ ಅಂತ. ಎರಡು ಆಗಲೇ ನನ್ನ ಕರುಳು ಖಾಲಿ ಮಾಡಿ ಹೋಗಿಬಿಟ್ಟುವು" ಅಂತ ಕಣ್ಣೊರಸಿಕೊಳ್ಳತಾಳೆ. ಪಾಪ, ನನಗೂ ಮನಸ್ಸು ಕರಗಿ, "ಷಷ್ಠೀ ದೇವತೆ ನಿಮ್ಮ ಮಗುವನ್ನು ನೂರು ವರುಷ ಇಟ್ಟಿರಲಿ. ನಿಮ್ಮಂಥ ಪುಣ್ಯವಂತರನ್ನು ಹಾಳು ಜನಗಳ ಶಾಪ ಮುಟ್ಟೀತೆ ಸುಮ್ಮನಿರಿ. ಈ ಮಗು ನಿಮ್ಮ ವಂಶಕ್ಕೇ ಯಶಸ್ಸು ತರತ್ತೆ – ಯೋಚನೆ ಮಾಡಬೇಡಿ. ಈ ಊರಲ್ಲಿ ಒಂದು ಅಶ್ವತ್ಥದ ಮರ ಇದೆ ಗೊತ್ತಾ....ಪೂರ್ಣೇಶ್ವರಿ ಅಮ್ಮನವರ ಗುಡಿ ಪಕ್ಕದಲ್ಲೇ.

ತುಂಬಾ ಸತ್ಯ ಅದರಲ್ಲಿ. ಆ ಮರದ ಕಟ್ಟೆಗೆ ನಿಮ್ಮ ಮಗುವಿನ ಹೆಸರಲ್ಲಿ ಒಂದು ಇಟ್ಟಿಗೆ ಹಾಕಿಸಿಬಿಡಿ ಸಾಕು" ಅಂತ ಹೇಳಿದೆ - ಅದರಲ್ಲಿ ನನ್ನದೇನು ಹೋಯಿತು....ಪಾಪ... ಹೋಗಿಕೊಳ್ಳಲಿ ಆ ಮಾತೇಕೆ ಈಗ ? ಅದೊಂದು ಪರ್ವ... ಮುಗಿಯಿತು. ಅಲ್ಲ, ಯಾಕೆ ಹೇಳತಾ ಬಂದೆ ಅಂದರೆ.... ಜೈಲಿಗೆ ಬಂದ ಮೇಲೆ ಇದೇ ದರೋಗಾ ಸಾಹೇಬ ಏನು ರೀಪೋರ್ಟು ಮಾಡಿದಾನೆ ಅಂದರೆ ಸರಕಾರ ಜಪ್ತೀ ಮಾಡಿ ತನ್ನ ಸುಫರ್ದಿಗೆ ತಗೊಂಡ ಕಾಂಗ್ರೆಸ್ ಕಛೇರಿಯ ಬೀಗ ಒಡೆದು ಅತಿಕ್ರಮ ಪ್ರವೇಶ ಮಾಡಿದೆನಂತೆ ನಾನು... ಕೇಳಿದಿರಾ ಮಾತು ? ಆ ತಪ್ಪಿನ ಮೇಲೆ ನನ್ನ ವಿರುದ್ಧ ಮೊಕದ್ದಮೆ ಜಾರಿ ಮಾಡತಾರಂತೆ ! ಅಯ್ಯೊ, ಇವನ ಮನೆ ನಾಶವಾಗ... ಇಂಥಾ ಅನ್ಯಾಯವೂ ಉಂಟೆ ? ಆಕಾಶದಲ್ಲಿ ಸೂರ್ಯ ಚಂದ್ರರು ಇನ್ನೂ ಇದ್ದಾರೆ... ಆದರೂ ಇಷ್ಟು ಘೋರವಾದ ಸುಳ್ಳು ಹೇಳುವುದೆ ? ಇವರೇನು ಉರ್ಜಿತವಾಗತಾರೆಯೆ – ಈ ರಾಕ್ಷಸರು ? ಅಲ್ಲ, ಇದೇ ದರೋಗ ಹಲ್ಲು ಕಿರಿದುಕೊಂಡು ಬಂದು, "ನೀವು ಯಾವ ಉಪದ್ರವವೂ ಇಲ್ಲದೆ ನಿಮ್ಮ ಮನೆಯಲ್ಲಿ ಇರಬಹುದು" ಅಂತ ಹೇಳಿ ಹೋದವನು. ಅದೇ ಮನುಷ್ಯನೇ ಇವನು ?

ಜೈಲಿನ ಡಾಕ್ಟರನೂ ಈ ದರೋಗನ ಹಾಗೇ ! ಖೈದಿಗೆ ನೀಲಿ ಬಣ್ಣದ ನೀರು, ಕೆಂಪು ಬಣ್ಣದ ನೀರು ಕೊಟ್ಟು ಕಾಯಿಲೆ ವಾಸಿ ಮಾಡೋದು ಯಾಕೆ, – ಕಡೆಗೆ ಅವನನ್ನ ಗಲ್ಲಿಗೆ ಹಾಕಿಸಲಿಕ್ಕೆ ! ಸಾಬರು ಕೋಳಿಯನ್ನು ಸಾಕುತಾರಲ್ಲ, ಯಾಕೆ ? ಇಂಥವನೂ ಬಂದು ನನ್ನ ಹತ್ತಿರ "ಅಮ್ಮ" ಅಂತಾನೆ. ಅಮ್ಮನಂತೆ ಅಮ್ಮ! ಯಾರಾದರೂ ನನ್ನ "ಅಮ್ಮಾ" ಎಂದು ಕರೆದರೆ ಆಗ ನನ್ನ ಮನಸ್ಸು ಹೇಗೆ ಕರಗಿ ಹೋಗುತ್ತದೆಂದರೆ, ಸ್ವಲ್ಪವಾದರೂ – ಒಂದೆರಡು ಸತ್ಯದ ಮಾತುಗಳನ್ನು ಹೇಳಿ ನನ್ನ ಎದೆಯ ಸಂಕಟ ಕಳೆದುಕೊಳ್ಳೋಣ ಅನ್ನಿಸುತ್ತೆ. ಹಾಗೆ ಹೇಳಿಕೊಳ್ಳುವವರೆಗೂ ಮನಸ್ಸಿಗೆ ಹಿತವಾಗೇ ಇರುವುದಿಲ್ಲ. ನಾನು ಊರಿನವರೆಲ್ಲರಿಗೂ 'ಅಮ್ಮ'ನೇ ಜೈಲಿನಲ್ಲಿರುವ ಕಾಂಗ್ರೆಸ್ ಕೆಲಸಗಾರರೆಲ್ಲರಿಗೂ ಅಮ್ಮ ನನಗಂತೂ ಲೋಕದಲ್ಲಿರುವವರೆಲ್ಲ ಮಕ್ಕಳೇ. ಆದರೂ ಮನಸ್ಸೆಲ್ಲ ಮೂರು ಹೊತ್ತೂ ನೀಲೂ, ಬಿಲೂ – ಇವರ ಮೇಲೇ ಇರುತ್ತೆ. – ಇವರಿಬ್ಬರ ಹೊರತು ಬೇರೆ ಯಾವ ಹುಡುಗರಿಗೂ ತಾಯಿಯಾಗುವ ಇಷ್ಟವಿಲ್ಲ ನನಗೆ. ಈ ಇಬ್ಬರು ಮಕ್ಕಳನ್ನು ಸಹ ನನ್ನ ಎದೆ ತುಂಬಿ ಪ್ರೀತಿಸಿ ಇಟ್ಟುಕೊಂಡಿರಲಿಕ್ಕೆ ಆಗಲಿಲ್ಲ ನನಗೆ. ಹಾಗಾಗಿದ್ದರೆ ನಮ್ಮ ಬಿಲೂ ಇವತ್ತು ಒಂದಿಷ್ಟು ಪ್ರೀತಿಗಾಗಿ ಕಂಗಾಲಾಗಿರುತ್ತಿದ್ದನೆ ? –ಹಾಗಿಲ್ಲದಿದ್ದರೆ ನಮ್ಮಕ್ಕ – ಜತೇನನ ತಾಯಿಯನ್ನು 'ಅಮ್ಮಾ' ಎಂದು ಕರೆಯಲು ಹೋಗುತ್ತಿದ್ದನೆ ? ಹಾಗಿಲ್ಲದೆ ಹೋದರೆ ನೀಲೂ ಸಹ ಅವಳನ್ನ 'ದೊಡ್ಡಮ್ಮಾ' ಎಂದು ಕರೆಯುವುದನ್ನು ಬಿಟ್ಟುಬಿಟ್ಟಿದ್ದಾನೆ. ಯಾಕೆ ? ಬಿಲೂ, ನೀಲೂ ಇಬ್ಬರನ್ನೂ ಪೂರ್ತಿಯಾಗಿ ನನ್ನ ಬಳಿಯೇ, ನನ್ನವರಾಗಿಯೇ ಇಟ್ಟುಕೊಳ್ಳಲಿಕ್ಕೆ ಇಷ್ಟ ನನಗೆ. ಬೇರೆ ಯಾರಿಗೂ ಅವರ ಮೇಲೆ ಯಾವ ಹಕ್ಕು, ಅಧಿಕಾರ ಇರಲು ಇಷ್ಟವಿಲ್ಲ. ಆದರೇನು ನಾನು ಮಾತ್ರ ಅವರನ್ನು ಹಾಗೆ ಗಟ್ಟಿಯಾಗಿ ಹಿಡಿದಿಟ್ಟುಕೊಂಡರೆ ಏನಾಗುತ್ತೆ ? ಊರಿನವರಿಗೆಲ್ಲ ಅವರು ಬೇಕಲ್ಲ ? ಎಲ್ಲರ ಮನಸ್ಸೂ ಅವರ ಕಡೆ ಎಳೆಯುತ್ತೆ. ಅಂಥವರನ್ನು ನಾನು

ಹಿಡಿದಿಟ್ಟುಕೊಳ್ಳಲು ಸಾಧ್ಯವೆ? ಅದಕ್ಕೆ ತಕ್ಕಂತೆ ಬಿಲೂ ತುಂಬ ಅಭಿಮಾನಿ ಹುಡುಗ. ಎಂದಾದರೂ ಬಾಯಿತಪ್ಪಿ ಅವನನ್ನು 'ತುಯಿ''*ಅನ್ನದೆ 'ತುಮಿ' ಅಂದು ಬಿಟ್ಟರೆ ತತ್‌ಕ್ಷಣ. ಕಣ್ಣಲ್ಲಿ ನೀರು ಬಂದು ಬಿಡುತ್ತದೆ ಅವನಿಗೆ.

ಅದೇ ಒಂದು ದಿನ ಮಧ್ಯಾಹ್ನ ಊಟದ ಸಮಯದಲ್ಲಿ "ಬಡ ಬಾಬು (ದೊಡ್ಡ ಹುಡುಗ) ಮನೆಯಲ್ಲಿಲ್ಲ ಅಂತ ಕಾಣತ್ತೆ" ಅಂತ ಅಂದರು. ಆಗ ಬಿಲೂ ಮನೆ ಒಳಗಡೆಯೇ ಇದ್ದ, ಅದನ್ನ ಕೇಳಿಸಿಕೊಂಡಿದ್ದೇ ಅದೇನು ಅಳು, ರೇಗಾಟ ಅವನದು? ಅದೇ ನೀಲೂ ಆಗಿದ್ದರೆ 'ಹೋ ಹೋ' ಎಂದು ಮನೆ ಕಿತ್ತು ಹೋಗುವ ಹಾಗೆ ನಕ್ಕು ಕೇಕೆ ಹಾಕುತ್ತಿದ್ದ. ಅಕ್ಕಾ...! ನಿನಗಾದರೆ ಜಿತೇನ, ಹೀರೇನ, ಹೇಬಲೂ, ಬೇಲಾ, ಸೊಸೆ, ಮೊಮ್ಮಕ್ಕಳೂ ಎಲ್ಲಾ ಇದ್ದಾರೆ. ನನ್ನದೋ ತುಂಬಿಕೊಂಡಿರುವ, ಇನ್ನೂ ತುಂಬಿಕೊಳ್ಳುತ್ತಿರುವ ಲಕ್ಷ್ಮೀಸಂಸಾರ. ನಿನಗೆ ಯಾವುದರ ಅಭಾವವೂ ಇಲ್ಲ. ನೀನು ಯಾಕೆ ನನ್ನಿಂದ ನಮ್ಮ ಬಿಲೂವನ್ನ ಕಸಿದುಕೊಳ್ಳುತ್ತಿದ್ದೀಯೆ? ಅವನನ್ನು ಯಾಕೆ ನನ್ನ ಮುಂದೆ ಹೊರಗಿನವನಾಗಿ ಮಾಡುತಾ ಇದ್ದೀಯೆ? ನನ್ನ ಮಕ್ಕಳನ್ನ ನಾನು ಯಾರೊಂದಿಗೂ ಭಾಗ ಮಾಡಿಕೊಳ್ಳಲೂ ಇಷ್ಟವಿಲ್ಲ. ನನಗೆ ನೀಲೂ, ಬಿಲೂ ಬಿಟ್ಟರೆ ಬೇರೆ ಮಕ್ಕಳಿಲ್ಲ. ಮನೆ ಇಲ್ಲ, ಮಠ ಇಲ್ಲ, ತಲೆ ಮರೆಸಿಕೊಳ್ಳುವುದಕ್ಕೆ ಒಂದಿಷ್ಟು ಜಾಗ ಸಹ ಇಲ್ಲ. ಆಸ್ತಿ ಇಲ್ಲ, ಪಾಸ್ತಿ ಇಲ್ಲ. ಹಣ, ಸಂಪತ್ತು ಕನಸಿನಲ್ಲೂ ಇಲ್ಲ. ನಾನು ನನ್ನ ಮಕ್ಕಳ ಮುಖ ನೋಡಿಕೊಂಡು ಎಲ್ಲ ದುಃಖ, ಸಂಕಟಗಳನ್ನೂ ಮರೆತುಕೊಂಡಿದ್ದೇನೆ. ದೇವರಿಗೆ ಅದೂ ಸಹಿಸಲಿಲ್ಲ ಅಂತ ಕಾಣುತ್ತೆ. ಮಕ್ಕಳನ್ನ ಮರುಳು ಮಾಡುವ ವಿದ್ಯೆ ಕಲಿತು ಎಲ್ಲರೂ, ನನ್ನ ಮಕ್ಕಳೇ ನನಗೆ ಪರಕೀಯರಾಗುವ ಹಾಗೆ ಮಾಡಿದ್ದಾರಲ್ಲ? ನಮ್ಮಕ್ಕ – ಅದೇ ಜಿತೇನನ ತಾಯಿ ನೋಡಲಿಕ್ಕೇನೋ ಬಹಳ ಒಳ್ಳೇ ಮನುಷ್ಯಳೇ. ....ಆದರೆ ಅವಳ ಮನಸ್ಸು ಬೇರೆ ರೀತಿ. ಸ್ವಲ್ಪ ಜಿಲೇಬಿ ಪಾಕದ ಹಾಗೆ. ಬೇರೆಯವರ ಮನೆಯಲ್ಲಿ ಯಾರಾದರೂ ಹೊಸದಾಗಿ ಒಂದು ಒಡವೆ ಮಾಡಿಸಲಿ – ಅದನ್ನ ಕಣ್ಣಿಟ್ಟು ನೋಡಿ ನೋಡಿ ಅದರಲ್ಲಿ ಹತ್ತು ವಿಧವಾಗಿ ತಪ್ಪು ಕಂಡುಹಿಡಿಯುತ್ತಾಳೆ. ಎಲ್ಲ ಸಮಾಚಾರಗಳೂ ಬೇಕು ಅವಳಿಗೆ. ಚಿನ್ನ ಅಪರಂಜಿ ಚಿನ್ನದ ಹಾಗೆ ಕಾಣುವುದಿಲ್ಲ. ಎಷ್ಟು ಸವರನ್ನಗಳು – ಯಾರ ಕೈಯಲ್ಲಿ ಮಾಡಿಸಿರುವುದು, ಅದರ ತೂಕ ಎಷ್ಟು? ಮಜೂರಿ ಅಷ್ಟು ಕಡಮೆ ಕೊಟ್ಟರೆ ಚೆನ್ನಾಗಿರಬೇಕು ಅಂದರೆ ಹೇಗೆ ಸಾಧ್ಯ? ...ಬಿಲೂ, ನೀಲೂ ಇವರಿಂದ ನನ್ನ ಸಂಸಾರದ ಗುಟ್ಟು, ರಹಸ್ಯಗಳನ್ನೆಲ್ಲ ತಿಳಿದುಕೊಳ್ಳಬೇಕು ಅಂದರೆ ಎಷ್ಟು ಆಸೆಯೋ ಅವಳಿಗೆ!

ನಿಮ್ಮಮ್ಮ ತಿಂಡಿ ಕರಿಯುವುದಕ್ಕೆ ತುಪ್ಪ ಉಪಯೋಗಿಸುತ್ತಾಳೋ, ಇಲ್ಲ ಎಣ್ಣೆಯೋ? ಸಾಕಷ್ಟು ಎಣ್ಣೆ ಹಾಕಿ ಬದನೆಕಾಯಿ ಪಲ್ಯ ಮಾಡತಾಳೋ ಇಲ್ಲ ಒಂದು ತೊಟ್ಟು ಎಣ್ಣೆಯಲ್ಲಿ ಹೇಗೋ ಒಂದು ರೀತಿಯಾಗಿ ಹುರಿದುಬಿಡುತಾಳೋ.... ಇಂಥವೆಲ್ಲ ಯಾಕೆ ಇವಳಿಗೆ? ಇವನ್ನೆಲ್ಲ ನೀಲೂ ಸಣ್ಣವನಿದ್ದಾಗ ಕೇಳಿ ಕೇಳಿ ತಿಳಿದುಕೊಳ್ಳುತಾಯಿದ್ದಳು. ಬಿಲೂ ಆದರೆ ಹೆಚ್ಚು

---

* ಬಂಗಾಳಿಯಲ್ಲಿ 'ತುಯಿ' (ನೀನು) ತುಂಬಾ ಆತ್ಮೀಯತೆಯ ಸಂಬೋಧನೆ - ತಂದೆತಾಯಿಯರು ಮಕ್ಕಳನ್ನು ಸಂಬೋಧಿಸುವುದು 'ತುಯಿ' ಎಂದೇ.

ಮಾತಿನವನಲ್ಲ ಯಾವುದೂ ಬಿಟ್ಟು ಕೊಡುತಾಯಿರಲಿಲ್ಲ. ನೀಲೂ ಮಾತ್ರ ನನ್ನ ಹತ್ತಿರ ಬಂದು ಅವರ ದೊಡ್ಡಮ್ಮ ಮಾತಾಡಿದ್ದೆಲ್ಲ ಅನುಕರಣೆ ಮಾಡಿ ಹೇಳುತಾಯಿದ್ದ. ಅವಳ ಹಾಗೇ ಮಾತು, ಕತೆ, ಅವಳದೇ ದನಿ, ಹಾವ, ಭಾವ ಎಲ್ಲ ಥೇಟ್ ಅವಳೇ ಎದ್ದು ಬಂದಿರುವ ಹಾಗೆ ನಕಲು ಮಾಡಿತೋರಿಸುತ್ತಿದ್ದ. ಕೇಳಿ ಕೇಳಿ ನಗು ತಡೆಯುವುದಕ್ಕೇ ಆಗದು. ಆದರೆ ಅಕ್ಕ ಹೀಗೆಲ್ಲ ಕೇಳುವುದು ಸರಿಯೆ ? ನಾವು ಬಡವರು. ನಮ್ಮ ಸಂಸಾರದಲ್ಲಿ ಎಷ್ಟೋ ಕೊರತೆಗಳಿವೆ, ಎಷ್ಟೋ ಅಭಾವ, ನೀವೇನು ನಮಗೆ ದೂರದವರಲ್ಲ. ನಮಗೆ ತೀರ ಹತ್ತಿರದವರು. ಇಂಥ ವಿಷಯಗಳ ಮೇಲೆ ಮಾತು, ಕತೆ ಯಾಕೆ, ಚರ್ಚೆ ಯಾಕೆ ? ಒಂದು ರೀತಿಯಲ್ಲಿ ಅಕ್ಕ ನಮಗೆಷ್ಟೋ ಮಾಡಿದ್ದಾಳೆ.... ಇದನ್ನು ಒಪ್ಪಿಕೊಳ್ಳಲೇ ಬೇಕು. ಕಾಯಿಲೆ, ಕಸಾಲೆ ಬಂದಾಗ ಬರುವುದು, ವಿಚಾರಿಸಿಕೊಳ್ಳುವುದೇ ಅಲ್ಲದೆ, ಔಷಧ ಪಥ್ಯ ಸಹ - ಅಲ್ಲದೆ ಮನೆಯಲ್ಲಿ ಮಾಡಿರುವ ಅಡಿಗೆ, ತಿಂಡಿ, ತಿನಿಸುಗಳನ್ನು ಆಸಕ್ತಿಯಿಂದ ಕಳಿಸುವುದು... ಹೀಗೆ ಒಂದಲ್ಲ ಎಷ್ಟೋ ಧಾರಾಳವಾಗಿ ಮಾಡಿದ್ದಾಳೆ. ಆ ವಿಷಯದಲ್ಲಿ ಅವಳನ್ನು ಒಂದು ಮಾತು ಆಡುವಹಾಗಿಲ್ಲ. ನೀಲೂ ಅಂತೂ ಈಗಲೂ ಅಲ್ಲೇ ಇರುತ್ತಾನೆ..... ಅವಳು ಏನು ಮಾಡಿದರೂ ಪೂರ್ತಿ ಮನಸ್ಸಿಟ್ಟು ಮಾಡುತಾಳೆ. ಆದರೆ ತಾನು ಹಾಗೆಮಾಡಿದೆ ಅನ್ನುವುದನ್ನು ಹೇಳದೆ ಹೋದರೆ ಆಗುವುದಿಲ್ಲ ಅವಳಿಗೆ. ಅಕ್ಕನ ಸ್ವಭಾವವೇ ಹೀಗೆ. ಆಮೇಲೆ ಇನ್ನೊಂದು ದುರ್ಗುಣ ಇದೆ ಅವಳಲ್ಲಿ – ಸ್ವಲ್ಪವೂ ಗಾಂಭೀರ್ಯ ಇಲ್ಲ. ಸ್ವಲ್ಪ ಒಡಕು ಬಾಯಿ-ಸಲಿಗೆಯಲ್ಲಿ ಬಾಯಿಗೆ ಬಂದ ಹಾಗೆ ಮಾತಾಡುತಾಳೆ. ಬಿಲೂನ ಕಂಡಾಗೆಲ್ಲ, "ಏನೋ ಬಾರೀಂದರಿ ಬ್ರಾಹ್ಮಣರ ಹುಡುಗಾ ?" ಅಂತಾಳೆ. ನೀಲೂವಿಗೆ "ಮಾಭ್ಪಾತಲೀ !" ಅಂತಾಳೆ. ಅವರ ತಂದೆಗೆ "ದಾಡೀ" ಅಂತ ಹೆಸರಿಟ್ಟಿದ್ದಾಳೆ. ಈ ತರಹ ಅಡ್ಡ ಹೆಸರುಗಳಿಂದ ಕರೆಯದೆ ಸರಿಯಾದ ಹೆಸರುಗಳಿಂದ ಕರೆದರೆ ಏನು ಹೋಗುತ್ತೆ ಇವಳಿಗೆ ? ಮನುಷ್ಯರ ಮುಖ ಇರುವ ಹೂಜಿ ಪಾತ್ರೆಯೊಂದು ನಮ್ಮ ಕಾಲದಲ್ಲಿತ್ತು. ಅಕ್ಕನ ಮುಖ ಥೇಟ್ ಅದೇ ನಮೂನೆ. ಕಲ್ಲಂಗಡಿ ಹಣ್ಣಿನ ಬೀಜಗಳಂತೆ ಕಪ್ಪಾದ ಹಲ್ಲು ಸಾಲು. ಒಂದು ಹಿಡಿಯಷ್ಟು ಹೊಗೇಸೊಪ್ಪಿನ ಪುಡಿಯನ್ನ ದವಡೆಯೊಳಗೆ ಇಪ್ಪತ್ತನಾಲ್ಕು ಗಂಟೆಯೂ ಇಟ್ಟುಕೊಂಡು ಗಳಿಗೆ ಗಳಿಗೆಗೂ 'ಥೂಕ್ ಥೂಕ್' ಎಂದು ಉಗಿಯುತ್ತಲೇ ಇರುತ್ತಾಳೆ. ಹುಟ್ಟಿದ್ದು ಬ್ರಾಹ್ಮಣ ಪುರೋಹಿತರ ಮನೆಯಲ್ಲಿ. ನೈವೇದ್ಯದ ಅಕ್ಕಿ ಮತ್ತು ಬಾಳೇಕಾಯಿ - ಇವನ್ನು ತಿಂದೇ ದೊಡ್ಡವಳಾದವಳು. ಪುರೋಹಿತರಿಗೆ ದೊರೆಯುವ ಕೆಂಪಂಚಿನ ಬಿಳೀ ಸೀರೆ ಬಿಟ್ಟರೆ ಬೇರೆ ಯಾವುದೂ ಉಡುತ್ತಿರಲಿಲ್ಲ ಹನ್ನೆರಡು ತುಂಬುವ ವರೆಗೂ. ಅಂಥವಳು ದೊಡ್ಡ ಮನುಷ್ಯರ ಮನೆ ಸೊಸೆಯಾದ ಮೇಲೆ ಅವಳ ಅಂತಸ್ತು ಮೇಲಕ್ಕೇರಿಬಿಟ್ಟಿತು. ಈಗಂತೂ ಕಾಲು ನೆಲದ ಮೇಲೇ ತಾಕೋದಿಲ್ಲ ಅನ್ನುತ್ತೆ. ಸ್ವರ್ಗದಿಂದಲೇ ಇಳಿದು ಬಂದಿರುವ ಹಾಗೆ ನಡೆವಳಿಕೆ... ಯಾಕಾಗಬಾರದು. ನಿಮಗೆ ದೇವರು ಕೊಟ್ಟಿದ್ದಾನೆ. ಅದಕ್ಕೇ ನಿಮ್ಮ ಹತ್ತಿರ ಇದೆ - ಇದ್ದುಕೊಳ್ಳಲಿ ಬಿಡು. ಆದರೆ ಹಾಗಂತ ಯಾರಿಗೆ ಇಲ್ಲವೋ ಅವರು ಮನುಷ್ಯರೇ ಅಲ್ಲವೇನು ? ಅವರನ್ನು ಮನುಷ್ಯರ ಹಾಗೆ ಕಾಣಕೂಡದು ಅಂತ ಇದೆಯೇನು ? ನಾನು ಅಂಥ ತಿರುಪೆಯವರ ಮನೆಯಲ್ಲಿ ಹುಟ್ಟಿದವಳಲ್ಲ.

ತಿರುಪೆಯವರ ಮನೆಗೂ ಸೇರಿಕೊಂಡಂಥವಳಲ್ಲ. ಆದರೆ ನನ್ನ ಹಣೇ ಬರಹವೇ ಬೇರೆ. ಚಿನ್ನದ ಗಡಿಗೆ ಹಿಡಿದರೂ ಅದು ಮಣ್ಣೇ ಆಗಿಬಿಡುತ್ತೆ - ಏನು ಮಾಡೋಣ ? ಅದೆಲ್ಲ ಹೋಗಲಿ... ಅಕ್ಕಾ, ಬಿಲೂ ನಿನ್ನನ್ನು ದೊಡ್ಡಮ್ಮಾ ಅಂತ ಕರೆದರೆ ನಿನಗೇಕೆ ತೃಪ್ತಿ ಇರಬಾರದು ? ಇಲ್ಲ, ಅಕ್ಕಾ... ನಿನ್ನ ಮೇಲೆ ನನಗೆ ಸ್ವಲ್ಪವೂ ಕೋಪ ಇಲ್ಲ. ನಿಜವಾಗಿಯೂ ಹೇಳತೇನೆ. ನೀನಿರುವುದರಿಂದಲೇ ಬಿಲೂ, ನೀಲೂ ಅವರ ಜೀವಮಾನದಲ್ಲಿ ಅವರಿಗಿರುವ ಬಯಕೆ, ಚಪಲಗಳನ್ನ ತೃಪ್ತಿ ಪಡಿಸಿಕೊಳ್ಳುತ್ತಾ ಇದಾರೆ... ಆಗಾಗ ಮನಸ್ಸಿಗೆ ಬಂದಾಗೆಲ್ಲ ನಿನ್ನ ಮನೆಗೆ ಬಂದು ನಿನ್ನ ಆದರ, ಉಪಚಾರ ಅನುಭವಿಸತಾ ಇದಾರೆ. ಬಿಲೂ ಇವತ್ತು ಬದುಕಲಿ, ಅಕ್ಕಾ ನಾನೇನು ಅವನನ್ನು ನಿನ್ನ ಹತ್ತಿರ ಕಳಿಸುವುದಕ್ಕೆ ಲೋಭ ತೋರಿಸುವುದಿಲ್ಲ. ನಮ್ಮ ಇವರು ಜೈಲಿನಲ್ಲಿದ್ದಾಗ ಈ ಹುಡುಗರಿಗೆ ನಿಲ್ಲುವುದಕ್ಕೆ ಜಾಗ ಇರಲಿಲ್ಲ. ಆಗ ನೀನೇ ಅವರಿಗೆ ಜಾಗ ಕೊಟ್ಟೆ. ಬಿಲೂ ಹೋಗಿಬಿಟ್ಟರೆ ನಿನ್ನ ದುಃಖ ನನ್ನದಕ್ಕಿಂತ ಕಡಮೆ ಏನೂ ಇರುವುದಿಲ್ಲ. ಅದು ನನಗೆ ಗೊತ್ತಿಲ್ಲದೆ ಇಲ್ಲ. ಮನಃಪೂರ್ವಕವಾಗಿ ನಾನು ಅವನನ್ನು ನಿನಗೇ ಕೊಡುವುದಕ್ಕಾಗುವ ಹಾಗಿದ್ದರೆ ನೀನು ಆಗ ಅವನನ್ನು ಬದುಕಿಸುತ್ತ ಇದ್ದೆಯಾ ? ಅದಕ್ಕೇ ಹೇಳಿದ, ಅಕ್ಕಾ - ನಮ್ಮ ಬಿಲೂ ಇವತ್ತು ಬದುಕಲಿ... ಆಗ ಅವನನ್ನು ನಿನ್ನ ಹತ್ತಿರ ಕೊಡುವುದಕ್ಕೆ ಸ್ವಲ್ಪವೂ ಕೃಪಣತನ ತೋರಿಸುವುದಿಲ್ಲ ಅಂತ. ಈಗ ನಿನಗೂ ಸಹ, ನನ್ನ ಹಾಗೆಯೇ, ಉಳಿದಿರುವುದೇನು ಅಂದರೆ ಅವನ ವಿಷಯವಾಗಿ ಬರೇ ನೆನಪುಗಳು - ಅಷ್ಟೇ. ಅವನ್ನೇ ಇಟ್ಟುಕೊಂಡು ಸಾಯುವವರೆಗೂ ತೃಪ್ತಿಪಟ್ಟುಕೊಂಡಿರಬೇಕಾಗತ್ತೆ. ಇಲ್ಲ ಅಕ್ಕಾ, ನಿನ್ನ ಕರುಣೆ, ನಿನ್ನ ಕಡೆ ಇರುವ ಆಕರ್ಷಣ - ನಾನೆಂದಿಗೂ ಮರೆಯಲು ಸಾಧ್ಯ ಇಲ್ಲ. - ನನಗೀಗಲೂ ನೆನಪಿದೆ ನಮ್ಮ ಆಶ್ರಮದಲ್ಲಿ ಮೀನು, ಮಾಂಸ ಅಡಿಗೆ ಮಾಡಲಿಕ್ಕೆ ಸಾಧ್ಯ ಇಲ್ಲ - ಆದರೆ ನನ್ನ ಮಕ್ಕಳಿಗೆ ಮೀನು ಎಂದರೆ ಪ್ರಾಣ. ನಾವೋ ಮುದುಕರಾಗಿದ್ದೇವೆ. ಗಾಂಧೀಜಿಯವರ ಮಾತಿನ ಮೇರೆಗೆ ಇಪ್ಪತ್ತು ವರುಷಗಳಿಂದ ಮೀನು, ಮಾಂಸ ತಿನ್ನುವುದನ್ನು ಬಿಟ್ಟುಬಿಟ್ಟಿದ್ದೇವೆ. ಆದರೆ ಮಕ್ಕಳು ಮರಿ ಮೇಲೆ ಸಹ ಅವನ್ನು ಬಿಡು ಅಂತ ಜೋರು ಮಾಡುವುದಕ್ಕಾಗುವುದಿಲ್ಲ. ನೀನು ಹೇಗೋ ನನ್ನ ಆತಂಕ ಕಂಡುಹಿಡಿದುಕೊಂಡು ಹುಡುಗರನ್ನು ನಿನ್ನ ಮನೆಗೆ ಕರೆಸಿಕೊಂಡು ಮೀನನ್ನು ಅಡಿಗೆ ಮಾಡಿ ಬಡಿಸುತ್ತ ಇದ್ದೆ. ಅಷ್ಟೇ ಅಲ್ಲದೆ, ನನ್ನನ್ನೂ ನೀನು ಎಷ್ಟು ಬಲವಂತ ಮಾಡತಾ ಇದ್ದೆ - ನಿನ್ನ ಮನೆಗೆ ಬಂದು ಮೀನು ತಿಂದುಕೊಂಡು ಹೋಗಬೇಕು ಅಂತ. ಅಕ್ಕಾ... ನಿನ್ನ ಹೃದಯ ಎಷ್ಟು ಒಳ್ಳೇದು ಅಂತ ನನಗೆ ಗೊತ್ತಿಲ್ಲದೆ ಇಲ್ಲ. ನಮ್ಮ ವಿಷಯವಾಗಿ ನಿನ್ನ ಜೀವ ಹೇಗೆ ತುಡಿಯುತ್ತೆ ಅಂತ ಗೊತ್ತು. ನಿನ್ನ ಋಣ ನಾನು ಜನ್ಮ ಜನ್ಮಾಂತರಗಳಾದರೂ ತೀರಿಸುವುದಕ್ಕೆ ಸಾಧ್ಯವೆ ? ನಿನ್ನ ವಿಷಯವಾಗಿ ನಿಂದೆ ಮಾಡುವುದನ್ನು ಯೋಚಿಸುವುದೂ ಪಾಪ. ಇವತ್ತು ನನ್ನ ಮನಸ್ಸೇಕೋ ಸರಿಯಾಗಿಲ್ಲ, ಅಕ್ಕಾ... ಇವತ್ತು ಇಡೀ ಪ್ರಪಂಚವೇ ನನ್ನ ಪಾಲಿಗೆ ಕಹಿ ವಿಷವಾಗಿ ತೋರತಾ ಇದೆ. ಇನ್ನು ಮನಸ್ಸಿನಲ್ಲಿ ಒಳ್ಳೇ ಯೋಚನೆ ಹೇಗೆ ಬಂದೀತು ಹೇಳು. ನೀನು ಸಹ ಬಿಲೂಗೆ ಅಮ್ಮನೇ. ಇನ್ನು ನಿನಗೆ ಹೇಗೆ ನನ್ನ ಮನಸ್ಸಿನ ಸ್ಥಿತಿಯನ್ನು ತಿಳಿಯ ಹೇಳಲಿಕ್ಕೆ ಹೋಗಲಿ ? ಬಿಲೂಗ ನಿನ್ನನ್ನು ಕಂಡರೆ ಎಷ್ಟು ಪ್ರಾಣ, ಎಷ್ಟು

ಭಕ್ತಿ. ಬಿಲೂ 'ಅಮ್ಮಾ' ಅಂತ ಕರೆಯುತ್ತ ಇದ್ದವಳ ಮೇಲೆ ನಾನು ಹೇಗೆ ಕೋಪಮಾಡಿಕೊಳ್ಳಬಲ್ಲೆ? ಅವನು 'ಅಮ್ಮ' ಎಂದು ಕರೆಯುವುದರ ಮರ್ಮ ನನಗೆ ತಿಳಿಯುವುದಿಲ್ಲವೆ? ಆ ಕೂಗು ಒಂದು ಕೂಗಲ್ಲ. ಹಾಗಂದ ತತ್‌ಕ್ಷಣ ನಮ್ಮ ಹೃದಯವೆಲ್ಲ ಅವನ ಹಿಂದೆ ಓಡಿ ಹೋಗುತ್ತೆ. ಏನು ಪ್ರಯೋಜನ... ಹೀಗೆ ನಮ್ಮೆಲ್ಲರನ್ನೂ ವಂಚಿಸಿ ಹೊರಟು ಹೋಗತಾ ಇದ್ದಾನೆ.... ಒಂದೊಂದು ಸಲ ಅನ್ನಿಸುತ್ತೆ ಇವರು ಮಕ್ಕಳಲ್ಲ ಶತ್ರುಗಳು. ಒಬ್ಬೊಬ್ಬರೂ ಸಹ. ಈ ಮಕ್ಕಳನ್ನು ಕುರಿತು ಯೋಚನೆ ಮಾಡಿದಷ್ಟೂ ಏನೂ ಪ್ರಯೋಜನವಿಲ್ಲ. ಅದರ ಅರ್ಧದಷ್ಟು ಭಗವಂತನನ್ನು ಕುರಿತು ಯೋಚನೆ ಮಾಡಿದ್ದರೆ ಭಗವಂತನನ್ನೇ ನಾವು ಪಡೆಯ ಬಹುದಾಗಿತ್ತು. ಖಂಡಿತವಾಗಿಯೂ. ಇವರೋ... ಎಷ್ಟು ಗಟ್ಟಿಯಾಗಿ ಹಿಡಿದು ಕೊಂಡರೂ ಬಿಡಿಸಿಕೊಂಡು ಹೊರಟು ಹೋಗುತ್ತಾರೆ... ಮಮಕಾರ ಇದ್ದಷ್ಟೂ ನಮಗೇ ನಷ್ಟ... ಹಾಗಿಲ್ಲದೇ ಹೋಗಿದ್ದರೆ? ಒಂದು ಸಲ ಈ ಹುಡುಗ ಬಿಲೂ ವರಾಂಡದಲ್ಲಿ ಮಣೆ ಹಾಕಿಕೊಂಡು ಕೂತಿದ್ದಾನೆ. ನಾನು ಅವನ ಹಿಂದುಗಡೆ ಯಿಂದಲೇ ಸ್ವಲ್ಪವೂ ಸದ್ದು ಮಾಡದೆ ಕಾಲು ಬೆರಳುಗಳ ಮೇಲೆ ನಡೆದು ಅಲ್ಲಿಂದ ಸರಿದು ಹೋದರೂ ಅವನಿಗೆ ಗೊತ್ತಾಗಿ ಹೋಗತಾಯಿತ್ತು. "ಅಮ್ಮಾ ಅಮ್ಮಾ... ನೀನು ಹೋಗತಾ ಇರುವ ವಾಸನೆಯಿಂದಲೇ ಕಂಡು ಹಿಡಿದುಬಿಡತೇನೆ" ಅಂತಾನೆ. ಕೇಳಿದಿರಾ ಮಾತು? ನಿಜವಾಗಿಯೂ ಕಂಡೇ ಹಿಡಿದು ಬಿಡತಾನೆ. ಅವನು ಬಹಳ ಸಣ್ಣವನಿದ್ದಾಗ ನಾನು ಸ್ನಾನ ಮಾಡಿಕೊಂಡು ಬಂದ ತತ್‌ಕ್ಷಣ ನನ್ನನ್ನ ಬಿಗಿಯಾಗಿ ಅಪ್ಪಿ ಹಿಡಿದುಕೊಂಡು ಬಿಡುತಾಯಿದ್ದ. ಹೇಳುತಾನೆ, "ನೀನು ಸ್ನಾನ ಮಾಡಿಕೊಂಡು ಬಂದರೆ ಅಮ್ಮನ ಸುಗಂಧ ಮೂಗಿಗೆ ಬರತ್ತೆ." ನಾನು ಗದರಿಸಿ, "ಬಿಡೋ ಬಿಡೋ ದುಷ್ಟ ಹುಡುಗ. ಹಾಳು ಮೈಲಿಗೆ ಬಟ್ಟೆಗಳನ್ನ ಹಾಕಿಕೊಂಡು ಮುಟ್ಟಬೇಡೋ. ದೇವರ ಮನೆಯಲ್ಲಿ ಎಷ್ಟೊಂದು ಕೆಲಸ ಬಿದ್ದಿದೆ!" ಅಂತ. ಅಂದರೆ ಕೇಳುವ ಮಗನೇ ಅವನು? "ಏನಮ್ಮಾ... ರೇಶಿಮೆ ಬಟ್ಟೆ ಮುಟ್ಟಿದರ ಮೈಲಿಗೆ ಹೇಗಮ್ಮಾ ಆಗತ್ತೆ?" ಅಂತ ಜವಾಬು ಕೊಡುತಾನೆ. ಈ ನೀಲು ಈಗ ಎಷ್ಟು ದೊಡ್ಡ ಘಟಿಂಗನಾಗಿ ಬಿಟ್ಟಿದ್ದಾನೆ – ಎಷ್ಟು ದಿನಗಳ ಹಿಂದಿನದೋ, ಯಾವು ಯಾವುದೋ ಸಂಗತಿಗಳನ್ನು ಜಮಾಯಿಸಿಟ್ಟುಕೊಂಡು ನನ್ನನ್ನು ಆಗಾಗ ದೂರುತಾ ಇರುತ್ತಾನೆ. ಅವನ ದೂರು ಏನು ಅಂದರೆ ನನಗೆ ಅವನ ಮೇಲೆ ಇರುವುದಕ್ಕಿಂತ ಬಿಲೂ ಮೇಲೆ ಹೆಚ್ಚು ಪ್ರೀತಿ ಅಂತ. ಏನು ಹುಚ್ಚು ಮಾತು? ಎಲ್ಲಾದರೂ ಸಾಧ್ಯವೆ? ಯಾವ ತಾಯಿ ಆದರೂ ಒಬ್ಬ ಮಗನ ಮೇಲೆ ಹೆಚ್ಚು, ಇನ್ನೊಬ್ಬನ ಮೇಲೆ ಕಮ್ಮಿ ಪ್ರೀತಿ ಇಟ್ಟಿರುತಾಳೆಯೆ? ದೇವರ ನಿಯಮವೇ ಹಾಗಿಲ್ಲವಲ್ಲ! ಮತ್ತೆ ನನ್ನನ್ನು ಪೀಡಿಸುವುದಕ್ಕೆ ಹೇಳುತಾನೆ - "ಹೋಗಲಿ ಒಂದು ಪಕ್ಷ ಈ ಊರಿಗೆ ಒಬ್ಬ ಬಕಾಸುರ ಬಂದ ಅಂತ ಇಟ್ಟುಕೋ. ತಲಾ ಮನೆಗೊಬ್ಬ ಮಗನ ಹಾಗೆ ಅವನಿಗೆ ಬಲಿಯಾಗಿ ಕಳಿಸಬೇಕು ಅಂತ ಊರವರೆಲ್ಲರನ್ನೂ ಒಪ್ಪಿಸಿದ ಅಂತ ಇಟ್ಟುಕೋ. ನಿನ್ನ ಸರದಿ ಬಂದಾಗ ನನ್ನನ್ನು ಕಳಿಸುತೀಯೋ, ಬಿಲೂನ ಕಳಿಸುತೀಯೋ ಹೇಳು ನೋಡೋಣ" ಅಂತ ಪರೀಕ್ಷೆ ಮಾಡಲಿಕ್ಕೆ ಹೋಗತಾನೆ. ಅವನಿಗೇನು ಅಂತ ಉತ್ತರ ಹೇಳುವುದು? "ಹೋಗು ಹೋಗು, ಹರಟ ಬೇಡ... ಮನಸ್ಸಿಗೆ ಬಂದ ಹಾಗೆ..."

ಇಂಥವೇ ನಿನ್ನ ಕೆಟ್ಟ ತಲೇಲಿ ಹೋಗೋದು! ಯಾರನ್ನು ಕಳಿಸಲಂತೆ! ಯಾರನ್ನೂ ಕಳಿಸೋದಿಲ್ಲ... ತೃಪ್ತಿಯಾಯಿತೇ. ನಡಿ ಇನ್ನು ಅಂದಾಗ. "ಹಾ ಹಾ–ಗೊತ್ತಾಯಿತು ಗೊತ್ತಾಯಿತು" ಅಂದು ಚಪ್ಪಾಳೆ ತಟ್ಟಿಕೊಂಡು ನಗತಾ ಕೇಕೆ ಹಾಕಿಕೊಂಡು ಓಡಿ ಹೋಗತಾನೆ. ಗೊತ್ತಾಯಿತಂತೆ! ಏನು ಗೊತ್ತಾಗಿದ್ದು ಇವನ ತಲೆ! ಇವರಿಗೆಲ್ಲ ತಾಯಿಯ ಮನಸ್ಸು ಹೇಗೆ ಅಂತ ಗೊತ್ತಾಗಿದ್ದರೆ ಇನ್ನು ನನಗೆ ದುಃಖವೇಕೆ? ಒಂದು ದಿನ ಈ ನೀಲೂ ನನಗೆ ಹೇಳಲಿಕ್ಕೆ ಬಂದ – ತಾಯಿಯ ಪ್ರೀತಿ ಅನ್ನುವುದು ಬರೇ ಸ್ವಾರ್ಥದಿಂದ ಅಂತೆ. ಅದನ್ನು ಸ್ಪಷ್ಟ ಮಾಡಲಿಕ್ಕೆ ಒಂದು ಕತೆ ಹೇಳಿದ – ಒಂದು ಬೆಕ್ಕಂತೆ. ಅದನ್ನು ಅದರ ಮರಿ ಒಂದನ್ನು ದೊಡ್ಡ ಹಂಡೆ ಮೇಲುಗಡೆ ಕೂಡಿಸಿ ಬಿಟ್ಟರಂತೆ. ಹಂಡೆಯ ತಳಗಡೆ ಉರಿ ಹಾಕಿದರಂತೆ. ಹಂಡೆ ಬಿಸಿ ಆಗತಾ ಆಗತಾ ಬೆಕ್ಕಿಗೆ ಮೈ ಸುಡುವ ಹಾಗಾಗಿ ಅದರ ಮರಿ ಮೇಲೆ ನಿಂತುಕೊಂಡು ಬಿಟ್ಟಿತಂತೆ.... ಅದು ಓಡಿ ಹೋಗಲಿಕ್ಕೆ ದಾರಿ ಇರಲಿಲ್ಲಂತೆ!... ಎಲ್ಲ ತಾಯಿಯರೂ ಹೀಗೇ ಅಂತೆ - ತನಗೆ ಉರಿತಗಲದೆ ಇರುವವರೆಗೂ ತಾಯಿ 'ನನ್ನ ಮಗು ನನ್ನ ಮಗು!' ಅಂತ ಪ್ರಾಣ ಬಿಡುತ್ತಂತೆ. ಈಗಿನ ಕಾಲದ ಹುಡುಗರಿಗೆ ಇಂಥ ಕತೆಗಳು ಎಲ್ಲಿಂದ ಬರುತ್ತೊ ನಾ ಕಾಣೆ. ಇವರು ಓದುವ ಪುಸ್ತಕಗಳಲ್ಲಿ ಇರುತ್ತವೇ ಇಂಥವೆಲ್ಲ? ಬಿಲೂ ಅಂತೂ ಒಂದು ದಿನವೂ ಇಂಥ ಮಾತು ಆಡುವವನಲ್ಲ. ನೀಲೂ ಈ ಮಾತು ಹೇಳಿದ ಮೇಲೆ ಅವನ ಸಂಗಡ ಈ ವಿಷಯದ ಮೇಲೆ ವಾದ ಮಾಡುವುದಕ್ಕೇ ಹೇಸಿಗೆ ಆಗತ್ತೆ. ಆದರೆ ಅವನು ಹೇಳಿದ ಮಾತು ನನ್ನ ಎದೆಯೊಳಗೆ. ಇನ್ನೊಂದು ದಿನ ಇನ್ನೂ ಇಂಥದೇ ಒಂದು ಸಂಗತಿ ಹೇಳಿದ. ಅದೂ ಹೀಗೆ ತಾಯಿಯ ಸ್ವಾರ್ಥದ ವಿಷಯ. ಅದನ್ನೂ ಮರೆಯುವುದಕ್ಕಾಗುವುದಿಲ್ಲ ನಾನು. ಬಿಹಾರಿನಲ್ಲಿ ದೊಡ್ಡ ಭೂಕಂಪವಾಯಿತಲ್ಲ! ಅದಾದ ಮೇಲೆ ಆಗಾಗ ಸಣ್ಣಪುಟ್ಟ ಭೂಕಂಪಗಳು ಆಗುತಾನೇ ಇದ್ದುವು. ಒಂದು ದಿನ ಇದ್ದಕ್ಕಿದ್ದ ಹಾಗೆ ಭೂಮಿ ನಡುಗಲಿಕ್ಕೆ ಶುರು ಆಗಿದೆ. ಜಿತೇನನ ಹೆಂಡತಿ ನಿದ್ದೆಯ ಮಂಪರಿನಲ್ಲಿ ಇನ್ನೂ ಎಳೆಯದಾದ ತನ್ನ ಕೂಸನ್ನ ಮನೆಯಲ್ಲೇ ಬಿಟ್ಟು ಹೊರಗಡೆ ಓಡಿ ಬಂದಳಂತೆ! ಆಮೇಲೆ ಎಲ್ಲಿ ಹೋಗತಾಳೆ. ಆ ಸಂಗತಿ ಆದ ಮೇಲೆ ಮನೆಯವರೆಲ್ಲ - ದೊಡ್ಡವರೂ, ಸಣ್ಣವರೂ ಅವಳನ್ನು ತಿವಿದೂ ತಿವಿದೂ ಆಡಿಕೊಳ್ಳಲಿಕ್ಕೆ ಶುರು ಮಾಡಿದರಂತೆ. ಪಾಪ! ಸರಿ, ಈ ನೀಲೂಗೆ ಸಮಯಕ್ಕೆ ಬರುವ ಹಾಗೆ ಇನ್ನೊಂದು ಕತೆ ಸಿಕ್ಕಿತಲ್ಲ! ನನಗೆ ಹೇಳಿ ಮೈ ಉರಿಸಲಿಕ್ಕೆ! ಹೌದು ಕಣೋ. ಮಹಾರಾಯಾ... ನೀನು ಹೇಳಿದ್ದೇ ಸರಿಯೋ... ಅಮ್ಮನ ಪ್ರೀತಿಯಾವಾಗಲೂ ಸ್ವಾರ್ಥದಿಂದ ಕೂಡಿದ್ದೇ.... ಯಾವಾಗಲೂ ಸದಾ ಕಾಲವೂ! ಆಯಿತಾ.... ತೃಪ್ತಿಯಾಯಿತಾ? ಹುಡುಗರ ಪ್ರೀತಿ ಅಂತೂ ಪೂರ್ತಿಯಾಗಿ ನಿಸ್ವಾರ್ಥ... ಸ್ವಲ್ಪವೂ ಬೂಟಾಟಿಕೆ ಇಲ್ಲ, ಕೇಳಿ ಸಂತೋಷ ಆಯಿತಾ? ಈ ನೀಲೂ ಚಿಕ್ಕಂದಿನಿಂದಲೂ ಹೀಗೇ... ಎಷ್ಟು ಸಲ ಮೈಯುರಿಸಿದ್ದಾನೋ ನನಗೆ. ಬಿಲೂ, ನೀಲೂ... ಇಬ್ಬರೂ ನನ್ನ ಹೊಟ್ಟೆಯ ಮಕ್ಕಳೇ... ಇಬ್ಬರೂ ನನ್ನ ಕೈಯಲ್ಲೇ ಬೆಳೆದು ದೊಡ್ಡವರಾದರೂ, ಈ ನೀಲೂ ಯಾಕೆ ಇಷ್ಟು ದುಷ್ಟತನ ಕಲಿತನೋ... ಹೇಗೆ ಬಂತೋ ಅವನಿಗೆ ಇದೆಲ್ಲ.... ಅದೇ ಯೋಚನೆ ನನಗೆ. ಎಷ್ಟೋ ಸಲ ನನಗೆ ಅಳು ಬರುವವರೆಗೂ ಬಿಟ್ಟಿಲ್ಲ.

ಒಂದು ದಿನ ಮಧ್ಯಾಹ್ನ ಊಟ ಮಾಡಿ ಹಾಗೆ ತೂಕಡಿಸುತ್ತ ಕೂತಿದ್ದೆ, ಆಗ ಅವನು ಬಂದಿದ್ದೇ ಗುಗ್ಗುಲದ ಗಿಡದ ಚೆನ್ನಾಗಿ ಬಲಿತ ಕಾಯಿಗಳನ್ನ ತಂದಿದ್ದೇ ನನ್ನ ಮುಖದಮೇಲೆ ಅದರ ಬೀಜಗಳನ್ನು ಒಡೆಯಲಿಕ್ಕೆ ಶುರುಮಾಡಿದ. ಅಬ್ಬ ತತ್‌ಕ್ಷಣ ಬೆಚ್ಚಿ ಬಿದ್ದು ಎದ್ದೆ. ಮೂಗಿನಲ್ಲಿ ಕಿವಿಯಲ್ಲಿ ಅದರ ಸಣ್ಣ ಸಣ್ಣ ಬೀಜಗಳು ಹೋಗಿ ಪ್ರಾಣ ಹೋಗುವ ಹಾಗೆ ಆಯಿತು. ಎಷ್ಟು ಬೈದರೂ ಮೈಗೆ ಅಂಟುತ್ತೆಯೇ ಆ ಪುಂಡನಿಗೆ... 'ಹ್ಹಿ ಹ್ಹಿ ಹ್ಹಿ' ಅಂತ ಹಲ್ಲು ಕಿರಿದುಕೊಂಡು ಕೇಕೆ ಹಾಕತಾ ಓಡಿಹೋದ. ಇದು ಸರಿ, ಇದು ತಪ್ಪು ಅಂತ ಏನಾದರೂ ಜ್ಞಾನ ಇದೆಯೇ ಅವನಿಗೆ ? ತನ್ನ ಖುಷಿಯೇ ಖುಷಿ ! ಒಂದು ದಿನ ಏನು ಮಾಡಿದಾನೆ ಗೊತ್ತೇ... ಮೊನ್ನೆ ಮೊನ್ನೆ... ದೊಡ್ಡವನಾದ ಮೇಲೇ... ನೂರಾರು ತಿಗಣೆಗಳನ್ನು ಕೊಂದುಬಿಟ್ಟು ಅವುಗಳ ರಕ್ತದಿಂದ ದೊಡ್ಡದಾಗಿ "ಅಹಿಂಸಾ ಪರಮೋ ಧರ್ಮಃ" ಎಂದು ಬರೆದಿದ್ದಾನೆ ಬೋರ್ಡಿನಲ್ಲಿ ಬರೆಯುವ ಹಾಗೆ ! ಇದು ಯಾರ ಮನಸ್ಸನ್ನ ಚುಚ್ಚಲಿಕ್ಕೆ ಮಾಡಿದ್ದಾನೆ ಅನ್ನೋದು ಗೊತ್ತು ನನಗೆ... ಇದು ಅವರ ಕಿವಿಗೆ ಎಲ್ಲಾದರೂ ಬಿದ್ದೀತು ಅನ್ನುವ ಹೆದರಿಕೆಯಿಂದ ನಾನು ಅದನ್ನ ನೋಡಲೇ ಇಲ್ಲ ಅನ್ನುವ ಹಾಗೆ ಸುಮ್ಮನೆ ಇದ್ದುಬಿಟ್ಟೆ. ಲೋ ನೀಲೂ... ಒಂದಲ್ಲ ಒಂದು ದಿನ, ನಿನಗೆ ಅಪ್ಪ, ಅಮ್ಮ ಇಬ್ಬರೂ ಹೋಗಿ ಬಿಟ್ಟಾಗ ಗೊತ್ತಾಗೇ ಆಗತ್ತೆ. ಅಪ್ಪ, ಅಮ್ಮನ ಬೆಲೆ ಏನು ಅಂತ ! ಹಲ್ಲು ಇರುವವರೆಗೂ ಅದರ ಬೆಲೆ ನಮಗೆ ಹೇಗೆ ಗೊತ್ತಾಗುತ್ತೆ ! ಅವರ ಅಪ್ಪನ ಮನಸ್ಸಿಗೆ ನೋವಾಗುವ ಹಾಗೆ ಇನ್ನೊಂದು ಕೆಲಸ ಏನು ಮಾಡಿದ ಅಂದರೆ. ನಮ್ಮ ಆಶ್ರಮದ ಮೇರೆ ಎಲ್ಲಿ ಕೊನೆ ಆಗುತ್ತೆ ಅನ್ನುವುದನ್ನು ಟೇಪು ಹಾಕಿ ಅಳೆದು ಸರಿಯಾಗಿ ಅದಕ್ಕೆ ಸ್ವಲ್ಪ ಆಚೆಬದಿಯಲ್ಲಿ ಮಾಂಸದ ಅಡಿಗೆ ಮಾಡಿಕೊಂಡು ತಿನ್ನುವುದೇ ? ಕೇಳಿದರೆ ಹೇಳುತಾನೆ, "ಆಶ್ರಮದ ಒಳಗಡೆ ಆಡು ತಿನ್ನುವುದು ನಿಷೇಧ. ಆದರೆ ಇಲ್ಲಿ ಯಾರ ನಿಷೇಧ ?" ಲೋ, ನೀಲೂ, ಮಹಾತ್ಮಾಜಿ ಆಡಿನ ಹಾಲು ಕುಡಿಯುತ್ತಾರೆ ಅಂತ ಅಲ್ಲವೋ - ಆಡೊಂದೇ ಅಲ್ಲ - ಮಾಂಸಾಹಾರವೇ ನಿಷೇಧ - ನಿನಗೆ ಅದು ಗೊತ್ತಿಲ್ಲದೆ ಇಲ್ಲ - ನೀನು ಬೇಕಂತಲೇ ಆಡಿನ ಸುದ್ದಿ ಎತ್ತುವುದೆ ? ನೀನು ನಿಮ್ಮ ಅಪ್ಪನನ್ನು ನೋಯಿಸುವುದಕ್ಕೆಂತಲೇ ಹೀಗೆ ಮಾತಾಡತೀಯೆ ! ನಿನಗೆ ಮಾಂಸ ತಿನ್ನಲಿಕ್ಕೆ ಇಷ್ಟ ಗೊತ್ತು. ನಿನಗೆ ನಾನು ಅಡಿಗೆ ಮಾಡಿ ಹಾಕಲಿಕ್ಕಾಗುವುದಿಲ್ಲವಲ್ಲ ಅಂತ ಎಷ್ಟು ಪೇಚಾಡತೇನೋ, ಗೊತ್ತೆ ? ಆದರೆ ಆಶ್ರಮದ ನಿಯಮ ಹೇಗೆ ಮುರಿಯುವುದು ? ಅದಕ್ಕೇ ಅಲ್ಲವೇ ? ನೀವಿಬ್ಬರೂ, ಬಿಲೂ, ನೀನೂ - ಅಕ್ಕನ ಮನೆಗೆ ಹೋಗಿ ಕೂತು ಮಾಂಸ ಮೀನು ತಿನ್ನುವುದು ನಾನು ನೋಡಿಲ್ಲವೆ, ಎಷ್ಟೋ ಸಲ ? ನೀಲೂಗೆ ಮೀನು ಅಂದರೆ ಅದೆಷ್ಟು ಆಸೆಯೋ... "ರೇವೊಯಾ" ಮೀನಿನ ಅಡಿಗೆ ಮಾಡಿದರಂತೂ, ಅದರ ಮುಳ್ಳುಗಳನ್ನೂ ಅಗಿದು ರಸ ಹೀರಿಕೊಂಡು ತಿಂತಾನೆ. ಬಿಲೂ ವಿಷಯ ಬೇರೆ - ಅವನು ಎಷ್ಟೋ ಸಲ ಮೀನು ತಿನ್ನುವುದು ಬಿಟ್ಟೇ ಬಿಡತೇನೆ ಅಂತ ಹೇಳಿದ ಮೇಲೆ ಅವನು ಬಿಡಲಿಲ್ಲ. ಮೊದಲೇ ಅವನ ಚಹರೆ ಹೀಗಿದೆ... ಇನ್ನು ಮೀನು ತಿನ್ನುವುದೂ ಬಿಟ್ಟು ಬಿಟ್ಟರೆ ? ಅಕ್ಕನ ಮನೆಯಲ್ಲಾದರೂ ವಾರಕ್ಕೆ ಎರಡು ಮೂರು ದಿನ ಒಂದೋ ಅರ್ಧವೂ ಮೀನು ತಿನ್ನಬಹುದು. ಚಿಕ್ಕ ವಯಸ್ಸಿನಲ್ಲಿ ನಾವು ನಮ್ಮ ದೇಶದಲ್ಲಿದ್ದಾಗ ಮೀನಿಲ್ಲದೆ ಒಂದು

ಹೊತ್ತು ಸಹ ಅನ್ನ ಹೇಗೆ ತಿನ್ನಲಿಕ್ಕೆ ಸಾಧ್ಯ ಅಂತ ಅಂದುಕೊಳ್ಳುತಾಯಿದ್ದಿವಿ. ನಮ್ಮ ಮಕ್ಕಳನ್ನಂತೂ ನಾವೇ ಈಗಿನ ಅವಸ್ಥೆಗೆ ತಂದುಬಿಟ್ಟಿದ್ದೇವೆ. ನಮ್ಮ ಮಕ್ಕಳು ಬಂಗಾಳದಲ್ಲಿ ಇರಲೂ ಇಲ್ಲ. ಅಲ್ಲಿನ ಊಟ, ತಿಂಡಿ, ಅಲ್ಲಿನ ನಡೆ, ನುಡಿ ಆಚಾರ, ವ್ಯವಹಾರ... ಯಾವುದೂ ಗೊತ್ತಿಲ್ಲ ಅವರಿಗೆ. ಇವರಿಗೆ ಈಜುವುದೇ ಬರುವುದಿಲ್ಲ. ಬನ್ಯಾ, ಹಿಜಲ್, ಗಾಬ್ ಮರಗಳ ಹೆಸರುಗಳು ಸಹ ಕೇಳಿಲ್ಲ. ಒಂದು ಸಲ ಹುಡುಗರಿಗೆ ನಾನು ನಮ್ಮ ವಂಗದೇಶದ "ಥಪ್ ಕೀರ್ತನೆ" (ಜನಪದ ಕೀರ್ತನೆ) ಯನ್ನು ವರ್ಣಿಸುತಾ ಇದ್ದೆ. ನೀಲೂ "ಥಪ್" ಎಂಬ ಹೆಸರನ್ನು ಕೇಳಿದೊಡನೆ ನಗತೊಡಗಿದ. ಇಂಥ ಕರ್ಕಶವಾದ ಹೆಸರನ್ನು ಎಲ್ಲೂ ಕೇಳಿಲ್ಲ ಅಂದ. ಒಮ್ಮೆ ಬಿಲೂನ ಕರೆದು ಅಡಿಗೆ ಮನೆಯಿಂದ " 'ತಿಜೇಲ' (ಅನ್ನದ ತಪ್ಪಲೆ)ನ್ನು ತಗೊಂಡು ಬಾರೋ" ಅಂದೆ – ಅವನಿಗೆ ಈ ಬಂಗಾಳಿ ಪದ ಅರ್ಥ ಆಗಿಲ್ಲ. ನಮ್ಮ ದೇಶದಲ್ಲಿ ಎಳೇ ಹುಡುಗರಿಗೂ ಇದು ಚೆನ್ನಾಗಿ ಗೊತ್ತು. ನಮ್ಮ ದೇಶದ ಪೂಜೆ, ವ್ರತಗಳು ಹಬ್ಬಗಳೂ ಈ ಹುಡುಗರಿಗೆ ಅರಿಯದ ವಿಷಯ, ಆದರೆ ಬಿಲೂಗೆ ಇವನ್ನೆಲ್ಲ ಕೇಳಿ ಕೇಳಿ ತಿಳಿದುಕೊಳ್ಳುವ ಆಸೆಯಿದೆ.

'ಅಮ್ಮಾ ದೋಲ್ (ಹೋಳಿಹಬ್ಬ) ಅಂದರೆ ಯಾವ ಪೂಜೆಯ ಹೆಸರು' ಎಂದು ಕೇಳಿದ. – 'ಚಡಕ್ (ಉಯ್ಯಾಲೆ ಉತ್ಸವ) ಹಬ್ಬದ ದಿನ ನೀವೆಲ್ಲ ಚಿಕ್ಕ ವಯಸ್ಸಲ್ಲಿ ಏನು ಮಾಡುತಾಯಿದ್ದಿರಿ? ಗಾಜನ್ ಗಾನ (ಶಿವರಾತ್ರಿಯಲ್ಲಿ ಹಾಡುವ ಶಿವಕೀರ್ತನೆ)ದ ರಾಗ ಹೇಗಿರತ್ತೆ? ನಿಮ್ಮ ಊರಿನಲ್ಲಿ ಬೈರಾಗಿಗಳು ಇದ್ದರಾ?' ಇಂಥವೇ ಎಷ್ಟು ವಿಷಯುಗಳನ್ನ ಕುರಿತು ತಿಳಿದುಕೊಳ್ಳಬೇಕೆಂಬ ಆಸೆ ಅವನಿಗೆ. ಒಂದು ಸಲ ಯಾವಾಗಲೋ ಚೆನ್ನಾಗಿ ನೆನಪೂ ಇಲ್ಲ, ಬಿಲೂ ಸಣ್ಣವನಾಗಿದ್ದಾಗ ನಮ್ಮ ಊರಿನಲ್ಲಿದ್ದ ನಿಖಿಲ ಚೌಧುರಿ ತಾಂತ್ರಿಕ ವಿದ್ಯೆ ಕಲಿಯಲಿಕ್ಕೆ ಅಂತ ಸ್ಮಶಾನಕ್ಕೆ ಹೋಗಿ ಅಲ್ಲೇ ಸತ್ತು ಹೋದ ಕತೆ ಹೇಳಿದೆ. ಅದನ್ನು ಮೊನ್ನೆ ಮೊನ್ನೆ ಜ್ಞಾಪಿಸಿಕೊಂಡು ಕೇಳಿದ. "ಯಾಕೋ ಇವೆಲ್ಲ ನಿನಗೆ– ಅದೂ ಈಗ?" ಅಂತ ಕೇಳಿದರೆ. "ಅಮ್ಮಾ ನಿನ್ನ ಎಳೆ ವಯಸ್ಸಿನ ಅನುಭವಗಳನ್ನೆಲ್ಲ ಚೆನ್ನಾಗಿ ತಿಳಿದುಕೋಬೇಕು ಅಂತ ಆಸೆ" ಅಂದ. ನನ್ನ ಎಳೆತನದ ಕತೆಗಳು ಇಷ್ಟವಂತೆ ಇವನಿಗೆ! ಆಹಾ! ಇನ್ನು ಯಾವ ಹುಡುಗ ಇಷ್ಟು ಹಿತವಾಗಿ ಮಾತಾಡಬಲ್ಲ? ಕೇಳಿದರೆ ಮನಸ್ಸು ಎಷ್ಟು ಹಿಗ್ಗಿ ಹೋಗಬೇಕು? ಆದರೆ ಈ ನೀಲೂಗೆ ಇಂಥವುಗಳ ಗೋಜೇ ಬೇಡ. ಅವನಿಗೆ ಇಂಥವುಗಳನ್ನೆಲ್ಲ ಕೇಳುವುದಕ್ಕೆ ಸಮಯ ಎಲ್ಲಿ, ತಾಳ್ಮೆ ಎಲ್ಲಿ? ಹಗಲು ರಾತ್ರಿ ಸುಮ್ಮನೆ ಅಲೆದಾಡುತ್ತಿರುತ್ತಾನೆ. ಒಮ್ಮೊಮ್ಮೆ ಏದುತ್ತ ನುಗ್ಗುತಾನೆ ಮನೆಯೊಳಗೆ. ಮೈಮೇಲಿದ್ದ ಜುಬ್ಬಾ ಕಿತ್ತು ಒಗೆಯುತ್ತಾನೆ ಒಂದು ಕಡೆಗೆ. 'ಅಮ್ಮಾ ನನ್ನ ಬನೀನಿಗೆ ಸಾಬೂನು ಹಾಕಿ ಒಗೆದು ಬಿಡಮ್ಮಾ' ಅಂತ ಹುಕುಂ. ತಲೆಗೊಂದಿಷ್ಟು ಚಮಚಾ ಎಣ್ಣೆ ಸವರಿಕೊಂಡು, ಅವಸರವಸರವಾಗಿ ಒಂದೆರಡು ಚೆಂಬು ನೀರು ಸುರಿಕೊಂಡದ್ದೇ... ಇನ್ನೂ ಸರಿಯಾಗಿ ತಲೆ, ಮೈ ಒರೆಸಿಕೊಳ್ಳದೇನೆ ನುಗ್ಗಿದ ಅಡಿಗೆ ಮನೆಗೆ - "ಇನ್ನೂ ಅನ್ನ ಆಗಿಲ್ಲವಾ?" ಅಡಿಗೆ ಯಾವಾಗಲೋ ಆಗಿ, ನಾನೂ ಬಿಲೂ ಇವನ ದಾರಿಯೇ ಕಾಯುತಾ ಇರುತ್ತೇವೆ.... ಅದರ ಯೋಚನೆಯೇ ಇಲ್ಲ ಹುಡುಗನಿಗೆ. ಬಿಲೂ ತನ್ನ ಬಟ್ಟೆಗೆ ತಾನೇ ಸಾಬೂನು

ಹಾಕಿ ಒಗೆಯುವುದೇ ಅಲ್ಲದೆ ಎಷ್ಟೋ ಸಲ ತಮ್ಮನ ಬಟ್ಟೆಗಳನ್ನೂ ಒಗೆಯುತ್ತಾನೆ. ನಾನೊಬ್ಬಳು! ಯಾರಿಗೆ ಯಾರನ್ನು ಹೋಲಿಸುತ್ತಿದ್ದೇನೆ?

"ಈಗ ಹೇಗಿದ್ದೀರಿ?" -ಬೆರಳಿಂದ ನನ್ನನ್ನ ತಿವಿಯುತ್ತ ಕೇಳಿದಳು ನಯನಾದೇವಿ.

ಈ ಜನ ಏನು... ನನಗೆ ಉಸಿರಾಡುವುದಕ್ಕೂ ವಿರಾಮ ಕೊಡುವುದಿಲ್ಲ ಅಂತ ಕಾಣುತ್ತೆ. ಒಂದೆರಡು ನಿಮಿಷವಾದರೂ ಏಕಾಂಗಿಯಾಗಿ ಯಾರ ಗೋಜೂ ಇಲ್ಲದೆ ನಮ್ಮ ಬಿಲೂ ವಿಷಯವಾಗಿ ಯೋಚನೆ ಮಾಡತಾ ಮನಸ್ಸಲ್ಲಾದರೂ ಅವನನ್ನು ನನ್ನ ಹತ್ತಿರ ಕರೆದುಕೊಳ್ಳೋಣ ಅಂತ ಇದ್ದರೆ, ಅದಕ್ಕೂ ದಾರಿಯಿಲ್ಲವಲ್ಲ! - ಇವರೆಲ್ಲ ನನ್ನ ಹಿತೈಷಿಗಳಂತೆ! -ಈ ಹೆಂಗಸಂತೂ ಬಂದಳಲ್ಲ ಈಗಲೇ ಬಡಬಡ ಅಂತ ಏಳೆಂಟು ಪ್ರಶ್ನೆಗಳನ್ನು ಒಂದೊಂದಾಗಿ ಕೇಳಲಿಕ್ಕೆ ಶುರು ಮಾಡತಾಳೆ. ಗ್ರಾಮಾಫೋನಿನ ರಿಕಾರ್ಡಿನ ಹಾಗೆ. ಒಂದು ಪ್ರಶ್ನೆಗೆ ಜವಾಬು ಕೊಟ್ಟ ತತ್‌ಕ್ಷಣ ಇನ್ನೊಂದು ಪ್ರಶ್ನೆಗೆ ಉತ್ತರ ಕೊಡುವುದಕ್ಕೆ ತಯಾರಾಗಿರಬೇಕು. ಆ ಸಮಯದಲ್ಲಿ ಮನೆಗೆ ಬೆಂಕಿ ಹತ್ತಿದರೂ ಸರಿ. ನಯನಾದೇವಿ ತಾನು ತಯಾರು ಮಾಡಿಕೊಂಡು ಬಂದಿದ್ದ ಪ್ರಶ್ನೆಗಳ ಸುರಿಮಳೆ ಸುರಿಸುವುದನ್ನು ಬಿಡುವ ಹಾಗಿಲ್ಲ. ಆಹಾ, ಇವಳ ಕನಿಕರಕ್ಕೋಸರ ಸಾಯಬೇಕು. ನಾನು ತಟಕ್ಕಂತ ಜವಾಬು ಕೊಟ್ಟೇಬಿಟ್ಟೆ. "ಹೌದಮ್ಮಾ ಹೌದು... ಚೆನ್ನಾಗಿರದೇನು... ಭೇಷಾಗಿದ್ದೇನೆ. ಕಲ್ಲುಗುಂಡು ಹಾಗಿದ್ದೇನೆ. ಜ್ವರ ಇಲ್ಲ. ತಲೆಸುಡುತಾ ಇಲ್ಲ... ವಾಂತಿ ಇಲ್ಲ ಗೀಂತಿ ಇಲ್ಲ... ಹೊಟ್ಟೆ ತೊಳಸತಾಯಿಲ್ಲ, ಬಾಯಿ ಕಹಿ ಇಲ್ಲ, ಇನ್ನೇನು ಆಗಿಲ್ಲ ನನಗೆ... ನನ್ನೆಬ್ಬಿಸಿ ಕಂಬಳಿ, ಹಾಸಿಗೆ ತೊಳೆಯಬೇಕಾಗಿಲ್ಲ, ಸಾಕಾಯಿತಾ ತೃಪ್ತಿಯಾಯಿತಾ?" – ಅಂದೇಬಿಟ್ಟೆ ಏನಾದರೂ ತಿಳಿದುಕೊಳ್ಳಲಿ... ಪೀಡೆ! ಅಲ್ಲೇ ಬಿಡಲಿಲ್ಲ. "ಈಗಲಾದರೂ ನನ್ನ ಚಿಂತೆ ಬಿಟ್ಟು ಬಿಟ್ಟು ನಿಮ್ಮ ಹಾಸಿಗೆಗೆ ಹೋಗಿ ಬೆಚ್ಚಗೆ ಹೊದ್ದುಕೊಂಡು ಮಲಗಿ... ಹಾಯಾಗಿ ನಿದ್ದೆ ಮಾಡಿ" ಹಾಗಂದದ್ದೇ, ನಯನಾದೇವಿ ಕಣ್ಣು ಕಣ್ಣು ಬಿಡುತ್ತಾ ಮೂಕಳಾಗಿ ನಿಂತುಕೊಂಡುಬಿಟ್ಟಳು. ಬಹುಶಃ, ನನ್ನ ತಲೆ ಕೆಟ್ಟಿರಬೇಕೇನೋ ಅಂತ ಅಂದುಕೊಂಡಳೇನೋ. ಒಂದು ಮಾತೂ ಆಡದೆ ತನ್ನ ಹಾಸಿಗೆ ಕಡೆ ದಡಬಡ ಅಂತ ಹೊರಟು ಹೋದಳು... ಅವಳು ಬೇರೆಯವರ ಮುಂದೆಯೇ ಹಾಗೆ ಸೋಲುವವಳಲ್ಲ. ಯಾರ ಬಾಯಿ ದಬಾವಣೆಗೂ ಹೆದರಿ ಓಡುವ ಹೆಂಗಸಲ್ಲ. ಅವಳು ನಾನಂದ ಮಾತಿಗೆ, ಇವತ್ತಲ್ಲ, ಇನ್ನೊಂದು ದಿನವಾದರೂ, ಗಲಾಟೆ ಮಾಡೇ ಮಾಡುತಾಳೆ. ...ಈಗ್ಗೆ ಕೆಲವೇ ದಿನಗಳ ಹಿಂದೆ ಇವಳ ತಾಯಿ, ಮಗಳ "ಇಂಟರ್‌ವ್ಯೂ" (ಭೇಟಿ)ಗೆ ಬಂದಿದ್ದಳು.

ಇವಳೇನು ಮಾಡಿದಳು ಅಂದರೆ – ಸಾಬೂನು, ಮಸಿಕುಡಿಕೆ ಕಾಗದ ಪೆನ್ಸಿಲ್, ಬೆಣ್ಣೆ, ದ್ವೀಪದ್ರಾಕ್ಷಿ – ಹೀಗೇ ಇನ್ನೂ ಎಷ್ಟೋ ಜೈಲಿನಲ್ಲಿ ನಮ್ಮಂಥ ಖೈದಿಗಳಿಗೆ ಕೊಡುವ ಸಾಮಾನುಗಳನ್ನೆಲ್ಲ ಗಂಟುಕಟ್ಟಿ ತಾಯಿಯ ಜತೆಯಲ್ಲಿ ಮನೆಗೆ ತೆಗೆದುಕೊಂಡು ಹೋಗಲು ಕೊಟ್ಟಿದ್ದಳು. ಗೇಟಿನ ಹತ್ತಿರ ಬಂದಾಗ ಅಲ್ಲಿ ಜೈಲಿನ ಗೂಢಚಾರ ಮತ್ತು ಜಮಾದಾರ ಹಿಡಿದು ಹಾಕಿಬಿಟ್ಟರು. ಅದಕ್ಕೆ ಸುಮ್ಮನೆ ಇರುವ ಹೆಂಗಸೇ ಇವಳು? ಹಾಂ ಹೂಂ ಅಂತ ಜಗಳ ಆಡಿದಳು. ನಮಗೆ ಸ್ವಂತ ಉಪಯೋಗಕ್ಕೆ ಅಂತ ಕೊಡೋ ಸಾಮಾನುಗಳು ಅವು. ನಮ್ಮ ಇಷ್ಟ ನಮ್ಮ ಮನೆಗೆ

ಕಳಿಸಿತೇವೋ ನಾವೇ ಉಪಯೋಗಿಸಿತೇವೋ. - ಯಾರೂ ಕೇಳುವುದಕ್ಕೆ ಹಕ್ಕಿಲ್ಲ ಅಂತ. ಆಗ ಗೂಢಚಾರ ನಮ್ಮ ಜತೆ ಕಾನೂನು ವಿಷಯ ತರ್ಕಮಾಡಲಿಕ್ಕೆ ಬಂದರೆ ನಾವೆಂದಿಗೂ ಅದನ್ನು ಹೊರಕ್ಕೆ ಹೋಗಗೊಡಿಸುವುದಿಲ್ಲ. ಅದಕ್ಕೆ ಬದಲಾಗಿ ಸ್ವಲ್ಪ ಮೆತ್ತಗೆ ನಮ್ಮ ಮನೆಗೆ ಇವು ಬೇಕಾಗಿವೆ ಅಂತ ಕೇಳಿಕೊಂಡರೆ ಬಿಟ್ಟರೂ ಬಿಡಬಹುದು ಅಂತ ಹೇಳಿದ ಮೇಲೆ ಇವಳು ಹಾಗೇ ಆಗಲಿ ಅಂತ ಆ ಜಮಾದಾರನಿಗೂ, ಗೂಢಚಾರನಿಗೂ ಸ್ವಲ್ಪ ಸ್ವಲ್ಪ ದ್ರಾಕ್ಷಿ ಲಂಚ ಕೊಟ್ಟು ತಾಯಿಯನ್ನು ಸಾಮಾನು ಸಮೇತ ಹೊರಗಡೆ ಕಳಿಸಿ ಬಂದಳು - ಅಂತೂ ಏನು ನಾಚಿಗೇಡಿನ ಕೆಲಸ! ಅವಮಾನ ಇವಳೊಬ್ಬಳಿಗೇ ಅಲ್ಲ. ಜೈಲಿನಲ್ಲಿರುವ ರಾಜಕೀಯ ಖೈದಿಗಳ ಹೆಸರಿಗೇ ಅವಮಾನ! ನಮ್ಮೆಲ್ಲರ ಮುಖಕ್ಕೂ ಮಸಿ ಬಳಿದ ಹಾಗಾಯಿತು. ಜಮಾದಾರಿಣಿ ಬಂದು ನಮ್ಮೆಲ್ಲರಿಗೂ ಇದನ್ನು ಹೇಳಿದಾಗ ಎಲ್ಲರೂ 'ಛೀ ಛಿ' ಅಂದರು. ಬಹರಿಯಾಜಿ ಸ್ವಲ್ಪ ಬಿಚ್ಚು ಬಾಯವಳು. ಅವಳು ಹೋಗಿದ್ದೇ ನಯನಾದೇವಿಯ ಮುಖಕ್ಕೇ ಏನೇನು ಹೇಳಿದಳೋ ಏನೋ... ತತ್ಕ್ಷಣ ಸಿಡಿ ಮದ್ದಿಗೆ ಕಡ್ಡಿ ಗೀಚಿ ಇಟ್ಟಂತೆ ಆಯಿತು. ಶುರು ಆಯಿತು ದೊಡ್ಡ ಜಗಳ. ಕೈಕೈ ಮಿಲಾವಣೆ ಸಹ ಆಗದೆ ಹೋಗಲಿಲ್ಲ. ನಯನಾದೇವಿಯಂತೂ ತನ್ನ ರೋಷವೆಲ್ಲ ಆ ಮೆತ್ತಗಿನ ಹೆಂಗಸಿನ ಮೇಲೆ ತೀರಿಸಿಬಿಟ್ಟಳು. ಗೂಢಚಾರನ ಮುಂದೆ ಈ ಜೋರು ಎಲ್ಲಿ ಹೋಗಿತ್ತು ಅಂತ ಎಲ್ಲರೂ ಕೇಳುವವರೇ. ಅವತ್ತಿಂದ ಸುಮಾರು ಹತ್ತು ಹದಿನೈದು ದಿನಗಳವರೆಗೂ ಅವಳ ತಂಡಕ್ಕೂ ಬಹುರಿಯಾಜಿ ತಂಡಕ್ಕೂ ಸಮಯ ಸಿಕ್ಕಿದಾಗೆಲ್ಲ ನಾಯಿಗಳ ನಡುವೆ ಆಗುವ ಹಾಗೆ ಬೈದಾಟ, ಬಗುಳಾಟ. ಅವಳ ತಂಡ ಎಂದರೆ ಯಾರೂ ಇಲ್ಲ. ಒಬ್ಬಳೇ ನೂರು ಜನದಂತೆ. ಅವಳ ಬಾಯಲ್ಲಿ ಬೈಗಳು ಬರಲು ತೊಡಗಿದಾಗ ಯಾರೂ ಎದುರು ನಿಲ್ಲುವ ಹಾಗಿಲ್ಲ. ಒಂದೊಂದು ಮಾತಿನಲ್ಲೂ ವಿಷದ ಅಲುಗು. "ಕೋಣನ ಕೋಡು ಡೊಂಕು, ಜಗಳ ಬಂದಾಗ ಬಾಕು" ಅನ್ನುವ ಗಾದೆಯ ಹಾಗೆ. ಒಬ್ಬಳೇ ನಿಂತು ಅವರೆಲ್ಲರನ್ನೂ ಬಾಯಿ ಮುಚ್ಚಿಸಿಬಿಡುತ್ತಿದ್ದಳು. ... ಇಂಥವಳನ್ನು ರೇಗಿಸಿ ಬಿಟ್ಟೆನಲ್ಲ? ನಾಳೆ ಇವಳು ನನ್ನ ಮೇಲೆ ರೊಚ್ಚು ತೀರಿಸಲಿಕ್ಕೆ ನಿಂತರೆ ಏನು ಮಾಡಲಿಕ್ಕೂ ತಯಾರಿರುತ್ತಾಳೆ. ಮಾಡಿದರೆ ಮಾಡತಾಳೆ? ಮನಸ್ಸಿಗೆ ಬಂದ ಹಾಗೆ ಮಾಡಲಿ... ನನಗೇಕೆ ಭಯ-ನೀರಲ್ಲಿ ಮುಳುಗುತಿರುವಾಗ ಚಳಿಯೇನು, ಗಾಳಿಯೇನು? ನನಗೆ ದೇವರು ನೀಡಿರುವ ಈ ಸಂಕಟಕ್ಕಿಂತ ಹೆಚ್ಚಾಗಿ ಇವಳೇನು ಮಾಡಬಲ್ಲಳು? ಪ್ರಪಂಚದಲ್ಲಿ ಎಲ್ಲಕ್ಕೂ ಒಂದು ಮಿತಿ ಇದೆ. ಜನಗಳ ದುಃಖಕ್ಕೆ ಇಲ್ಲದೆ ಇರುತ್ತದೆಯೆ? ...ಹೀಗೇ ನಾನು ಬಿಲೂ ವಿಷಯ ಯೋಚನೆ ಮಾಡತಾ ಮಾಡತಾ ರಕ್ತವೇ ನೀರಾಗಿ ಹೋಗಿರುವಾಗ ಇದು ಸಾಲದು ಅಂತ ಈ ಚಮಯಿನ್ ಜಮಾದಾರಿಣಿ ಬಂದದ್ದೇ ನನಗೆ ಹೇಳುತಾಳೆ- "ಬಂಗಾಳೀ ಅಮ್ಮಾವರೆ... ಗೊತ್ತಾ ನಿಮಗೆ? ಸರಕಾರ ನಿಮ್ಮ ಮಗನಿಗೆ ಫಾಸಿ ಸಜಾ ಕೊಟ್ಟಿದ್ದಾರಲ್ಲ... ಅವರಾಗೇ ಅಲ್ಲ ಕೊಟ್ಟಿದ್ದು. ನಿಮ್ಮ ಎರಡನೆಯ ಮಗ ಇದ್ದಾನೆ. ಅವನು ಸಾಕ್ಷಿ ಹೇಳಿ ಅವನಿಗೆ ಸಜಾ ಮಾಡಿಸಿದ ಅಂತೆ." ಏನೇ ಇದು? ಯಾರೇ ಹೇಳಿದರು ಅಂತ ಕೇಳಿದೆ. ನಾನು ಕೇಳತಾ ಕೇಳತಾ ಹಾಗೇ ಮೈ ನಡುಗಿ ಹೋಯಿತು. ಯಾರು ಹೇಳಿದರು ಇವಳಿಗೆ? ಆಗ ಅವಳಂದಳು.

"ನಯನಾದೇವಿ ಹಿಂಗೆ ಒಂದಿನ ಹೇಳತಾ ಇದ್ದರು. ಈ ನಮೂನೆ ಮಾತು ಎಲ್ಲೋ ಕೇಳಿದರಂತೆ. ಹೊರಗಡೆ ವಾರ್ಡರಿದಾನಲ್ಲ – ಅವನಿಗೆ ಹೋಗಿ ಕೇಳಿ ತಿಳಿದುಕೊಳ್ಳಿ, ಬೇಕಾದರೆ ಸರಿಯಾಗಿ ನಯನಾದೇವಿ ಹೇಳಿದ್ದು ನಿಜ ಇಲ್ಲ ಸುಳ್ಳು ಅಂತ. ನಾನು ಹೋಗಿ ತಿಳಕೊಂಡು ಬಂದೆ. ಅದು ನಿಜ ಅಂತ. ನಯನಾದೇವಿ ನಿಮಗೆ ಹೇಳಬಾರದು ಅಂತ ಹೇಳಿದರು. ಅಮ್ಮಾವರೆ ಆದರೆ ನಾನಂದುಕೊಂಡೆ. ಇದು ನಿಮ್ಮದು ಖಾಸಾ ಮನೇದು ಮಾತು. ಎಲ್ಲರಿಗೂ ಗೊತ್ತಾಗತದೆ. ಎಲ್ಲರೂ ಮಾತಾಡತವರೆ. ನಿಮಗೆ ಯಾಕೆ ಗೊತ್ತಾಗ ಕೂಡದು ? ಇದು ಸರಿಯಾ ? ನನಗೆ ಕೂಡ ಧರಮ ಇದೆ - ಅದಿರಲಿ, ಅಮ್ಮಾವರೆ ನಿಮ್ಮದು ಮಕ್ಕಳ ಒಳಗೆ ಜಗಳ ಇದೆ ? ನನ್ನದು ಎರಡು ತಮ್ಮಂದಿರು ಹಿಂಗೇನೆ, ಅಮ್ಮಾವರೆ ಒಂದು ಹಲಸಿನ ಮರ ಯಾರಿಗೆ ಸೇರಿದ್ದು ಅಂತ ತಲೆ ತಲೆ ಹೊಡಕೊಂಡರು. ಆಮೇಲೆ ಎಷ್ಟು ಪೊಲೀಸ್ ಮಂದಿ ಕೋರಟ್ ಕಛೇರಿ ಎಲ್ಲಾ ಆಯಿತು ಅಮ್ಮಾವರೆ ಎಷ್ಟು ದುಡ್ಡು ಖರಚಾಯಿತು. ಎಪ್ಪತ್ತು ರೂಪಾಯಿ ಕಸಿದುಕೊಂಡು ದರೋಗಾಸಾಹೇಬ ಮೊಕದ್ದಮೆ ವಾಪಸ್ ತಗೊಂಡ. ನಿಮ್ಮದು, ಅಮ್ಮಾವರೆ, ತುಂಬ ದನ, ಕರ, ಎಮ್ಮೆ ಎಲ್ಲ ಅದೆ ಅಲ್ಲವಾ ? ನಿಮ್ಮದು ಎರಡನೆ ಹುಡುಗ ಗಾಂಧಿ ಮಹಾತ್ಮನ ಹೆಸರು ಬರೆಸಲಿಲ್ಲವಾ ? ಯಾರ ಹೊಟ್ಟೆಯಾಗೆ ಎಂತ ಮಗ ಹುಟ್ತೋ ಹಂಗೆ ಮಾಡತಾನೆ ದೇವರು ಯಾರಿಗೆ ಹೇಳಾಕೆ ಆಗತದೆ ?"

ಈ ಮಾತನ್ನು ಅವಳ ಬಾಯಿಂದ ಕೇಳಿ ನನ್ನ ಎದೆಯೇ ಒಣಗಿ ಕೊಂಡು ಬಂತು. ಕೋಪವೂ ಬಂತು. ಕೂಡಲೆ ಅವಳ ಕಡೆ ದುರದುರ ನೋಡುತ್ತ, "ಏನೆಲ್ಲ ಸುಳ್ಳು ಮಾತು ಹರಡತಾ ಇದ್ದೀಯೆ ? ನಿನ್ನ ಮೇಲೆ ರಿಪೋರ್ಟು ಮಾಡತೀನಿ ನೋಡಿ ಕೊಂಡಿರು" ಎಂದೆ. ಆಗ ಅವಳು, "ಅಮ್ಮಾವರೆ, ನಾನು ಒಳ್ಳೇದು ಮನಸ್ಸಿನಾಗೆ ಮಾಡಿಕೊಂಡು ನಿಮಗೆ ಇದೆಲ್ಲ ಹೇಳಿದ. ಸುಳ್ಳಿದ್ದರೂ ಇರಬಹುದು. ನನ್ನ ಕಿವಿಯಾಗಿ ಬಿದ್ದದ್ದು ನಿಮಗೆ ಹೇಳಿದೆ. ಇದರಾಗೆ ಒಂದು ರವಷ್ಟೂ ನಾನೇ ಹುಟ್ಟಿಸಿ ಹೇಳಿದ್ದಲ್ಲ. ನೀವು ರಿಪೋರ್ಟು ಮಾಡಿದರೆ ಮಾಡಿಕೊಳ್ಳಿ, ಅಮ್ಮಾವರೆ. ನನ್ನ ಗಂಡಸು ಮೂರು ವರುಷದಿಂದ ಲಕ್ವ ಹೊಡದು ಮನೆಯಾಗೆ ಮನೀಗಿಕೊಂಡು ಅವನೆ. ನನ್ನ ಜೀತದ ಕಾಸಿಂದ ನನ್ನದು ಎರಡು ಮಕ್ಕಳು ಹೊಟ್ಟೇ ಹೊರೀತವೆ." ಅಂತ ಅಂದಳು. ಆಗ ನಾನು, "ಸರಿ ಸರಿ ಸಾಕಿನ್ನು ಹೋಗು. ಇನ್ನು ಮೇಲೆ ಇಂಥಾ ಮಾತೆಲ್ಲ ನನ್ನ ಬಳಿ ಹೇಳಲ್ಲಿಕ್ಕೆ ಬರಬೇಡ" ಅಂದು ಅವಳನ್ನ ಕಳಿಸಿಬಿಟ್ಟೆ. ಆದರೂ ಆಮೇಲೆ ನನ್ನ ಮನಸ್ಸು ಅಲ್ಲಕಲ್ಲೋಲ ಆಗಿ ಹೋಯಿತು. ಆದರೂ ಈ ಜನ ಎಂಥೆಂಥ ಸುಳ್ಳು ಹರಡತಾರಲ್ಲ ?

ಇಜಾರ ತೊಟ್ಟಿರುವ ಅಣ್ಣಾ ಬಿಲೂ, ತಮ್ಮ ಪುಟ್ಟ ನೀಲೂ ಕೆನ್ನೆಯನ್ನು ತಡವಿ ತಡವಿ ಮುದ್ದು ಮಾಡುತ್ತಾನೆ, "ನೀಲೂ - ನೀಲ್ಲೂ - ಪೀಲ್ಲೂ - ಪಿಲ್ಲೂ".

ಇದೇ ನೀಲೂ ಅಣ್ಣನ ವಿರುದ್ಧವಾಗಿ ಸಾಕ್ಷಿ ಹೇಳತಾನೆಯೇ ? ಇದನ್ನು ನಾನು ಸತ್ತರೂ ನಂಬಲಾರೆ. ನೀಲೂ ಘಟಿಂಗ, ನೀಲೂ ಏನೂ ಅರಿಯದವ, ನೀಲೂ ಏಲು ಪೈಲು ಹುಡುಗ, ಎಲ್ಲಾ ನಿಜ. ಆದರೆ ನೀಲೂ ಅಣ್ಣಾ ಅಂದರೆ ಪ್ರಾಣ ಬಿಡತಾನೆ. ಅಂಥವನು ಈ ಕೆಲಸ ಮಾಡುವವನೆ ? ಛೇ, ಅವತ್ತಿಂದಲೂ ಈ ವಿಷಯವಾಗಿ

ಯೋಚಿಸಿದರೆ ಎದೆಯ ರಕ್ತವೆಲ್ಲ ಹಿಮದಂತೆ ಹೆಪ್ಪುಗಟ್ಟಿ ಹೋಗುತ್ತದೆ. ಈ ಸುದ್ದಿ ನಿಜವಾದರೆ ಏನು ಗತಿ! ಜೈಲ್ ಗೇಟಿನಲ್ಲಿ ಅವತ್ತು ಒಂದು ಸಲ ಭೇಟಿ ಏರ್ಪಾಡಾಗಿತ್ತು ಜೈಲ್ ಸೂಪರಿಂಟೆಂಡೆಂಟರು ಆಸಕ್ತಿ ವಹಿಸಿ ಆಗಾಗ ಈ ಬಗೆಯ ಭೇಟಿ ಏರ್ಪಾಡು ಮಾಡುತ್ತ ಇರುತ್ತಾರೆ.

ಅವತ್ತು ಅವನನ್ನು ಮುಖತಃ ಕೇಳಿ ಅವನಿಗೆ ಈ ವಿಷಯ ಗೊತ್ತಿದೆಯೋ ಇಲ್ಲವೇ ತಿಳಿದುಕೊಳ್ಳೋಣ ಅಂದುಕೊಂಡೆ. ಆಮೇಲೆ ತತ್‌ಕ್ಷಣ 'ಯಾಕೆ... ಬೇಡ' ಅನ್ನಿಸಿತು. ಈ ಮಾತನ್ನು ಕೇಳುವುದು ಹೇಗೆ? ಅವನು ತಿರುಗಿ ಬಿದ್ದು ರೋಸಿ, "ಏನಮ್ಮಾ ನಿನ್ನ ಮಗನ ವಿರುದ್ಧವಾಗೇ ಇಂಥ ಮಾತು ಹೇಳಿದರೆ ನೀನೂ ನಂಬುತೀಯೇನಮ್ಮಾ?" ಎಂದು ಬಿಟ್ಟರೆ? ಒಂದು ಪಕ್ಷ, ಇದು ನಿಜವೇ ಎಂದು ಇಟ್ಟುಕೊಳ್ಳೋಣ. ಹಾಗೇ ಅವನ ಮುಖದಲ್ಲಿ ಆಗುವ ಬದಲಾವಣೆಯಿಂದ ಅವನ ಮನಸ್ಸಿನಲ್ಲಿ ಆಗುತ್ತಿರುವ ತಳಮಳ ಗೊತ್ತಾಗಬಹುದಲ್ಲ! ನನ್ನ ಮನಸ್ಸಿನಲ್ಲಿ ಏನಾಗುತ್ತಿದೆ ಎಂದು ನನಗೆ ಗೊತ್ತು. ಅದರಿಂದಲೇ ಅವನ ಮನಸ್ಸಿನ ಅವಸ್ಥೆಯನ್ನು ಊಹಿಸಿಕೊಳ್ಳಬಲ್ಲೆ. ಆಮೇಲೆ ಅವನು ನನ್ನ ಮುಖದ ಕಡೆ ನೋಡಲಾಗಲಿಲ್ಲ - ಎಂಬುದು ನನ್ನ ಗಮನಕ್ಕೆ ಬಂತು. ಕೊನೆಗೆ ಎಲ್ಲಾ ಬಗೆಯಾಗಿ ಯೋಚಿಸಿ ಆ ಮಾತನ್ನು ಕೇಳುವುದಕ್ಕೇ ಆಗಲಿಲ್ಲ. ನಾಲಗೆಗೆ ಬಂದಿದ್ದ ಮಾತು ನಾಲಗೆಯಲ್ಲೇ ನಿಂತು ಹೋಯಿತು. ಸಿ.ಐ.ಡಿ. ಸಾಹೇಬ ಹತ್ತಿರಿದ್ದವನು, "ಇನ್ನು ಏಳಿ - ಸಮಯ ಆಗಿ ಹೋಯಿತು" ಅಂದ.

ಏನು ಮಾಡಿದರೂ ನೆಮ್ಮದಿಯಿಲ್ಲ. ಮರೆಯೋಣವೆಂದರೂ, ಸುತ್ತಿ ಸುತ್ತಿ ಇದೇ ಮಾತು ಮನಸ್ಸಿಗ ಬಾರಿ ಬಾರಿಗೂ ಬರುತ್ತಿರುತ್ತದೆ. ನೀಲೂ ಎಂದಾದರೂ ಇಂಥ ಕೆಲಸ ಮಾಡಬಲ್ಲವನೆ? ಅವನು ಬಹಳ ಸಣ್ಣವನಿದ್ದಾಗ 'ಅಣ್ಣಾ' ಅಂತ ಕರೆಯುವುದಕ್ಕೆ ಇನ್ನೂ ಬರುತ್ತಿರಲಿಲ್ಲ. ಬಿಲೂ ಏನು ಮಾಡುತ್ತಿದ್ದನೋ ತಾನೂ ಅದೇ ಮಾಡಬೇಕೆಂಬ ಹಟ ಅವನಿಗೆ. ಅವನನ್ನು ಬಿಲೂ ಬಳಿಯಿಂದ ದೂರ ಇಡಲು ಸಾಧ್ಯವಾಗಲಿಲ್ಲ. ನೀಲೂ ಬಹಳ ಮುಂಗೋಪಿ. ಹೊರಗಡೆ ಯಾವ ದುಡುಕು ಕೆಲಸ ಮಾಡಿಬಿಡುತಾನೋ ಎಂದು ಸುಮ್ಮನೆ ಹೆದರಿಕೊಂಡು ಇರುತ್ತಿದ್ದೆ. ಆದರೆ ಹೇಗಿದ್ದರೂ ಅವನ ಅಣ್ಣ ಜತೆಯಲ್ಲಿರುತ್ತಾನೆ. ಅವನು ಹತೋಟಿಯಲ್ಲಿ ಇಟ್ಟುಕೊಳ್ಳುತ್ತಾನೆ ಅಂತ ಸಮಾಧಾನ ಮಾಡಿಕೊಳ್ಳುತ್ತಿದ್ದೆ. ಅವನು ಜೈಲಿಗೆ ಹೋದಾಗಲೂ ಇದೇ ಭರವಸೆ ಇಟ್ಟುಕೊಂಡಿರುತ್ತಿದ್ದೆ. ಎಳೆಯವನಿದ್ದಾಗ ಅವನನ್ನು ಯಾರಾದರೂ ಏನಾದರೂ ಅಂದರೆ ಬಿಲೂ ಹತ್ತಿರ ಬಂದು "ಅನ್ನಾ...ನೋಲು ಇವಲು" ಎಂದು ದೂರುತ್ತಿದ್ದ.

ಹೀಗೆ ಒಮ್ಮೆ ನೀಲೂ, ಬಿಲೂ ಚಿಕ್ಕವರಿದ್ದಾಗ ನಮ್ಮವರ ಕ್ವಾರ್ಟರ್ಸ್ ಕಾಂಪೌಂಡಿನಲ್ಲಿದ್ದ ಮಾವಿನ ಮರದ ತಳಗಡೆ ಆಡುತಾಯಿದ್ದಾರೆ. ಹಮೀದ್ ಎಂಬ ಇವರ ಆಫೀಸಿನ ಧಫ್ತರಿ ಗೇಟಿನೊಳಗೆ ಬಂದು ದೂರದಿಂದ ಈ ಹುಡುಗರಿಗೆ ಕುರ್ನೀಸ್ ಮಾಡಿ, "ಆದಾಬ್ ನೀಲೂ ಬಾಬು... ಒಂದು ಮುದಕಿ ಮೇಮ್ ಸಾಹೇಬ್ ಇದಾಳೆ. ಅವಳ ಜತೆ ನಿಮ್ಮದು ಮದ್ವೆ ಮಾಡತೀನಿ. ನಿನ್ನೆ ನನಗೆ ಆ ಮುದುಕಿ ಮೇಮ್ ಸಾಬ್ ಹೇಳಿದಳು – ಹಿಂಗೆ. ನೀಲೂ ಬಾಬೂ ಜತೇಗೇನೆ

ನಾನು ಮದ್ವೆ ಮಾಡಿ ಕೊಳ್ಳೋಲ್ಲ ಬೇರೆ ಯಾರದೂ ಜತೇಗೆ ಇಲ್ಲಾ" ಅಂದ.

"ನೋಡಣ್ಣಾ, ನಂಗೇನೇನೋ ಹೇಳ್ತಾನೇ ?"

ಬಿಲೂ ಸಮಾಧಾನ ಮಾಡುತ್ತಾನೆ. "ಛೆ... ಇಲ್ಲ ಕಣೋ ಸುಳ್ಳು ಸುಳ್ಳು. ನಿನಗೆ ಸುಮ್ಮನೆ ರೇಗಿಸತಾನೆ. ಮುದಕಿ ಎಲ್ಲಾದರೂ ಮದುವೆ ಮಾಡಿಕೊಳ್ಳತಾಳೇನೋ ?"

ನೀಲೂ, "ಇಲ್ಲ... ಅವನು ಹೇಳೋದು ಯಾಕೆ ?" ಅಂತಾನೆ.

ಧಫ್ತರಿ ಸುಮ್ಮನಿರದೆ ಹೇಳತಾನೇ ಹೋಗತಾನೆ – "ಆ ಮುದಕಿ ಮೇಮ್ ಸಾಬಿಗೆ ಸ್ವಲ್ಪ ಸ್ವಲ್ಪ ಮೀಸೆ ಇದೆ. ನನಗೇ ಮದ್ವೆ ಮಾಡಿಕೊಳ್‌ತೀನಿ ಅಂತಾ ಹೇಳತಾಯಿದ್ದಳು ಮೊದಲು – ನಾನಂದೆ – ದಾಡಿ ಇಲ್ಲದೆ ಇರೋವರ್ಗೆ ನಾನು ಮದ್ವೆ ಮಾಡಿಕೊಳ್ಳೋದಿಲ್ಲ ಅಂದು ಬಿಟ್ಟೆ. ಆವಾಗ ಅಂದಳು – ಹಂಗಾದರೆ ನನಗೆ ನೀಲೂ ಬಾಬು ಜತೇಗೆ ಮದ್ವೆ ಮಾಡ್ಬಿಡು ಅಂತ".

"ನೋಡನ್ನಾ ಇವನು !"

ನೀಲೂ ಅಳುವುದಕ್ಕೆ ಶುರು ಮಾಡಿದ. ಬಿಲೂ ಅವನನ್ನು ಸಂತೈಸುತ್ತ ಸಂತೈಸುತ್ತ ನನ್ನ ಬಳಿ ಕರೆದುಕೊಂಡು ಬಂದ. "ಎಲ್ಲೋ ಮಡ್ಡಿ ಹುಡುಗ – ಅವನು ರೇಗಿಸಿದರೆ ಅಳೋದೇ ? ಹಾಗಾದರೆ ನೀನು ಅತ್ತಷ್ಟೂ ಅವನು ರೇಗಿಸತಾನೆ" – ಎನ್ನುತ್ತ ನನಗೆ ವಿವರ ಕೊಟ್ಟ, "ನೋಡಮ್ಮ ಇವನಿಗೆ ಏನೂ ತಿಳಿಯೋದಿಲ್ಲ. ನಾನೆಷ್ಟು ಹೇಳಿದರೂ ಸುಮ್ಮನೆ ಅಳತಾನೆ" – ಆಗ ನಾನು, "ಅಲ್ಲೋ ನೀನು ಅಣ್ಣ, ನೀನು ಅವನಿಗೆ ಹೇಳಿ ಸಮಾಧಾನ ಮಾಡದೆ ಹೋದರೆ ಇನ್ಯಾರು ಮಾಡತಾರೆ ಹೇಳು" ಅಂದೆ. ಅಷ್ಟು ಹೇಳಿದರೆ ಸಾಕು, ಅವನಿಗೆಷ್ಟೋ ಖುಷಿ. 'ಅಣ್ಣ'ತನದ ಜವಾಬುದಾರಿ ಅಂದರೆ ಸಾಮಾನ್ಯವಲ್ಲ.

ಬಿಲೂ ನೀಲೂವನ್ನು ಯಾವಾಗಲೂ ತನ್ನ ಸುಫರ್ದಿನಲ್ಲೇ ಇಟ್ಟುಕೊಂಡಿರುತ್ತಿದ್ದ. ಅವನ ದೃಷ್ಟಿ ಎಲ್ಲಾ ಅವನ ಮೇಲೇ. ಒಮ್ಮೆ ನೀಲೂ ಗುಲಗಂಜಿ ಬೀಜಗಳನ್ನು ತೆಗೆದುಕೊಂಡು ಆಡಬೇಕು ಅಂತ ಹಟ ಮಾಡಿದ. ಆ ಆಟವನ್ನು ಈ ದೇಶದಲ್ಲಿ "ಕನ್ಯೆಲ" ಆಟ ಅಂತಲೋ ಇನ್ನೇನೋ ಅಂತಾರೆ. ನಾನು ಬಿಲೂಗೆ ಎಚ್ಚರಿಕೆ ಕೊಟ್ಟೆ, "ನೋಡೋ ಬಿಲೂ, ಗುಲಗಂಜಿ ಬೀಜ ವಿಷ – ಅವನೇನಾದರೂ ನುಂಗಿಬಿಟ್ಟಾನು ?" ಅಂದೆ. ಆಗ ಅವನು ದೊಡ್ಡ ಪಂಡಿತನ ಭಂಗಿಯಲ್ಲಿ, "ಅದನ್ನ ನನಗೆ ಹೇಳಬೇಕೇನಮ್ಮಾ, ಅವತ್ತು ಅವನೂ, ಅವನ ಜತೆ ಹುಡುಗರೂ ಹರಳೆಣ್ಣೆ ಬೀಜಗಳನ್ನ ಕೂಡಿ ಹಾಕಿ ತಿಂತೇವೆ ಅಂತ ಹೇಳತಾ ಇದ್ದರು. ಅವನ್ನು ಹಿಂದೂಸ್ತಾನಿ ಬಾದಾಮಿ ಅಂತ ಅಂದುಕೊಂಡು – ನಾನು ಚೆನ್ನಾಗಿ ಬುದ್ಧಿ ಹೇಳಿ ತಪ್ಪಿಸಿಬಿಟ್ಟೆ ಗೊತ್ತಾ ?" ಎಂದ.

ನಿಜವಾಗೂ ಬಿಲೂ ತಮ್ಮನನ್ನು ಒಂದು ಕ್ಷಣವೂ ಕಣ್ಮರೆಯಾಗಲು ಬಿಡುತ್ತಿರಲಿಲ್ಲ. ಅವನೇ ಆಗ ಎಷ್ಟು ಸಣ್ಣವನು ! ನೀಲೂ ಜುಬ್ಬಾಗೆ ಗುಂಡಿ ಹೊಲಿದುಕೊಡುವುದು, ಅವನ ಬೂಟಿಗೆ ಲೇಸ್ ಕಟ್ಟುವುದು - ಇಂಥವೆಲ್ಲ ತನ್ನ ಕೈಯಾರೆ ಮಾಡಿಕೊಡುತ್ತಿದ್ದ. ಅಂಥ ನೀಲೂ ಈಗ ತನ್ನ ಅಣ್ಣನಾದವನ ವಿರುದ್ಧವಾಗೇ ಹೋಗಬಲ್ಲನೆ ? ಎಲ್ಲಾದರೂ ಉಂಟೆ ? ಹಾಗೆ ಒಂದು ಪಕ್ಷ ಹೋಗಿದ್ದರೂ ಸ್ವಂತ ಇಷ್ಟದಿಂದಲ್ಲ - ಇತರರ ಬಲಾತ್ಕಾರದಿಂದ ಇರಬಹುದು.

ಈ ಪೊಲೀಸಿನವರು ಎಂಥ ಕೆಲಸಕ್ಕೂ ಹೇಸರು. ಬಹುಶಃ ಮಾಡಬಾರದ ಹಿಂಸೆ ಮಾಡಿದ್ದಾರೆ ನೀಲೂ ಮೇಲೆ. ಅದರ ಸಲುವಾಗಿ ಜಜ್ ಸಾಹೇಬರ ಎದುರಿನಲ್ಲಿ ಬಿಲೂ ವಿರುದ್ಧವಾಗಿ ಹೇಳಿಕೆ ಕೊಡುವಾಗ ಅವನ ಎದೆಯೇ ಒಡೆಯುವ ಹಾಗಾಗಿರಬೇಕು. ಕಣ್ಣಿಂದ ನೀರು ಸುಮ್ಮನೆ ಸುರಿದಿರುತ್ತೆ. ಆದರೂ ಹೇಳದೆ ಇದ್ದರೆ ವಿಧಿಯಿಲ್ಲ.... ಛೇ... ಎಂದಿಗೂ ಇಲ್ಲ. ನಾನು ಯಾಕೆ ಇದೆಲ್ಲ ನಿಜ ಎಂದು ನಂಬಬೇಕು ? ಅವನು ಅಣ್ಣನ ವಿರುದ್ಧವಾಗಿ ಸಾಕ್ಷ್ಯ ನುಡಿಯುವುದು ಅಂದರೆ ಅದೇನು ನಂಬತಕ್ಕಂಥ ಮಾತೇ ?

ಯಾರಿಂದ ಏನು ಕೇಳಿದ್ದಾಳೋ ಈ ಚಾಮಯಿನ್ ಜಮಾದಾರಿಣಿ. ಅದಕ್ಕೇ ಉಪ್ಪು, ಕಾರ ಹಾಕಿ ತಂದು ನನ್ನ ಕಿವಿಯಲ್ಲಿ ಹಾಕಿದ್ದಾಳೆ. ಅಷ್ಟೇ! ನೀಲೂ ಹಾಗೇನಾದರೂ ಹೇಳಿದ್ದ ಪಕ್ಷದಲ್ಲಿ ನಾನು ಮತ್ತೆ ಆ ಹುಡುಗನ ಮುಖ ನೋಡುತೇನೆಯೆ ? ...ನಾನೆಲ್ಲಾದರೂ ದಿಕ್ಕು ದಾರಿನೋಡದೆ ಹೊರಟು ಹೋಗುತ್ತೇನೆ ದೇಶಾಂತರ. ಇಲ್ಲ. ಇದು ಎಂದಿಗೂ ಸಾಧ್ಯ ಇಲ್ಲ ಅಂತ ನನ್ನ ಮನಸ್ಸೇ ಹೇಳತ್ತೆ. ತಾಯಿಯಾದವಳ ಮನಸ್ಸು ಹೇಳುವುದು ಸುಳ್ಳಾದೀತೆ ?

ಅದೇ ಕಪಿಲದೇವಜೀ ಅವರ ಮದುವೆ ಸಮಯದಲ್ಲಿ ಬಿಲೂ, ನೀಲೂ ಅವರ ಊರಿಗೆ ಹೋಗಿದ್ದರು. ಅವರು ಹೋಗುವುದು ನನಗೆ ಇಷ್ಟವೇ ಇಲ್ಲ. ಅವರಿಬ್ಬರೂ ಆಗ ತುಂಬ ಚಿಕ್ಕವರು. ಇನ್ನು ಅಲ್ಲಿ ಹೋಗಿ ಮನಸ್ಸಿಗೆ ಬಂದ ಹಾಗೆ ತಿಂದು ಕಾಯಿಲೆ ಬಿದ್ದಾರು ಅಂತ ಭಯ. ಅವರ ಮನೆಯ ಆಚಾರ ವ್ಯವಹಾರ ಗೊತ್ತಿಲ್ಲ. ಏನೋ ಮಾಡುವುದಕ್ಕೆ ಹೋಗಿ ಏನೇನು ಮಾಡಿಬಿಡುತಾರೋ.... ಆದರೆ ಅವತ್ತು ದಯಿಭಾತ್ ಗ್ರಾಮದ ನಾಪಿತ ಅರಿಶಿನ ಕಲಿಸಿದ ಅಡಿಕೆ ಪುಡಿ ಕೊಟ್ಟು ಮದುವೆಯ ನಿಯಂತ್ರಣ ಹೇಳಿಬಿಟ್ಟು ಹೋದಾಗಿನಿಂದ 'ಹೋದೇವು ಹೋದೇವು' ಎಂದು ಕಾದುಕೊಂಡಿದ್ದರು ಈ ಹುಡುಗರು. ಕಪಿಲದೇವಜೀಯವರ ತಂದೆ ಆಗಿನ್ನೂ ಬದುಕಿದ್ದರು. ಅವರೇ ಒಂದು ದಿನ ಬಂದು ಎತ್ತಿನಗಾಡಿಯಲ್ಲಿ ಹುಡುಗರಿಬ್ಬರನ್ನೂ ಕರೆದುಕೊಂಡು ಹೋದರು. ಅಲ್ಲಿ ಹೋಗಿ ಇವರಿಬ್ಬರೂ ಎಂಟು, ಹತ್ತು ದಿನಗಳ ಮೇಲೆ ಇರಲಿಲ್ಲ. ಆದರೂ... ಆ ಪ್ರದೇಶದ ಜನರ ಶಿಕ್ಷಣ ಅದೇನು ವಿಚಿತ್ರ ರೀತಿಯದೋ, ಅಷ್ಟು ದಿನಗಳೊಳಗೇ ಯಾವ ಯಾವುದೋ ಪದ್ಯ, ಹಾಡುಗಳನ್ನೆಲ್ಲ ಕಲಿತುಕೊಂಡು ಬಂದುಬಿಟ್ಟಿದ್ದರು. ಜಗುಲಿಯ ಮೇಲೆ ಒಂದು ಕಡೆ ನೀಲೂ ಕೂತಿರುವುದು - ಇನ್ನೊಂದು ಕಡೆ ಬಿಲೂ. ಇಬ್ಬರ ಮುಂದೆಯೂ ಒಂದೊಂದು ಹಳೇ ಬಿಸ್ಕತ್ತಿನ ಡಬ್ಬಿ ಮತ್ತು ಕೈಲಿ ಒಂದು ಕೋಲು. ಆ ಕೋಲಿನಿಂದ ಡಬ್ಬಿಯ ಮೇಲೆ ಹೊಡೆದು ಶಬ್ದ ಮಾಡುತ್ತ ಅದರ ತಾಳಕ್ಕೆ ಸರಿಯಾಗಿ ತಾವು ಹೊಸದಾಗಿ ಕಲಿತು ಬಂದಿದ್ದ ಹಾಡುಗಳನ್ನು ಒಬ್ಬರಾದ ಮೇಲೆ ಒಬ್ಬರು ಹಾಡುತ್ತಾರೆ. ನೀಲೂ ಹೇಳುತಾನೆ "ಈ ಸಾರಿ, ಅಣ್ಣಾ, 'ಬಕರೀಕೇ ಪಾಂಚ್ ಟಾಂಗ್, ಹಾಡೋದು ಬೇಡ. ತಕಾಯಿಕೇ ತಾಕಾದುಮ್, ಮಾಕಾಯಿಕೇ ಲಾಓಯಾ' ಹಾಡೂ ಬೇಡ. ಈಸಲ ಮದುವೆಯಲ್ಲಿ ಹಾಡಿದರಲ್ಲ - ಆ ಹಾಡುಗಳನ್ನು ಹಾಡೋಣ."

ಇಬ್ಬರೂ ತಾಳ ಹಾಕಿಕೊಂಡು ಹಾಡಲು ತೊಡಗಿದರು. ಈ ಸಲ "ಕಪಿಲ ದೇವಕೆ ಪಾಂಚ್ ಬಿಯಾ, ಛಟ್‌ಮಾ ಚುಮಾ ವ್ ನಾ!"

ಬಿಲೂ ವರನ ಪಕ್ಷ ಹಾಡುತ್ತಿದ್ದ.

ಜಗುಲಿಯ ಆ ಬದಿಯಲ್ಲಿ ಕೂತಿದ್ದ ನೀಲೂ ಅದಕ್ಕೆ ಜವಾಬು ಕೊಟ್ಟ - "ಕಪಿಲ ದೇವಕೇ ಬಹೂಕೇ ಛಟ್‌ಮಾ ಸಾಯಿ"

ಇವು ನನ್ನ ಕಿವಿಗೆ ಬಿದ್ದು ತುಂಬ ಕೋಪ ಬಂತು. ಇಬ್ಬರಿಗೂ ಚೆನ್ನಾಗಿ ಬೈದೆ. ಈ ಹಾಳು ಹಾಡುಗಳನ್ನು ಮರ್ಯಾದಸ್ಥರ ಮನೆಯವರು ಹಾಡುತ್ತಾರೆಯೇ ಎಲ್ಲಾದರೂ ? ಹಾಳು ಜನ, ಕೀಳು ಜನರು ಹಾಡುವ ಹಾಡುಗಳು ಇವು- ನಾನು ಬೈದದ್ದು ಕೇಳಿ ಬಿಲೂ ಬೇಸರಗೊಂಡ. ನೀಲೂ ತಿರುಗಿಬಿದ್ದ. "ಏನಮ್ಮ-ಹಾಗಾದರೆ... ದಯಿಭಾತ್ ಗ್ರಾಮದಲ್ಲಿ ಸಹದೇವನ ಮನೆಯ ಹುಡುಗರೂ ಹುಡುಗಿಯರೂ ಹಾಡುವುದೇ ಇಂಥ ಹಾಡುಗಳು. ಅವರಿಂದಲೇ ಕಲಿತದ್ದು ನಾವು. ಅವರು ಮಾರ್ಯಾದಸ್ಥರಲ್ಲವಾ ?" ಎಂದು ಆಕ್ಷೇಪಣೆ ಎತ್ತಿದ. ನನಗೆ ಗೊತ್ತು ಅವನ ಚಂಡಿ ಸ್ವಭಾವ. ಯಾವುದನ್ನು ಬೇಡ ಅಂತೇನೋ ಅದನ್ನೇ ಬೇಕೆಂದು ಮಾಡುತಾನೆ. ಬಿಲೂ ನನ್ನ ಮಾತನ್ನು ಅರ್ಥಮಾಡಿಕೊಂಡಿದ್ದ. ನನಗೆ ಗೊತ್ತು. ಅವನು ಹಾಡುವುದನ್ನು ನಿಲ್ಲಿಸಿಬಿಟ್ಟ. ಈಗ ನೀಲೂ ಒಬ್ಬನೇ ಹೇಗೆ ಹಾಡತಾನೆ ? ಅವನು ಮೊದಲಿಂದಲೂ ಅಣ್ಣನನ್ನೇ ಅನುಕರಿಸುವವನಲ್ಲವೇ ? ಆದರೂ ನನ್ನನ್ನು ರೇಗಿಸಬೇಕೆಂದು ನನಗೆ ಕೇಳುವ ಹಾಗೇ ಹಾಡುತ್ತ ಹೋದ. "ತಾಕಾಯಿಕೇ ತಾಕದೂಮ್... ಮಾಕಾಯಿಕೇ ಲಾಓಯಾ ?" ಸ್ವಲ್ಪ ಹೊತ್ತಾದ ಮೇಲೆ ತಾನಾಗೇ ತಣ್ಣಗಾಗಿ ಹೋದ. ಆಮೇಲೆ ಅವರ ಕೋಣೆಯಲ್ಲಿ ನೀಲು ತನ್ನ ಅಣ್ಣನನ್ನ ಪ್ರಶ್ನೆ ಮಾಡುತ್ತಿರುವುದು ಕೇಳಿಸಿತು "ಅಣ್ಣಾ, ಇದು ನಿಜವಾಗೂ ಒಳ್ಳೇ ಹಾಡಲ್ಲವೇನಣ್ಣಾ ?"

ತನ್ನ ಅಣ್ಣ ಕೆಟ್ಟದೆಂದರೇ ಅದು ಕೆಟ್ಟದಾಗುತ್ತೆ. ಅಣ್ಣನ ಮಾತೇ ವೇದವಾಕ್ಯ - ಮತ್ತೆ ನಾನು - ಎಷ್ಟು ಹೇಳಿದೆ ರೇಗಿದೆ ದಂಡಿಸಿದೆ - ನನ್ನ ಮಾತಿಗೆ ಲಕ್ಷ್ಯ ಇಲ್ಲ.

ಈಚೆಗೆ ಇಬ್ಬರೂ ದೊಡ್ಡವರಾದ ಮೇಲೆ ಎಷ್ಟೋ ದಿನ ನೋಡಿದ್ದೇನೆ. ಅಣ್ಣ, ತಮ್ಮ ಇಬ್ಬರೂ ಕೂತು 'ಕ್ಯಾಟ್‌ರ‍್ಯಾಟ್' ಅಂತ ಇಂಗ್ಲಿಷಿನಲ್ಲಿ ಏನೇನೂ ಗುಸುಗುಸು ಮಾತಾಡಿಕೊಳ್ಳುತ್ತಿದ್ದರೂ ನಾನು ಅವರೊಂದಿಗೆ ಏನೋ ಹೇಳಬೇಕೆಂದೋ ಅಥವಾ ಸುಮ್ಮನೆ ಮಾತಾಡಬೇಕೆಂದೋ ಅಲ್ಲಿಗೆ ಹೋದೆ. ಆಗಲೇ ನೀಲೂ ಇಂಗ್ಲಿಷಿನಲ್ಲಿ ಅಣ್ಣನಿಗೆ ಏನೋ ಹೇಳಿ 'ಹೋ ಹೋ' ಎಂದು ನಗತೊಡಗಿದ. ಏನೋ ಹಾಸ್ಯವೋ ತಮಾಷೆಯ ಮಾತೋ ಇರಬೇಕು - ಬಹುಶಃ ನನ್ನನ್ನ ಕುರಿತೇ ಎಂದು ಅನ್ನಿಸಿತು. ಅದೇ ಹಿರಿಯರನ್ನು ಏನಾದರೂ ಹೀನಾಯವಾಗಿ ಆಡಿಕೊಳ್ಳಬೇಕಾದರೆ ಇಂಗ್ಲಿಷಿನಲ್ಲಲ್ಲವೇ ಮಾತಾಡಿಕೊಳ್ಳಬೇಕು ? ಇದೇ ಇವರಿಗೆ ಆಗಿರುವ ವಿದ್ಯಾಭ್ಯಾಸದ ಫಲಿತಾಂಶ. ಬಿಲೂ ಬಹುಶಃ ನನ್ನ ಅನುಮಾನವನ್ನು ಊಹಿಸಿರಬೇಕು. ಅದಕ್ಕೇ, "ಅಮ್ಮಾ ನೀನೇನೂ ಕೋಪಮಾಡಿಕೊಳ್ಳಬೇಡ. ನೀಲು ಅಂಥ ಹೇಳಬಾರದ ವಿಷಯ ಏನೂ ಹೇಳಲಿಲ್ಲ. ಯಾಕೋ ನೀಲೂ, ಬೇಕಂದೇ ಅಮ್ಮನನ್ನ ರೇಗಿಸತೀಯ ?"

ಎಲೋ... ಹುಡುಗರೇ... ನನಗೆ ನಿಮ್ಮಿಂದ ಬೇಕಾಗಿರುವುದೇನಪ್ಪಾ ? ಬರೇ ಒಂದೆರಡು ಒಳ್ಳೇ ಮಾತು... ಅಷ್ಟೇ ಕಾಣರೋ. ಆ ಒಳ್ಳೇ ಮಾತುಗಳಾದರೂ

ಆಡಿ ನನಗೆ ಉಪಕಾರ ಮಾಡಲಿಕ್ಕೆ ಆಗುವುದಿಲ್ಲವೇ ನಿಮ್ಮ ಕೈಲಿ ? ಇಡೀ ದಿನ ಎಷ್ಟು ತಾನೇ ಮಾತಾಡತೀಯೋ ನನ್ನ ಸಂಗಡ, ನೀಲೂ ? ಅದರಲ್ಲೂ ಈ ಕುಚೇಷ್ಟೆ ಮಾತಲ್ಲದೆ ಬೇರೇನೂ ಇಲ್ಲವೆ ? ಸಾಲದು ಅಂತ ನಗುತಿ, ಹಲ್ಲು ಕಿರಿದುಕೊಂಡು. ನಿನಗೆ ನಾಚಿಗೆ ಬರದೆ ಇರುವುದೊಂದು ಆಶ್ಚರ್ಯ!... ಚಿಕ್ಕವಯಸ್ಸಿಂದ ನೋಡತಾನೇ ಇದ್ದೇನೆ.. ನಿನ್ನ ಸ್ವಭಾವವೇನೂ ಬದಲಾಯಿಸಿಲ್ಲ ಏಕೋ! "ಅಂಗಾರ ಶತ ಧೌತೇನ ಮಲಿನಶ್ಚ ನ ಮುಂಚತಿ!" ....ಅಗೋ, ಮತ್ತೆ ನಗು... ಯಾಕೋ... ಯಾಕಪ್ಪ ? ನೀಲೂ ಮತ್ತೆ ನಗುತಾನೆ... ತಪ್ಪು ಹೇಳಿದೆನೇನೋ, ಬಹುಶಃ!

"ಜಮಾದಾರೀನ್... ಜಮಾದಾರೀನ್ ? ಏಯ್, ಮನ್‌ಚನಿಯಾ ? ಬಂಗಾಳೀ ಅಮ್ಮಾವರು ನಿದ್ದೆ ಮಾಡತವರೇನು ?"

ಎಲ್ಲಿ ಜಮಾದಾರಿಣಿ... ಎಲ್ಲಿಯ ಮನ್‌ಚನಿಯಾ ? ಜಮಾದಾರಿಣಿ ಹೊರಗಡೆ ವರಾಂಡದಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದಾಳೆ ಮತ್ತು ಮನ್‌ಚನಿಯಾ ನನ್ನ ಪಕ್ಕದಲ್ಲೇ ಕೂತು ತೂಕಡಿಸುತ್ತಿದ್ದಾಳೆ. ನರ್ಮದಾ ಬಹೆನ್ನಿನ ಕೂಗಿಗೆ ಯಾರು ಜವಾಬುಕೊಡುತ್ತಾರೆ ? ಜವಾಬು ಕೊಡದೇ ಇದ್ದರೇನೇ ಒಳ್ಳೆಯದು. ಆಮೇಲೆ ಮತ್ತ ಈ ಮನ್‌ಚನಿಯಾ ನನ್ನನ್ನು ಪೀಡಿಸುತ್ತಾಳೆ. ನರ್ಮದಾ ಬಹೆನ್ನನ ಪೀಡಿಸುತ್ತಾಳೆ. ನರ್ಮದಾ ಬಹೆನ್ನಿನ ಮನೆ ಅಹಮದಾಬಾದಿನಲ್ಲಿ. ತುಂಬಾ ದೊಡ್ಡ ಮನುಷ್ಯರ ಮನೆ ಹೆಂಗಸು. ವಿಲಾಯತಿಗೆ ಹೋಗಿ ಬಂದವಳು. ಆಚರಣೆ, ಉಡುಪು ಬಿಟ್ಟು ಉಳಿದವೆಲ್ಲ ಮೇಮ್‌ಸಾಹೇಬರಂತೆ. ಮಹಾತ್ಮಾ ಗಾಂಧಿಯವರ ಆತ್ಮೀಯ ಶಿಷ್ಯಂದಿರಲ್ಲಿ ಈಕೆ ಒಬ್ಬಳು. ಮೈ ಬಣ್ಣ ಅಂತೂ ಒಳ್ಳೆಯ ಬಿಳುಪು. ಉಟ್ಟಿರುವುದು ಖದ್ದರ್ ಸೀರೆ. ಜಮ್‌ಶೇಡ್‌ಪುರದ ಕೂಲಿ ಜನರ ಸೇವೆಯ ಸಲುವಾಗಿ ಬಿಹಾರಿಗೆ ಬಂದಿದ್ದಳು. ನಮ್ಮ ವಾರ್ಡಿನ ಎದುರು ಬದಿಯಲ್ಲೇ ಒಂದು ಚಿಕ್ಕ ಕೋಣೆಯಿದೆ. ಮೊದಲಲ್ಲಿ ಅದು ಬಾಣಂತಿಯರಿಗಾಗಿ ಅಥವಾ ಅಂಟುರೋಗದಿಂದ ನರಳುವ ರೋಗಿಗಳಿಗಾಗಿ ಪ್ರತ್ಯೇಕವಾಗಿ ಇರಿಸಲಾಗಿತ್ತು. ನರ್ಮದಾ ಬಹೆನ್ ಇಂಗ್ಲಿಷಿನಲ್ಲಿ ಚೆನ್ನಾಗಿ ಮಾತಾಡುವಳು. ಇದರಿಂದ ಅವಳು ಸೂಪರಿಂಟೆಂಡೆಂಟರೊಡನೆ ಚೆನ್ನಾಗಿ ಸಲಿಗೆ ಬೆಳೆಸಿಕೊಂಡಿದ್ದಳು. ಅವರಿಗೆ ಹೇಳಿ ಈಕೆ ಈ ಕೋಣೆಯಲ್ಲಿ ಹೋಗಿ ಇರುತ್ತಿದ್ದಳು. ಅಲ್ಲಿ ಒಂಟಿಯಾಗಿ ಇರುವಳು. ದೊಡ್ಡಮನೆತನದ ಹೆಂಗಸು. ಈ ಜಾಗದಲ್ಲಿ ನಮ್ಮಂತಹವರೆಲ್ಲರ ಜತೆಯಲ್ಲೂ ಇರುವುದಕ್ಕೆ ಅವಳಿಗೆ ಸರಿ ಹೋಗುತ್ತಿರಲಿಲ್ಲ. ಈ ಸಣ್ಣ ಕೋಣೆಯನ್ನು ಅವಳು ಅಚ್ಚುಕಟ್ಟಾಗಿ ಮಾಡಿಕೊಂಡಿದ್ದಳು. ಎಷ್ಟೋ ಪರದೆಗಳು, ಟೇಬಲ್ ಕ್ಲಾತ್ ನಾಲ್ಕಾ ಕಡೆ ಹೂದೋಟ ಬೆಳೆಸಿಕೊಂಡಿದ್ದಾಳೆ. ಹಗಲು, ರಾತ್ರಿ ಈ ಹೂದೋಟದಲ್ಲಿ ಏನೇನೋ ಕೆಲಸ ಮಾಡುತ್ತಿರುತ್ತಾಳೆ. ಪ್ರತಿದಿನ ನನಗೆ ಎಷ್ಟೋ ಹೂಗಳನ್ನು ಕೊಟ್ಟು ಹೋಗುತ್ತಾಳೆ.

ಈಗಲೂ ಅವಳು ನಿನ್ನೆ ಕೊಟ್ಟಿದ್ದ ಹೂಗಳೆಷ್ಟೋ ಗಾಜಿನ ಪಾತ್ರೆಯಲ್ಲಿ ಇಟ್ಟಿದ್ದೇನೆ. ಹೂಗಳೆಲ್ಲ ಕಾಗದದಲ್ಲಿ ಮಾಡಿದ ಹೂಗಳಂತೆ ಕಾಣುತ್ತವೆ. ಅವುಗಳ ಹಾಗೇ ಸ್ವಲ್ಪವೂ ವಾಸನೆಯಿಲ್ಲ. ಬಿಲೂ ಇದ್ದಿದ್ದರೆ ಖಂಡಿತ ಅವುಗಳ ಹೆಸರುಗಳನ್ನು ಹೇಳುತ್ತಿದ್ದ. ಆಶ್ರಮದಲ್ಲಿ ಬಿಲೂ ಅವೆಷ್ಟು ಬಗೆಯ ಹೂಗಿಡಗಳನ್ನು ಬೆಳೆಸಿದ್ದನೋ,

ಅವುಗಳ ಲೆಕ್ಕವೇ ಇಲ್ಲ. ಯಾವುದೇ ಹೊಸ ಹೂ ಕಾಲಕಾಲಕ್ಕೆ ಅರಳಿದಾಗೆಲ್ಲ ಅದರ ಹೆಸರನ್ನು ನನಗೆ ತಿಳಿಸುವ ಹೊರತು ಅವನಿಗೆ ತೃಪ್ತಿಯಿಲ್ಲ. ನನಗೆ ಆ ಇಂಗ್ಲಿಷಿನ ಹೆಸರುಗಳೆಲ್ಲ ನೆನಪಿರುತ್ತವೇ, ಹಾಳು, ಈ ನರ್ಮದಾ ಬಹೆನ್ ಸಹ ಬಿಲೂ ಹಾಗೆಯೇ ಹೂಗಳನ್ನು ಕಂಡರೆ ಆಸಕ್ತಿ ಇರುವವಳು ಎಂದೇ ಅವಳನ್ನು ಕಂಡರೆ ನನಗೆ ತುಂಬಾ ಇಷ್ಟವಾಗುತ್ತದೆ. ಆದರೆ ಅವಳೇಕೆ ನನಗೆ ಇಷ್ಟು ಹೂಗಳನ್ನು ಕೊಡುತ್ತಾಳೆ... ನನಗೆ ಹೂಗಳ ಮರ್ಮ ಏನು ಗೊತ್ತಿದೆಯೆಂದು? ಇದೆಲ್ಲ 'ಗೋರ್ಕಲ್ಲ ಮೇಲೆ ಮಳೆಗರೆದಂತೆ!' ನನಗೆ ಕೊಡುವ ಬದಲು ನಮ್ಮ ಬಿಲೂ ಇರುವ ಸೆಲ್ಲಿಗೆ ಈ ಹೂಗಳನ್ನೆಲ್ಲ ಕಳಿಸಿದ್ದರೆ ಆಗ ಈ ಇಂಗ್ಲಿಷ್ ಪದ್ಧತಿಗೆ ಸ್ವಲ್ಪವಾದರೂ ಅರ್ಥ ಇರುತ್ತಿತ್ತು.

ನರ್ಮದಾ ಬಹೆನ್ ಸೂಪರಿಂಟೆಂಡೆಂಟ್ ಸಾಹೇಬರಿಗೆ ಹೇಳಿದ್ದರೆ ಅವರು ಖಂಡಿತವಾಗಿಯೂ ಹೂಗಳನ್ನು ಬಿಲೂ ಸೆಲ್ಲಿಗೆ ಕಳಿಸುವುದಕ್ಕೆ ಅನುಮತಿ ಕೊಡುತ್ತಿದ್ದರು. ಅದನ್ನೇ ಮನಸ್ಸಲ್ಲಿಟ್ಟುಕೊಂಡು ಒಂದು ದಿನ ನರ್ಮದಾ ಬಹೆನ್ನಿಗೆ ಈ ಮಾತು ಸಹ ಹೇಳಿದ್ದೆ– ನಮ್ಮ ಬಿಲೂಗೆ ಹೂಗಳಲ್ಲಿ ಇರುವ ಆಸಕ್ತಿಯ ವಿಷಯ. ಆ ಮಾತು ಅವಳ ತಲೆಗೆ ಹೋಗುವುದು ಹೇಗೆ? ಹೊಕ್ಕರೂ ಜ್ಞಾಪಕ ಇರುವುದು ಹೇಗೆ? ವಿಲಾಯಿತಿಗೆ ಹೋಗಿ ಎಷ್ಟು ಖರ್ಚು ಮಾಡಿ ವಿದ್ಯೆ ಕಲಿತಿದ್ದಳೋ! ವಿದ್ಯೆ ಇದ್ದರೇನು... ಬುದ್ಧಿ ಇರಬೇಡವೇ? ಅವತ್ತಿನ ದಿನದಿಂದ ಯಾಕೋ ಗೊತ್ತಿಲ್ಲ, ರಾಶಿ ರಾಶಿ ಹೂಗಳನ್ನು ನನಗೆ ಕೊಟ್ಟು ಹೋಗುತ್ತಾಳೆ ಮತ್ತು ಸಾಹೇಬರ ಮುಂದೆ ಮನವಿಮಾಡಿಕೊಳ್ಳುವ ಸಮಯದಲ್ಲಿ ನನ್ನ ವಿನಂತಿಯನ್ನು ಹೇಳಿದ್ದಳೋ ಅಥವಾ ಹೆಚ್ಚಾಗಿ ತನಗೆ ಅವಶ್ಯಕವಾಗಿದ್ದ ಐರೋಪ್ಯ ಆಹಾರದ ಬಗ್ಗೆ ಮನವಿ ಮಾಡಿಕೊಂಡಿದ್ದಳೋ ಯಾರಿಗೆ ಗೊತ್ತು? ಸಾಹೇಬರು ಅವಳಿಗೆ ನಿತ್ಯವೂ ತಮ್ಮ ಮನೆಯಿಂದ ಯಥೇಷ್ಟವಾಗಿ ಪಾವ್‌ರೊಟ್ಟಿ (ಬ್ರೆಡ್) ಕಳಿಸತೊಡಗಿದ್ದಾರೆ.... ಮತ್ತು ನನ್ನ ಇಷ್ಟವನ್ನು ಅವರ ಮುಂದೆ ಸ್ಪಷ್ಟವಾಗಿ ಹೇಳಬೇಕೆಂದರೆ ಏಕೋ ಮಾತೇ ಬರುವುದಿಲ್ಲ. ಆದರೆ ಆ ಹೆಂಗಸು ದೊಡ್ಡ ಲೆಕ್ಚರು ಕೊಡುತ್ತಾಳೆ. ಹರಿಕತೆ ದಾಸರ ಹಾಗೆ ಅವಳು ಆಗಾಗ ನನ್ನ ಬಳಿ ಬಂದು ಸತ್ಯ ಮತ್ತು ಅಹಿಂಸೆಗಳನ್ನು ಕುರಿತು ನನಗೆ ತಿಳಿಯ ಹೇಳಲು ಪ್ರಯತ್ನಿಸುತ್ತಾಳೆ. ಅವಳ ಹಿಂದಿ, ನನ್ನ ಹಿಂದಿ ಎಷ್ಟು ಚೆನ್ನಾಗಿದೆಯೋ ಅಷ್ಟೇ ಚೆನ್ನಾಗಿದೆ. ಅವಳು ಹೇಳುವ ಈ ಹರುಕು ಮುರುಕು ಹಿಂದಿ ಮಾತುಗಳು ನನಗಂತೂ ಅರ್ಥವಾಗುವುದೇ ಇಲ್ಲ. ಅವುಗಳಲ್ಲಿ ನನಗೆ ಪರಿಚಯವಾಗಿರುವ ಪದಗಳು ಕೇವಲ 'ಸತ್ಯ', 'ಅಹಿಂಸೆ' ಮತ್ತು 'ಬಾಪೂಜಿ', ...ಈ ದೊಡ್ಡ ವಿಷಯಗಳನ್ನು ಹರಿಕತೆ ದಾಸರ ಹಾಗೆ ಮಂದಿಗೆ ವಿವರಿಸಿ ಹೇಳಬೇಕಾಗಿದ್ದರೆ ಆ ದಾಸರ ಹಾಗೆ ಇಂಪಾದ ಮಾತುಗಳನ್ನು ಕಲಿಯಬೇಡವೇ? ಗಾಂಧೀಜಿಯ ಆಶ್ರಮದಲ್ಲಿ ಈ ಲೆಕ್ಚರುಗಳನ್ನೆಲ್ಲ ಕಲಿಸಿಕೊಡುವುದಿಲ್ಲೇನು? ಬಹುಶಃ ಇಲ್ಲ. ಏಕೆಂದರೆ ಬಿಲೂ ಸಾಬರಮತಿ ಆಶ್ರಮಕ್ಕೆ ಒಮ್ಮೆ ಹೋಗಿದ್ದನಲ್ಲ. ಈ ವಿಷಯ ಅವನೇನು ಹೇಳಲಿಲ್ಲ ನನಗೆ. ಹೋಗಲಿ ಇಷ್ಟು ಜನ ಇರುವಾಗ ಈ ನರ್ಮದಾ ಬಹೆನ್ ನನ್ನ ಬಳಿಗೇ ಬಂದು ಇವುಗಳನ್ನು ಕುರಿತು ಹೆಚ್ಚಾಗಿ ಹೇಳುವುದೇಕೆ? ನಾನೇನು ಸತ್ಯ ಹೇಳುವುದಿಲ್ಲವೆ? ಅಥವಾ ಬೇರೆ ಹೆಂಗಸರು ಹಾಕಿರುವ

ಒಡವೆವಸ್ತು ನೋಡಿ ಅಸೂಯೆ* ಪಡುತ್ತೇನೆಯೆ ? ಮತ್ತೆ ಏಕೆ ನನ್ನ ಬಳಿ ಬಂದು 'ಸತ್ಯ' 'ಅಹಿಂಸೆ'ಯ ವಿಷಯವಾಗಿ ಅಷ್ಟು ಹೇಳುವುದು ? ಈಗ್ಗೆ ಇಪ್ಪತ್ತು ವರುಷಗಳಿಂದಲೂ ಇವೆಲ್ಲ ಕೇಳಿ ಕೇಳಿ ಕಿವಿ ಕಿವುಡಾಗಿಬಿಟ್ಟಿದೆ. ಎಷ್ಟು ಭಾಷಣಗಳನ್ನೆಲ್ಲ ಕೇಳಿಬಿಟ್ಟಿದ್ದೇನೆ. ಈಗ ಇವಳು ಬಂದು ಏನೋ ಹೊಸದಾಗಿ ಹೇಳಿಕೊಡುತ್ತ ಇದ್ದಾಳೆ, ಅಂತ ತಿಳಿದುಕೊಂಡಿದ್ದಾಳೆ. ಮೊದಮೊದಲು ನಮ್ಮ ಆಶ್ರಮ ಹೊಸದಾಗಿ ತೆರೆಯಲ್ಪಟ್ಟಾಗ ನಮ್ಮ ಇವರೇ ನನಗೆಷ್ಟು ಬಾರಿ ಈ ವಿಷಯಗಳನ್ನೆಲ್ಲ ತಿಳಿಯ ಹೇಳುವುದಕ್ಕೆ ಪ್ರಯತ್ನ ಪಟ್ಟಿದ್ದಾರೋ! ನಾನೇನು ಕೇಳಿಯೇನು ? ನನ್ನ ಮನಸ್ಸೆಲ್ಲ ಆಗ ನೀಲೂ, ಬಿಲೂ.... ನನ್ನ ಸಂಸಾರ... ಇವುಗಳ ಮೇಲೇ ಪೂರ್ತಿಯಾಗಿ ನೆಟ್ಟಿರುತ್ತಿತ್ತು. ಇಂಥ ವಿಷಯಗಳನ್ನೆಲ್ಲ ತಿಳಿದುಕೊಳ್ಳಬೇಕು ಎಂಬ ಇಷ್ಟವೂ ಇರಲಿಲ್ಲ. ಅರ್ಥವೂ ಆಗತಾ ಇರಲಿಲ್ಲ. ಈ ಕಿವಿಯಲ್ಲಿ ಕೇಳುವುದೆಲ್ಲ ಆ ಕಿವಿಯಾಚೆ ಹೊರಟು ಹೋಗತಾ ಇತ್ತು. ನನಗಾಗುವ ಲಾಭ ಮುಖ್ಯವಾಗಿ ಏನೆಂದರೆ, ಈ ರೀತಿಯಾದರೂ ನಮ್ಮವರ ಸಮೀಪಕ್ಕೆ ಸ್ವಲ್ಪವಾದರೂ ಬರುವ ಹಾಗೆ ಆಯಿತಲ್ಲ ಅನ್ನುವುದೊಂದೇ !

ನಮ್ಮವರು ಸದಾಕಾಲವೂ ಸ್ವಲ್ಪ ಗಂಭೀರ ಪ್ರಕೃತಿಯ ಮನುಷ್ಯರು. ಅವರ ಸಂಗಡ ಎಂದಾದರೂ ಮನಸ್ಸು ಬಿಚ್ಚಿ ಮಾತಾಡಲಿಕ್ಕೆ ಆಗತಾಯಿತ್ತೆ? ಮನಸ್ಸು ಬಿಚ್ಚಿ ಮಾತಾಡುವುದಿರಲಿ... ಹತ್ತಿರ ಬರುವುದಕ್ಕೇ ಭಯ, ಹಾಳು. ನನ್ನದಂತೂ ಬೇರೆ ಎಲ್ಲರ ಹಾಗೆ ಅಲ್ಲವೇ ಅಲ್ಲ. ಗಂಡನ ಸಂಗಡ ಮನಸ್ಸಿನಲ್ಲಿ ಬಂದಿದ್ದನ್ನು ಹೇಳದೇ ಇರುವುದೇ ಅಭ್ಯಾಸ. ನಗು ಬಂದರೂ ನಗು ತಡೆದುಕೊಳ್ಳುವುದು. ಯಾವಾಗಲೂ ಏನು ಮಾಡಿಬಿಟ್ಟಿದ್ದೇನೋ, ಎಂದು ಹೆದರಿಕೊಂಡು ಸಾಯುವುದು. ಈ ಸಂಕಟ ಅನುಭವಿಸಿದವರಿಗೇ ಗೊತ್ತು. ಇವರೇ ನನಗೆ ಏನೇನೋ ವಿಷಯಗಳನ್ನು ಹೇಳಿಕೊಡುವುದಕ್ಕೆ ಶುರುಮಾಡಿದರು. ಚರಖಾ ವಿಷಯ ಬಂದಾಗ, ದೇಶದ ವಿಷಯ ಬಂದಾಗ, ಗಾಂಧೀಜಿಯ ವಿಷಯ ಬಂದಾಗ, ಹಿಂದೂಸ್ತಾನಿಯುವರ**ಮುಂದೆ ಏನು, ಹೇಗೆ ಮಾತಾಡತಕ್ಕದ್ದು - ಈ ಪ್ರಾಂತ್ಯದಲ್ಲಿ 'ಚರಖಾ ನಮ್ಮ ತಂದೆ ತಾಯಿ, ಚರಖಾ ನಮ್ಮ ಮಕ್ಕಳು ಮೊಮ್ಮಕ್ಕಳು' ಹೀಗೆಲ್ಲ ಹೇಳಿದರೆ ಅರ್ಥವಾಗುವುದಿಲ್ಲ. ಈ ಸ್ಥಳದಲ್ಲಿ ಬೇರೆ ನಮೂನೆ ಮಾತಾಡಬೇಕಾಗುತ್ತದೆ. ಅದಕ್ಕೇ ಇವರು ಹಿಂದಿ ಭಾಷೆಯಲ್ಲಿ ಎಷ್ಟೋ ಪದ್ಯಗಳನ್ನು ಹೇಳಿಕೊಟ್ಟಿದ್ದರು.

ಇವರೆಲ್ಲ ಎಷ್ಟೆಷ್ಟೋ ಜಾಗಗಳಲ್ಲಿ ಹೋಗಿ ಲೆಕ್ಚರುಗಳನ್ನು ಕೊಡುತ್ತಾರೆ. ನಿತ್ಯವೂ ಇವರುಗಳಿಗೆ ಇಂಥ ಪದ್ಯಗಳೂ ಹಾಡುಗಳೂ ಬೇಕಾಗುತ್ತವೆ. ಎಷ್ಟೋ ಹೇಳಿಕೊಟ್ಟಿದ್ದರು. ಯಾರಿಗೆ ಜ್ಞಾಪಕ ಇರತ್ತೆ ಹಾಳು ? ಯಾವುದೋ ಒಂದು ಮನಸ್ಸಲ್ಲಿ ಇದೆ... ಏನು ಅಂದರೆ, ಯಾರೋ ಒಬ್ಬ ಹೆಂಗಸಿನ ಗಂಡನಿಗೆ ಇನ್ನೊಂದು ಮದುವೆ ಮಾಡಿಕೊಳ್ಳಲಿಕ್ಕೆ ಇಷ್ಟ ಆಗತ್ತೆ. ಅವಳಿಗೆ ಇದು ಗೊತ್ತಾಗಿ ಹೋಗತ್ತೆ. ತಿಳಿದ ಮೇಲೆ ಗಂಡನಿಗೆ "ಇಷ್ಟವಾದರೆ ಮದುವೆಮಾಡಿಕೋ... ನನ್ನ ವಿಷಯವಾಗಿ

---

* ಬಂಗಾಳಿಯಲ್ಲಿ 'ಹಿಂಸಾ' ಅನ್ನುವ ಪದಕ್ಕೆ 'ಅಸೂಯೆ' ಎಂಬ ಅರ್ಥ ಬಳಕೆಯಲ್ಲಿದೆ.

** ಹಿಂದೂಸ್ತಾನಿ ಮಾತಾಡುವ ಬಿಹಾರಿನ ಜನ.

ಯೋಚನೆ ಮಾಡುವ ಅಗತ್ಯ ಇಲ್ಲ - ನನಗೆ ಚರಖಾ ಇದೆ ಆಧಾರ..." ಅಂತ ಧಾರಾಳವಾಗಿ ಹೇಳತಾಳೆ. ಇಂಥವೆಷ್ಟೋ ಕತೆಗಳನ್ನು ಹೇಳಿಕೊಟ್ಟಿದ್ದರು. ಅವರು ಅಂದುಕೊಂಡಿದ್ದರೇನೋ, ನಾನೂ ಅವರ ಹಾಗೆ ಊರೂರು ಸುತ್ತಿಕೊಂಡು ಲೆಕ್ಚರುಗಳನ್ನು ಕೊಡುವುದಕ್ಕೆ ಆಗತ್ತೆ ಅಂತ. ಆಮೇಲೆ ಅವರಿಗೆ ಅನ್ನಿಸಿರಬೇಕು. ಛೆ, ಇವಳ ಕೈಲಿ ಇದೆಲ್ಲ ಎಲ್ಲಿ ಸಾಧ್ಯ-ಸುಮ್ಮನೆ ಬೂದಿಯಲ್ಲಿ ಹೋಮ ಮಾಡಿದ ಹಾಗಾಯಿತು ಅಂತ. ಹಾಗಂದುಕೊಂಡಮೇಲೆ ಅದರ ಗೋಜೇ ಬಿಟ್ಟು ಬಿಟ್ಟರು. ನಾನೂ ಬಿಟ್ಟು ಬಿಟ್ಟೆ. ನೀವಂತೂ ಎಲ್ಲ ಬಿಟ್ಟು ಬಿಟ್ಟು ಬಂದಿದ್ದೀರಿ ಈ ದಾರಿಯಲ್ಲಿ. ನಾನೇನು ಬೇಡ ಅಂದೆನೆ ? ನಾನು ಇಡೀ ಬದುಕು ಕಷ್ಟಪಡತಾ ಇರಬೇಕು ಅಂದರೆ ಅದಕ್ಕೂ ಸಿದ್ಧ. ಜೈಲಿಗೆ ಬಾ ಅಂತ ಕರೆದಿರಿ - ಜೈಲಿಗೂ ಬಂದೆ. ...ಆದರೆ ಹಾಗೆಂದು ಬಿಟ್ಟು ಪರಿಷೆಯಲ್ಲಿ ಸೇರುವ ಜನರ ಮುಂದೆ ನಿಂತುಕೊಂಡು "ಪ್ಯಾರೇ ಭಾಯಿಯೋಂ" (ಪ್ರಿಯ ಬಂಧುಗಳೆ !) ಎಂದು ಕೂಗು ಹಾಕು ಅಂದರೆ ಇಲ್ಲಪ್ಪ - ಸಾಧ್ಯವಿಲ್ಲ. ನಿಮ್ಮ ಆಶ್ರಮದ ಸಂಸಾರ ನಡೆಸುವುದು, ನಿಮ್ಮ ಮಕ್ಕಳನ್ನು ಸಾಕಿ ಬೆಳೆಸುವುದು ಇವೂ ಕೆಲಸವೇ ಅಲ್ಲವೆ ?

ರಾಮಗಢ್ ಕಾಂಗ್ರೆಸ್ ಅಧಿವೇಶನ ಆಗುವುದಕ್ಕೆ ಮೊದಲು ನಿಮ್ಮ ಮಾತು ಕೇಳಿ ಬಾಭನ್ ಗ್ರಾಮಕ್ಕೆ ಹೋಗಿ ಒಂದು ಅವಮಾನವಾಯಿತು. ಆಯಿತು... ಯಾಕೆ ಹೇಳೋಣ ಆ ಮಾತು. ಪಾಟನಾಯಿಂದ ಒಂದು ಪತ್ರ ಬಂದಿತ್ತು - ಆದಷ್ಟು ಬೇಗ ಕೆಲವರು ಸ್ವಯಂ ಸೇವಕಿಯರನ್ನು ಕಳುಹಿಸಿ ಎಂದು. ಬಹಳ ತುರುತಾದ ಆವಶ್ಯಕತೆ. ಈಗಲೇ ಅವರಿಗೆ ತರಬೇತು ಕೊಡಲಾಗುತ್ತದೆ. ಇಲ್ಲದೆ ಹೋದರೆ ಕಾಂಗ್ರೆಸ್ ಅಧಿವೇಶನದ ಸಮಯಕ್ಕೆ ಅವರು ತಯಾರಾಗುವುದು ಸಾಧ್ಯ ಇಲ್ಲ. ಈ ಸ್ವಯಂ ಸೇವಕಿಯರಿಗೆ ತರಬೇತು ಕೊಡಬೇಕೆಂದು ಮಹಾರಾಷ್ಟ್ರದಿಂದ ಒಬ್ಬಾಕೆ ದೊಡ್ಡ ದರ್ಜೆಯ ಮಹಿಳೆ ಆಗಲೇ ಬಂದು ಗ್ರಾಮಗಢದಲ್ಲಿ ಕೂತಿದ್ದಾಳೆ - ರಾಜ ಹೋದರೆ ಮಾನಹೋಗತ್ತಂತೆ - ಜಿಲ್ಲೆಯ ಮಾನ ಉಳಿಯಲಿಕ್ಕೆ ಇದೊಂದೇ ದಾರಿಯಂತೆ, ಪಾಪ !

ಜೈಲಿಗೆ ಹೋಗಲಿಕ್ಕೂ ಸಿದ್ಧವಾಗಿರುವ ಹೆಂಗಸರು ಎಷ್ಟು ಅಂದರೆ ಕೇವಲ ಐದು ಮಂದಿಯೇ ಇದ್ದದ್ದು. ನಾನು, ಹರದಾಗ್ರಾಮದ ದುಬೇಯಿನ್, ಬಹುಲಿಯಾಜಿ, ಸರಳಾದೇವಿ ಮತ್ತು ಚೋಪಡಾದ ಖದೀರುನ್ನೀಸ. ಇವಳಿಗೋ ಕಣ್ಣಲ್ಲಿ ಪೊರೆ ಬಿದ್ದು ಕೆಲವು ವರುಷಗಳಿಂದ ಹೊರಗೇ ಬರುತ್ತಿರಲಿಲ್ಲ. ಸರಸ್ವತಿ ಈಸಲ ಬಂದಿದಾಳೆ. ಆಗ ನನಗೆ ಇವರ ಹುಕುಂ ಬಂತು. ಏನೆಂದರೆ, ಕೋಥಾಥಾಣೆಯಲ್ಲಿನ ಕಾಂಗ್ರೆಸ್ ಕೆಲಸಗಾರರ ಮನೆ ಮನೆಗೂ ಹೋಗು. ಅವರಿಗೆ ಹೇಳಿ ಪುಸಲಾಯಿಸಿ ಅವರವರ ಮನೆ ಹೆಂಗಸರಿಂದ ಸ್ವಯಂಸೇವಕಿಯ ಪ್ರತಿಜ್ಞಾ ಪತ್ರಗಳಿಗೆ ರುಜು ಅಥವಾ ಹೆಬ್ಬೆಟ್ಟಿನ ಗುರುತು ಹಾಕಿಸಿಕೊಂಡು ಬರಬೇಕು - ಗಂಡು ಹುಡುಗರು ಹೋದರೆ ಆಗುವುದಿಲ್ಲ. ನೀನೇ ಹೋಗಬೇಕು. ಇದಕ್ಕೆ ಸೇರಿಕೊಳ್ಳುವವರು ಈ ನೆಪದಿಂದ ದುಡ್ಡಿಲ್ಲದೆ ಪುಗಸಟ್ಟೆ ಕಾಂಗ್ರೆಸ್ ನೋಡಿಕೊಂಡು ಬರಬಹುದು. ಯಾವ ವಿಧವಾದ ವಯಸ್ಸಿನ ಬಂಧನವಿಲ್ಲ. ಹೆಚ್ಚು ವಯಸ್ಕರಾದ ಹೆಂಗಸರಾದರೆ ಅವರಿಗೆ ತುಂಬಾ ಹಗುರವಾದ ಕೆಲಸಗಳನ್ನು ಕೊಡಲಾಗುತ್ತೆ - ಇತರ ಸ್ವಯಂ ಸೇವಕಿಯರ ಮಕ್ಕಳನ್ನು

ನೋಡಿಕೊಳ್ಳುವಿಕೆ, ಉಗ್ರಾಣದ ಬೀಗದ ಕೈಗಳನ್ನು ಇಟ್ಟುಕೊಳ್ಳುವುದು - ಮತ್ತು ಇದೇ ನಮೂನೆಯ ಕೆಲವು ಸಣ್ಣ ಸಣ್ಣ ಕೆಲಸಗಳು. ಇಂಥವೇ ಎಷ್ಟೋ ಸಣ್ಣಪುಟ್ಟ ಉಪದೇಶಗಳನ್ನು ನಾನು ಹೊರಡುವಾಗ ಕೊಟ್ಟರು ನಮ್ಮ ಮನೆಯವರು. ವಾಲಿಂಟೀರ್ ಮಿಸ್ತ್ರಿ ನನ್ನನ್ನು ಎತ್ತಿನಗಾಡಿಯಲ್ಲಿ ಬಾಭನ್ ಗ್ರಾಮಕ್ಕೆ ಕರೆದುಕೊಂಡು ಬಂದ. ಮಧ್ಯಾಹ್ನ ಆ ಕೇರಿಯ ಹೆಂಗಸರೆಲ್ಲ ಶ್ರೀಮತಿ ರುಖಾ ಅವರ ಮನೆಯ ಅಂಗಳದಲ್ಲಿ ಕೂಟ ಸೇರಿದರು. ನಾನು ಅವರಿಗೆಲ್ಲ ತಿಳಿಯ ಹೇಳಿದೆ. ಕಾಂಗ್ರೆಸ್ ಸ್ವಯಂಸೇವಕಿಯಾಗಬೇಕಾದರೆ ಏನು ಮಾಡಬೇಕು – ಎಂದೆಲ್ಲ ವಿವರಿಸಿದೆ. ಅವರೆಲ್ಲ ನನ್ನನ್ನು ನಾನಾ ವಿಧವಾಗಿ ಪ್ರಶ್ನೆ ಮಾಡಿದರು. ಕಾಲಿಗೆ ಚಪ್ಪಲಿ ಹಾಕಿಕೊಳ್ಳದೆ ಹೋದರೆ ಆಗತ್ತಾ ? ಕುದುರೆ ಮೇಲೆ ಸವಾರಿ ಮಾಡಬೇಕಾಗತ್ತಾ ? ಕುಂಕುಮ ಹಚ್ಚಿಕೊಳ್ಳಬಹುದಾ ? ಭಾನುವಾರ ಉಪವಾಸವ್ರತ ಮಾಡುವುದನ್ನು ಬಿಡಬೇಕಾ ? ಇಂಥವೇ ಕೆಲಸಕ್ಕೆ ಬಾರದ ಹುಚ್ಚು ಪ್ರಶ್ನೆಗಳು. ಅವರಿಗೆಲ್ಲ ಉತ್ತರ ಹೇಳುವುದೇ ಒಂದು ತಲೆ ನೋವು. ಕಡೆಗೆ ಕೆಲವರು ಒಪ್ಪಿಗೆ ಕೊಟ್ಟರು. ಆದರೆ ಒಂದು ಷರತ್ತಿನ ಮೇಲೆ. ಅವರ ಗಂಡು ಮಕ್ಕಳ ಆಕ್ಷೇಪಣೆ ಇಲ್ಲದೆ ಹೋದರೆ ಮಾತ್ರ... ಆಮೇಲೆ ಆ ಆಕ್ಷಪಣೆಗಳನ್ನು ಎದುರಿಸುವುದಕ್ಕೆ ಅವರುಗಳ ಮನೆಗಳಿಗೆಲ್ಲ ಹೋಗಿ ಅವರ ಮನೆ ಗಂಡಸರನ್ನು ಹೋಗಿ ಭೆಟ್ಟಿಯಾದೆ. ಅವರೆಲ್ಲ ಮೊದಲೇ ಸ್ವಲ್ಪ ಸ್ವಲ್ಪ ಪರಿಚಯವಾಗಿದ್ದವರೇ. ಎಷ್ಟೋ ಸಲ ಅವರೆಲ್ಲ ಆಶ್ರಮಕ್ಕೆ ಬರುತ್ತಿದ್ದವರು. ಅವರೂ ಸಹ ಮೊದಲಲ್ಲಿ ಒಪ್ಪಿಗೆ ಕೊಡಲು ಹಿಂಜರಿದರು. ಕಡೆಗೆ ಯಾರೋ ಒಬ್ಬರು ಒಪ್ಪಿಕೊಂಡ ಮೇಲೆ ಉಳಿದವರೆಲ್ಲ ಒಟ್ಟಿಗೆ ಒಪ್ಪಿಕೊಂಡು ಬಿಟ್ಟರು. ಆಮೇಲೆ ನಾನು ಪ್ರತಿಜ್ಞಾಪತ್ರಿಕೆಗಳನ್ನು ತೆಗೆದುಕೊಂಡು ಮತ್ತೆ ಹೋದೆ ಅವರ ಮನೆಗಳಿಗೆ - ಅವಕ್ಕೆ ರುಜು ಹಾಕಿಸಿಕೊಂಡು ಬರಬೇಕಲ್ಲ ? ಮಸಿ ಕುಡಿಕೆ, ಲೇಖನಿ ಎಲ್ಲಾ ಬಂದುವು. ರುಜುಗಳಾದುವು. ಕೆಲವರ ಹೆಬ್ಬೆಟ್ಟು ಗುರುತು ಸಹ ಆಯಿತು. ಶ್ರೀಮತಿ ರುಖಾ ಅವರ ಮಗಳು ಶಕುಂತಲ ರುಜು ಮಾಡಿಸಿಕೊಳ್ಳುವ ಮೊದಲು ಪ್ರತಿಜ್ಞಾ ಪತ್ರಗಳ ಒಕ್ಕಣೆಯನ್ನು ಎಲ್ಲರಿಗೂ ಕೇಳುವ ಹಾಗೆ ಓದಿದಳು: "ನಾನು ದೇಶಕ್ಕೋಸ್ಕರ ಪ್ರತಿಯೊಂದು ವಿಧವಾದ ತ್ಯಾಗ ಮಾಡಲಿಕ್ಕೂ ಸಿದ್ಧಳಾಗಿರುತ್ತೆ".

ಕೂಡಲೇ ಒಬ್ಬ ಹೆಂಗಸು ಕೂಗಿದಳು "ಹ್ಞಾಂ... ತ್ಯಾಗ ಅಂದರೆ ಏನು ? ಅದರ ಸರಿಯಾದ ಅರ್ಥ ಹೇಳಿ ನಮಗೆ. ಏನಮ್ಮಾ ಬಂಗಾಳಿ ಅಮ್ಮಾವರೆ, ತ್ಯಾಗಗೀಗ ಈ ಪತ್ರದಲ್ಲಿ ಬರೆದುಕೊಂಡು ಬಂದಿದ್ದೀರಲ್ಲ, ನಮ್ಮ ಹತ್ತಿರ ರುಜು ಮಾಡಿಸಲಿಕ್ಕೆ - ಇದು ಸರಿಯಾ ನೀವು ಮಾಡಿದ ಕೆಲಸ ?"

ಈ ಕೂಗು ಕೇಳಿ ಮೊದಲು ಅವರೆಲ್ಲ ಸುಮ್ಮನಿದ್ದು ಪರಸ್ಪರ ಮುಖ ನೋಡಿಕೊಂಡರು. ಆಮೇಲೆ ಶುರುವಾಯಿತು - ಅನುಮಾನ. ಗುಸುಗುಸು ಮಾತುಗಳು. ಅಸಮಾಧಾನ, ಕೋಪ. ಬೇಲ್‌ಗರಮಿಯಾಳ ಅಜ್ಜಿ ಸ್ವಲ್ಪ ರೇಗಿದ ದನಿಯಲ್ಲಿ ಹೇಳಿದಳು - "ನಮಗೆ ಈ ಮಹಾತ್ಮಾಗಿಹಾತ್ಮಾ ಇವೆಲ್ಲ ತಿಳಿಯೋದಿಲ್ಲ. ಆದರೆ ಇದೇನು ನೀವು ಮಾಡೋ ಕೆಲಸ ? ನೀವೆಲ್ಲ ಮುಸಲ್ಮಾನರಾಗಬೇಕು ಅಂತ ಇದ್ದರೆ ಆಗಿಕೊಂಡು ಹೋಗಿ. ನಮ್ಮ ಜಾತಿ ಕೆಡಿಸುವುದು ಯಾಕೆ ನಾ ಕೇಳೋದು ? ಈ ಕೆಟ್ಟ ಉದ್ದೇಶ್ಯದಿಂದ ಇಷ್ಟು ದೂರ ನೀವು ಆಶ್ರಮದಿಂದ ಬಂದಿದ್ದೀರಾ ಇಲ್ಲಿಗೆ ?

ಛೀ! ನಾಚಿಗೆ ಆಗೋದಿಲ್ಲವಾ ನಿಮಗೆ? ಗೋವು ನಮಗೆಲ್ಲ ಮಾತೆ... ಸಾಕ್ಷಾತ್ ಭಗವತಿ. ನಮ್ಮ ಜಾತಿ ಹಾಳು ಮಾಡಲಿಕ್ಕೆ ಅಂತ ನಮ್ಮಿಂದ ದಸ್ತಖತ್ ಮಾಡಿಸಿಕೊಳ್ಳಲಿಕ್ಕೆ ಬಂದಿದ್ದೀರಾ... ಹ್ಯಾಂ?" ...ಎಲ್ಲರೂ ಸೇರಿದ್ದೆ ನನ್ನನ್ನು ಮುತ್ತಿಕೊಂಡು 'ಛೀ'ಮಾರಿ ಮಾಡಲಿಕ್ಕೆ ಶುರು. ನಾನೋ ಏನೂ ತೋಚದೆ ಮೂಕಳಾಗಿ ಎಲ್ಲರ ಕಡೆಯೂ ನೋಡತೊಡಗಿದೆ. ಅವರಿಗೆ ಏನು ಜವಾಬು ಹೇಳುವುದೋ ತೋಚಿದರೆ ತಾನೆ? ನಿಜವಾಗಿ, ತ್ಯಾಗ ಅನ್ನುವ ಮಾತು ಇಲ್ಲೇಕೆ ಬರೆಯಬೇಕಾಗಿತ್ತು? ಈ ಇವರೋ? ನಾನು ಹೊರಡುವುದಕ್ಕೆ ಮೊದಲು ಏನೇನೋ ತಿಳಿಯ ಹೇಳಿದ್ದರು - ಇದರ ವಿಷಯ ಯಾಕೆ ಹೇಳಲಿಲ್ಲಾ... ಬಹುಶಃ, ಹಿಂದೂಗಳ ಪ್ರತಿಜ್ಞಾಪತ್ರದ ಬದಲಾಗಿ ಮುಸಲ್ಮಾನರ ಪ್ರತಿಜ್ಞಾಪತ್ರಗಳನ್ನು ಕೊಟ್ಟು ಬಿಟ್ಟಿದ್ದಾರೆ, ಮರೆತು. ನನಗೆ ಆಗ ಮೈ ಕೈ ಎಲ್ಲ ಬೆವರುವುದಕ್ಕೆ ಶುರು ಆಯಿತು. ಹೇಗೋ ಉಸಿರು ಹಿಡಿದು ಧೈರ್ಯವಹಿಸಿ ಅವರಿಗೆ ಸಮಾಧಾನ ಹೇಳಿದೆ. ನನಗಂತೂ ಹಿಂದಿ ಬರುವುದಿಲ್ಲ. ಬಹುಶಃ ಪತ್ರಗಳು ಅದಲು-ಬದಲಾಗಿವೆ ಅಂತ. ಅಷ್ಟಕ್ಕೆ ಸಮಾಧಾನ ಆಗುವವರೇ ಅವರು? ಕಡೆಗೆ ಹೊರಗಡೆ ಬಂದು ಶ್ರೀಮತಿ ಝಾ ಅವರಿಗೆ ಪತ್ರಗಳನ್ನು ತೋರಿಸಿ "ಇನ್ನೊಂದು ಸಲ ನಾನು ಬರಬೇಕು ಅಂತ ತೋರುತ್ತೆ ಬೇರೆ ಪ್ರತಿಜ್ಞಾಪತ್ರಗಳನ್ನ ತಗೊಂಡು" ಅಂದೆ. ಆಕೆ "ಏನಾಗಿದೆ? ಯಾಕೆ?" ಎಂದು ಪತ್ರ ಓದಿದರು. ಓದಿ ಗಟ್ಟಿಯಾಗಿ ನಗಲಿಕ್ಕೆ ಶುರು ಮಾಡಿದರು. ಆಮೇಲೆ ಹೇಳಿದರು, "ಇದರಲ್ಲಿ ಸರಿಯಾಗೇ ಬರೆದಿದೆ. ಹಿಂದಿಯಲ್ಲಿ ಕುರ್‌ಬಾನಿ ಅಂದರೆ ತ್ಯಾಗ ಅಂತ ಅರ್ಥ." ನೋಡಿದಿರಾ, ಹೇಗಿದೆ ಸಮಾಚಾರ! ನನಗೆ ಹೇಗೆ ತಿಳಿಯಬೇಕು, ಹಾಳು ಭಾಷೆ. ಎಲ್ಲಿ ಕುರ್‌ಬಾನಿ.... ಎಲ್ಲಿ ತ್ಯಾಗ? ನನಗೆ ಹೇಗೆ ತಿಳಿಯಬೇಕು ಇದೆಲ್ಲ? ಹೋಗಲಿ, ನನಗಂತೂ ತಿಳಿಯಲಿಲ್ಲ. ಆ ಜಗುಲಿ ಮೇಲೆ ಅಷ್ಟು ಜನ ಹೆಣ್ಣು ಮಕ್ಕಳು ಸೇರಿದ್ದರಲ್ಲ - ಅವರಲ್ಲಿ ಯಾರಿಗೂ ಗೊತ್ತಾಗಲಿಲ್ಲವೆ? ಹಾಗಾದರೆ ಅಂಥ ಮಾತನ್ನು ಬರೆಯುವುದಕ್ಕೆ ಅವಶ್ಯಕತೆ ಏನು? ಯಾರಿಗೋಸ್ಕರ ಬರೆಯಬೇಕೋ ಅವರಿಗೇ ಅರ್ಥವಾಗದು. ಆದರೂ ಅದನ್ನೇ ಬರೆಯಬೇಕು. ಅಂತೂ ಹೇಗೋ ಒಂದು ರೀತಿ ಅವತ್ತಿನ ಕೆಲಸ ಮುಗಿಯಿತು ಅಂತ ಇಟ್ಟುಕೊಳ್ಳಿ. ನಾನು ಆಶ್ರಮಕ್ಕೆ ವಾಪಸ್ಸು ಬಂದು ಇವರಿಗೆ ಹೇಳಿದೆ, "ಇಕೋ, ತಗೊಳ್ಳಿ, ನಿಮ್ಮ ಪತ್ರಗಳು... ನಿಮ್ಮ ಕೆಲಸಕ್ಕೆ ನಾಳೆಯಿಂದ ಸಾವಿರ, ಕೋಟಿ ನಮಸ್ಕಾರ. ಇನ್ನು ಮೇಲೆ ನಾನೇನಾದರೂ ನಿಮ್ಮ ಕಾಂಗ್ರೆಸ್ ಕೆಲಸಕ್ಕೆ ಹೊರಗೆ ಹೋದೆ ಅಂದರೆ...." ಸರಿ ಅವತ್ತಿನಿಂದ ಇದನ್ನು ಹಿಡಿದು ಈ ಬಿಲೂ, ನೀಲೂ ನನ್ನನ್ನು ಎಷ್ಟು ಗೇಲಿಮಾಡಿದರೋ!

ಸಖಾವತೀಜೀಯವರ ಮಗು ಸುಮ್ಮನೆ ಅರಚುತ್ತ ಇದೆ, "ಬಾಂಗಾಜೀ.... ಏಯ್ ಬಾಂಗಾಜೀ." ಅವನು ನನ್ನನ್ನು ಕರೆಯುವುದು ಹಾಗೇ. ನನ್ನ ಹತ್ತಿರ ತುಂಬಾ ಸಲಿಗೆ. ಹಗಲು, ರಾತ್ರಿ ನನ್ನ ಸುತ್ತಲೂ ತಿರುಗುತ್ತಿರುತ್ತಾನೆ – ಅವನ ಗುರಿ ಏನೆಂದರೆ – ಏನಾದರೂ ಮಾಡಿ ನಾನು ಅವನನ್ನು ತೊಡೆ ಮೇಲೆ ಕೂಡಿಸಿಕೊಳ್ಳುವ ಹಾಗೆ ಮಾಡಬೇಕೆಂದು. ಬಹಳ ತುಂಟತನ ಮಾಡಿದಾಗ ಅಥವಾ ತನ್ನ ಮಾತು ಕೇಳದೆ ಇದ್ದಾಗ ಅವನ ತಾಯಿ ಅವನನ್ನು ನನ್ನ ಹತ್ತಿರ ಕೊಟ್ಟು ಹೋಗುತ್ತಾಳೆ. ನನ್ನ ತೊಡೆ

ಮೇಲೆ ಬಂದೊಡನೆ ಸುಮ್ಮನಾಗಿ ಬಿಡುತ್ತಾನೆ. ಈಗ ಅವನನ್ನು ಮೊದಲೇ ತಂದುಕೂಡಿಸಿಕೊಂಡಿದ್ದರ ಚೆನ್ನಾಗಿತ್ತು. ಈ ಮನೌಚನಿಯಾ ಯಾವಾಗಲೋ ನಿದ್ದೆ ಹೋಗಿಬಿಟ್ಟಿದ್ದಾಳೆ. ಈಗಂತೂ ಅವಳ ಡ್ಯೂಟಿ ಮುಗಿದು ಹೋಗಿದೆ. ಅವಳೇಕೆ ಎಚ್ಚರವಿರಬೇಕು ? ಈಗ ಗುಲಕಟ್ಟಿಯ ಡ್ಯೂಟಿ. ಅವಳೂ ಸಹ ಕೈಯಲ್ಲಿ ಬೀಸಣಿಗೆ ಹಿಡಿದುಕೊಂಡೇ ನನ್ನ ಪಕ್ಕದಲ್ಲಿ ಕೂತು ಹಾಗೇ ತೂಕಡಿಸುತ್ತಿದ್ದಾಳೆ. ಇಡೀ ದಿನ ಬೇಳೆನುಚ್ಚನ್ನು ಆರಿಸುವ ಕೆಲಸ ಮಾಡಿ ಸುಸ್ತಾಗಿದ್ದಾಳೆ. ಈಗ ಇಡೀ ರಾತ್ರಿ ಜಾಗರಣೆ ಮಾಡಲು ಹೇಗೆ ಸಾಧ್ಯ ? ಜೈಲಿಗೆ ಬಂದರೆ ಏನು ? ನಿದ್ದೆ, ಗಿದ್ದೆ ಮನೆಯಲ್ಲೇ ಬಿಸಾಟು ಬರಬೇಕೆಂದಿದೆಯ ? ಅವಳು ಮಾಡಿದ ತಪ್ಪು ತಾನೇ ಏನು ? ಅದೇನು ಅಷ್ಟು ಘೋರವಾದ ತಪ್ಪೇ ? ಯಾವ ಕೆಟ್ಟ ಚಾಳಿಯ ಗಂಡನ ಹಿಂಸೆ ತಡೆಯಲಾರದೆ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನ ಮಾಡಿದ್ದಳು. ಚೂರಿಯಿಂದ ತನ್ನ ಕುತ್ತಿಗೆಯನ್ನು ತಾನೇ ಕುಯಿದುಕೊಳ್ಳಲು ಪ್ರಯತ್ನ ಮಾಡಿದ್ದಳು. ನೆನಸಿಕೊಂಡರೆ ಮೈ ಜುಮ್ ಎನ್ನುತ್ತದೆ. ಈಗಲೂ ಅವಳ ಕುತ್ತಿಗೆಯ ಕಡೆ ನೋಡುವುದಕ್ಕಾಗುವುದಿಲ್ಲ. ಗಾಯವೇನಿಲ್ಲ. ಆದರೂ ಕುತ್ತಿಗೆಯ ನಾಳ ಕಡಿದುಹೋಗಿ ಆ ಸ್ಥಳದಲ್ಲಿ ಒಂದು ರಂಧ್ರ ಆಗಿಹೋಗಿದೆ. ನಾಳದ ಒಳಭಾಗ ಕಾಣಬರುತ್ತದೆ. ಆ ಕಡಿದ ಜಾಗದ ಮೇಲೆ ಇಪ್ಪತ್ತನಾಲ್ಕು ಗಂಟೆಯೂ ಒಂದು ವಸ್ತ್ರದಿಂದ ಮುಚ್ಚಿಕೊಂಡಿರುತ್ತಾಳೆ. ಅದು ಇಲ್ಲದೆ ಹೋದರೆ ಮಾತಾಡುವಾಗಲ್ಲ ಆ ರಂಧ್ರದಿಂದ 'ಫಸ್-ಫಸ್' ಎಂದು ಗಾಳಿ ಹೋಗುವ ಶಬ್ದವಾಗುತ್ತದಂತೆ ಮತ್ತು ಊಟ ಮಾಡುವಾಗೆಲ್ಲ ತಿಂದ ಪದಾರ್ಥವೆಷ್ಟೋ ಅದರ ಮೂಲಕ ಹೊರಗೆ ಹೋಗಿ ಬೀಳುತ್ತಿರುತ್ತೆ ಅಂತಾಳೆ. ಆದರೆ ಈ ವಸ್ತ್ರದಿಂದ ಸುತ್ತಿದ್ದರೆ ಊಟ ಮಾಡುವಾಗ ನೀರು ಕುಡಿಯುವಾಗ ಅದು ಒದ್ದೆಯಾಗಿ ಪಾಪ, ನೋಡಿ, ಈ ನಿರ್ಭಾಗ್ಯಳ ಗ್ರಹಚಾರ! ಆತ್ಮಹತ್ಯೆಯಲ್ಲಿ ಸತ್ತು ಹೋಗಿದ್ದರೆ ದುಃಖದಿಂದ ಪಾರಾಗುತ್ತಿದ್ದಳು. ಗಂಡನಿಗೂ ನಿಸೂರಾಗುತ್ತಿತ್ತು. ಆದರೆ ಅವಳ ಕೆಟ್ಟ ಅದೃಷ್ಟ, ಸಾಯಲಿಲ್ಲ, ಏನೂ ಇಲ್ಲ. ಆತ್ಮಹತ್ಯೆಯ ಪ್ರಯತ್ನ ಮಾಡಿದ ತಪ್ಪಿಗೇ ಒಂದು ವರುಷ ಕಠಿಣ ಸಜಾ ಆಗಿ ಜೈಲಿಗೆ ಹಾಕಲ್ಪಟ್ಟಿದ್ದಾಳೆ. ಅಹಾಹಾ ? ಏನು ವಿಚಿತ್ರ ಇವರ ಕಾನೂನು ? ಸ್ವಂತ ಪ್ರಾಣದ ಮೇಲೇ ಯಾರಿಗೂ ಅಧಿಕಾರ ಇಲ್ಲ. ಸಾಯುವುದಕ್ಕೆ ಇಷ್ಟವಿಲ್ಲ ದಿರುವವರಿಗೆ ಫಾಸಿಗೆ ಹಾಕುತ್ತಾರೆ. ಸತ್ತರೆ ಸಾಕಪ್ಪ ದೇವರೇ ಎಂದು ಸಾಯಲು ಹೋಗುವವರನ್ನು ಹಿಡಿದು ಜೈಲಲ್ಲಿ ಇಡುತ್ತಾರೆ.

ಈ ಹುಡುಗನೋ ಸುಮ್ಮನೆ ಅರಚುತ್ತ ಇದ್ದಾನೆ. ಗಂಟಲು ಒಡೆಯುವ ಹಾಗೆ ಅಳುತಾನೆ. ಆದರೆ ಆ ತಾಯಿಗಂತೂ ಅದು ಕಿವಿಯ ಮೇಲೆ ಬೀಳುವ ಹಾಗಿಲ್ಲ. ಈ ಮಗು ಇಡೀ ದಿನ ನನ್ನ ಹತ್ತಿರ ಬರಲಾಗಲಿಲ್ಲ. ಸುಖಾವತೀಜೀ ಮಗನಿಗೆ ಹೇಳತಾಳೆ - "ಬೇಡ ಕಣೋ, ಇವತ್ತು ಬಾಂಗಾಜೀ ಹತ್ತಿರ ಹೋಗಬೇಕು ಅಂತ ಹಟ ಮಾಡಬೇಡವೋ, ಲಾಡಲೀ (ಮುದ್ದು) ಇವತ್ತು ಬಾಂಗಾಜೀಗೆ ಮೈ ಸರಿಯಾಗಿಲ್ಲ ಕಣೋ ನಾಳೆ ಹೋಗೋ, ಇವತ್ತು ಬೇಡ ಲಾಡಲೀ. ಬಾಂಗಾಜೀಗೆ ಮೈ ಸರಿಯಾಗಿಲ್ಲದೆ ಹೋದರೆ ಅವರಿಗೆ ಬೇಜಾರಾಗತ್ತೆ. ಮಗೂ ಬೇಡ, ನನ್ನ ಲಾಡಲೀ!" ಎಂದು ಸಂತೈಸಲಿಕ್ಕೆ ಹೋಗತಾಳೆ. ಮಗು ಅವಳ ಮಾತು ಕೇಳುತ್ತ

ಅರ್ಥ ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸುತ್ತ ಸ್ವಲ್ಪ ಹೊತ್ತು ಸುಮ್ಮನಾಗುತಾನೆ. ಆಮೇಲೆ ಮತ್ತೆ "ಬಾಂಗಾಜೀ" ಅಂತ ಅರಚಲಿಕ್ಕೆ ಪ್ರಾರಂಭ... ತಾಯಿಗೆ ರೋಸಿ ಹೋಗತ್ತೆ. ಮಗುವನ್ನ ಗದರಿಸುತ್ತಾ, "ಸುಮ್ಮನಿರು ಸಾಕು ಚಂಡಿ ಹುಡುಗಾ! ನೋಡಿಲ್ಲಿ. ಇಲ್ಲಿ ಗುಲಕಟ್ಟೀ ಇದಾಳೆ - ಹಿಡಿದುಕೊಂಡು ಹೋಗಿ ಬಿಡತಾಳೆ!" ಮಗು ಸುಮ್ಮನಾಗಿ ಬಿಡತ್ತೆ... ಬಹುಶಃ ಭಯದಿಂದ ಅಂತ ಕಾಣುತ್ತೆ. ಮತ್ತೆ ಒಂದೆರಡು ಕ್ಷಣ ಆಗುತ್ತಲೂ ಶುರು - "ಬಾಂಗಾಜೀ-ಈ-" "ಮತ್ತೆ ಶುರು ಮಾಡಿತೀಯಾ ? ಏನು ಹಾಳು ಹಟವಮ್ಮಾ... ಇಷ್ಟು ಸಣ್ಣ ಮಗು ಕೂಡ... ತಡೀ ನಿನಗೆ..." ಆಮೇಲೆ ಪಟ್ ಪಟ್ ಎಂದು ಎರಡೇಟು ಬಿಗಿಯುತ್ತಾಳೆ ಮಗುವಿನ ಬೆನ್ನ ಮೇಲೆ. ಆಹಾ, ಏನು ತಾಯಿ ? ಒಂದಿಷ್ಟು ದಯಾದಾಕ್ಷಿಣ್ಯ ಇಲ್ಲ! ಗುಲಕಟ್ಟೀ, ಏ ಗುಲಕಟ್ಟೀ, ಆ ಮಗೂನ ಸ್ವಲ್ಪ ಈಕಡೆ ಕರೆದುಕೊಂಡು ಬಾಮ್ಮ. ಗುಲಕಟ್ಟಿಯು ಒಡಕು ಒಡಕು ದನಿಯಲ್ಲಿ ಉತ್ತರ ಕೊಡುತ್ತಾಳೆ– "ಆ ಮಗು ನನ್ನ ಹತ್ತಿರ ಎಲ್ಲಿ ಬರತಾನವ್ವ ?" ಈ ಗುಲಕಟ್ಟೀ ಎಷ್ಟು ಮೈಗಳ್ಳಿ! ನಿದ್ದೆ ಬರತಾ ಇದೆ. ಏಳುವುದಕ್ಕೇ ಮನಸ್ಸು ಬರುವುದಿಲ್ಲ. ಅದಕ್ಕೊಂದು ನೆಪ ಹೇಳತಾಳೆ. ನಾನು ಗುಲಕಟ್ಟಿಯನ್ನ ಕೂಗಿದುದನ್ನ ಕೇಳಿ ಬಹುರಿಯಾಜೀ, ಕಮಲಾದೇವಿ ಎಲ್ಲರೂ ಬಂದು ಕೇಳುತ್ತಾರೆ- "ಏನು ಬೇಕು....ಏನು ಕೇಳತಾ ಇದ್ದಿರಿ ? ಸ್ವಲ್ಪ ನೀರು ಬೇಕೇನು ?" ಸರಿ, ಶುರು ಆಯಿತು ಇನ್ನು. ಹಾಳು, ಹೋಗೀ ಹೋಗಿ ನಾನೇಕೆ ಈ ಗುಲಕಟ್ಟಿಯನ್ನ ಕೂಗಲಿಕ್ಕೆ ಹೋದೆನಪ್ಪ ಅನ್ನಿಸಿತು.

ಇವರೆಲ್ಲ ಹತ್ತಿರದಲ್ಲೇ ಮಾತು, ಕತೆ ಇಲ್ಲದೆ ಕೂತೇ ಇದ್ದಾರೆ ಅನ್ನುವುದು ನನಗೆ ಹೇಗೆ ಗೊತ್ತಾಗಬೇಕು ? ನಿಜವಾಗಿಯೂ ಗುಲಕಟ್ಟಿಯನ್ನ ನೋಡಿದ್ದೇ ಮಗು ದಿಗಿಲಿಂದ ಜಡ್ಡಾಗಿ ಕೂತು ಬಿಟ್ಟಿದೆ. ಲೂಸಿ ಜಮಾದಾರಿಣಿಗೆ ಆಗಾಗ ಬಟ್ಟೆ ಒಗೆಯುವ ಸಾಬೂನು ಕೊಟ್ಟು ನಮ್ಮ ವಾರ್ಡಿನ ಕೆಲವರು ಬೀಡಿಗಳನ್ನು ಕೊಳ್ಳುವರು. ಆಮೇಲೆ ಗುಲಕಟ್ಟಿಗೆ ಆ ಬೀಡಿಗಳನ್ನು ಕೊಟ್ಟು ಎಲ್ಲರು ತಮಾಷೆ ನೋಡುತ್ತಾರೆ. ಗುಲಕಟ್ಟಿ ಬೀಡಿ ಸೇದುವಾಗ ಅವಳ ಕೊರಳಿನ ರಂಧ್ರದಿಂದ ಹೊಗೆ ಹೊರಗೆ ಬರುತ್ತಿದ್ದರೆ ಇವರಿಗೆಲ್ಲ ನೋಡಲು ಮಜಾ! ಗುಲಕಟ್ಟಿಗೆ ನಾಲ್ಕು ಬೀಡಿ ಕೊಟ್ಟರೆ ಸಾಕು, ಅವಳು ಕತ್ತಿಗೆ ಸುತ್ತಿರುವ ಪಟ್ಟಿಯನ್ನು ಬಿಚ್ಚಿ ರಂಧ್ರದಿಂದ ಹೊಗೆ ಹೊರಗೆ ಬರುವುದನ್ನು ತೋರಿಸುತ್ತಾಳೆ. ಆ ಮಗು, ಲಾಡ್ಲೀ ಇವಲ್ಲ ನೋಡಿದರೆ ಭಯದಿಂದ ಕಿರುಚಿಕೊಳ್ಳುತ್ತಾನೆ. ಎಷ್ಟೋ ದೊಡ್ಡವರಿಗೇ ಮೈ ಜುಮ್ಮೆನ್ನುತ್ತೆ.... ಇನ್ನು ಮಕ್ಕಳಿಗೆ ? ದೇವರೇ ಗತಿ!

ನನ್ನ ಬಾಯಿಂದ ಯಾವ ಜವಾಬನ್ನೂ ಕೇಳದೆ ಬಹುರಿಯಾಜೀ ತೂಕಡಿಸುತ್ತಿರುವ ಗುಲಕಟ್ಟಿಯನ್ನ ಮೈ ಹಿಡಿದು ಅಲ್ಲಾಡಿಸುತ್ತ, "ಬಂಗಾಳೀ ಅಮ್ಮಾವರು ಏನು ಹೇಳತಾಯಿದ್ದರೇ ?" ಎಂದು ಕೇಳುತ್ತಾಳೆ.

"ಮಾಯಿಜೀ ಲಾಡಲೀನ ಕರಕೊಂಡು ಬಾ ಅಂತ ಹೇಳತಾಯಿದ್ದರು."

"ಓ ಹಾಗೇನು ? ನಾನೇ ಹೋಗಿ ಕರಕೊಂಡು ಬರತೇನೆ. ನೀನು ಹೋಗಿ, ಗುಲಕಟ್ಟೀ, ಸ್ವಲ್ಪಹೊತ್ತು ಆ ಬಾಗಿಲ ಹತ್ತಿರ ಕೂತುಕೋ. ಮಗು ನಿನ್ನನ್ನು ಇಲ್ಲಿ ನೋಡಿದರೆ ದಿಗಿಲಿಂದ ಕೂಗಿಕೊಳ್ಳತಾನೆ.... ಅವನು ಇಲ್ಲಿ ಮಲಗಿ ನಿದ್ದೆ ಮಾಡಿದ

ಮೇಲೆ ನೀನು ಮತ್ತೆ ಇಲ್ಲೇ ಬಂದು ಕೂತುಕೊಳ್ಳಬಹುದು."

ಗುಲಕಟ್ಟೀ ಸದ್ಯಃ ತಪ್ಪಿಸಿಕೊಂಡೆನಲ್ಲ ಎಂದು ನಿಟ್ಟುಸಿರು ಬಿಟ್ಟು ಎದ್ದು ಹೋದಳು. ಬಹುರಿಯಾಜೀ ಹೋಗಿ ಮಗುವನ್ನ ಕರೆದುಕೊಂಡು ಬಂದು ನನ್ನ ಕೈಲಿ ಕೊಟ್ಟಳು. ಲಾಡಲೀ ನನ್ನ ಬಳಿ ಬಂದ ತತ್‌ಕ್ಷಣ ನನ್ನನ್ನು ಎರಡು ಕೈಗಳಿಂದಲೂ ಬಿಗಿಯಾಗಿ ಅಪ್ಪಿಕೊಂಡು ಬಿಟ್ಟ. ಲಾಡ್‌ಲೀ, ಏ ಮುದ್ದು ಮಲಗಿಕೊಳ್ಳುತೀಯಾ? ಮಲಗಿಕೋ ಮಗು... ತಡಿ, ನಾನು ಗಾಳಿ ಬೀಸತೇನೆ. ಸುಖವಾಗಿ ನಿದ್ದೆ ಮಾಡು. ಈ ರಾತ್ರಿ ಸರಿ ಹೊತ್ತಿನಲ್ಲಿ ಮಗು ನಿದ್ದೆ ಮಾಡದೆ ಎಚ್ಚರವಾಗಿರುವುದೇ? ಆಶ್ಚರ್ಯ... ಹುಡುಗ ನನ್ನ ಮಾತು ಹೇಗೆ ಕೇಳತಾನೆ! ನಿದ್ದೆ ಮಾಡೇ ಬಿಟ್ಟ. ಎಲ್ಲಿ ಹೋಯಿತೋ ಅಳು... ಎಲ್ಲಿ ಹೋಯಿತೋ ಹಟ! ನನ್ನ ಎದೆಯನ್ನ ಅಪ್ಪಿಕೊಂಡು ಹಾಗೇ ನಿದ್ದೆ ಮಾಡಿಬಿಟ್ಟ. ಅವನು ಮಲಗಿರುವ ಅವಸ್ಥೆಯಲ್ಲೇ ಅವನ ಕೈಯಲ್ಲಿ ನರ್ಮದಾ ಬಹೆನ್ ಕೊಟ್ಟಿದ್ದ ಹೂಗೊಂಚಲು ಒಂದನ್ನು ಇಟ್ಟು ಅವನ ಹಿಡಿಯನ್ನು ಮುಚ್ಚುತ್ತೇನೆ... "ನಾಳೆ ಬೆಳಗ್ಗೆ ಇನ್ನೂ ತುಂಬಾ ಹೂಗಳು ಕೊಡುತೇನೆ. ಆ ಹೂವು ಬಿಸಾಟು ಬಿಡುವಿಯಂತೆ!" ಅಂತೇನೆ.

ಅವನಿಗೀಗ ಹೂವೂ ಬೇಕಿಲ್ಲ. ಏನೂ ಬೇಕಿಲ್ಲ. ಏನು ಬೇಕಾಗಿತ್ತೋ ಅದು ಅವನಿಗೆ ಸಿಕ್ಕಿದೆ. ಸ್ವಲ್ಪ ಗಾಳಿ ಬೀಸದೆ ಹೋದರೆ ಈ ಸೊಳ್ಳೆಗಳು ಬಂದು ಕಡಿಯುತ್ತವೆ. ನಾನು ಬೀಸಣಿಗೆಗೆ ತಡಕಾಡುತ್ತಿರುವಾಗ ಬಹುರಿಯಾಜಿ ಬಂದು ಹತ್ತಿರ ಕೂತಳು ಬೀಸುವುದಕ್ಕೆ.

ಇಷ್ಟು ಹೊತ್ತೂ ಹತ್ತಿರ ಬರಲು ಧೈರ್ಯ ಇರಲಿಲ್ಲವೇನೋ - ನಾನೆಲ್ಲಾದರೂ ರೇಗುವೆನೆಂಬ ಭಯ. ಅದು ಹೋಗಲಿ. ಈ ಮಗು ನನ್ನನ್ನು ಇಷ್ಟು ಹಚ್ಚಿಕೊಂಡಿದೆಯಲ್ಲ.... ಅದನ್ನ ಕಂಡು ಅದರ ತಾಯಿಗೆ ನನ್ನ ಮೇಲೆ ಅಸೂಯೆ ಇಲ್ಲವೇ? ಇಲ್ಲ, ಹಾಗೇನೂ ಇದ್ದ ಹಾಗೆ ಕಾಣುವುದಿಲ್ಲ. ನಾನು ಮಾತ್ರ ಯಾಕೆ ಜಿತೇನನ ತಾಯಿಯನ್ನು ಕಂಡು ಅಸೂಯೆ ಪಟ್ಟೆ? ನಮ್ಮ ಬಿಲೂ ಅವಳನ್ನು ಹಚ್ಚಿಕೊಂಡಿರುವುದು ನನಗೆ ಸಹಿಸಲಿಲ್ಲವಲ್ಲ - ಬಹುಶಃ ಸಖಾವತಿದೇವಿಯ ಮನಸ್ಸು ನನ್ನ ಮನಸ್ಸಿಗಿಂತಲೂ ಉತ್ತಮವಿರಲೇಬೇಕು. ಅದೇ ಕಾರಣದಿಂದ ಎಂದು ಕಾಣುತ್ತ, ಈ ನರ್ಮದಾ ಬಹೆನ್ ಆಗಾಗ ನನ್ನ ಬಳಿ ಬಂದು ಅಹಿಂಸೆಯನ್ನು ಕುರಿತು ಲೆಕ್ಚರ್ ಕೊಡುವುದು. "ಬಹುರಿಯಾಜಿ ಸಹ ಲಾಡಲೀಯನ್ನು ಕಂಡರೆ ತುಂಬ ಇಷ್ಟ ಪಡುತ್ತಾಳೆ. ಕಾರಣ, ಅವಳ ಚಿಕ್ಕಮಗು, ಲಜ್ಜಾ ಲಾಡಲಿಯನ್ನು ತುಂಬಾ ಹಚ್ಚಿಕೊಂಡಿದ್ದಳಲ್ಲ, ಅದಕ್ಕೆ. ಲಜ್ಜಾಳ ವಯಸ್ಸು ಐದಕ್ಕಿಂತ ಸ್ವಲ್ಪ ಹೆಚ್ಚು. ಆದರೆ ಅವಳು ತಾಯನ್ನು ಬಿಟ್ಟಿರಲು ಆಗುತ್ತಿರಲಿಲ್ಲ. ದಸ್ತಗಿರಿಯಾದ ಮೇಲೆ ಅವಳನ್ನು ಅವಳ ಚಿಕ್ಕಮ್ಮನ ಬಳಿ ಬಿಟ್ಟು ಬರಬೇಕೆಂದು ಬಹುರಿಯಾಜಿ ಅಂದುಕೊಂಡಿದ್ದಳು.

ಆದರೆ ಆ ಹುಡುಗಿ ಅಮ್ಮನನ್ನು ಬಿಟ್ಟಿರುವುದಕ್ಕೆ ಒಪ್ಪಲಿಲ್ಲ. ಹಟ ಹಿಡಿದಳು. ಬಹಳ ಕಷ್ಟಕ್ಕೆ ಬಂತು. ಈ ಕಡೆ ಮೂರು ವರ್ಷಗಳಿಗೆ ಮೇಲ್ಪಟ್ಟು ವಯಸ್ಸುಳ್ಳ ಮಕ್ಕಳನ್ನು ಜೈಲಿನಲ್ಲಿ ಇಡುವುದಕ್ಕೆ ನಿಷೇಧವಿದೆ. ಪೊಲೀಸ್ ಇನ್‌ಸ್ಪೆಕ್ಟರು ಸಹ ಮಗುವನ್ನು ಬಿಟ್ಟು ಬನ್ನಿ ಎಂದು ಹೇಳಿದ. ಆಗ ಬಹುರಿಯಾಜಿ ಅವನೊಂದಿಗೆ

ಜಗಳವಾಡಬೇಕಾಯಿತು. ಮಗು ಮೂರು ವರುಷಗಳಿಗಿಂತ ದೊಡ್ಡವಳೆಂದು ಯಾರು ಹೇಳಿದರು ಎಂದು ವಾದಿಸಿದಳು. ಬೇಕಾದರೆ ಅಳತೆ ಮಾಡಿ ನೋಡಿ ಎಂದಳು. ಒಂದೂವರೆ ಮೊಳ ಸಹ ಇಲ್ಲದ ಮಗುವಿಗೆ ಐದು ವರುಷ ಆಗಿರುತ್ತದಾ ಎಲ್ಲಾದರೂ ? ನಕ್ಕಾರು.... ಅವಳನ್ನು ಸಂಗಡ ಕರೆದುಕೊಂಡುಬರಲು ಬಿಡದಿದ್ದರೆ ತನ್ನನ್ನು ಹೇಗೆ ಹಿಡಿದುಕೊಂಡು ಹೋಗುತ್ತಾರೋ ನೋಡೇಬಿಡುತ್ತಾಳೆ ಬೇಕಾದರೆ ! ಹಾಗೇನಾದರೂ ಬಲವಂತ ಮಾಡಿ ಎಳೆದುಕೊಂಡು ಹೋಗಲು ಪ್ರಯತ್ನಿಸಿದರೆ ಆಗ ನೋಡಿಕೊಳ್ಳಲಿ! ಈಗಲೇ ನಮ್ಮ ಕಾಂಗ್ರೆಸ್ ವಾಲಂಟೀಯರುಗಳನ್ನು ಕರೆಸಿ ಪೊಲೀಸ್ ದರೋಗನನ್ನೇ ಅರೆಸ್ಟ್ ಮಾಡಿಸಿಬಿಡುತಾಳೆ. ಹುಷಾರ್! ಆಗ ದರೋಗನು ಯಾಕಪ್ಪಾ, ಸುಮ್ಮನೆ ಇಲ್ಲದ ಗಲಾಟೆ ಅಂದುಕೊಂಡು ಮಗುವಿನ ಸಮೇತ ಬಹುರಿಯಾಜಿಯನ್ನು ಕರೆತಂದು ಜೈಲಿನಲ್ಲಿಟ್ಟದ್ದಾಯಿತು. ಹಗಲು, ರಾತ್ರಿ ಲಜ್ಜಾ ಮತ್ತು ಲಾಡ್‌ಲೀ ಒಟ್ಟಿಗೆ ಆಟ ಆಡುತ್ತಿದ್ದರು. ಆಟ ಎಂಥದು ಬೇರೆ ? ಲಜ್ಜಾ ಲಾಡಲಿಯನ್ನು ಕಂಕುಳಲ್ಲಿ ಇಟ್ಟುಕೊಂಡು ತಿರುಗಾಡಿಸುತ್ತಿದ್ದಳು. ಇಲ್ಲಂತೂ ಈ ಮಕ್ಕಳಿಗೆ ಆಡಲು ಜತೆಗಾರರು ಯಾರಿದ್ದಾರೆ? ಆಡಬೇಕಾದರೆ ಬೇರೆ ವಾರ್ಡುಗಳಲ್ಲಿನ ಕೀಳು ವರ್ಗದವರ ಪೋಕರಿ ಮಕ್ಕಳೊಂದಿಗೆ ಕಲೆತು ಆಡಬೇಕು. ಅವರಿಗೋ ನಾನಾ ವಿಧವಾದ ಕೆಟ್ಟ ಕಾಯಿಲೆಗಳು. ಸದಾ ಕಾಲವೂ ತಮ್ಮ ತಮ್ಮೊಳಗೆ ಹೊಲಸು ಬೈಗಳನ್ನಾಡಿಕೊಳ್ಳುತ್ತಿರುತ್ತಾರೆ. ಅಂಥವರ ಸಂಗಡ ನಮ್ಮ ಮಕ್ಕಳನ್ನು ಕಲೆಯಲು ಬಿಡುವುದಕ್ಕಾಗುತ್ತದೆಯೆ ? ಆ ಕಾರಣದಿಂದ ನಾವೆಲ್ಲ ಆ ಮಕ್ಕಳನ್ನು ಮೂರು ಹೊತ್ತು ನಿಗಾ ಇಟ್ಟು ನೋಡಿಕೊಳ್ಳುತ್ತಿದ್ದೆವು. ಆದರೆ, ಅಯ್ಯೋ ಪಾಪ, ಏನು ಹೇಳೋಣ. ರಕ್ತಭೇದಿ ಬಂದು ಆ ಸಣ್ಣ ಹುಡುಗಿ ಕೆಲವೇ ದಿನಗಳಲ್ಲಿ ಕಣ್ಣು ಮುಚ್ಚಿದಳು. ತಾಯಿಯ ಪ್ರಾಣವಲ್ಲವೆ ? ಬಹುರಿಯಾಜಿ ಎದೆ ಒಡೆಯುವ ಹಾಗೆ ಸುಮ್ಮನೆ ರೋದಿಸಿದಳು. ಅತ್ತು ಏನು ಪ್ರಯೋಜನ, ಹೋದ ಜೀವ ಬಂದೀತೆ ? ಅಯ್ಯೋ, ಹಟ ಹಿಡಿದು ಮಗುವನ್ನು ಜೈಲಿಗೆ ಕರೆದುಕೊಂಡು ಬರದೆ ಹೋಗಿದ್ದರೆ ಅದು ಈಗ ಬದುಕಿರುತ್ತಿತ್ತಲ್ಲ ಎಂಬ ಯೋಚನೆಯಿಂದಲೇ ಹೆಚ್ಚು ಸಂಕಟ.

ಈ ಹುಡುಗ ಲಾಡಲೀ ಸಹ ಲಜ್ಜಾ ಹೋಗಿ ಬಿಟ್ಟ ಮೇಲೆ ಯಾಕೋ ಏನೋ ಬರಬರುತ್ತ ಒಣಗಿಕೊಂಡು ಹೋದ. ಜೈಲಿನಲ್ಲಿ ಮಗುವಿಗೆ ಅರ್ಧ ಸೇರಷ್ಟು ಹಾಲು ಸಿಗುತ್ತದೆ. ಹಾಲು ಅಂದರೇನು, ಜೈಲಿನ ಹಾಲು. ಬೆಣ್ಣೆ ತೆಗೆದುಬಿಟ್ಟ ಮೇಲೆ ಎಮ್ಮೆ ಹಾಲಿಗೆ ನೀರು ಸೇರಿಸಿ ತಂದುಕೊಡುತ್ತಾನೆ ಕಂಟ್ರಾಕ್ಟರ್. ಆಮೇಲೆ ಗೇಟಿನಲ್ಲಿ, ಗುದಾಮಿನಲ್ಲಿ, ವಾರ್ಡಿನಲ್ಲಿ, ಎಲ್ಲೆಲ್ಲಿ ಹೋಗಿ ಬರುತ್ತದೋ ಹಾಲು, ಅಲ್ಲೆಲ್ಲ - ವಾರ್ಡರು, ಮೇಟ್, ಪಹರೆಯವನು, ಮತ್ತು ಖೈದಿಗಳು - ಎಲ್ಲರೂ ತಲಾ ಒಂದೊಂದು ಗ್ಲಾಸಿನಷ್ಟು ಹಾಲು ತೆಗೆದುಕೊಂಡು ಚಪ್ಪರಿಸುತ್ತ ಕುಡಿಯುತ್ತಾರೆ. ಇದು ಮೊದಲಿಂದ ಬಂದ ಪದ್ಧತಿ. ಇದರಲ್ಲೇನೂ ಮುಚ್ಚುಮರೆಯಿಲ್ಲ. ಕೇವಲ ಒಂದು ಬಾಧ್ಯತೆ ಮಾತ್ರ ಇದೆ, ಏನೆಂದರೆ ಯಾರ್‍ಯಾರು ಒಂದೊಂದು ಗ್ಲಾಸು ಹಾಲನ್ನು ತೆಗೆದು ಕುಡಿಯುತ್ತಾರೋ ಅವರೆಲ್ಲ ತಪ್ಪದೆ ಒಂದೊಂದು ಗ್ಲಾಸಿನಷ್ಟು ನೀರನ್ನು ಹಾಲಿನ ಡ್ರಮ್ಮಿನೊಳಗೆ ಸುರಿದುಬಿಟ್ಟರೆ ತೀರಿತು. ಇದೇ ಹಾಲು ಕಟ್ಟಕಡೆಯಲ್ಲಿ ಇಲ್ಲಿಗೆ ಬಂದು ಸೇರಿದಾಗ ಅದು ಎಂಥಾ ಪದಾರ್ಥವಾಗಿ ಬಿಟ್ಟಿರುತ್ತೆ

ಅಂದರೆ ಅದನ್ನು ಕುಡಿದು ಯಾವ ಮಗುವಾದರೂ ಬದುಕಿ ಬಂದರೆ ಅದು ದೊಡ್ಡ ಆಶ್ಚರ್ಯವೇ ?

ಸಣ್ಣ ಮಕ್ಕಳಿಗೆ ಜೈಲಿನಿಂದ ಬಟ್ಟೆ ಕೊಡುವುದಿಲ್ಲ. ಹಾಲಲ್ಲದೆ ಬೇರೆ ತಿಂಡಿ, ತಿನಿಸುಗಳನ್ನು ಕೊಡುವುದಿಲ್ಲ. ಬಹುಶಃ, ಹಾಲಲ್ಲದೆ ಬೇರೆ ಆಹಾರ ತಿನ್ನುವುದನ್ನು ಕಲಿತಿರುವಂಥ ಮಕ್ಕಳು ತಾಯಂದಿರ ಜತೆಯಲ್ಲಿ ಜೈಲಿಗೆ ಬರುವ ಅಗತ್ಯವೇನು ಎಂದು ಯೋಚಿಸಿಯೇ ಹೀಗೆ ಏರ್ಪಾಡು ಮಾಡಿರಬೇಕು. ಅಂತೂ ಅತ್ಯಂತ ಜಾಣತನದ ತರ್ಕವೇ !

ಆಹಾ... ಹುಡುಗನ ಹೊಟ್ಟೆಯಂತೂ ತುಂಬ ಒಳಗೆ ಹೋಗಿಬಿಟ್ಟಿದೆ. ಯಾಕೋ, ಅದರ ತಾಯಿ ರಾತ್ರಿ ಅನ್ನ ತಿನ್ನಿಸಿಲ್ಲವೇನೋ ! ನನಗೆಂದು ಇಟ್ಟಿರುವ ಊಟ ತಲೆಯ ಹತ್ತಿರ ಇಟ್ಟಿದ್ದಾರೆ. ಅದರಿಂದ ತೆಗೆದು ಸ್ವಲ್ಪ ತಿನ್ನಿಸೋಣವೆ ? ....ಬೇಡ, ಯಾಕೆ ಇದೆಲ್ಲ ತಿಂದು ಅದಕ್ಕೇನಾದರೂ ನಾಳೆ ಅಸ್ವಸ್ಥವಾಗಿಬಿಟ್ಟರೆ, ಅವರಮ್ಮನಿಗೆ ಅದನ್ನು ಸುಧಾರಿಸುವುದರಲ್ಲಿ ಪ್ರಾಣ ಹೋಗಿಬಿಡುತ್ತದೆ.... ಆಹಾ, ಎಷ್ಟು ಮೆತ್ತಗಿದೆ ಇದರ ಮೈ ! ಬಿಲೂ ಮಗುವಾಗಿದ್ದಾಗ ಹೀಗೇ ತೊಡೆಗವಚಿಕೊಂಡು ನಿದ್ದೆಮಾಡುತ್ತಿದ್ದ. ನಮ್ಮ ಮಾವನವರ ತೊಡೆಯ ಮೇಲೆ ಕೂತು ಫೋಟೊ ತೆಗೆಸಿಕೊಂಡಾಗ ಅವನು ಇಷ್ಟೇ ಸಣ್ಣವನಾಗಿದ್ದ. ಫೋಟೊ ತೆಗೆಯುವಾಗ ಏನು ಮಾಡಿದರೂ ಸುಮ್ಮನೆ ಕೂಡುವವನಲ್ಲ. ದೂರದಿಂದ ನಾನೊಂದು ಕಲ್ಲು ಸಕ್ಕರೆ ಚೂರನ್ನು ತೋರಿಸಿದೆ. ಅದನ್ನು ನೋಡುತ್ತ ಖುಷಿಯಿಂದ ಮುಖ ಅರಳಿಸಿಕೊಂಡು ನೋಡತಾ ಇರುವಾಗಲೇ ನನ್ನ ಮೈದುನ, ನಿತಾಯಿ ಫೋಟೊ ತೆಗೆದುಬಿಟ್ಟ. ಅದೇನು ಇವತ್ತಿನ ಮಾತೇ ? ಕಾಯಿಲೆ ಬಂದ ಮೇಲೆ ಎಷ್ಟು ಬಡವಾಗಿ ಹೋಗಿಬಿಟ್ಟಿದ್ದನೋ ! ಮೂರು ಹೊತ್ತೂ ಏನಾದರೂ ತಿನ್ನಬೇಕು, ತಿನ್ನಬೇಕು ಅಂತ ರಗಳೆ ಮಾಡುತ್ತಿದ್ದ. ಆದರೆ ಎಂದಿಗೂ ದೊಡ್ಡದಾಗಿ ಬಾಯಿ ತೆಗೆದು ಅಳುತಾಯಿರಲಿಲ್ಲ. ಆ ಅಭ್ಯಾಸವೇ ಇರಲಿಲ್ಲ ಅವನಿಗೆ.

ನಾನು ಒಮ್ಮೆ ಮಗುವನ್ನು ಮಂಚದ ಮೇಲೆ ಕೂಡಿಸಿ ಉಗ್ರಾಣದಲ್ಲೋ ಅಡಿಗೆ ಮನೆಯಲ್ಲೋ ಏನೋ ಮಾಡಲಿಕ್ಕೆ ಹೋಗಿದ್ದೇನೆ. ಅಲ್ಲಿ ಹಾಗೆ ಇದ್ದು ಬಿಟ್ಟಿದ್ದೇನೆ. ಸ್ವಲ್ಪ ಹೊತ್ತಾದ ಮೇಲೆ ಬಂದು ನೋಡಿದರೆ ಹುಡುಗನ ಕಣ್ಣಲ್ಲಿ ನೀರು ಸುರಿದೂ ಸುರಿದೂ ಕೆನ್ನೆಗಳೆಲ್ಲ ಒದ್ದೆಯೆಂದರೆ ಒದ್ದೆ. ಕೆಳ ತುಟಿ ಸ್ವಲ್ಪ ಚಾಚಿ ಸುಮ್ಮನೆ ನಡುಗುತ್ತಿದೆ. ನನ್ನನ್ನು ನೋಡಿದೊಡನೆ ಹುಡುಗ ಒಂದು ಅಭಿಮಾನ ತೋರಿದ ! ..."ಅಯ್ಯೋ, ನನ್ನ ಕಂದ, ನಾನು ಬರುವುದಕ್ಕೆ ತಡ ಆಯಿತು ಅಂದು ಬಿಟ್ಟು ಅಳುತಾಯಿದ್ದೀಯೇನೋ... ಆಹಾ... ನನ್ನ ಚಿನ್ನದಂಥಾ ಮಗನೇ !" ಎಂದು ಹಾಗೇ ಅವನನ್ನು ಎದೆಗವಚಿಕೊಂಡೆ. ಆಮೇಲೆ ಮಗು ತಣ್ಣಗಾಗಿ ಬಿಟ್ಟ. ಆಗಾಗ ಸ್ವಲ್ಪ ಒಳಗೊಳಗೇ ಬಿಕ್ಕುವುದು ಕೇಳಿಸುತ್ತ ಇತ್ತು. ಈಗಲೂ ಅದೇ ಶಬ್ದ ಕೇಳಬರತಾಯಿದೆ. ಅದೇ ಬಿಸಿಯಾದ, ಒದ್ದೆಯಾದ ಎಳೆಯ ಗಂಟಲಿಂದ ಬರುವ ನಿಃಶ್ವಾಸ... ಈ ಲಾಡ್ಲೀ ನಮ್ಮ ಬಿಲೂ ಇದ್ದ ಹಾಗೆ. ಲೋ ಲಾಡ್ಲೀ, ಹೌದು ಕಣೋ, ನೀನೇ ನನ್ನ ಆ ಎಳೆತನದ ಬಿಲೂ. ನಿನ್ನ ಮೆತ್ತಗಿನ ಮೈ ಮುಟ್ಟುತ್ತಾ ಮುಟ್ಟುತ್ತಾ ನನಗೆ ಹಾಗೇ ಅನ್ನಿಸುತಾ ಇದೆ. ನಿನ್ನನ್ನೂ ಹಾಗೇ ಎದೆಗವಚಿಕೊಳ್ಳೋಣ

ಎನ್ನಿಸುತ್ತ ಇದೆ, .....ಬೇಡ, ಎಲ್ಲರೂ ನೋಡುತ್ತ ಇದ್ದಾರೆ. ಮತ್ತೆ ಏನೇನೋ ಅಂದುಕೊಳ್ಳುತ್ತಾರೆ. ಈಗಲೂ ಬಿಲೂ ನನ್ನ ಮುಂದೆ ಇದ್ದಿದ್ದರೆ ಅವನನ್ನು ಧಾರಾಳವಾಗಿ ಎದೆಗೆ ಅವಚಿಕೊಳ್ಳುತ್ತಿದ್ದೆ. ಎಷ್ಟೇ ಸ್ವಲ್ಪ ಸಮಯವಾದರೂ ನನ್ನ ಎದೆ ಹಾಗಾದರೂ ತಣ್ಣಗಾಗುತ್ತಿತ್ತು. ಇಬ್ಬರೂ ಒಟ್ಟಿಗೇ ಅತ್ತು ನಮ್ಮ ನಮ್ಮ ಕಣ್ಣೀರು ಬೆರೆಸಿಕೊಂಡು ಮನಸ್ಸಿಗೆ ಸ್ವಲ್ಪ ಶಾಂತಿ ಅನುಭವಿಸಬಹುದಾಗಿತ್ತು. ಕಡೆಯ ಗಳಿಗೆಯಲ್ಲಿ ಅವನ ಪಕ್ಕದಲ್ಲಿ ಇದ್ದಿದ್ದರೆ.... ಆ ದಾರಿಯನ್ನೂ ದೇವರು ನನ್ನ ಪಾಲಿಗೆ ತೋರಿಸಲಿಲ್ಲ.... ನಾಲ್ಕು ಕಡೆಯೂ ಎಲ್ಲಿ ನೋಡಿದರೂ ಕಬ್ಬಿಣದ ಸಲಾಕೆಗಳು, ಬೀಗಗಳು. ಯುದ್ಧಕ್ಕೆ ರಾಶಿ ರಾಶಿ ಕಬ್ಬಿಣ ಬೇಕಾಗುತ್ತಂತೆ, ಬಿಲೂ ಕತೆ ಹೇಳುತ್ತಿದ್ದ – ಯುದ್ಧದ ಸಮಯದಲ್ಲಿ ಎಲ್ಲೋ ಕಿರಿಸ್ತಾನರ ದೇವಾಲಯದ ದೊಡ್ಡ ದೊಡ್ಡ ಗಂಟೆಗಳನ್ನು ಕರಗಿಸಿ ಆಯುಧಗಳನ್ನು ಮಾಡಿಕೊಳ್ಳುತ್ತಿದ್ದರಂತೆ. ಈ ಯುದ್ಧದಲ್ಲಿ ಸರಕಾರದವರಿಗೆ ಜೈಲಿನ ರಾಶಿ ರಾಶಿ ಕಬ್ಬಿಣದ ಸಾಮಾನುಗಳ ಮೇಲೆ ಕಣ್ಣೇಕೆ ಬೀಳುವುದಿಲ್ಲ ? ಇಷ್ಟು ಜನರ ನಿಟ್ಟುಸಿರುಗಳ ಬೆಂಕಿ ಯಮನ ಸಿಂಹಾಸನವನ್ನೂ ಕರಗಿಸಿ ಹಾಕಿಬಿಡುತ್ತದೆ.

"ಬಹುರಿಯಾಜಿ, ನಿಜವಾಗಿ ಹೇಳಿ, ಈ ದೇವರು ನನ್ನ ವಿಷಯದಲ್ಲಿ ಅನ್ಯಾಯ ಮಾಡಿಲ್ಲವೇ... ಹೇಳಿ."

ಬಹುರಿಯಾಜೀ ನನ್ನ ಮುಖದ ಕಡೆಯೇ ನೋಡುತ್ತ ಇದ್ದಾಳೆ... ಇಂಥಾ ಪ್ರಶ್ನೆಯನ್ನು ಅವಳು ನಿರೀಕ್ಷೆಯೇ ಮಾಡಿರಲಿಲ್ಲವೇನೋ! ಆಕೆ ನನ್ನ ಪ್ರಶ್ನೆಗೆ ಜವಾಬೇ ಕೊಡಲಿಲ್ಲ. ಒಮ್ಮೆ ನಯನಾದೇವಿಯ ಕಡೆ ನೋಡಿ ಏನೋ ಸನ್ನೆ ಮಾಡಿದಳು. ನನ್ನ ತಲೆಗೂದಲ ಮೇಲೆ ಮೃದುವಾಗಿ ಬೆರಳುಗಳಾಡಿಸಿ, ಆಮೇಲೆ ಸ್ವಲ್ಪ ಜೋರಾಗಿಯೇ ಗಾಳಿ ಹಾಕಲು ತೊಡಗಿದಳು. ನಿಮ್ಮ ಮುಂದೆ ಏನೋ ತೋಚಿ ಹಠಾತ್ತಾಗಿ ಪ್ರಶ್ನೆ ಮಾಡಿದೆನೇ ಹೊರತು ಅದಕ್ಕೆ ಜವಾಬು ನೀವು ಕೊಡಬೇಕು ಎಂದಲ್ಲ. ಅದರ ನಿರೀಕ್ಷೆಯೇ ಇಲ್ಲ ನನಗೆ.

ಈ ಲಾಡ್ಲೀ ಯಾವಾಗ ನಿದ್ದೆ ಹೋದನೋ ಗೊತ್ತೇ ಆಗಲಿಲ್ಲ ನನಗೆ. ಇಷ್ಟು ಚಿಕ್ಕ ಮಗು - ಆಗಲೇ ಗೊರಕೆ ಹೊಡೆಯುತ್ತೆ, ದೊಡ್ಡವರ ಹಾಗೆ... ಆಹಾ, ಅಂಗತ್ತನಾಗಿ ಮಲಗಿದ್ದಾನೆ ಹುಡುಗ. ಅವನ ಉಡಿದಾರದ ಸುತ್ತ ಹಾಕಿರುವ ಸಣ್ಣ ಬೆಳ್ಳಿಯ ಬಿಲ್ಲೆಗಳು ಹೊಟ್ಟೆಯ ಚರ್ಮದ ನಡುವೆ ಕೂತಿವೆ. ಯಾಕೋ ಕಾಣೆ, ಸಖಾವತಿದೇವಿಗೆ ಈ ಬಗೆಯ ಚಪಲ. ಉಡಿದಾರಕ್ಕೆ ಯಾಕೆ ಬೆಳ್ಳಿಯ ಬಿಲ್ಲೆಗಳು ? ಎಷ್ಟು ಸಲ ಹೇಳಿದ್ದೇನೋ ಆಕೆಗೆ – ಬೇಡಮ್ಮಾ ಈ ಜೇಲಿನಲ್ಲಿ ಯಾವ ಯಾವ ನಮೂನೆ ಜನ ಬರುತ್ತಾರೋ, ಯಾವಾಗ ಯಾರಿಗೆ ಬೆಳ್ಳಿ ನೋಡಿ ದುರಾಸೆ ಆಗತ್ತೋ.... ಯಾಕೆ ಸುಮ್ಮನೆ ಪರೀಕ್ಷೆ? ಆಮೇಲೆ ಎಳೇ ಹುಡುಗನ್ನ ಏನು ಮಾಡಲಿಕ್ಕೂ ಸಾಕು ? ಎಷ್ಟು ಹೇಳಿದರೂ ಕೇಳಿದರೆ ತಾನೆ ? ಈ ಉಡಿದಾರದಲ್ಲಿ ಯಾವ ದೇವರ ಮುಡಿಪಿದೆಯೋ ಯಾರಿಗೆ ಗೊತ್ತು ? ಅಥವಾ ತಾಯಿತಿ ಇರಬೇಕು.

ಬಿಲೂ ಇಷ್ಟು ಸಣ್ಣವನಿದ್ದಾಗ ಅವನ ಗುಂಗುರು ತಲೆಗೂದಲು ಒಂದು ಕೆನ್ನೆಯ ಮೇಲೆ ಜೋಲಾಡುತ್ತಿರುವ ಕಡೆ ಒಂದು ಸಣ್ಣ ಜಡೆ ಹಾಕಿ ಕಟ್ಟುತ್ತಿದ್ದೆ. ರೋಗಿಷ್ಟ ಹುಡುಗ. ಏನಾದರೂ ಸ್ವಲ್ಪ ಊಟ ಮಾಡಿದರೆ ಸಾಕು, ಹೊಟ್ಟೆ, ಗಣೇಶನ ಹೊಟ್ಟೆ

ಹಾಗೆ ಉಬ್ಬುತ್ತಿತ್ತು. ಅವನನ್ನು ಮರೆಸುವುದಕ್ಕೆಂದು ಊಟವಾದ ಮೇಲೆ ಹೇಳುತ್ತಿದ್ದೆ. "ಸಾಕಿನ್ನು... ಬೇಕಾದಷ್ಟಾಯಿತು ಬಿಡು. ...ಈಗ ಎದ್ದು ಬಿಡಮ್ಮಾ ಚಿನ್ನು! ...ಬಾ...ಆ...ಆ.." ಆಗವನು ತನ್ನ ಹೊಟ್ಟೆ ಕಡೆ ತೋರಿಸುತ್ತ "ವಾತಾಪಿ ವಾತಾಪಿ ಮಾಡಮ್ಮಾ" ಅನ್ನುತ್ತಿದ್ದ. ಯಾವತ್ತೊ ಒಂದು ದಿನ ಅವನ ಹೊಟ್ಟೆ ಮೇಲೆ ಕೈಯಾಡಿಸಿ "ವಾತಾಪಿ ಭಸ್ಮರಾಶಿ...ವಾತಾಪಿ ಭಸ್ಮರಾಶಿ! ಎಲ್ಲ ಸರಿಹೋಗಿ ಬಿಡತ್ತೆ. ಬಿಲೂ ಬಾಬುಗೆ ಯಾವ ಕಾಯಿಲೆಯೂ ಬರೋದಿಲ್ಲ" ಎಂದು ಹೇಳಿದ್ದೆ. ಅವತ್ತಿಂದ ಅದೇ ಜ್ಞಾಪಕ ಇಟ್ಟಿದ್ದಾನೆ. ಊಟವಾದೊಡನೆ ಅವನಿಗೆ 'ವಾತಾಪಿ' ಹೇಳುತ್ತಿರಬೇಕು. ಹೊಟ್ಟೆ ಮೇಲೆ ಕೈಯಾಡಿಸಿ. ಆಮೇಲೆ ಮಣೆಯಿಂದ ಮೇಲಕ್ಕೇಳುವುದಕ್ಕೆ ಮುಂಚೆ ಮಂಡಿಯ ಮೇಲೆ ಕೂತು ಒಂದು ಕೈಯನ್ನು ನೆಲದ ಮೇಲೆ ಊರಿ "ಬಾ ಬಾರೇ!" ಎಂದು ಹೇಳಿಕೊಂಡು ದೊಡ್ಡವರು ಗಡದ್ದಾಗಿ ಊಟ ಮಾಡಿದ ಮೇಲೆ ಏಳುವ ಹಾಗೆ ಏಳುತ್ತಾನೆ.

ಎಷ್ಟು ದಿನಗಳ ಹಿಂದಿನ ಸಣ್ಣ, ಪುಟ್ಟ ಸಂಗತಿಗಳೆಲ್ಲ ನೆನಪಿಗೆ ಬರುತ್ತಿವೆ. ಲೋ, ಬಿಲೂ, ನಿನ್ನನ್ನು ಎಷ್ಟು ಕಷ್ಟದಿಂದ ಬೆಳೆಸಿ ದೊಡ್ಡವನಾಗಿ ಮಾಡಿದ್ದೆನಲ್ಲೋ. ಈಗ ಹೀಗೆ ನನ್ನನ್ನು ವಂಚಿಸಿ ಒಂದೇ ಸಾರಿಗೆ ಬಿಟ್ಟು ಹೋಗತಾ ಇದ್ದೀಯಲ್ಲೋ! ನನ್ನ ವಿಷಯವಾಗಿ ಚಿಂತಿಸುತ್ತ ನೀನು ನಿನ್ನ ಕೊನೆಯ ಗಳಿಗೆಗಳಲ್ಲಿ ಸಂಕಟ ಪಡಬೇಡ, ಬಿಲೂ. ಈಗ ನಿನ್ನ ಪಾಲಿಗಿರುವ ದುಃಖದ ಭಾರವನ್ನು ನಾನು ಸ್ವಲ್ಪವಾದರೂ ಹಗುರಮಾಡಲಾಗಿಲ್ಲ. ಈಗ ನಿನ್ನ ಮನಸ್ಸಿನಲ್ಲಿ ಎಂಥೆಂಥ ಯೋಚನೆಗಳು ಬರುತ್ತಿವೆ ಎಂದು ನನಗೆ ಗೊತ್ತಿಲ್ಲ. ಈಗಿರುವ ಆ ಯೋಚನೆಗಳ ಜತೆಗೆ ನನ್ನ ವಿಷಯವಾಗಿಯೂ ಯೋಚನೆ ಮಾಡಲು ತೊಡಗಿ ನಿನ್ನ ಮನಸ್ಸು ಇನ್ನೂ ಕೆಟ್ಟು ಹೋದೀತಲ್ಲ ಎಂದುಕೊಂಡರೆ ಸಾಕು, ನನ್ನ ಎದೆ ಒಡೆದು ಹೋಗುವ ಹಾಗಾಗುತ್ತದೆ.... ಅದನ್ನು ತಪ್ಪಿಸಲು, ನೀನು ಬೇಕಾದರೆ ನಿನ್ನ ತಾಯಿಗೆ ನಿನ್ನ ಮೇಲೆ ಅಷ್ಟೇನೂ ಪ್ರೀತಿ ಇಲ್ಲವೆಂದುಕೋ, ಅದೇ ಒಳ್ಳೆಯದು.

ನಯನಾದೇವಿಯು ಬಹುರಿಯಾಜಿಯ ಸಂಗಡ ಏನೋ ಹೇಳುತ್ತಿದ್ದಾಳೆ. ದನಿ ಸ್ವಲ್ಪ ಬಿಸಿಯೇರಿದಂತೆ ತೋರುತ್ತದೆ. "ಹಾಗಾದರೆ ದೇವರನ್ನು ಯಾಕಮ್ಮಾ ಇದರ ಮಧ್ಯೆ ಎಳೆದುಕೊಂಡು ಬರೋದು? ಸಜಾ ಹಾಕಿರೋದು ಸರಕಾರ.... ಇವರು ತಪ್ಪು ಕಂಡುಹಿಡಿಯೋದು ದೇವರ ಹತ್ತಿರ, ....ಯಾವುದೋ ಒಂದು ಕತೆ ಇದೆ ಕೇಳಿದ್ದೀರಾ? ಒಬ್ಬ ಬ್ರಾಹ್ಮಣನ ಹತ್ತಿರ ಒಂದು ಕುದುರೆ ಇತ್ತಂತೆ. ಅವನ ನೆರೆಮನೆಯಲ್ಲಿ ಒಬ್ಬ ಅಗಸ ಇದ್ದ. ಈ ಬ್ರಾಹ್ಮಣ ಪೂಜೆ ಮಾಡಲಿಕ್ಕೆ ಕೂತಾಗೆಲ್ಲ ಆ ಅಗಸನ ಕತ್ತೆ ವಿಕಟವಾಗಿ ಕಿರುಚಲಿಕ್ಕೆ ಶುರು ಮಾಡುತ್ತಿತ್ತು. ಬ್ರಾಹ್ಮಣನಿಗೆ ಇದು ತಡೆಯುವುದಕ್ಕೆ ಆಗದೆ ಒಂದು ದಿನ ದೇವರ ಹತ್ತಿರ ಮೊರೆಯಿಟ್ಟುಕೊಂಡ. "ದೇವರೇ, ಈ ಹಾಳು ಕತ್ತೆ ನಾನು ನಿನ್ನ ಪೂಜೆಗೆ ಕೂತಾಗೆಲ್ಲ ಅರಚತ್ತೆ. ನಿನಗೆ ಪೂಜೆಮಾಡೋದು ಅದಕ್ಕೆ ಇಷ್ಟವಿಲ್ಲ ಅಂತ ಕಾಣತ್ತೆ... ಅದಕ್ಕೆ ನೀನು ಅದು ಸಾಯುವಂತೆ ಮಾಡು, ಪರಮಾತ್ಮ ಆಗ ನಾನು ನಿರ್ವಿಘ್ನವಾಗಿ ನಿನ್ನ ಪೂಜೆ ಮಾಡಬಹುದು" ಅಂತ. ಕೆಲವು ದಿನಗಳಾದ ಮೇಲೆ ಆ ಬ್ರಾಹ್ಮಣನ ಕುದುರೆಗೇ ಕಾಯಿಲೆ ಬಂದು ಅದು ಸತ್ತೇ ಹೋಯಿತು. ಆಗ ಆ ಬ್ರಾಹ್ಮಣ ಮತ್ತೆ ದೇವರನ್ನು

ದೂಷಣೆ ಮಾಡುತ್ತ ಅಂತಾನೆ, "ಪರಮಾತ್ಮಾ ಇಷ್ಟು ದಿನ ದೇವರ ಪಟ್ಟದಲ್ಲಿ ಕೂತು ಸಹ ನಿನಗೆ ಕತ್ತೆಗೂ ಕುದುರೆಗೂ ಇರೋ ವ್ಯತ್ಯಾಸ ಗೊತ್ತಾಗಲಿಲ್ಲವಲ್ಲ ?" ಅಂತ ಗೋಳಾಡಿದ. ...ಇಕೋ ಈಗಲೂ ಹಾಗೇ ಇದೆ ಸಮಾಚಾರ. ದೇವರಿಗೂ ಇದಕ್ಕೂ ಏನು ಸಂಬಂಧ ಹೇಳಿ."

ಮೂಗು ಮುಚ್ಚಿಕೊಳ್ಳದೆಯೇ ಉಸಿರಾಡುವುದನ್ನು ನಿಲ್ಲಿಸಬಹುದಂತೆ.... ಕಿವಿಯನ್ನು ಕೈಯಿಂದ ಮುಚ್ಚಿಕೊಳ್ಳದೆಯೇ ಕೇಳಿಸಿಕೊಳ್ಳದಂತೆ ಮಾಡಲು ಆಗುವುದಿಲ್ಲ ಯಾಕೆ ? ಈಗ ಕಿವಿ ಮುಚ್ಚಿಕೊಂಡರೆ ಚೆನ್ನಾಗಿರುವುದಿಲ್ಲ. ಎಲ್ಲರೂ ನೋಡುತ್ತಾರೆ. ಏನು ಮಾಡಲಿ ? ಆ ವಿಷದ ನಾಲಗೆಯವಳನ್ನು ನಾನು ಗುರುತಿಸಲಾರೆ. ಅವಳು ಬಹುರಿಯಾಜಿಯ ಸಂಗಡ ಇನ್ನೂ ಏನೇನೋ ಹೇಳುತ್ತಿದ್ದಾಳೆ. ಈಗ್ಗೆ ಸ್ವಲ್ಪ ಹೊತ್ತಿಗೆ ಮೊದಲು ಅವಳ ಮೇಲೆ ರೇಗಿದ್ದೆನಲ್ಲ, ಅದಕ್ಕೋಸ್ಕರವೇ, ಅವಳು ಈಗ ನನ್ನ ಮೇಲೆ ವಿಷ ಕಕ್ಕುತ್ತಿದ್ದಾಳೆ. ಅವಳು ಎಂಥವಳು ಅನ್ನೋದು ನನಗೆ ಮೊದಲೇ ಗೊತ್ತು. ಒಳ್ಳೆ ಮಾತು ಅವಳ ಬಾಯಿಂದ ಸುಲಭವಾಗಿ ಬರುವುದಿಲ್ಲ. ಒಂದು ರಾತ್ರಿ ಸಹ ಅವಳು ತಡೆಯುವಂಥವಳಲ್ಲ. ಅದೂ ಇವತ್ತಿನ ರಾತ್ರಿ ಎಂಥ ರಾತ್ರಿ. ಇಂಥ ಸಮಯದಲ್ಲೂ ಅವಳು ನನ್ನ ಮೇಲೆ ಸೇಡು ತೀರಿಸಿಕೊಳ್ಳಲೇ ಬೇಕು.... ಇವಳೂ ಒಬ್ಬ ಹುಡುಗನ ತಾಯಿ ಬೇರೆ. ...ಆಹಾ ಹಾ... ಕತೆಯಂತೆ ಯಾವುದೋ... ತಲೆಯಿಲ್ಲ, ಕಾಲಿಲ್ಲ ಆ ಕತೆಗೆ. ತಾನೂ ಒಬ್ಬ ಪಂಡಿತಳಾಗಿ ಹೋಗಿಬಿಟ್ಟೆ ಅಂತ ಅಂದುಕೊಂಡಿದ್ದಾಳೇನೋ! ಅರೆ, ಇದೇನಿದು... ನಯನಾದೇವಿ ಹಠಾತ್ತಾಗಿ ತೆಪ್ಪನಾಗಿಬಿಟ್ಟಳು ? ಅವಳ ದನಿ ಕೇಳತಾಯಿಲ್ಲ ಯಾಕೋ! ಬಹುಶಃ ಬಹುರಿಯಾಜಿಗೆ ಅವಳ ಮಾತಿನಲ್ಲಿ ಆಸಕ್ತಿ ಇಲ್ಲವೇನೋ!

ಬಿಲೂ, ನೀಲೂ... ಇವರ ಬರೇ ಎಳೇ ವಯಸ್ಸಿನ ಸಂಗತಿಗಳೇ ನೆನಪಿಗೆ ಬರುತ್ತಿವೆಯಲ್ಲಾ, ಯಾಕೆ ? ಬಹುಶಃ ನನ್ನ ದೃಷ್ಟಿಯಲ್ಲಿ ಅವರು ಇನ್ನೂ ಸಣ್ಣವರಾಗೇ ಇದ್ದು ಹೋಗಿದ್ದಾರೇನೋ!

ಒಮ್ಮೆ ಇಬ್ಬರೂ ಹಾಸಿಗೆ ಮೇಲೆ ಮಲಗಿಕೊಂಡಿದ್ದಾರೆ. ನಾನು ಕೆಲಸ ಬೇಗನೆ ಮುಗಿಸಿಕೊಂಡು ಒಳಗೆ ಬಂದು 'ಕ್ಯಾ ಬಚ್‌ಕನ್ ಔರ್ ಭಟಕನ್... ಘೂಮತೇ* ಹೋ ?' ಎಂದು ಹಿಂದಿ ಭಾಷೆಯಲ್ಲಿ ಕೇಳಿದೆ. ಬಿಲೂ ಬಚಕನ್, ನೀಲೂ ಭಟಕನ್.... ಇಬ್ಬರೂ 'ಹೋ ಹೋ' ಎಂದು ಗಟ್ಟಿಯಾಗಿ ನಕ್ಕು ಬಿಟ್ಟರು. ಆಗ ನೀಲೂ "ಅಮ್ಮನಿಗೆ ಎಷ್ಟು ಸಲ ಹೇಳಿ ಆಗಿದೆ - ಹಿಂದಿಯಲ್ಲಿ 'ಘೂಮತೇ' ಅಂದರೆ ನಿದ್ದೆ ಮಾಡುವುದಲ್ಲ, ತಿರುಗಾಡುವುದು ಅಂತ. ಅದೂ ಅಮ್ಮನ ಮನಸ್ಸಲ್ಲಿ ಇರೋದಿಲ್ಲ ಅಂದ.

ಆಗ ಬಿಲೂ ಅಂತಾನ, "ಮಂಕು ಎಲ್ಲೋ ಅಲ್ಲ ಕಣೋ... ಅಮ್ಮನಿಗೆ ಗೊತ್ತಿಲ್ಲದ ಇಲ್ಲ ಬೇಕಂತ ತಮಾಷೆಗ ಅಂದಿದ್ದಾಳೆ. ನಮ್ಮನ್ನು ನಗಿಸಬೇಕು ಅಂತ"

ಎಷ್ಟು ಸಣ್ಣ ಸಣ್ಣ ಹುಡುಗರು, ಇಬ್ಬರೂ ಎಷ್ಟು ಗಂಭೀರದಿಂದ ಏನೋ ಬಹಳ

* ಘೂಮ್‌ನಾ ಎಂದರೆ ಹಿಂದಿಯಲ್ಲಿ ತಿರುಗಾಡುವುದು ಎಂದರ್ಥ. ಆದರೆ ಬಂಗಾಳಿಯಲ್ಲಿ ನಿದ್ದೆ ಮಾಡುವುದು ಎಂದರ್ಥ.

ತಿಳಿದವರ ಹಾಗೆ ವಾದಮಾಡತಾರೆ. ಆ ಸಮಯದಲ್ಲಿ ಇವರಿಬ್ಬರೂ ಈ ಗಾಂಧೀಜಿಯವರ ದಾರಿಯಲ್ಲಿ ಬರದೇ ಹೋಗಿದ್ದರೆ? ಏನು ಮಾತು? ಬರುವುದೂ ಬರದೇ ಇರುವುದೂ ಅವರ ಮೇಲಿತ್ತೇನು? ಅದು ಯಜಮಾನರ ಇಷ್ಟದ ಮೇಲೆ ಅಲ್ಲವೆ? ಈಗೇನಾದರೂ ಅವರು ನನಗೆ ಸಿಗುವ ಹಾಗಿದ್ದರೆ ಕೇಳೇ ಬಿಡತೇನೆ... "ನೋಡಿದಿರಾ ನೀವು ಮಾಡಿದ ಕೆಲಸ? ಮಕ್ಕಳನ್ನು ಯಾವ ದಾರಿಗೆ ತಂದೂ ಬಿಟ್ಟು ಬಿಟ್ಟಿದ್ದೀರಿ? ನನ್ನ ಬದುಕೆಲ್ಲ ಒಂದೇ ನಮೂನೆಯಾಗಿ ಹೋಗಿಬಿಟ್ಟಿದೆ. ಒಂದು ದಿನವೂ ನೆಮ್ಮದಿ ಸಿಗಲಿಲ್ಲ. ಮಕ್ಕಳಿಬ್ಬರನ್ನೂ ನಗು-ತಮಾಷೆ, ಆನಂದಗಳಲ್ಲೇ ಇಟ್ಟಿರೋಣ ಅಂದರೆ ಆಗಲೇ ಇಲ್ಲ. ಜೀವಮಾನವೆಲ್ಲ ಬೆಳಗಿನಿಂದ ರಾತ್ರಿವರೆಗೆ ಕತ್ತೆ ದುಡಿದ ಹಾಗೆ ದುಡಿದಿದ್ದು ಇದಕ್ಕೇ ಏನು? ಹುಡುಗರು ಸಣ್ಣವರಿದ್ದಾಗ ಇಬ್ಬರನ್ನೂ ನನ್ನ ಇಷ್ಟ ಬಂದ ರೀತಿಯಲ್ಲಿ ದೊಡ್ಡವರಾಗಿ ಮಾಡೋಣ ಅಂತ ಅಂದುಕೊಂಡೆ. ದೊಡ್ಡವರಾದ ಮೇಲೆ ಇವರು ತಮ್ಮ ಸ್ವಂತ ದಾರಿಯನ್ನು ಹುಡುಕಿಕೊಳ್ಳುತ್ತಾರೆ ಅಂತ ಅಂದುಕೊಂಡೆ. ಗಂಡುಮಕ್ಕಳಿಗೆ ಏನು ಅಂಥ ಯೋಚನೆ? ಆಮೇಲೆ ಅವರೂ ತಮ್ಮ ತಮ್ಮ ಮನೆ, ಸಂಸಾರ ಮಾಡಿಕೊಳ್ಳುತ್ತಾರೆ. ಅದನ್ನು ನೆನಸಿಕೊಂಡರೆ ಸಾಕು... ಎಷ್ಟೋ ನೆಮ್ಮದಿಯಾಗಿರುತಾ ಇತ್ತು.... ಆದರೆ ಕಡೆಗೆ ಆದದ್ದೇನು? ದೊಡ್ಡ ಹುಡುಗನ್ನ ಸರಿಯಾಗಿ ಓದಿಸಲೇ ಇಲ್ಲ. ಚಿಕ್ಕವನು... ಓದಿದ್ದರೂ ಸಹ ಇವನ ದಾರಿಯೇ ಹಿಡಿದ.

ಈಸಲ ನಾನು ಜೈಲಿನಿಂದ ಹೊರಗೆ ಬರಲಿ ನೋಡತೇನೆ. ನೀಲೂ ಇನ್ನು ಇದೇ ದಾರಿಯಲ್ಲಿ ಇರಲಿಕ್ಕೆ ಬಿಡತೇನೇನು? ನನ್ನ ತಮ್ಮನ ಹತ್ತಿರ ದೊಣ್ಣೆ ಏಟು ತಿಂದರೂ ಸರಿ... ಅಲ್ಲಿಗೆ ಕಳಿಸಿಬಿಡತೇನೆ. ಯಾವುದಾದರೂ ಒಂದು ವೃತ್ತಿ – ಹೊಟ್ಟೆ ಹೊರೆದುಕೊಳ್ಳುವಹಾಗೆ – ಏರ್ಪಾಡು ಮಾಡೇ ಮಾಡತಾನೆ ನನ್ನ ತಮ್ಮ. ನೀವು ನನ್ನನ್ನ ಮದುವೆ ಮಾಡಿಕೊಂಡು ಕರಕೊಂಡು ಬಂದಿರಿ. ನಾನು ನಿಮ್ಮ ಆಶ್ರಮದ ಹೊಟೇಲಿನಲ್ಲಿ ಒಕ್ಕಲುಗಿತ್ತಿಯಲ್ಲ, ಕೂಲಿಯವಳಿಗಿಂತಲೂ ಕೀಳಾಗಿ ಇದ್ದು ಕೊಂಡು ಹೋಗತೇನೆ. ಸದಾ ಕಾಲವೂ... ಆದರೆ ನನ್ನ ಮಗನನ್ನು ಮಾತ್ರ ಬೇರೆ ಕಡೆ ಕಳಿಸಿಬಿಡತೇನೆ. ನನ್ನ ತಮ್ಮನ ಹತ್ತಿರ ಏನಾದರೂ ಸರಿ, ಎಷ್ಟೋ ಬಾಯಿ ಮುಚ್ಚಿಕೊಂಡು ಸಹಿಸಿಕೊಂಡು ಬಂದಿದ್ದೇನೆ. ಆದರೆ ಇನ್ನು ಸಾಧ್ಯ ಇಲ್ಲ. ನನ್ನ ಸಹನಾಶಕ್ತಿಯ ಬೆಲೆಯನ್ನು ನೀವು ಒಂದು ಕವಡೆಗಿಂತಲೂ ಕಡಮೆಯಾಗಿ ಎಣಿಸಿದ್ದೀರಿ. ನಿಮ್ಮ ಉತ್ಸಾಹ, ನಿಮ್ಮ ಧ್ಯೇಯ ಎಲ್ಲಾ ಗಾಂಧೀ ಮಹಾತ್ಮನ ಸೇವೆ ಮಾಡುವುದೊಂದೇ... ಬೇರೆ ಇಲ್ಲ. ನನ್ನ ವಿಷಯವಾಗಿ, ನಿಮ್ಮ ಮಕ್ಕಳ ವಿಷಯವಾಗಿ ಎಂದಾದರೂ ಯೋಚನೆ ಮಾಡಿದ್ದೀರಾ? ಒಂದೊಂದು ದಿನ ಒಂದೊಂದು ಚಟ ನಿಮ್ಮದು. ಕೆಲವು ದಿನ ಬರೇ ಕಡಲೆ ತಿನ್ನುವ ಹುಚ್ಚು - ಹಠಾತ್ತಾಗಿ ಅದು ಹೋಗಿ ಇನ್ನು ಕೆಲವು ದಿನ ಬರೇ ಮೆಂತ್ಯದ ಸೊಪ್ಪು. ಆಮೇಲೆ ಅದೂ ಬೇಜಾರಾಗಿ, ಟೊಮೆಟೋ ಹಣ್ಣಿನ ಶರಬತ್ತಿನಲ್ಲೇ ಕಾಲಕಳೀತೀರಿ. ಹಸಿ ಪಡವಲಕಾಯಿ ತಿಂದು ಆಗೊಂದು ಸಲ ನಿಮ್ಮ ಆರೋಗ್ಯ ಎಷ್ಟು ಕೆಟ್ಟು ಹೋಗಿತ್ತು! ಒಂದು ಸಲ ಹುಕುಂ ಮಾಡಿದಿರಿ, ಟೊಮೆಟೋ ಹಣ್ಣನ್ನು ಕೊಯ್ಯದೇ ಹಾಗೇ ತಿನ್ನಲಿಕ್ಕೆ ಕೊಡಬೇಕು

ಅಂತ. ಹಾಗೇ ಕಚ್ಚಿ ಕೊಂಡು ತಿನ್ನುವುದೇ ಒಳ್ಳೆಯದೆಂದು ಗಾಂಧೀಜಿ ಹೇಳಿದ್ದಾರೆ ಅಂದು ಬಿಟ್ಟು, ಕುಯ್ಯುವುದಕ್ಕೆ ಹೋಗುವುದು ಸುಮ್ಮನೆ ಸಮಯ ನಷ್ಟ ಅಂದಿರಿ.

ಗಾಂಧೀಜಿಯವರ ಆಶ್ರಮದಲ್ಲೂ ಇದೇ ನಿಯಮ ಅಲ್ಲವೆ? ನಮ್ಮ ಆಶ್ರಮದಲ್ಲೂ ಹಾಗೇ ತಾನೇ ಇರಬೇಕು? ....ಆಹಾ ಹಾ... ಯಾವುದು ತಾನೇ ಶಾಶ್ವತ? ಸ್ವಲ್ಪ ದಿವಸಗಳಲ್ಲೇ, ಹುಕುಂ ಆಯಿತು - ಇನ್ನು ಮೇಲೆ ಈ ಪದ್ಧತಿ ನಡೆಯೋದಿಲ್ಲ ಅಂತ ಸೇವಾಗ್ರಮದ ಆಶ್ರಮದಲ್ಲಿ ಈಗ ಹೊಸದೊಂದು ಪದ್ಧತಿ ಚಲಾವಣೆಗೆ ಬಂದಿದೆ. ಟೊಮೆಟೋ ಹಣ್ಣು ತಿನ್ನುವ ಪದ್ಧತಿ ಬದಲಾಯಿಸಿಬಿಟ್ಟಿದ್ದಾರೆ. ಮಹದೇವ ದೇಸಾಯಿ* ಪತ್ರಿಕೆಯಲ್ಲಿ** ಬರೆದುಬಿಟ್ಟಿದ್ದಾರಂತೆ - ಗಾಂಧೀಜಿಯ ಅಭಿಪ್ರಾಯದಲ್ಲಿ ಟೊಮೆಟೋ ಹಣ್ಣನ್ನು ಕೊಯ್ಯದೇ ತಿನ್ನುವುದು ಸರಿಯಲ್ಲವಂತೆ. ತಿನ್ನುವಾಗ ಹಣ್ಣಿನ ರಸ ಬಟ್ಟೆ, ಬರೆ ಮೇಲೆ ಬೀಳುವ ಸಂಭವ ಇದೆಯಂತೆ - ಸರಿ, ಬದಲಾಯಿಸಿ ನಮ್ಮ ಆಶ್ರಮದ ಪದ್ಧತಿ ಕೂಡ. ಇಷ್ಟು ದಿನ ಟೊಮೆಟೋ ಕಚ್ಚಿಕೊಂಡು ತಿನ್ನುವಾಗ ಕಣ್ಣು ಮುಚ್ಚಿಕೊಂಡೇ ತಿನ್ನತಾ ಇದ್ದರೇನೋ, ಪಾಪ! ಏನು ನಸನಸೆ... ಏನು ಕಿರಿಕಿರಿ! ಊಟ ಮಾಡುವಾಗ ಅನ್ನ ಬಿಟ್ಟು ಐದೇ ಪದಾರ್ಥಗಳು ಇರಬೇಕು - ಐದೇ ವ್ಯಂಜನಗಳು. ಎಣಿಸಿದ ಹಾಗೆ ಐದು. ಆರಾದರೆ ಪ್ರಳಯವೇ! ಜೀವಮಾನವೆಲ್ಲ ಹಾಗಾದರೆ ಒಂದು, ಎರಡು ಅಂತ ಎಣಿಸಿಕೊಂಡೇ ಕಳೆಯಬೇಕೇನು? ಹಸುವಿನ ತುಪ್ಪವೇ ಆಗಬೇಕು. ಇಲ್ಲದೆ ಹೋದರೆ ಊಟವೇ ಬೇಡ. ಅಷ್ಟು 'ಬೇಕಾ ಬಿಟ್ಟಿ'ಯಾಗಿದೆಯೆ ಹಸುವಿನ ತುಪ್ಪ, ಈ ಪ್ರಾಂತದಲ್ಲಿ?... ಹೆಜ್ಜೆ ಹೆಜ್ಜೆಗೂ ಇದೇ ಹಿಂಸೆ....! ಇವೆಲ್ಲ ಯಾಕೆ? ಗಾಂಧೀಜಿ ತೋರಿಸಿರುವ ದಾರಿಯಲ್ಲೇ ಹೋಗಬೇಕು ಅನ್ನೋದರಿಂದ ಅಲ್ಲವೇ ಅಲ್ಲ. ಅದಕ್ಕೆ ಮೊದಲು ತಾನೇ ಏನು? ಇವರು ಇನ್ನೂ ನೌಕರಿಯಲ್ಲಿದ್ದಾಗ? ಆಗೇನು ಸ್ವರ್ಗದಲ್ಲಿದ್ದನೆ? ಇದೇ ಹಣೇಬರೆಹವೇ ಆಗಲೂನೂ. ಪೆಟ್ಟಿಗೆ ಬೀಗದ ಕೈ ತಮ್ಮ ಹತ್ತಿರವೇ. ಸ್ಕೂಲಿಗೆ ಹೋಗುವುದಕ್ಕೆ ಮುಂಚೆ ಮನೆ ಖರ್ಚಿಗೆ ನನ್ನ ಕೈಲಿ ಒಂದು ರೂಪಾಯಿ ಇಟ್ಟುಬಿಟ್ಟರೆ ಅಷ್ಟೈಶ್ವರ್ಯ ಕೊಟ್ಟ ಹಾಗೆ. ಅದರಲ್ಲೇ ಎಲ್ಲಾ ಆಗಬೇಕು. ನನ್ನ ಕೈಲಿ ಬೀಗದ ಕೈ ಕೊಟ್ಟರೆ ನಾನೇನು ಇವರ ಕಾಸಿನಿಂದ ನನ್ನ ಹೊಟ್ಟೆ ತುಂಬಿಸಿಕೊಂಡುಬಿಡುತಾಯಿದ್ದನೇನು? ಇಲ್ಲಾ, ಇವರ ಭಂಡಾರವೆಲ್ಲ ಲೂಟಿ ಮಾಡಿ ನಮ್ಮ ತವರು ಮನೆಗೆ ಸಾಗಿಸಿಬಿಡತಾ ಇದ್ದನೆಂಬ ದಿಗಿಲೇ ಇವರಿಗೆ? ಏನಂದುಕೊಂಡು ಹೀಗೆ ಮಾಡತಾ ಇದ್ದರೋ ಯಾರಿಗೆ ಗೊತ್ತು? ಆ ಮಾತನ್ನು ಒಂದು ದಿನವೂ ಕೇಳುವ ಪಾಪಕ್ಕೂ ಹೋಗಲಿಲ್ಲ ನಾನು.... ಕೇಳಬೇಕು ಅನ್ನೋ ದರದೂ ಇರಲಿಲ್ಲ.... ಕೀಳು ಜನರ ಮುಂದೆ ನನಗೆಂಥ ಅವಮಾನ ಮಾಡಿದ್ದರು ಇವರು?... ಒಂದು ದಿನ ಬೆಳಗ್ಗೆ ಎಣ್ಣೆ ಮಾರುವ ಹೆಂಗಸು ನಾವಿದ್ದ ಕ್ವಾರ್ಟರ್ಸ್ (ಹೆಡ್ ಮಾಸ್ತರರ ವಸತಿ)ಗೆ ಬಂದಿದ್ದಳು. ಅಂಗಡಿ ಎಣ್ಣೆ ಚೆನ್ನಾಗಿರೋದಿಲ್ಲ ಅಂದುಬಿಟ್ಟು ಅವಳ ಕಡೆಯಿಂದ ಒಂದು ರೂಪಾಯಷ್ಟು ಎಣ್ಣೆ ಹಾಕಿಸಿಕೊಂಡೆ. ಎಣ್ಣೆ ತಗೊಂಡು ರೂಪಾಯಿ ಯಜಮಾನರ

*ಮಹದೇವ ದೇಸಾಯಿ ಮಹಾತ್ಮ ಗಾಂಧಿಯವರ ಆಪ್ತ ಸಚಿವರಾಗಿದ್ದರು.

** 'ಹರಿಜನ'.

ಹತ್ತಿರ, ಹೊರಗಡ ರೂಮಿನಲ್ಲಿ ಹೋಗಿ ತೆಗೆದುಕೋ ಅಂತ ಹೇಳಿದೆ. ಇದೊಂದು ಮಾಡಬಾರದ ಪಾಪ. ಒಂದೆರಡು ನಿಮಿಷಗಳಲ್ಲೇ ಈ ಎಣ್ಣೆ ಹೆಂಗಸು ದಬದಬ ಅಂತ ನನ್ನ ಮುಂದೆ ಬಂದದ್ದೇ ಬುಸ್ ಅಂತ ಮೈಮೇಲೆ ಬೀಳಬೇಕೆ? ಹಾಂ ಹೂಂ... ಹಾಗೆ... ಹೀಗೆ... ಕೊಟ್ಟು ಬಿಡಿ ನನ್ನ ಎಣ್ಣೆ ವಾಪಸು? ಬೆಳ್ಳಂಬೆಳಗ್ಗೆ ನನ್ನ ಸಮಯ ಹಾಳು ಮಾಡಿದಿರಿ... ಬೋಣಿ ಮಾಡತಾರೆ ಅಂದುಕೊಂಡಿದ್ದರೆ... ಬಿಸಾಡಿ ನನ್ನೆಣ್ಣೇ! ಅಯ್ಯನೋರು ಹೇಳಿದರು ಎಣ್ಣೆ ಯಾರು ತಗೋ ಅಂತ ಹೇಳಿದರು? ಸಾಕೀ ಅವಮಾನ...? ಅದೂ ಅವಳ ಮುಂದೆ.... ಇನ್ನೂ ಪ್ರಾಣ ಯಾಕೆ ಇಟ್ಟುಕೊಂಡಿರಬೇಕು ಹೆಂಗಸಾಗಿ? ಒಂದಲ್ಲ ಹೀಗೆ... ಎಷ್ಟೋ... ಲೆಕ್ಕವಿಲ್ಲದಷ್ಟು... ಒಂದೊಂದಾಗಿ ಮನಸ್ಸಿನಲ್ಲಿ ಪೋಣಿಸಿಟ್ಟುಕೊಂಡಿದ್ದೇನೆ. ನೀವಂತೂ ದೇಶಕ್ಕೋಸ್ಕರ ಎಷ್ಟೋ ತ್ಯಾಗ ಮಾಡಿದ್ದೀರಿ, ನಿಜ. ಆದರೆ ಕೈ ಹಿಡಿದ ಹೆಂಡತಿಗೆ ನೀವು ರವೆಯಷ್ಟಾದರೂ ಸ್ವಾತಂತ್ರ್ಯ ಕೊಟ್ಟಿದ್ದೀರಾ? ಹುಡುಗರು ದೊಡ್ಡವರಾದ ಮೇಲೆ ಒಂದು ದಿನ ಅವರ ಮುಂದೆ ಹೇಳಲೇ ಬೇಕು ಅಂತ ಎಷ್ಟು ಸಲ ಅಂದುಕೊಂಡಿದ್ದನೋ. ಆದರೆ ಯಾಕೋ, ಹೇಳೋಣ ಹೇಳೋಣ ಅಂತ ಅಂದುಕೊಳ್ಳೋದೆ ಹೊರತು ಹೇಳೋಕೇ ಆಗಲಿಲ್ಲ... ಹೇಗೆ ಹೇಳೋದು? ಮಕ್ಕಳ ಮುಂದ ಹೇಳುವ ಮಾತೇ ಇದು? ನಿಮ್ಮ ಮಾತಿಗೆ ನಾನೆಂದಾದರೂ ಪ್ರತಿ ಹೇಳಿದ್ದೇನಾ... ಹಾಗಲ್ಲ, ಹೀಗೆ ಅಂತ? ಕೇವಲ ಮಕ್ಕಳ ಮುಖ ನೋಡಿಕೊಂಡು ಇದ್ದೇನೆ ಇಷ್ಟು ದಿನ. ನನಗೆ ಏನಾಗಿದೆಯೋ ಅದು ಆಗಿಹೋಯಿತು. ಇನ್ನು ಅದರ ವಿಷಯವಾಗಿ ಚಿಂತೆ ಮಾಡೋದಿಲ್ಲ. ಆದರೆ ಈ ನನ್ನ ಮಕ್ಕಳಿಗೆ ಇವತ್ತು ಆಗಿರೋ ಅವಸ್ಥೆ, ಇದೋ ನಿಮ್ಮಿಂದಲೇ... ನಿಮ್ಮಿಂದಲೇ! ನನ್ನ ಸಂಸಾರವೇ ಸುಟ್ಟು ಬೂದಿಯಾಗಿ ಹೋಯಿತು. ನಿಮ್ಮಿಂದಲೇ, ನನ್ನ ಸ್ವಂತ ಒಡಹುಟ್ಟಿದವ, ನನ್ನ ತಮ್ಮ - ಇವತ್ತು ಅವನ ಮನೆಯಲ್ಲಿ ಎಷ್ಟು ಜನ ಹೊರಗಿನ ಹುಡುಗರು ಕೂತುತಿಂತಾರೋ - ಅಂಥವನು ನನ್ನ, ನನ್ನ ಸಂಸಾರದ ಗೊಡವೆಯನ್ನೇ ಹಚ್ಚಿಕೊಳ್ಳೋದಿಲ್ಲ. ಆ ಬೀರೇನಸಿದ್ದಾನಲ್ಲ... ಅವನ ತಾಯಿಯಾದವಳು ಅವತ್ತು ಬಂದು ನನ್ನನ್ನು ಹೇಗೆ ಹೀನಾಮಾನಾ ಬೈದು ಹೋದಳು. ನನ್ನ ಮುಖ ಇಷ್ಟು ಮಾಡಿಹೋದಳು. ಅವಳ ಮಗನನ್ನು ಬಂಗಾಳಿಯವನು ಅಂದುಬಿಟ್ಟು ಡಿಸ್ಟ್ರಿಕ್ಟ್ ಬೋರ್ಡಿನ ಕೆಲಸದಿಂದ ವಜಾ ಮಾಡಿತು ನಿಮ್ಮ ಕಾಂಗ್ರೆಸ್ಸು. ನನ್ನ ಮುಖಕ್ಕೇ ಮಸಿ ಬಳಿದು ಹೋದಳು - ನಿನ್ನ ಗಂಡ - ಹೆಡ್‌ಮಾಸ್ಟರ್ ಬಾಬು ಅಲ್ಲ... ಎಂ.ಎ. ಪಾಸ್ ಮಾಡಿದ ಹೇಸರಗತ್ತೆ ಅಂತ ಬೈದು. ಬಂಗಾಳಿಗಳ ಮುಖಕ್ಕ ಮಸಿ ಬಳಿಯೋದರಿಂದ ಆಡಳಿತ ಮಾಡಲಿಕ್ಕೆ ಬಂದಿದೆ ಕಾಂಗ್ರೆಸ್ಸು ಅಂತ ಸಹ ಇನ್ನೂ ಏನೇನೋ ಅಂದು ಹೋದಳು. ಈಗ ನಾನು ಎಂಥ ಅವಸ್ಥೆಯಲ್ಲಿ ಇಳಿದಿದ್ದೇನೆ ಅಂದರೆ ಯಾವ ಕಡೆ ತಿರುಗಿದರೂ ಬರೇ ಕತ್ತಲೆ.

ಗಾಂಧೀ ಮಹಾತ್ಮ... ನೀವೇನು ಮಾಡಿಬಿಟ್ಟಿರಿ ನನಗೆ? ನೀವು ನಮ್ಮನ್ನೀಗ ಪೂರ್ತಿಯಾಗಿ ಬೀದಿ ಭಿಕಾರಿಗಳಾಗಿ ಮಾಡಿಬಿಟ್ಟಿದ್ದೀರಿ. ನಿಜವಾಗಿ ಭಿಕಾರಿಗಳೇ! ನೀವು ತಿಂಗಳ ಕಡೆಯಲ್ಲಿ ಕೈಯಲ್ಲೇನು ತಗೆದುಕೊಡುತೀರೋ ಅದರಿಂದಲೇ ನಾವು ಹೇಗೋ ಹೊಟ್ಟೆ ತುಂಬಿಸಿಕೊಳ್ಳತೇವೆ. ನಮ್ಮ ಸ್ವಂತ ಮನೆ ದೇವರುಗಳನ್ನು ಬಿಟ್ಟು

ನಿಮ್ಮನ್ನು ಪೂಜೆ ಮಾಡಿದ್ದೇನೆ, ನಿಮಗೋಸ್ಕರವಾಗಿ ಬಂಧು, ಬಳಗಗಳನ್ನು ಆಪ್ತೇಷ್ಟರನ್ನು ಬಿಟ್ಟುಬಿಟ್ಟಿದ್ದೇನೆ. ನಕ್ಕು ಎಷ್ಟು ದಿನವಾಯಿತೋ...! ಅದಕ್ಕೆ ನಿಮ್ಮಿಂದ ಸಿಕ್ಕಿರುವುದು ಏನು ? ನೀವು ತೋರಿಸಿಕೊಟ್ಟಿರೋ ದಾರಿಯಲ್ಲಿ ಗಂಡ, ಹೆಂಡಿರ ಮನಸ್ಸು ಒಂದಾಗುವುದಿಲ್ಲ. ತಂದೆ, ಮಕ್ಕಳಲ್ಲಿ ಪ್ರೀತಿಯ ಸಂಬಂಧ ಉಳಿಯುವುದಿಲ್ಲ. ಅಣ್ಣ, ತಮ್ಮಂದಿರು ಶತ್ರುಗಳಾಗಿ ಬಿಡುತ್ತಾರೆ. ಗೃಹಚ್ಛಿದ್ರದಿಂದ ಸಂಸಾರ ಚೂರುಚೂರಾಗಿ ಬಿಡುತ್ತದೆ. ನನಗೆ ಉಪದೇಶವಾಗಿರುವ ಇಷ್ಟಮಂತ್ರ ಬಿಟ್ಟು ಸಂಜೆ ನಿಮ್ಮ ಹೆಸರನ್ನ ಜಪಮಾಡಿದ್ದೇನೆ. ಎಷ್ಟು ವರುಷಗಳ ಹಿಂದೆ ನೀವು ಆಶ್ರಮಕ್ಕೆ ಬಂದು ಯಾವ ಜಾಗದಲ್ಲಿ ಕೂತಿದ್ದಿರೋ, ಅದೇ ಜಾಗದಲ್ಲಿ ನಾನು ಪ್ರತಿದಿನ ಸಂಜೆ ಪ್ರದೀಪ ಹತ್ತಿಸಿಡುತ್ತೇನೆ. ಒಂದು ದಿನವಾದರೂ ಚರಖಾ ತಿರುಗಿಸುವುದನ್ನು ಬಿಟ್ಟಿಲ್ಲ. ಅದಕ್ಕೆ ಇದೇನೇ ಪ್ರತಿಫಲ ? ಮೇಥರ (ಕಸಬಳಿಯುವ) ನನ್ನು 'ಹರಿಜನ' ಎಂದಿದ್ದೇನೆ. ಅವನ ಬೆತ್ತಲೆ ಮಕ್ಕಳನ್ನು ಬಿಲೂ, ನೀಲೂರ ಜತೆಯಲ್ಲಿ ಅಡಿಗೆ ಮನೆಯ ಅಂಗಳದಲ್ಲಿ ಕೂಡಿಸಿ ಅನ್ನ ಬಡಿಸಿದ್ದೇನೆ. ಕೇರಿಯ ಜನರೆಲ್ಲ ಚಪ್ಪಾಳೆ ತಟ್ಟಿ ನಕ್ಕಿದ್ದಾರೆ. ಆದರೆ ಅದಕ್ಕೆಲ್ಲ ಯಾವ ಪ್ರತಿಫಲ ಬಂತು ? ದುರ್ಗಾಳ ತಾಯಿ ಸರಿಯಾಗೇ ಹೇಳಿದ್ದಳು - ಸ್ವದೇಶಿಯ ಕೆಲಸ ಮಾಡಬೇಕಾಗಿದ್ದರೆ ಮಾಡು. ಆದರೆ ಇದೆಲ್ಲ ಯಾಕೆ ? ದೇವರು, ದಿಂಡರನ್ನ ಬಿಡುವುದೇಕೆ ? ಅದು ಒಳ್ಳೇದಲ್ಲ. ಆದರೆ ಆಗ ನಿಮ್ಮ ಮುಖನೋಡಿ ನಾನು ಅವರೆಲ್ಲರ ಮಾತಿಗೆ ಕಿವಿಗೊಡಲಿಲ್ಲ. ಇವತ್ತು ನಾನು ಒಳಗೊಳಗೇ ಚೆನ್ನಾಗಿ ತಿಳಿದುಕೊಂಡುಬಿಟ್ಟಿದ್ದೇನೆ. ಇವತ್ತು ದುರ್ಗಾಳ ತಾಯಿ, ಬೇಂದಿಯ ತಾಯಿ, ಜಿತೇನನ ತಾಯಿ- (ಅಕ್ಕ) ಇಲ್ಲಿದ್ದರೆ ಅವರ ಕೊರಳನ್ನು ತಬ್ಬಿಕೊಂಡು ಚೆನ್ನಾಗಿ ಅತ್ತು ಮನಸ್ಸನ್ನ ಹಗುರ ಮಾಡಿಕೊಳ್ಳುತ್ತಿದ್ದೆ. ಮಹಾತ್ಮರಂತೆ ಮಹಾತ್ಮರು! ಎಂಥ ಮಹಾತ್ಮರು...! ಸಂನ್ಯಾಸಿಗಳ ಹಾಗೆ ಚಹರೆಯೆದೆಯ ? ....ಛೀ! ಇಷ್ಟು ದಿನಗಳೂ ಹೇಗೆ ಮೋಸಹೋದೆ... ಏನೂ ಗೊತ್ತಿಲ್ಲದೆ ? ಪ್ರಪಂಚದ ಜನಗಳೆಲ್ಲ ಒಟ್ಟಿಗೆ ಸೇರಿಕೊಂಡು ನನಗೆ ಏನು ಮಾಡಿಬಿಟ್ಟಿದ್ದಾರೆ ? ಹೊಟ್ಟೆ ಉರಿಯುತ್ತ ಇದೆ ನನಗೆ... ನನ್ನನ್ನು ನಾನೇ ಕಿತ್ತು ತಿನ್ನೋಣ ಅನ್ನಿಸುತ್ತಾ ಇದೆ... ತಲೆ ಎಲ್ಲಾದರೂ ಕಂಬಕ್ಕೋ ಕಲ್ಲಿಗೋ ಕುಟ್ಟಿಕೊಂಡು ಕುಟ್ಟಿಕ್ಕೊಂಡು ಸಾಯೋಣ ಅನ್ನಿಸುತ್ತ ಇದೆ. ಇಲ್ಲ.... ಇನ್ನು ಸಾಧ್ಯವಿಲ್ಲ. ಈ ಚರಖಾ... ಈ ಚರಖಾ ಎಳೆದೆಳೆದು ಮುರಿದು ಬಿಡಬೇಕು. ನೆಲದ ಮೇಲೆ ಒಗೆದು ಚೂರು ಚೂರು ಮಾಡಿ ಒಡೆದು ಹಾಕಿ ಬಿಡಬೇಕು ಅನ್ನಿಸತ್ತೆ. ಈಗಲೇ ಹೋಗಿ ಆ ಕೆಲಸ ಮಾಡಿದ ಹೊರತು ತೃಪ್ತಿಯಿಲ್ಲ... ಎಲ್ಲೀ... ಆ ಟೇಬಲ್ ಮೇಲೆ ಇಟ್ಟಿದ್ದೆನಲ್ಲ ?

ಚರಖಾ ತೆಗೆದು ಎಳೆದುಹಾಕುವುದಕ್ಕೆ ಎಂದು ಜೋರಾಗಿ ಎದ್ದು ಕೂಡುತ್ತೇನೆ. ಏಳಲಿಕ್ಕೆ ಎಲ್ಲಿ ಆಗತ್ತೆ ? ತಲೆಯ ಎಡಭಾಗದಲ್ಲಿ ಒಂದು ಮಣ ಕಬ್ಬಿಣ ಹೇರಿರುವ ಹಾಗೆ ಭಾರವಾಗಿದೆ. ತಲೆಯನ್ನ ಯಾರೋ ಹಿಡಿದು ತಲೆ ದಿಂಬಿನ ಮೇಲೆ ತಳ್ಳಿದಂತಾಯಿತು. ಬಹುರಿಯಾಜಿ, ಕಮಲಾದೇವಿ. 'ಹಾಹಾ' ಎಂದು ಕೂಗುತ್ತ ಎದ್ದರು.

"ಎದ್ದಿದ್ದೇಕೆ ಬಂಗಾಳಿಯಮ್ಮನವರೆ ? ಏನು ಹುಡುಕುತಾಯಿದ್ದೀರಿ ? ಯಾಕೆ

ಹಾಗೆ ಸುತ್ತ ನೋಡತಾಯಿದ್ದೀರಿ ? ಸುಮ್ಮನೆ ಮಲಗಿಕೊಳ್ಳಿ. ತಲೆಗೆ ಸ್ವಲ್ಪ ತಣ್ಣೀರು ತಟ್ಟಲೇ ?"

ಎಲ್ಲರೂ ಸೇರಿ ನನ್ನನ್ನ ಹಿಡಿದುಕೊಂಡು ಬಲವಂತವಾಗಿ ಹಾಸಿಗೆ ಮೇಲೆ ಮಲಗಿಸಿದರು. ನಾನು ಹುಡುಕುತಾ ಇದ್ದ ಸಾಮಾನು ಏನು ಎಂದು ಅವರಿಗೆ ಹೇಗೆ ಹೇಳುವುದು ? ಆಮೇಲೆ ಅವರು ಇವಳಿಗೇನೋ ತಲೆ ಕೆಟ್ಟಿದೆ ಎಂದು ತಿಳಿದುಕೊಳ್ಳುತ್ತಾರೆ. ಈಗಲೂ ಮನಸ್ಸಲ್ಲಿ ಏನಂದುಕೊಳ್ಳುತ್ತಾರೋ ಯಾರಿಗೆ ಗೊತ್ತು ? ತಲೆಗೆ ಯೂಡಿ ಕೊಲೋನ್ ಸವರಿ ಉಜ್ಜುತ್ತ ಇದ್ದಾರೆ. ವಾರ್ಡಿನಲ್ಲಿದ್ದವರೆಲ್ಲ ಒಬ್ಬೊಬ್ಬರಾಗಿ ಬಂದು ಸೇರಿದರು ನನ್ನ ಹಾಸಿಗೆ ಪಕ್ಕದಲ್ಲಿ. ಗುಲಕಟ್ಟೀ ತನ್ನ ಗೂರಲು ದನಿಯಲ್ಲಿ ಲೂಸಿ ಜಮಾದಾರಣಿಯನ್ನ ಕೂಗಿ ಏನೋ ಹೇಳುತ್ತಿದ್ದಾಳೆ, ಬಹುಶಃ ನನ್ನ ವಿಷಯವಾಗೇ ಇರಬೇಕು. ಸದ್ಯಃ, ಅದನ್ನ ಕೂಗಿ, ಅರಚಿ ಗಲಾಟೆ ಮಾಡಿ ಆಸ್ಪತ್ರೆಯವರೆಗೂ ಸುದ್ದಿ ತಲಪದೆ ಇದ್ದರೆ ಒಳ್ಳೆಯದು. ತಲಪಿಬಿಟ್ಟರೆ ಅನರ್ಥವಾದೀತು, ಸಖಾವತೀ ದೇವಿಯು ಮೆಲ್ಲ ಮೆಲ್ಲಗೆ ಬಂದು ನಿದ್ದೆ ಮಾಡುತ್ತಿರುವ ತನ್ನ ಮಗನನ್ನು ನಿಧಾನವಾಗಿ ಸದ್ದು ಮಾಡದೆ ತನ್ನ ಕಂಕುಳಲ್ಲಿ ಎತ್ತಿಕೊಂಡು ಹೊರಟು ಹೋದಳು. ತನ್ನ ಮಗುವಿಗೆ ನಾನೇನಾದರೂ ಮಾಡಿಬಿಟ್ಟೇನೇನೋ ಎಂಬ ದಿಗಿಲಿರಬೇಕು. ಇಲ್ಲಮ್ಮಾ ಇಲ್ಲ - ನಿನಗೆ ಯಾವುದು ಒಳ್ಳೆಯದು ಎಂದು ತೋಚುತ್ತೋ ಅದನ್ನ ಮಾಡು. ನೀನು ಅದರ ತಾಯಿ. ಅದಕ್ಕೆ ಯಾವುದು ಒಳ್ಳೆಯದು ಎಂದು ನಿನಗೆ ತಿಳಿಯುವ ಹಾಗೆ ನನಗೆ ಹೇಗೆ ತಿಳಿಯಬೇಕು ? ಎಲ್ಲರೂ ಮೌನವಾಗಿ ನನ್ನನ್ನು ಸುತ್ತು ಹಾಕಿಕೊಂಡು ಕೂತಿದ್ದಾರೆ. ಒಂದು ಸೂಜಿ ಬಿದ್ದರೂ ಶಬ್ದವಾಗಬಹುದು. ಬರೀ ಕೈ ಬೀಸಣಿಗೆಯಿಂದ ಬೀಸುವ ಒಂದೇ ಸಮನಾದ ಶಬ್ದ ಮಾತ್ರ ಕೇಳಬರುತ್ತಿದೆ. ಒಂದು ಜೀರುದುಂಬಿ ಮೇಲೆ ಹಾರುತ್ತಿದೆ. ಘೋಂ......ಎಂದು ಶಬ್ದವಾಗುತ್ತಿದೆ. ಹಠಾತ್ತಾಗಿ 'ಟಕ್' ಎಂದು ಶಬ್ದ ಮಾಡುತ್ತ ನೆಲದ ಮೇಲೆ ಬಿದ್ದು ಬಿಟ್ಟಿತು. ಮತ್ತೆ ಹಾರಿತು. ಮತ್ತೆ ಯಾವುದಕ್ಕೋ ತಗುಲಿ ಕೆಳಗೆ ಬಿದ್ದಿದೆ. ಇನ್ನೂ ಮೇಲಕ್ಕೆ ಹಾರಿಲ್ಲ. ಇನ್ನೂ ಇಲ್ಲ... ಇನ್ನೂ ಇಲ್ಲ. ಮತ್ತೆ ಎದ್ದು ಹಾರುತ್ತದೆ... ನಾನು ಹತ್ತು ಎಣಿಸುವುದರ ಒಳಗಾಗಿ ಹಾರುತ್ತದೆ. ಆಗ ನಾನು ಒಂದು, ಎರಡು, ಮೂರು ಅಂತ ಹತ್ತು ಎಣಿಸುವುದರ ಒಳಗಾಗಿ ಅದು ಕೆಳಗೆ ಬಿದ್ದು ಹೋದರೆ... ಆಗ ಬಿಲೂ ಏನು ಮಾಡಿದರೂ ಬದುಕುವುದಿಲ್ಲ... ಒಂದು ಪಕ್ಷ ಹುಳು ಕೆಳಗೆ ಬೀಳುವುದಕ್ಕೆ ಮೊದಲೇ ಹತ್ತೆಣಿಸುವುದು ಮುಗಿದು ಹೋದರೆ ದೇವರು ಹೇಗಾದರೂ ಬಿಲೂವನ್ನು ಬದುಕಿಸಿಯೇ ಬದುಕಿಸುತ್ತಾನೆ.

ಬೇಗ ಬೇಗ ಎಣಿಸಬೇಕಾಗತ್ತೆ. ಎಷ್ಟು ಬೇಗ ಆದರೆ ಅಷ್ಟು ಬೇಗ ಬೇಗ. ಇಕೋ, ಹುಳು ಮೇಲಕ್ಕೆ ಹಾರಿತು... ಒಂದು... ಎರಡು... ಮೂರು, ನಾಲ್ಕು, ಐದು, ಆರು, ಏಳು... ಅಯ್ಯೋ ಹಾಳು ಹುಳು ಬಿದ್ದೇ ಹೋಯಿತು ಅಷ್ಟರಲ್ಲೇ! ಇದೇನು ಮಾಡಿಬಿಟ್ಟೆ ದೇವರ ? ಸ್ವಲ್ಪ ಯಾವುದರಲ್ಲೋ ಆಸೆ ಇಟ್ಟುಕೊಂಡಿದ್ದರೆ ಅದನ್ನೂ ಮುರಿದು ಹಾಕಿಬಿಟ್ಟೆಯಲ್ಲಾ ? ಛೇ.... ನಾನೆಂಥ ಹುಚ್ಚಿ... ಇದೆಲ್ಲ ನನ್ನ ಮನಸ್ಸಿನಲ್ಲಿ ಮಾಡಿಕೊಂಡ ಕಲ್ಪನೆ. ಅದಕ್ಕೇನು ತಲೆ, ಕಾಲು ಇದೆಯ ? ನಾನೇ ಮುರಿದದ್ದನ್ನ ನಾನೇ ಮತ್ತೆ ಕಟ್ಟುತೇನೆ. ಹುಳುವಿನ ಸಂಬಂಧವಾಗಿ ನಾನು ಮಾಡಿಕೊಂಡ ಯೋಚನೆ

ಸರಿಯಲ್ಲ. ಎಲ್ಲ ದೇವರ ಕೈಲೇ ಇರುವುದು. ಆ ದೇವರನ್ನೇ ನಾನು ಇದುವರೆಗೆ ನಿರ್ಲಕ್ಷ್ಯ ಮಾಡಿದ್ದೆ. ಅಮ್ಮಾ ಪೂರ್ಣೇಶ್ವರಿ, ನನ್ನ ತಪ್ಪು, ಪಾಪ- ಎಲ್ಲವನ್ನೂ ಮನ್ನಿಸಿಬಿಡಮ್ಮಾ! ನಿನ್ನ ಕರುಣೆಯಿಂದಲೇ ಅಲ್ಲವೇ ನಾನು ಬಿಲೂವನ್ನು ಹೆತ್ತದ್ದು - ನಿನ್ನ ಹೆಸರಿನ ಜ್ಞಾಪಕಾರ್ಥವಾಗಿ ಬಿಲೂವನ್ನು ನಾನು ಪೂರ್ಣಚಂದ್ರ ಎಂದು ನಾಮಕರಣಮಾಡಿದ್ದು. ಮನೆಯವರೆಲ್ಲರೂ ಸಹ ನಿನ್ನ ಮಂದಿರದ ಪ್ರಸಾದ ಸೇವನೆ ಮಾಡುವುದು ಬಿಟ್ಟು ಬಿಟ್ಟಿದ್ದಾರೆಂದೇ ನಿನಗೆ ನಮ್ಮ ಮೇಲೆ ಕೋಪ? ಬಿಲೂಗೆ ಕಾಯಿಲೆ ಬಂದಿದ್ದಾಗ ನಾನು ಹರಕೆ ಹೊತ್ತಿದ್ದ ಪೂಜೆಯನ್ನು ದೇವಿ ಪೂರ್ಣೇಶ್ವರಿಯ ಮಂದಿರದಲ್ಲಿ ಸಲ್ಲಿಸಿಲ್ಲವೆ? ಏನೋ ನೆನಪಿಗೆ ಬರುತ್ತಿಲ್ಲ. ಮರೆತುಹೋಗಿ ಬಿಟ್ಟನೇ ಹಾಗಾದರೆ? ನೋಡಿದಿರಾ... ಆಹಾ... ಒಂದು ಸಾಮಾನ್ಯ ತಪ್ಪು... ಅದೂ ಮರೆವಿನಿಂದ ಆದದ್ದು... ಅದರಿಂದ ಎಷ್ಟು ದೊಡ್ಡ ಅನಾಹುತ ಆಗಿ ಹೋಯಿತು? ಅಮ್ಮಾ ಪೂರ್ಣೇಶ್ವರಿ... ನೀನೇ ಇದು ಮೊದಲೇ ನನ್ನ ಜ್ಞಾಪಕಕ್ಕೆ ಬರುವ ಹಾಗೆ ಏಕೆ ಮಾಡಲಿಲ್ಲ? ಇಲ್ಲ, ಖಂಡಿತವಾಗಿ ಜ್ಞಾಪಕ ಬಂದಿತ್ತು... ಆದರೂ ಏಕೆ? ಹೀಗಾಯಿತು? ತಾಯಿ, ನೀನಂತೂ ಜಾಗ್ರತಾ ದೇವಿ. ಬಿಲೂ ಒಂದು ರೀತಿಯಲ್ಲಿ ನಿನ್ನ ಮಗನೇ. ಅವನನ್ನು ಈ ಸಲ ಏನಾದರೂ ಸರಿ ಬದುಕಿಸಿಬಿಡು. ನಾನು ಇನ್ನುಮೇಲೆ ಯಾವ ತಪ್ಪೂ ಹೊರಿಸುವುದಿಲ್ಲ. ಆಮೇಲೆ ಇದನ್ನೂ ಮಾತುಕೊಡತೇನೆ. ಇನ್ನೆಂದಿಗೂ ಮಹಾತ್ಮಾಗಾಂಧಿಯನ್ನ ನಿನಗಿಂತಲೂ ದೊಡ್ಡವನೆಂದು ತಿಳಿಯುವುದೇ ಇಲ್ಲ.

ಬರಹಮ್ ಖಾನಾದಲ್ಲಿ ಬಿಲೂ ಹುಟ್ಟಿದಾಗ ಒಂದು ಇಟ್ಟಿಗೆ ಹಾಕಿಸಿದ್ದೆನಲ್ಲ.... ಅದನ್ನ ಬಿಚ್ಚಿ ಬಿಟ್ಟಿದ್ದಾರೇನು? ಹಾಂ... ಹೌದು... ಅದೇ ಆಗೊಂದು ಸಲ ನಾನೂ, ಜಿತೇನನ ತಾಯಿಯೂ ಹೋಗಿದ್ದೆವಲ್ಲ.. ಆಗ, ನನ್ನ ಕಾಲ ಹಬ್ಬೆರಳು ಜಜ್ಜಿ ಹೋಗಿತ್ತಲ್ಲ. ಕೊಡ ಅದರ ಮೇಲೆ ಬಿದ್ದು.... ಆಗ ಆಗಲೇ ನಾನು ತಪ್ಪು ಮಾಡಿದ್ದು, ಯಾವ ಇಟ್ಟಿಗೆಯನ್ನೋ ತೆಗೆಯಲು ಹೋಗಿ ಇನ್ಯಾವುದನ್ನೋ ತೆಗೆದುಬಿಟ್ಟೆ, ... ಏನೀಗ? ಅಷ್ಟು ಇಟ್ಟಿಗೆಗಳಿರುವಾಗ ಒಂದನ್ನ ಗುರುತಿಸುವುದಕ್ಕೆ ಹೇಗೆ ಆಗುತ್ತೆ?

ಅದೇ ನಮ್ಮ ಸರಸ್ವತಿಯ ಮನೆ ಹತ್ತಿರವೇ, ಅರಳೀಮರದ ಅಡಿಯಲ್ಲಿ ನೆಲದ ಮೇಲೆ ಕುಂಕುಮ ಹಚ್ಚಿರುವ 'ಡಿ ಹು ಒ ಯಾರ್' ದಯಿಭಾತ್ ಗ್ರಾಮದ ದೇವರು ಗ್ರಾಮದ 'ಡಿಹಿ' (ಎಲ್ಲೆ) ಯನ್ನು ಕಾವಲು ಕಾಯುತ್ತ, ರಕ್ಷಿಸುವ ದೇವರು. ಅಲ್ಲಿ ಎಲ್ಲರೂ ಮಣ್ಣಿನ ಕುದುರೆಗೆ ಪೂಜೆ ಮಾಡುತ್ತಾರೆ. ಸರಸ್ವತಿಯ ತಾಯಿ ಹೇಳುತ್ತಿದ್ದರು, ದೇವಿಯ ಕೃಪೆಯಾದಾಗ, ಕಾಲರಾ ಅಥವಾ ಅನಾವೃಷ್ಟಿಯ ಸಮಯದಲ್ಲಿ ಕುದುರೆ ಸವಾರಿ ಮಾಡಿಕೊಂಡು ಅವತ್ತು ಮೊಳ ಎತ್ತರದ 'ಡಿ ಹು ಒ ಯಾರ್' ದೇವರು ಒಂದು ಗ್ರಾಮದ ಸುತ್ತ ಪಹರೆ ಮಾಡುತ್ತಾನಂತೆ. ಗ್ರಾಮದ ಚೌಕೀದಾರನು ಅರ್ಧರಾತ್ರಿಯಲ್ಲಿ ಕಾವಲು ಕಾಯುತ್ತ ಇರುವಾಗ ಎಷ್ಟೋ ಸಲ ನೋಡಿದ್ದಾನಂತೆ. ಈ ಕತೆ ಕೇಳಿ ಸರಸ್ವತಿಯ ತಾಯಿ ಎದುರಿಗೆ ಏನೂ ಹೇಳಲಿಲ್ಲ ಆಗ. ಆದರೆ ನನ್ನ ಮನಸ್ಸಿನಲ್ಲೇ ನಕ್ಕಿದ್ದೇನೆ. ಅರವತ್ತು ಮೊಳ ಎತ್ತರದ ದೇವರನ್ನ ನಾನು ನಂಬಲಿಲ್ಲ. ಅರವತ್ತು ಮೊಳ ಉದ್ದದ ದೇವರಿಗೆ ಒಂದು 'ಬಿಘಾ' ಉದ್ದ

ಇರುವ ಕುದುರೆ.... ಎಲ್ಲಾದರೂ ಉಂಟೆ? ಡಿ ಹು ಒ ಯಾರ್ ದೇವರು ಖಂಡಿತವಾಗಿಯೂ ಅವತ್ತು ನಾನು ನಂಬದೇ ನಕ್ಕ ಪಾಪಕ್ಕೆ ಸಿಟ್ಟಾಗಿದ್ದಿರಬೇಕು. ಅದಕ್ಕೇ ನನಗೆ ಈಗ ಈ ಶಿಕ್ಷೆ ಕೊಟ್ಟಿದ್ದಾನೆ! ಡಿ ಹು ಒ ಯಾರ್ ದೇವರೇ, ಇವತ್ತು ನನ್ನ ಬಿಲೂವನ್ನು ಹೇಗಾದರೂ ಬದುಕಿಸಿ ಬಿಡು. ಆಮೇಲೆ ನೀನು ಏನು ಹೇಳಿದರೆ ಅದನ್ನ ಮಾಡತೇನೆ. ನೀವೆಲ್ಲ ಸಿಟ್ಟಾದರೆ ನಮ್ಮಂಥ ಸಾಮಾನ್ಯ ಮನುಷ್ಯರು ದಿನ ಹೇಗೆ ಕಳೆಯುವುದು, ಹೇಳು!

ಇಗೋ... ಇದೋ... ಮೋಟಾರಿನ ಹಾರನ್ ಶಬ್ದ ಆಗತಾಯಿದೆ... ಅಂ!... ಹಾಗಾದರೆ ನಮ್ಮ ಬಿಲೂ....?

ಅದೇ ಹಸಿರು ಬಣ್ಣದ ವಾಸನೆ ಶೀಶೆಯನ್ನ ಮೂಗಿಗೆ ಹಿಡಿದಿದಾನೆ ಅಂತ ಅಂದುಕೊಂಡಿದ್ದೇನೆ...!

# ನೀಲೂ

ಜೈಲು ಗೇಟಿನ ಮುಂದುಗಡೆಯಿರುವ ಪೋರ್ಟಿಕೋ ತಳಗಡೆ ವಾರ್ಡರ್ ನೇಹಾಲ್ ಸಿಂಗನ ಸಹಿತ ಬಂದು ನಿಂತೆ. ಗೇಟಿನ ಹೊರಗಡೆ ಆಯುಧಪಾಣಿಯಾದ ಪ್ರಹರಿ. ಗೇಟಿನ ಒಳಗಡೆ ಉಜ್ವಲವಾದ ದೀಪವೊಂದು ಎಲ್ಲ ಕಡೆಯೂ ಬೆಳಕು ಚೆಲ್ಲಿದೆ. ದೀಪದ ಕೆಳಗಡೆ ಸುಬೇದಾರ್ ಸಾಹೇಬನು ಎತ್ತರವಾದ ಸ್ಟೂಲಿನ ಮೇಲೆ ಕೂತುಕೊಂಡಿದ್ದಾನೆ. ನೇಹಾಲ್ ಸಿಂಗನು 'ಕೂಡಿ' ಎಂದು ನನಗೆ ಹೇಳಿದ. ಎದುರಿಗಿದ್ದ ಅಷ್ಟು ಎತ್ತರವಿಲ್ಲದ ಕಾಪೌಂಡು ಗೋಡೆಯ ಮೇಲೆ ಕೂತೆ.

"ಬಾಬೂ, ಕಂಬಳಿ, ಗಿಂಬಳಿ ಏನೂ ತಂದಿಲ್ಲವೇ ?"

"ಇಲ್ಲ" ಅಂದೆ.

ಆಗ ಅವನೇ ತಾನಾಗಿ ಗೇಟಿನ ಒಳಗಡೆ ಇದ್ದ ಸುಬೇದಾರನ ಸಹಾಯದಿಂದ ಸಲಾಕೆಗಳ ಹಿಂದಿನಿಂದ ಮೂರು ನಾಲ್ಕು ಕಂಬಳಿಗಳನ್ನು ಹೇಗೋ ತಂದು ಒದಗಿಸಿದ. ಅವುಗಳನ್ನು ಒಂದರ ಮೇಲೊಂದು ಗೋಡೆಯ ದಿಬ್ಬದ ಮೇಲೆ ಹಾಸಿ ಕೈಯಿಂದ ಒಂದೆರಡು ಸಲ ಧೂಳು ಜಾಡಿಸಲು ಯತ್ನಿಸಿದ.

ಆಮೇಲೆ, "ಬಾಬೂ, ಕೂಡಿ ಇಲ್ಲಿ" ಎಂದ. ತರುವಾಯ ಗೇಟಿನ ಕಾವಲುಗಾರನಿಗೂ ಮತ್ತು ಸುಬೇದಾರ ಸಾಹೇಬನಿಗೂ ಸಣ್ಣ ದನಿಯಲ್ಲಿ ಇವರು ನಾಳೆ ಬೆಳಕು ಹರಿಯುತ್ತಲೇ ನೇಣು ಹಾಕಲ್ಪಡುವ ಆಸಾಮಿಯ ತಮ್ಮ ಎಂದು ತಿಳಿಸಿದ. ಇಲ್ಲೇ ಬೆಳಗ್ಗೆಯವರೆಗೂ ಕೂತಿರುತ್ತಾರಂತೆ ಅಂದ. ಯಾರೂ ಇವನನ್ನು ತೊಂದರೆ ಮಾಡಬಾರದು ಎಂದೂ ಸೂಚನೆ ಕೊಟ್ಟ. ಈ ಮಾತು ಸುಬೇದಾರನಿಗೆ ಹಿಡಿಸಲಿಲ್ಲವೆಂದು ತೋರಿತು. ಜೈಲಿನ ಒಳಗಡೆಯಲ್ಲಿ ಹೆಡ್‌ವಾರ್ಡರನ ಅಧಿಕಾರ. ಆದರೆ ಜೈಲಿನ ಹೊರಗಡೆ ಮಾತ್ರ ಈ ಸುಬೇದಾರ ಸಾಹೇಬನದೇ ಆಧಿಪತ್ಯ. ಅವನ ಪದವಿಯ ನಿಜವಾದ ಹೆಸರು ಗೇಟ್‌ವಾರ್ಡರ್ ಎಂದು. ಆದರೆ ಯುದ್ಧದಲ್ಲಿ ಹೋರಾಡಿ ಮರಳಿ ಬಂದವನೆಂದು ಅವನನ್ನು ಎಲ್ಲರೂ ಸುಬೇದಾರ್ ಸಾಹೇಬನೆಂದು ಕರೆಯುತ್ತಿದ್ದರು. ಜೈಲಿನ ಒಳಗೆ ಬಂದವರ, ಜೈಲಿನಿಂದ ಹೊರಗೆ ಹೋಗುವವರ ಹಣ, ಸಾಮಾನು ಸರಂಜಾಮುಗಳನ್ನು ನೋಡಿಕೊಳ್ಳುವ ಜವಾಬುದಾರಿ ಈ ಸುಬೇದಾರನದೇ. ಇಷ್ಟು ದೊಡ್ಡ ಮನುಷ್ಯನಾದ ಸುಬೇದಾರ್ ಸಾಹೇಬನ ಮುಂದೆ ಒಬ್ಬ ಸಾಮಾನ್ಯ ವಾರ್ಡರನು ಇಂಥಾ ಬುದ್ಧಿ ಇಲ್ಲದ "ಹುಕುಂ" ಮಾಡುವುದೇ ? ಖಂಡಿತವಾಗಿಯೂ ಇದರ ಹಿಂದೆ ಏನೋ ಒಂದು ಮರ್ಮ ಇರಬೇಕು.

ಅದಕ್ಕೇ ಇರಬೇಕು, ಸುಬೇದಾರನು ಬೇರೆ ಏನೂ ಹೇಳದೆ, "ನಿನಗೆ ಎಷ್ಟು ಕೊಟ್ಟಿದ್ದಾರೆ ?" ಎಂದು ಮಾತ್ರ ಕೇಳಿದ.

ಈ ನೇಹಾಲ್ ಸಿಂಗನು ನನ್ನ ಕೈಯಿಂದ ಈ ಕೆಲವು ದಿನಗಳು ಎಷ್ಟೋ ಹಣ ತೆಗೆದುಕೊಂಡಿದ್ದಾನೆ. ನಿತ್ಯವೂ ನನ್ನ ಮುಂದೆ ಬಂದು "ಇವತ್ತಿನ ದಿನ ನಿಮ್ಮ ಅಣ್ಣಂದಿರಿಗೆ ಇಂಥ ಸಾಮಾನು ತಿನ್ನಲಿಕ್ಕೆ ಕೊಡುವ ಏರ್ಪಾಡು ಮಾಡಿದ್ದೀನಿ. ನಾನೇ ಬಜಾರಿಗೆ ಹೋಗಿ ಕೊಂಡು ತಂದುಕೊಟ್ಟೆ. ಅದನ್ನು ಜೈಲಿನ ಒಳಗಡೆ ಯಾರಿಗೂ ತಿಳಿಯದೆ ತಗೊಂಡು ಹೋಗುವುದು ಸಾಮಾನ್ಯವೇ ? ...ಆದರೆ ಈ ಸುಬೇದಾರನೊಬ್ಬ ಹುಲಿ. ಪ್ರತಿಯೊಂದು ಸಾಮಾನನ್ನೂ ಒಳಗೆ ತೆಗೆದುಕೊಂಡು ಹೋಗುವಾಗ ಅವನಿಗೆ ಒಂದೊಂದು ರೂಪಾಯಿ 'ಬಲಿ' ಕೊಡಬೇಕಾಗುತ್ತದೆ. ಅವನಿಗೆ ತಿಂಗಳಿಗೆ ಐವತ್ತೆರಡು ರೂಪಾಯಿ ಸಂಬಳ ಆದರೂ ಅದರ ನಾಲ್ಕರಷ್ಟು "ಗಿಂಬಳ" ಗಿಟ್ಟಿಸುತ್ತಾನೆ. ಪಕ್ಕಾ "ಮಿಲಿಟರಿ ಜೋರಿದೆ. ಮಾತು, ಕತೆಗಳಲ್ಲಿ. ಯುದ್ಧಕ್ಕೆ ಹೋಗಿ ಬಂದವನಲ್ಲವೆ ?" ಹೀಗೆಲ್ಲ ಏನೇನೋ ಸಬೂಬುಗಳನ್ನು ಹೇಳಿ ಸ್ವಲ್ಪ ನಗುತ್ತ ಹೇಳುತ್ತಾನೆ ನೇಹಾಲ್ ಸಿಂಗ್, "ಹುಜೂರರೇ ನಮ್ಮ ಅಪ್ಪ-ಅಮ್ಮ ಎಲ್ಲಾ. ತಮ್ಮಂತೋರ ಭರವಸೆ ಇಂದ ಅಲ್ಲವಾ, ನಾವು ಮನೆ ಮಕ್ಕಳು ಎಲ್ಲ ಬಿಟ್ಟು ಈ ದೂರದೇಶ ಬಂದಿರೋದು. ಈ ಹಾಳು ಹೊಟ್ಟೇಗೋಸ್ಕರ ?" ...ಹೀಗೆ ಹೇಳಿ ಹೇಳಿ ನನ್ನಿಂದ ಕಾಸು ವಸೂಲು ಮಾಡುತ್ತಾನೆ.

ನಾನು ಇಲ್ಲೇ ತಂಗಿರಬೇಕಾದರೆ ಸ್ವಲ್ಪ ಮಟ್ಟಿಗೆ ಹಣ ಖರ್ಚು ಮಾಡದೇ ಆಗುವುದಿಲ್ಲ ಎಂಬ ವಿಷಯ ನನಗೆ ತಿಳಿಸುವುದು ಒಳ್ಳೇದೆಂದು ಸುಬೇದಾರನಿಗೂ ನೇಹಾಲ್ ಸಿಂಗನಿಗೂ ಒಮ್ಮತವಿರುವಂತೆ ತೋರುತ್ತದೆ. ಆದಕ್ಕೇ ಬಹುಶಃ, ನನಗೆ ಚೆನ್ನಾಗಿ ಕೇಳಬರುವ ಹಾಗೆ ಅವರಿಬ್ಬರೂ ಪರಸ್ಪರ ಗಟ್ಟಿಯಾಗೇ ಮಾತಾಡಿಕೊಳ್ಳುತ್ತಿದ್ದಾರೆ.

ಸುಬೇದಾರನು ಕೇಳಿದ ಪ್ರಶ್ನೆಗೆ ನೇಹಾಲ್ ಸಿಂಗನು ಉತ್ತರಿಸುತ್ತಾನೆ: "ಕೊಡೋದೇನು ಇನ್ನೂ ? ಅರೇ, ನಾನೇನು ನಿನ್ನ ಹತ್ತಿರ ಮುಚ್ಚು ಮರೆ ಮಾಡತೀನಾ ? ಇಲ್ಲ, ಸತ್ಯವಾಗಿ, ನನ್ನ ಮಗನ ಆಣೇಗೂ, ಏನೂ ಕೊಟ್ಟಿಲ್ಲ. ಸಾಹೇಬರೇ ಹೇಳವರೆ - ಹಣ ತಕ್ಕೊಂಡು ಹೋಗಲಿಕ್ಕೆ ಹುಕುಂ ಕೊಟ್ಟವರೆ ಇವರಿಗೆ..."

"ಹಂಗಾ ? ಹಣ ತಕ್ಕೊಂಡ್ ಹೋಗಲಿಕ್ಕೆ ಹುಕುಂ ಕೊಟ್ಟರೆ ಕೊಟ್ಟರು. ಆದ್ರೆ ಇಲ್ಲೇ ಇರಲಿಕ್ಕೆ ಹುಕುಂ ಕೊಟ್ಟಿಲ್ಲವಲ್ಲಾ ? ಹೊರಗಡೆ ಜನಾ ಇಲ್ಲಿ ಇರಲಿಕ್ಕೆ ಬಿಡೋದಿಲ್ಲ ನಾನು. ಅದು ನನ್ನ ಜವಾಬುದಾರಿ ಅಲ್ಲ." ಹೀಗೇ ಇನ್ನೂ ಏನೇನೋ ಬಡ ಬಡ ಅಂತ ಗೊಣಗಿಕೊಂಡು ಹೋಗತಾ ಇದ್ದ ಸುಬೇದಾರ. ಆಗ ನಾನು ನೇಹಾಲ್ ಸಿಂಗನನ್ನು ಕರೆದು ಅವನ ಕೈಯಲ್ಲಿ ಒಂದು ರೂಪಾಯಿ ಕೊಟ್ಟೆ. ಸುಬೇದಾರ್ ಸಾಹೇಬ ಅದನ್ನ ನೋಡಿದ. ಅದರ ಬಗ್ಗೆ ಬೇರೆ ಏನೂ ಮಾತಾಗಲಿಲ್ಲ. ಹಣದ ಭಾಗ ಹಂಚುವಿಕೆ ಎಲ್ಲಾ ಆಮೇಲೆ ಆಗುತ್ತದೆ.

ಅದಾದನಂತರ ಸುಬೇದಾರನು ಕಾವಲುಗಾರನಿಗೆ ಹೇಳಿದ - "ಈ ಬಾಬೂಗಳಿದಾರಲ್ಲ... ಇವರಿಗೆ ಯಾರೂ ಏನೂ ತೊಂದರೆ ಕೊಡಕೂಡದು... ಸರದಿ ಬದಲಾಯಿಸೋವಾಗ ಬರೋವನಿಗೆ ಹೇಳಬೇಕು. ಪ್ರತಿಸಲಾ"

ನೇಹಾಲ್ ಸಿಂಗನು ಹೋಗುವಾಗ ನನಗೆ "ಪರಣಾಮ್" ಹೇಳಿದ. ಈ ಬಿಹಾರ್

ಪ್ರಾಂತ್ಯದಲ್ಲಿ 'ನಮಸ್ಕಾರ' ಅನ್ನುವ ಪದ ಬಳಕೆಯಲ್ಲಿಲ್ಲ. ಎಲ್ಲರೂ 'ಪ್ರಣಾಮ' ಅಂತಾರೆ. ನಮಗೂ ಸಹ ಬಹಳ ಕಾಲ ಈ ದೇಶದಲ್ಲಿ ಇದ್ದುಕೊಂಡಿರೋದರಿಂದ ಇದೇ ಅಭ್ಯಾಸವಾಗಿ ಹೋಗಿದೆ.

ನಮ್ಮ ಶಿಶಿರನು ಬರೆದ ಕಾಗದದಲ್ಲಿ ಇದೇ ಬಗೆ ಭಾಷೆ ಉಪಯೋಗಿಸಿದ್ದಾನೆ.... ಇನ್ನೂ ಜ್ಞಾಪಕ ಇದೆ. ಶಿಶಿರನು ನಮಗಿಂತಲೂ ಮೊದಲೇ ಜೈಲಿನಿಂದ ಬಿಡುಗಡೆಯಾಗಿದ್ದ. ಅವನು ಒಳಗಿದ್ದಾಗ ನಾವೆಲ್ಲ, ಅವನು ಜೈಲಿನಿಂದ ಹೊರಗೆ ಹೋದ ಮೇಲೆ ನಮ್ಮ ಅಂದರೆ ಜೈಲಿನೊಳಗೆ ಇರುವವರ ಯಾವ ಸಮಾಚಾರವನ್ನು ಹಚ್ಚಿಕೊಳ್ಳುವುದಿಲ್ಲ, ಮರತೇ ಬಿಡುತ್ತಾನೆ ಎಂದು ಮಾತಾಡಿಕೊಳ್ಳುತ್ತಿದ್ದೆವು. ಜೈಲಿನ ಒಳಗಿರುವವರ ಬಾಳುವೆ ತಿಂಗಳಾದ ಮೇಲೆ ತಿಂಗಳು, ವರುಷವಾದ ಮೇಲೆ ವರುಷ ಬೂಜು ಹಿಡಿದು ಕೊಳೆಯುತ್ತ ಬರುತ್ತದೆ. ಚೀಣೀ ಹೆಂಗಸರ ಪಾದಗಳನ್ನು ಹಿಂದೆ ಚಿಕ್ಕಂದಿನಿಂದಲೇ ಷೂಗಳಲ್ಲಿ ಬಂಧಿಸಿಡುತ್ತಿದ್ದಂತೆ, ಜೈಲು ವಾಸಿಗಳ ಜೀವನ ಶಕ್ತಿಯನ್ನು ಕಠಿಣವಾದ ಕಟ್ಟುನಿಟ್ಟುಗಳಲ್ಲಿ ಬಂಧಿಸಿಟ್ಟು ನಿಸ್ಸಾರ ಮಾಡಿಬಿಟ್ಟಿರುತ್ತಾರೆ. ಅವರ ಜೀವನವು ಸ್ವಚ್ಛಂದವಾಗಿ ಬೆಳೆಯುವ ಅವಕಾಶ ಪಡೆಯುವುದಿಲ್ಲ. ಹೊರಗಿನ ಪ್ರಪಂಚದ ಆಗುಹೋಗುಗಳನ್ನು ತಿಳಿದುಕೊಳ್ಳುವ ಹಂಬಲ ದಿನ ದಿನಕ್ಕೂ ಶೇಖರವಾಗುತ್ತ ಹೋಗುತ್ತದೆ. ಅದನ್ನು ತೃಪ್ತಿಗೊಳಿಸಲಿಕ್ಕೆ ಸರ್ಕಾರದ ನಿರ್ದಯ ನಿಯಮಗಳು ಅಡ್ಡಿ ಬರುತ್ತವೆ... ಇಂಥ ವೇಳೆಯಲ್ಲಿ ಹೊಸದಾಗಿ ಜೈಲಿಗೆ ಸೇರಿಸಲ್ಪಡುವ ಖೈದಿಯ ಆಗಮನ ಜೈಲಿನ ಒಳಗಿರುವವರಿಗೆ ಎಷ್ಟೋ ಭರವಸೆ ತರುತ್ತದೆ - ಜೈಲಿನಂಥ ಕತ್ತಲ ಗವಿಯಲ್ಲಿ ಕ್ಷೀಣವಾದ ಬೆಳಕಾದರೂ ತರುವಂಥ ಗವಾಕ್ಷ ಇದ್ದ ಹಾಗೆ ಈ ಹೊಸ ಬಂದಿಗಳು ಬರುವಿಕೆ. ಇದಕ್ಕೆ ಭಿನ್ನವಾದ ಇನ್ನೊಂದು, ಆಸೆಯಿಂದ ನಿರೀಕ್ಷಿಸುವ ಘಟನೆ ಯಾವುದೆಂದರೆ, ಹೊಸದಾಗಿ ಬಿಡುಗಡೆಯಾಗಲಿರುವ ರಾಜ ಬಂದಿಯು ಹೊರಗೆ ಹೊರಡುವ ದಿನ. ಕರ್ಮ ನಿರತವಾದ ಹೊಸ ಜಗತ್ತಿನ ನೂರಾರು ಸವಿ ಸಂಪರ್ಕಗಳಿಂದ ದೂರ ಮಾಡಿ ಒಳಗೆ ಕೂಡಿ ಹಾಕಲ್ಪಟ್ಟಿರುವ ಈ ರಾಜಕೀಯ ಬಂದಿಗಳು ಮತ್ತೆ ಆ ಜಗತ್ತಿನೊಂದಿಗೆ ಸಂಬಂಧ ಬೆಳೆಸುವ ವ್ಯರ್ಥ ಪ್ರಯತ್ನವನ್ನು ಈ ಹೊಸದಾಗಿ ಬಿಡುಗಡೆಯಾಗುವ ಬಂದಿಯ ಮೂಲಕ ಮಾಡಲು ಬಯಸುತ್ತಾರೆ. ಹೀಗೆ ಜೈಲ್ ಯಂತ್ರದ ಸೇಫ್ಟಿ ವಾಲ್ವ್ ಆಗಿ ಕೆಲಸ ಮಾಡುತ್ತಾರೆ, ಆಗ ತಾನೇ ಬಿಡುಗಡೆಯಾದ ರಾಜಕೀಯ ಖೈದಿ. ಜೈಲಿನೊಳಗಡೆ ಶೇಖರಿಸಿ ಇರುವ ಅನೇಕ ನಿಷ್ಫಲ ಆಕ್ರೋಶಗಳಿಗೂ, ಕೊನೆಯೇ ಇಲ್ಲದ ದುಃಖ, ರೋದನಗಳಿಗೂ, ತಡೆದಿಟ್ಟುಕೊಳ್ಳಲಾಗದ ಆಸೆ, ಆಕಾಂಕ್ಷೆಗಳಿಗೂ ಸಮಯಕ್ಕೆ ದೊರೆತ ಹೊರಗೆಡಹುವ ಮಾರ್ಗ. ಜೈಲಿನಿಂದ ಹೊರಗೆ ಬರುವ ವೇಳೆ ಎಷ್ಟು ಬರೆಯಬೇಕಾಗಿರುವ ವಿಷಯಗಳು, ಪತ್ರಿಕಾ ಲೇಖಕರೊಂದಿಗೆ ಇಂಟರ್‌ವ್ಯೂ ಮಾಡಿ ವಿವರಿಸುವ ಸಂಗತಿಗಳು, ಎಷ್ಟು ಕೆಲಸಗಳನ್ನ ಮಾಡಬೇಕೆಂಬ ಪ್ರತಿಜ್ಞೆಗಳು, ಏನೇನು ಇಷ್ಟದ ಸಾಮಾನುಗಳನ್ನು ಕೊಳ್ಳಬೇಕೆಂಬ ನಿರ್ಣಯಗಳು! ಹೊರಡುವ ದಿನ ಹೂ ಮಾಲೆಗಳು, ಬೀಳ್ಕೊಡುವ ಸಮಾರಂಭ, ಪ್ರಣಾಮ, ಆಲಿಂಗನಗಳು, ಎಂದೂ ಮಾತಾಡಿಸದಿದ್ದವರೂ ಅಯಾಚಿತವಾಗಿ ಮಾತಾಡಿಸಿಕೊಂಡು ಬರುವಿಕೆ, ಹೊರ ಬಾಗಿಲವರೆಗೂ ಬೆನ್ನ ಹಿಂದೆ ಮೆರವಣಿಗೆ ಮಾಡಿಕೊಂಡು ಬರುವ

ಮಂದಿಯ ಗುಂಪು.... ಇವುಗಳಲ್ಲಿ ಪ್ರತಿಯೊಂದು ಸಹ ಜೈಲಿನಲ್ಲಿ ನಡೆಯುವ ಗತಾನುಗತಿಕ ಸಂಗತಿಗಳ ಅಂಗವಾದರೂ ಯಾವುದರಲ್ಲೂ ಆಂತರಿಕತೆಯ ಅಭಾವ ಕಾಣುತ್ತಿರಲಿಲ್ಲ. ಇಷ್ಟೆಲ್ಲ ಆದ ಮೇಲೆ.... ಇನ್ನೇನು ? ಆಮೇಲೆ ಏನೇನಾಗತ್ತೆ ಎಂಬುದನ್ನು ಸಹ ಕಣ್ಣು ಮುಚ್ಚಿಕೊಂಡೇ ಊಹಿಸಬಹುದು. ಪೋಸ್ಟಾಫೀಸಿನ ಅಧಿಕಾರಿಗಳು ದೇಶದಲ್ಲಿ ಎಷ್ಟು ಜನ ಮುಂದಿನ ವರುಷದಲ್ಲಿ ತಮ್ಮ ವಿಳಾಸವನ್ನು ಬರೆಯದೆಯೇ ಪತ್ರಗಳನ್ನ ಬರೆದು ಟಪಾಲು ಪೆಟ್ಟಿಗೆಯಲ್ಲಿ ಹಾಕುವವರಿದ್ದಾರೆ ಎಂದು ಹೇಳಿ ಬಿಡುತ್ತಾರೆ. ಮತ್ತು ಒಳಗಡೆ ಇರುವ ರಾಜಕೀಯ ಖೈದಿಗಳೂ ಸುಲಭವಾಗಿ, ಹೇಳಿ ಬಿಡುತ್ತಾರೆ - ಬಿಡುಗಡೆಯಾದ ಖೈದಿ ಗೇಟು ದಾಟಿಹೋಗುತ್ತಲೇ ಒಳಗಡೆಯಿರುವವರನ್ನೆಲ್ಲ ಪೂರ್ತಿಯಾಗಿ ಮರೆತು ಹೋಗಿ ಬಿಡುತ್ತಾನೆಂದು.

ಹೀಗೆ ನಾವೆಲ್ಲ ಮಾಡಿಕೊಂಡಿದ್ದ ಅನುಮಾನವನ್ನು ಸುಳ್ಳೆಂದು ತೋರಿಸಿಕೊಡುವುದಕ್ಕಾಗೇ ಶಿಶಿರನು ಜೈಲನ್ನು ಬಿಟ್ಟು ಹೋದ ತತ್ಕ್ಷಣ ಅಣ್ಣನಿಗೆ ಕಾಗದ ಬರೆದ. ಅಣ್ಣ ಕಾಗದದ ಕೆಲವು ಪಂಕ್ತಿಗಳ ತಳಗಡೆ ಗೆರೆ ಎಳೆದಿಟ್ಟುಕೊಂಡ. ಈಗಲೂ ಜ್ಞಾಪಕ ಇದೆ. "ಬೇರೆಲ್ಲ ಜನ ಹೇಗಾದರೂ ಇರಲಿ.... ನನ್ನನ್ನೂ ಅವರಲ್ಲಿ ಒಬ್ಬನಾಗಿ ಎಂದೂ ಗಣಿಸಬೇಡ. ಜೈಲಿನಿಂದ ಬಿಟ್ಟ ಮೇಲೆ ಎಂಟು ದಿನಗಳ ಒಳಗಾಗಿ ನಿನಗೆ ಪತ್ರ ಬರೆಯುತ್ತ ಇದ್ದೇನೆ. ಇಂಥಿಂಥವರಿಗೆಲ್ಲ ನನ್ನ ಪ್ರಣಾಮಗಳನ್ನು ತಿಳಿಸು" ಇತ್ಯಾದಿ.

ಹರದಾಬಜಾರಿನ ದುಬೇಜಿಯವರ ಹೆಂಡತಿ, ಮುದುಕಿಯಾದರೂ ನನಗೆ 'ಪ್ರಣಾಮ' ಮಾಡುತ್ತಾರೆ. ಆದರೂ ಅಣ್ಣನನ್ನು ಮಾತ್ರ ತನ್ನ "ಧರ್ಮ ಬೇಟಾ" ಅಂದರೆ 'ದತ್ತು ಮಗ'ನೆಂದು ಕರೆಯುತ್ತಾರೆ. ಅವರು ಬಡವರು. ಆದರೂ ಅವತ್ತು ನಾನು ನೋಡಲು ಹೋದಾಗ ತಮ್ಮ 'ದತ್ತು ಮಗ'ನ ಮೊಕದ್ದಮೆಯ ಖರ್ಚಿಗೆಂದು ಸೆರಗಿನಲ್ಲಿ ಕಟ್ಟಿಕೊಂಡಿದ್ದ ಮೂರು ರೂಪಾಯಿಗಳನ್ನು ನನ್ನ ಕೈಯಲ್ಲಿ ಕೊಟ್ಟರು. ಎರಡು ಕಣ್ಣಲ್ಲೂ ನೀರು ತುಂಬಿತ್ತು. ಗಂಡನಿಗೆ ತಿಳಿಯದೆ ಈ ಹಣ ಕೊಡುತ್ತಿದ್ದಾರೆ ಎನ್ನಿಸುತ್ತದೆ - ಏಕೋ ಗೊತ್ತಿಲ್ಲ.

ಮೊಕದ್ದಮೆ ನಡೆಯುತ್ತಿರುವಾಗಲೇ ಸ್ವತಃ ದುಬೇಜಿಯವರೇ ಸ್ವಲ್ಪ ಹೆದರಿಕೆಯಿಂದಲೂ, ಸಂಕೋಚದಿಂದಲೂ - ಹಣ ಏನಾದರೂ ಆವಶ್ಯಕವಿದ್ದರೆ ತಾವು ಹೇಗಾದರೂ ಮಾಡಿ ಸ್ವಲ್ಪ ಏರ್ಪಾಡು ಮಾಡಬಲ್ಲೆನೆಂದು ಹೇಳಿದ್ದರು. "ದೇವರು ನಮ್ಮ ಮೇಲೆ ಅನುಗ್ರಹ ಮಾಡಲಿಲ್ಲವೆಂದೇ ಪೊಲೀಸರು ನನ್ನನ್ನೂ ನನ್ನ ಹೆಂಡತಿಯನ್ನೂ ಹಿಡಿದುಕೊಂಡು ಹೋಗಲಿಲ್ಲ. ಯಾಕೆಂದರೆ ನಾನೂ ಕಾಂಗ್ರೆಸ್ ಮೆರೆವಣಿಗೆಯಲ್ಲಿ ಸೇರಿಕೊಂಡಿದ್ದೆನಲ್ಲ. ಎಲ್ಲರ ಕೈಲಿದ್ದುದಕ್ಕಿಂತಲೂ ದೊಡ್ಡ ತ್ರಿವರ್ಣ ಧ್ವಜ ನನ್ನ ಕೈಲಿತ್ತು. ಇಷ್ಟಾದರೂ ಜೈಲಿನ ಹೊರಗೇ ನಾವು ಇರಬೇಕೆಂದು ದೇವರ ಇಚ್ಛೆಯಾಗಿರುವಾಗ ನಮ್ಮ ಕಾಂಗ್ರೆಸಿನ ನೇತಾರನಾದ ಬಿಲೂ ಬಾಬುವಿನ ಮೊಕದ್ದಮೆಯಲ್ಲಿ ನಾನು ಮುತುವರ್ಜಿ ವಹಿಸುವುದು ನನ್ನ ಕರ್ತವ್ಯವಲ್ಲವೇ" - ಎಂದು ಅರಿಕೆ ಮಾಡಿಕೊಂಡರು. ಆಗ ನಾನು ಅವರಿಂದ ಹಣ ತೆಗೆದುಕೊಳ್ಳುವುದಕ್ಕೆ ಒಪ್ಪಲಿಲ್ಲ.

ದುಬೇಜಿ ನನ್ನನ್ನ ಅಪಾರ್ಥಮಾಡಿಕೊಂಡರು. ಅವರ ಅಭಿಪ್ರಾಯದಲ್ಲಿ ನಮ್ಮಣ್ಣನ ಮೊಕದ್ದಮೆಯನ್ನು ಪ್ರತಿಭಟಿಸಲು ನನಗೆ ಇಷ್ಟವಿಲ್ಲವೆಂದೇನೋ. ಆದರೂ ನಾನು ಅವರ ಹಣ ತೆಗೆದುಕೊಳ್ಳುವುದಕ್ಕೆ ಒಪ್ಪಲಿಲ್ಲ. ಕಾರಣ, ಇದಕ್ಕೆ ಮೊದಲೇ ದೊಡ್ಡಮ್ಮನು, ಎಲ್ಲಿಂದ ತಂದಳೋ ಗೊತ್ತಿಲ್ಲ, ಮುನ್ನೂರು ರೂಪಾಯಿಗಳನ್ನು ಮೊಕದ್ದಮೆಯ ಖರ್ಚಿಗೆಂದು ನನ್ನ ಕೈಲಿ ಕೊಟ್ಟಿದ್ದಳು. "ವಕೀಲ ಹರೇನ್ ಬಾಬುಗಳಿಗೆ ಕೊಟ್ಟು ಬಿಡು ಇದನ್ನ" ಎಂದು ಹೇಳಿ ಕೊಟ್ಟಿದ್ದಳು. ಆ ಸಮಯದಲ್ಲಿ ದೊಡ್ಡಮ್ಮನ ಮುಖಭಾವ ಸಹ ದುಬೇಜಿಯವರ ಹೆಂಡತಿಯ ಮುಖಭಾವದ ಹಾಗೆಯೇ ಇತ್ತು. ಇದಾದ ಮೇಲೆ ದುಬೇಜಿಯು ತಾವೇ ವಕೀಲ ಹರೇನ್ ಬಾಬುಗಳ ಬಳಿಗೆ ಹೋಗಿ ಬರಲು ತೊಡಗಿದ್ದರು.

ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಹೋಗುತ್ತಿದ್ದರು ದುಬೇಜಿ. ಆ ಕುದುರೆ ಕೆಂಪು ಬಣ್ಣದ್ದು. ಸ್ವಲ್ಪ ಕುಂಟಿಕೊಂಡು ಕುಂಟಿಕೊಂಡು ನಿಧಾನವಾಗಿ ನಡೆಯುತ್ತಿತ್ತು. ದುಬೇಜಿ ಕುದುರೆಯಿಂದ ಇಳಿದು ಅದರ ಬೆನ್ನಮೇಲೆ ಮೆತ್ತಗೆ ಒಂದೇಟು ಹೊಡೆಯುತ್ತಿದ್ದರು. ಅದರ ಬೆನ್ನ ಮೇಲಿನ ಜೀನನ್ನ ಸಡಿಲಿಸಿ ಕುದುರೆಯನ್ನು ಹರೇನ್ ಬಾಬುಗಳ ಮನೆಯ ಗೇಟಿನ ಪಕ್ಕದಲ್ಲಿದ್ದ ಯೂಕಲಿಪ್ಟಸ್ ಮರಕ್ಕೆ ಕಟ್ಟಿಹಾಕಿದರು. ನನ್ನ ಅಂದಾಜಿನಲ್ಲಿ ದುಬೇಜಿ ಈ ಮೊಕದ್ದಮೆಯಲ್ಲಿ ಬಹಳ ಹಣ ಖರ್ಚು ಮಾಡಿದರು. ನಾನು ದೊಡ್ಡಮ್ಮ ಕೊಟ್ಟಿದ್ದ ಹಣವನ್ನೆಲ್ಲ ವಕೀಲ ಬಾಬುಗಳ ಕೈಲಿ ಕೊಟ್ಟು ಬಿಟ್ಟಿದ್ದೆ. ಅವರು ನಮ್ಮ ತಂದೆಗೆ ಆಪ್ತ ಸ್ನೇಹಿತರು ಬೇರೆ. ಇಷ್ಟಾದರೂ, ದೊಡ್ಡಮ್ಮನ ಹಣ ಕೊಟ್ಟ ಮೇಲೆ ಸಹ ದುಬೇಜಿಯವರ ಕೈಯಿಂದ ಹಣ ತೆಗೆದುಕೊಳ್ಳುವುದಕ್ಕೆ ಅವರು ಹಿಂಜರಿಯಲಿಲ್ಲ. ಏಕೋ.

ದುಬೇಜಿಯವರ ಹೆಂಡತಿ ನನ್ನ ಕೈಲಿ ಮೂರು ರೂಪಾಯಿ ಕೊಟ್ಟ ಮೇಲೆ ಕಣ್ಣೊರಸಿಕೊಳ್ಳುತ್ತ ತನ್ನ ಕತೆ ಹೇಳಿಕೊಂಡರು. "ನಮ್ಮ ಯಜಮಾನರಂತೂ ಮಗನ ಮೊಕದ್ದಮೆಗೆಂದು ಬೇಕಾದಷ್ಟು ತೊಂದರೆ ತೆಗೆದುಕೊಂಡಿದ್ದಾರೆ. ನೀರು ಚೆಲ್ಲಿದ ಹಾಗೆ ದುಡ್ಡು ಕೂಡ ಖರ್ಚು ಮಾಡಿದ್ದಾರೆ. ಆದರೆ ಫಲವೇನು ? ಒಟ್ಟಿನಲ್ಲಿ ಪೊಲೀಸಿನವರು ಯಾರ ಕಡೆ ಇದಾರೋ ಅವರೇ ಗೆಲ್ಲುತಾರೆ. ನಿನ್ನ ಮಾತನ್ನು ಪೊಲೀಸಿನವರು ಕೇಳತಾರಂತೆ, ಹೌದಾ ? ಕಲೆಕ್ಟರ್ ಸಾಹೇಬರು ಸಹ ನಿನ್ನ ಸಲಹೆ ಇಲ್ಲದೆ ಯಾವುದೂ ಮಾಡೋದಿಲ್ಲವಂತೆ, ಹೌದಾ ? ನಿಮ್ಮ ಪಾರ್ಟಿಯವನೇ ಆದ ಆ ನೋಖೇಲಾಲ್ ಮಾತನ್ನೇ ತಗೋ. ಹರದಾ ಬಜಾರಿನ ಅಂಗಡಿಯವರನ್ನೆಲ್ಲ ಪೀಡಿಸಿ ತಿಂತಾನೆ. ಆದರೇನು...? ದರೋಗಾ ಸಾಹೇಬನೇ (ಪೊಲೀಸ್ ಸಬ್-ಇನ್‌ಸ್ಪೆಕ್ಟರ್) ಅವನ ಕೈಯಲ್ಲಿದಾನಂತೆ! ಅವನನ್ನು ಯಾರೇನು ಮಾಡೋ ಹಾಗಿದೆ. ನಿಮ್ಮ ಪಾರ್ಟಿಯವರಿಗೆ ಸರ್ಕಾರದವರು ಸಂಬಳ ಸಹ ಕೊಡತಾರಂತೆ ಹೌದಾ ?" ಈಕೆ ಹೀಗೆ ಹೇಳುತ್ತ ಹೋದಾಗ ಗಂಡನಿಗೆ ತಿಳಿಯದಂತೆ ನನಗೆ ಹಣ ಕೊಡಲು ಹೋಗುತ್ತಿರುವುದರ ಅರ್ಥ ಗೊತ್ತಾಯಿತು ನನಗೆ. ಬಿಲೂ ಬಾಬು ಈಕೆಗೆ ದತ್ತು ಮಗ. ಅವನನ್ನು ಹೇಗಾದರೂ ಬಿಡಿಸಲು ತನ್ನ ಸಾಧಾರಣ ಬುದ್ಧಿಗೆ ತೋರಿದಂತೆ ಮಾಡುವುದಕ್ಕೆ ತಯಾರಿರುತ್ತಾರೆ. ಯಾವುದಕ್ಕೂ ಹಿಂಜರಿಯು ವುದಿಲ್ಲ. ಈಕೆಯ ಅಭಿಪ್ರಾಯದಲ್ಲಿ ನಾನು ಪೊಲೀಸರ ಕಡೆಯವನು. ಈ ಹೆಂಗಸು

ಹೀಗೆ ತಿಳಿದುಕೊಂಡಿದ್ದರೆ ಆಕೆಯನ್ನು ದೂಷಿಸಿ ಪ್ರಯೋಜನವೇನು ? ಇವರೆಲ್ಲ ಇನ್ನೇನು ತಾನೇ ತಿಳಿದುಕೊಂಡಾರು ? ಊರವರೆಲ್ಲ ಹಾಗೇ ತಿಳಿದುಕೊಂಡಿದ್ದಾರೆ. ದುಬೇಜಿಯವರ ಹೆಂಡತಿಯಾದರೆ ಹಿಂದಿನ ಸಲಿಗೆಯನ್ನು ಉಪಯೋಗಿಸಿಕೊಂಡು ನನ್ನದುರಿಗೇ ಈ ಮಾತನ್ನು ಅಂದರು.

ಆಗ ಅವರು ಕೊಟ್ಟ ರೂಪಾಯನ್ನು ಅವರ ಮುಖದ ಮೇಲೆ ಬಿಸಾಡೋಣ ಅಂತ ಅನ್ನಿಸಿತು. ಆಮೇಲೆ ಬೇರೇನೂ ಅನ್ನದೆ ಸುಮ್ಮನೆ ಇಷ್ಟು ಹೇಳಿದೆ, "ಮೊಕದ್ದಮೆಯು ತೀರ್ಪು ಆಗಿಹೋಗಿಬಿಟ್ಟಿದೆ. ಈಗ ಎಷ್ಟು ದುಡ್ಡು ಖರ್ಚು ಮಾಡಿದರೂ ಏನಾಗತ್ತೆ". ಅಂದುಬಿಟ್ಟು ದುಡ್ಡು ವಾಪಸುಕೊಟ್ಟು ಬಿಟ್ಟೆ. ಈಗ ಕಲೆಕ್ಟರಾಗಲಿ, ಲಾಟ್ ಸಾಹೇಬನೇ ಆಗಲಿ ಏನೂ ಮಾಡುವ ಹಾಗಿಲ್ಲ ಅಂದಾಗ ಆಕೆ ನಂಬಲಿಲ್ಲ. ಆಗ ಆಕೆಯು ಹತಾಶಳಾಗಿ ಕಂಗೆಟ್ಟುಹೋದ ಮುಖವನ್ನು ನೋಡಿ 'ಅಯ್ಯೋ' ಅನ್ನಿಸಿತು. ಕಡೆಗೆ ದುಡ್ಡು ವಾಪಸುಕೊಟ್ಟದ್ದು ಸರಿಯಲ್ಲ, ತೆಗೆದುಕೊಂಡರೆ ತಪ್ಪೇನು, ಪಾಪ ಅಂದುಕೊಂಡು "ಹೋಗಲಿ, ಕೊಡಿ ಹಣವನ್ನ" ಎಂದು ಮತ್ತೆ ಕೇಳಿ ತೆಗೆದುಕೊಂಡೆ.

ಒಬ್ಬ ಮಕ್ಕಳಿಲ್ಲದ ಬಡ ಹೆಂಗಸು ಬೇರೊಬ್ಬರ ಮಗನ ವಿಷಯದಲ್ಲಿ ತೋರುತ್ತಿರುವ ಈ ನಿಷ್ಕಪಟ ವಾತ್ಸಲ್ಯದ ಮುಂದೆ ನನ್ನ ತರ್ಕ, ಸಿದ್ಧಾಂತಗಳು ಸೋತು ತಲೆ ಬಾಗಬೇಕಾಯಿತು.... ಆದರೆ ಕೋರ್ಟಿನ ಮುಂದೆ ಸಾಕ್ಷ್ಯ ಹೇಳುವ ಸಮಯದಲ್ಲಿ ನನ್ನ ಸ್ವಂತ ರಾಜಕೀಯ ಸಿದ್ಧಾಂತಗಳನ್ನು ಸ್ವಲ್ಪ ಸಡಿಲ ಮಾಡಿಕೊಂಡಿದ್ದರೆ ಏನು ನಷ್ಟವಾಗುತ್ತಿತ್ತು ? ಆಶ್ಚರ್ಯ ! ಆಗಂತೂ ನಾನು ಎಲ್ಲರಂತೆ ಸಾಧಾರಣ ಮನುಷ್ಯನಾಗಿರಲಿಲ್ಲ. ಆಗ ಎಲ್ಲ ಜನಗಳ ಅಭಿಪ್ರಾಯಗಳಿಗೆ ವಿರುದ್ಧವಾಗಿ, ಗುರುತಿರುವ, ಇಲ್ಲದಿರುವ ಎಲ್ಲರ ಅಭಿಮತಗಳಿಗೂ ವಿರುದ್ಧವಾಗಿ ನಾನೊಬ್ಬನೇ ನನ್ನ ತಲೆ ಎತ್ತಿ ನಿಂತುಕೊಳ್ಳಬೇಕೆಂಬ ಛಲ. ನನ್ನನ್ನು ನಿಂದಿಸುವವರ ಮತ್ತು ವಿರೋಧ ಪಕ್ಷದವರ ಮುಂದೆ ನನ್ನ ನಂಬಿಕೆಗಳ, ಸಿದ್ಧಾಂತಗಳ ದೃಢತೆಯನ್ನು ತೋರಿಸಿಕೊಳ್ಳುವ ಛಲ. ರಾಜಕೀಯ ಮತವಾದದ ಪ್ರಶ್ನೆಯನ್ನು ಲೆಕ್ಕಿಸದೆ ಹೋದರೂ ನನ್ನ ವ್ಯಕ್ತಿಗತ ಛಲವನ್ನು ಬಿಟ್ಟುಕೊಡುವುದಕ್ಕೆ ಮನಸ್ಸು ಬಾರದು. ನನ್ನ ಮೇಲೆ ಜೋರು ಮಾಡಿ ಹೆದರಿಸಿ ನನ್ನ ಸಿದ್ಧಾಂತಗಳನ್ನು ಬದಲಾಯಿಸುವ ಹಾಗೆ ಮಾಡಹೊರಟರೆ ನಾನು ಜಗ್ಗುವವನೇ ? ಅಷ್ಟು ಜೊಳ್ಳೇ, ಅಷ್ಟು ಬಲಹೀನವೇ ನನ್ನ ರಾಜಕೀಯ ನಂಬಿಕೆಗಳು ? ಏನು ತಿಳಿದುಕೊಂಡಿದ್ದಾರೆ ಇವರೆಲ್ಲ ? ನನ್ನ ಮನಸ್ಸಿನ ಅಂತರಾಳದಲ್ಲಿ ಏನಾಗುತ್ತಿದೆ ಅನ್ನುವುದು ಇವರಿಗೇನು ಗೊತ್ತು ? ದುಬೇಜಿಯವರ ಹೆಂಡತಿ ನನ್ನನ್ನು ಕುರಿತು ಏನು ತಿಳಿದುಕೊಂಡಿದ್ದಾಳೋ ಬಹುಶಃ ಅದಕ್ಕಿಂತಲೂ ಕೆಟ್ಟ ಅಭಿಪ್ರಾಯಗಳನ್ನು ಇಟ್ಟುಕೊಂಡಿದ್ದಾರೆ ಎಷ್ಟೋ ಜನ. ಅದು ನನಗೆ ಗೊತ್ತಿಲ್ಲದೆ ಇಲ್ಲ. ಬಹುಶಃ ಏನು ? ಖಂಡಿತವಾಗಿಯೂ ಇಟ್ಟು ಕೊಂಡಿದ್ದಾರೆ. ಇದರ ಪ್ರತ್ಯಕ್ಷ ಪ್ರಮಾಣ ನನಗೆ ನಿತ್ಯವೂ ಅನುಭವವಾಗುತ್ತ ಇದೆ. ಅವತ್ತು ಫುಟ್‌ಬಾಲ್ ಫೀಲ್ಡಿನ ಪಕ್ಕದಲ್ಲಿ ಕೆಲವು ವಿದ್ಯಾರ್ಥಿಗಳು ಸಿಗರೇಟ್ ಸೇದುತ್ತ ಕೂತಿದ್ದವರು, ನಾನು ಅವರ ಬದಿಯಲ್ಲೇ ಸೈಕಲ್ ಮೇಲೆ ಹಾದು ಹೋದಾಗ ಬೇಕೆಂತಲೇ ನನಗೆ ಕೇಳಿಸಲೆಂದು ಗಟ್ಟಿಯಾಗಿ

ಕೆಮ್ಮಿದ್ದನ್ನು ನಾನು ಗಮನಿಸದೆ ಇರಲಿಲ್ಲ. ನಮ್ಮ ನೆರೆಹೊರೆಯ ಹುಡುಗರು, ನಮ್ಮ ಕೇರಿಯ ಗಂಡು, ಹೆಣ್ಣು ಮಕ್ಕಳೆಲ್ಲ ನನ್ನ ಕಡೆ ಏನೋ ಒಂದು ಬಗೆಯಾದ ಬೆರಗಾದ ಮತ್ತು ಅರ್ಥವಾಗದ ನೋಟದಿಂದ ನೋಡುವುದು ಸಹ ನನ್ನ ಗಮನಕ್ಕೆ ಬಂದಿದೆ. ನನ್ನ ಚಿಕ್ಕಂದಿನ ಗೆಳೆಯನಾಗಿದ್ದ ಶೌರೀನನು ಸಹ ನನ್ನ ಕಡೆ ಕೂಡ ಒಂದು ಸಲ ನೋಡದ ಹಾಗೇ ಪಕ್ಕದಲ್ಲಿ ಹಾದು ಹೋಗುವುದನ್ನು ಕಂಡೆ. ಹೊಡೆದು ಹಾಕುತ್ತೇವೆಂದು ಹೆದರಿಸಿ ಬರೆದಿರುವ ರುಜು ಇಲ್ಲದ ಪತ್ರಗಳೂ ಬಂದಿವೆ. ಏನು ಅರ್ಥವಿಲ್ಲದ ಪತ್ರಗಳೋ! ಮೊದಲಲ್ಲಿ ಅತ್ಯಂತ ದೊಡ್ಡ ಮನಸ್ಸಿನವನಾದ ನಮ್ಮ ತಂದೆಯ ಹೆಸರನ್ನು ಹೇಳಿ ಕಡೆಯಲ್ಲಿ ನನ್ನ ಪಿತೃತ್ವವನ್ನು ಕುರಿತು ಸಂದೇಹ ಸಹ ಪ್ರಕಟಿಸಿರುವವರಿದ್ದಾರೆ! ಈ ಕಡೆ ನನ್ನ ದೊಡ್ಡಮ್ಮ ಮತ್ತು ಅವರ ಸೊಸೆ ನವ್‌ದೀದಿ ಸಹ ಅತ್ಯಂತ ಅವಶ್ಯಕವಿರುವ ಮಾತು ಬಿಟ್ಟರೆ ಬೇರೆ ಯಾವ ಮಾತನ್ನೂ ನನ್ನ ಜೊತೆಯಲ್ಲಿ ಆಡುವುದು ಬಿಟ್ಟುಬಿಟ್ಟಿದ್ದಾರೆ.

ಡಿಸ್ಟ್ರಿಕ್ಟ್ ಬೋರ್ಡಿನ ಮೆಂಬರೊಬ್ಬರು ಮತ್ತೊಬ್ಬ ಮೆಂಬರ ಸಂಗಡ ನಾವು ಅಣ್ಣತಮ್ಮಂದಿರಿಬ್ಬರೂ ಸಹದೇವನ ತಂಗಿ ಸರಸ್ವತಿಯ ಪ್ರೀತಿಯ ಪೈಪೋಟಿಯಲ್ಲಿ ಬಿದ್ದಿರುವುದಾಗಿ ಹೇಳುತ್ತಿದ್ದುದನ್ನು ಕೇಳಿಸಿಕೊಂಡಿದ್ದೇನೆ. ಆ ಕಾರಣದಿಂದಲೇ ಅಸೂಯೆಯಿಂದ ನಾನು ಅಣ್ಣನ ವಿರುದ್ಧ ಸಾಕ್ಷ್ಯ ಹೇಳುವುದಕ್ಕೆ ಹಿಂಜರಿಯಲಿಲ್ಲವಂತೆ! ಹಾಗಿಲ್ಲವಾದರೆ ಸ್ವಂತ ಅಣ್ಣನಿಗೆ ಫಾಸಿಯಾಗುವ ಹಾಗೆ ಮೊಕದ್ದಮೆಯಲ್ಲಿ ಸಾಕ್ಷ್ಯ ಹೇಳುವವರುಂಟೆ ಎಲ್ಲಾದರೂ? ಸರಸ್ವತಿಯ ಬಗ್ಗೆ ನಾನೆಂದಿಗೂ ಅಂತಹ ಭಾವನೆಯಲ್ಲಿ ನಡೆದುಕೊಂಡಿಲ್ಲ. ಅಂತಹ ಉದ್ದೇಶ್ಯ ಇದ್ದಿದ್ದರೆ ತಾನೆ? ಅಣ್ಣ ಸಹ ಸರಸ್ವತಿಯನ್ನು ಪ್ರೀತಿಸುತ್ತಿರುವ ಹಾಗೆ ಅವನ ಆಚರಣೆಯಲ್ಲಿ ನನಗೆ ತಿಳಿದು ಬಂದಿಲ್ಲ. ಆದರೆ ಜನರ ಬಾಯನ್ನು ಮುಚ್ಚಿಸುವವರು ಯಾರು?

ಜೈಲಿನ ಆವರಣದಲ್ಲಿ ಅಣ್ಣನ ಮೊಕದ್ದಮೆ ಜರುಗುತ್ತಿರುವಾಗ ನಾನು ಸಾಕ್ಷ್ಯ ನುಡಿಯುವ ದಿನ ಜೈಲಿನ ಹೊರಗಡೆ ಅದೇನು ಜನರ ಸಂದಣಿ! ಜೈಲಿನ ಒಳಗಡೆ ವಿಚಾರಣೆ ನಡೆಯುತ್ತಿದ್ದುದು. ಇಂತಹ ಅಪಾಯಕರ ಅಸಾಮಿಯ ವಿಚಾರಣೆ ಹೊರಗಡೆ ಬಯಲಲ್ಲಿ ಹೇಗೆ ಸಾಧ್ಯ? ಹಲವರು ಕಾನ್‌ಸ್ಟೇಬಲ್‌ಗಳು, ಚೌಕೀದಾರರು, ದಫೇದಾರರು ಮತ್ತು ದರೋಗ ಸಹ ಮತ್ತು ಇತರ ಸಾಕ್ಷಿಗಳ ಸಂಗಡ ಪೊಲೀಸ್ ವ್ಯಾನಿನಲ್ಲಿ ಜೈಲಿನ ಗೇಟಿನ ಹೊರಗಡೆ ಬಂದು ಇಳಿದೆ. ಜನರ ಗುಂಪಿನ ಕಡೆ ನೋಡಲು ಮನಸ್ಸು ಬರಲಿಲ್ಲ. ಆದರೂ ಅಷ್ಟು ಜನರ ಕುತೂಹಲಾವಿಷ್ಟ ಮತ್ತು ತಿರಸ್ಕಾರಪೂರ್ವಕ ನೋಟಗಳನ್ನು ಹೇಗೋ ಅನುಭವಮಾಡಿದೆ. ನಾನು ಅವರೆಲ್ಲರ ತಿರಸ್ಕಾರವನ್ನು ಅಸಡ್ಡೆ ಮಾಡುತ್ತೇನೆಂಬ ಭಾವವನ್ನು ತೋರಿಸುವ ಹಾಗೆ ಒಂದು ಸಲ ತಲೆಯೆತ್ತಿ ಆಕಡೆ ನೋಡಿದೆ. ಬಹುಶಃ ಮಾನಸಿಕ ಚಾಂಚಲ್ಯದಿಂದಲೇ ಇರಬಹುದು, ಯಾವೊಬ್ಬ ನಿರ್ದಿಷ್ಟ ವ್ಯಕ್ತಿಯ ಕಡೆಯಾದರೂ ಮನೋವಿಶ್ಲೇಷಣ ದೃಷ್ಟಿಯಿಂದ ನಿಟ್ಟಿಸಿ ನೋಡುವ ಸಾಮರ್ಥ್ಯ ನನ್ನಲ್ಲಿರಲಿಲ್ಲ. ಮೃಗಾಲಯದಲ್ಲಿ ಬೋನಿನಲ್ಲಿರುವ ಮೃಗವನ್ನು ನೋಟಕರು ನೋಡುವ ದೃಷ್ಟಿಯಲ್ಲಿ ಜೈಲಿನ ವಾರ್ಡರುಗಳು ಅವತ್ತು ನನ್ನ ಕಡೆ

ನೋಡತೊಡಗಿದ್ದರು! ಜೈಲಿನ ಹಳೆಯ ಖೈದಿಗಳ ಕಣ್ಣುಗಳಲ್ಲಿ ಮಾತ್ರ ಬರೇ ಉದಾಸೀನದ ಭಾವ... ಆದರೆ ಇತರ ಯಾರಲ್ಲೂ ಆ ಭಾವವಿಲ್ಲ. ಜೈಲಿನ ರಾಜಕೀಯ ಖೈದಿಗಳು ಆಗ ಕಣ್ಣಿಗೆ ಬೀಳಲಿಲ್ಲ. ಬಿದ್ದಿದ್ದರೆ ಅವರ ಕಣ್ಣುಗಳಲ್ಲಿ ಎಂತಹ ಕ್ರೂರಭಾವ ಕಾಣಬಹುದಾಗಿತ್ತೆಂಬುದನ್ನು ಊಹಿಸಬಲ್ಲೆ. ಈ ಮೊಕದ್ದಮೆಯಲ್ಲಿ ಅಣ್ಣನ ಸಂಗಡ ಇನ್ನಿಬ್ಬರು ಆಸಾಮಿಗಳಿದ್ದರು - ಸೂರಜ್‌ದೇವ್ ಮತ್ತು ಹರಿಶ್‌ಚಂದರ್. ನಾನು ಹೇಳಿಕೆ ಕೊಡಲು ಎದ್ದೊಡನೆ ಹರಿಶ್ ಚಂದರನು ಅಪಾದಿತನ ಪೆಟ್ಟಿಗೆಯೊಳಗಿಂದ "ಛಿ! ಛಿ! ಛೀ!" ಎಂದು ಗಟ್ಟಿಯಾಗಿ ಅರಚ ತೊಡಗಿದ. ಅದನ್ನು ಕೇಳಿ ನಾನು ಅವನ ಕಡೆ ತಿರುಗಿ ನೋಡಿದೆ. ಅವನ ಕಣ್ಣಿಂದ ದ್ವೇಷದ ಕಿಡಿಗಳು ಸಿಡಿಯುತ್ತಿದ್ದುವು. ಅವನ ತೀಕ್ಷ್ಣವಾದ ದನಿಯಲ್ಲಿ ಎಷ್ಟು ತೀವ್ರ ವ್ಯಂಗ್ಯವಿತ್ತೋ ಅದಕ್ಕಿಂತಲೂ ಹೆಚ್ಚಾಗಿ ನಿಷ್ಫಲವಾದ ಆಕ್ರೋಶವೂ ಇತ್ತು. ಹಿಂದೊಮ್ಮೆ ಆಶ್ರಮದಲ್ಲಿದ್ದಾಗ ನಾನು ಇಕ್ಕಳದಲ್ಲಿ ಸಣ್ಣದೊಂದು ಕೇರೆ ಹಾವನ್ನು ಹಿಡಿದುಕೊಂಡು ಬಂದು ಅಣ್ಣನ ಮುಂದೆ ಹೋದೆ. ಅಣ್ಣ ತೋಟದಲ್ಲಿ ಏನೋ ಕೆಲಸ ಮಾಡುತ್ತಿದ್ದ. ಹಾವಿನ ಬಿಳಿಯ ಹೊಟ್ಟೆಯ ಕಡೆ ನೋಡಿ ಅಣ್ಣನ ಮುಖದಲ್ಲಿ ಏನೋ ಒಂದು ಬಗೆಯಾದ ಹೇಸಿಗೆಯ ಭಾವ ಕಂಡು ಬಂತು. ಅದೇ ಭಾವವನ್ನು ಇಂದು ಸೂರಜ್ ದೇವನು ನನ್ನ ಕಡೆ ನೋಡಿದಾಗ ಅವನ ಮುಖದಲ್ಲಿ ಕಂಡೆ. ಅತ್ಯಂತ ಹೇಸಿಗೆ ಭಾವದಿಂದ ನನ್ನ ಕಡೆಯಿಂದ ದೃಷ್ಟಿ ತಿರುಗಿಸಿದ ಅವನು. ಅಣ್ಣನೋ...? ಅಪರಾಧಿಯ ಪೆಟ್ಟಿಗೆಯ ನಡುವೆ ಕಂಬಳಿಯ ಮೇಲೆ ಸುಮ್ಮನೆ ಕೂತಿದ್ದ. ಯಾವುದೋ ಒಂದು ಕೆಂಪನೆಯ ರಟ್ಟು ಹಾಕಿದ ಪುಸ್ತಕದಲ್ಲಿ ಮಗ್ನನಾಗಿರುವಂತೆ ಕಂಡು ಬಂತು. ಮುಖಭಾವದಲ್ಲಿ ಯಾವ ಬಗೆಯಾದ ಧಿಕ್ಕಾರವೂ ತೋರಲಿಲ್ಲ. ಆದರೆ ಅದು ಸ್ವಾಭಾವಿಕವಲ್ಲ ಎಂದೆನ್ನಿಸಿತು ನನಗೆ. ಪ್ರಯತ್ನ ಪೂರ್ವಕವಾಗಿ ಹಾಗೆ ಇರುವುದಾಗಿ ಕಂಡಿತು. ಹಾಗಿಲ್ಲದೆ ಹೋಗಿದ್ದರೆ ಹರಿಶ್ ಚಂದರ್‌ನನ್ನು ಅವನು ತಡೆಯಬಹುದಾಗಿತ್ತು. ಆಮೇಲೆ ಸರಕಾರಿ ವಕೀಲರ ಕಡೆಯಿಂದ ಜಜ್ ಮುಂದೆ ದೂರು - ನ್ಯಾಯಾಧೀಶರ ಉದ್ವಿಗ್ನತೆ ಮತ್ತು ಹರೇನ್ ಬಾಬುಗಳನ್ನು ಕುರಿತು ಈ ಪ್ರಸಂಗದ ವಿಷಯವಾಗಿ ಪ್ರಶ್ನೆ. ಹರೇನ್ ಬಾಬುಗಳು ಸಹ ತಮ್ಮ ಪಶ್ಚಾತ್ತಾಪ ಸೂಚಿಸಿ ಕಳವಳವನ್ನು ತುಳಿದಿಟ್ಟುಕೊಳ್ಳಲು ಗಟ್ಟಿಯಾಗಿ ಕೆಮ್ಮಿದುದು. ಅಸಿಸ್ಟೆಂಟ್ ಜೈಲರ್ ಆನ್ ಡ್ಯೂಟಿ ಮತ್ತು ಪೋಲೀಸ್ ಇನ್‌ಸ್ಪೆಕ್ಟರೂ ಚಂಚಲರಾಗಿ ಪರಸ್ಪರ ಅರ್ಥಗರ್ಭಿತವಾಗಿ ನೋಡಿಕೊಂಡದ್ದು - ಕೋರ್ಟಿನೊಳಗೆ ಅಲ್ಲದೆ ಹೊರಗಡೆ ಹೀಗೆ ಆಗಿದ್ದಿದ್ದರೆ ಅವರು ಹರಿಶ್‌ಚಂದರನನ್ನು ಏನು ಮಾಡಿಬಿಡ ಬಹುದಾಗಿತ್ತು ಎಂಬ ಇಂಗಿತವಿರಬೇಕು ಅವರ ಪರಸ್ಪರ ದೃಷ್ಟಿ ವಿನಿಮಯದ ಅರ್ಥ. ಇವೆಲ್ಲವೂ ಚಿತ್ರದಂತೆ ನನ್ನ ಕಣ್ಣಿಂದೆ ನಿಲ್ಲುತ್ತವೆ. ಹರಿಶ್ ಚಂದರನು ಪೂರ್ತಿಯಾಗಿ ಹುಚ್ಚೇರಿದವನಂತೆ ಅರಚುತ್ತಾ, "ಏನು ಮಾಡುವ ಹಾಗಿದ್ದೀರಿ? ಫಾಸಿಗಿಂತಲೂ ಹೆಚ್ಚಾಗಿ ಏನಾದರೂ ಮಾಡಬಲ್ಲಿರೇನು?" ಆ ಕೂಡಲೇ ವಾರ್ಡರರೂ ಪೋಲೀಸಿನವರೂ ಅಪರಾಧಿಯ ಪೆಟ್ಟಿಗೆಯ ಸುತ್ತ ಜಮಾಯಿಸುತ್ತಾರೆ. ಅವರುಗಳ ಮಧ್ಯೆಯಿಂದಲೇ ಹರಿಶ್‌ಚಂದರನು ತಲೆ ಎತ್ತಿ ನನ್ನ ಕಡೆ ನೋಡುತ್ತ "ನಾಯಿ ಎಲ್ಲೋ!" ಎಂದು ಕೂಗಿದ. ಜಜ್ ಸಾಹೇಬರು ಅವರ ಕನ್ನಡಕ ತೆಗೆದು ಕರವಸ್ತ್ರದಲ್ಲಿ

ಒರೆಸತೊಡಗುತ್ತಾರೆ. ಪೇಷ್ಕಾರನು ಹೋಗಿ ಹರಿಶ್ಚಂದರನಿಗೆ ಏನೋ ಹೇಳು ತ್ತಾನೆ. ಅಣ್ಣನೂ ಹರಿಶ್ಚಂದರನೂ ಪರಸ್ಪರ ನೋಡಿಕೊಳ್ಳುತ್ತಾರೆ. ಅಣ್ಣನ ಕಣ್ಣಲ್ಲಿ ಬೇಡಿಕೊಳ್ಳುವ ಭಾವ - ಇನ್ನು ಸಾಕು, ನಿಲ್ಲಿಸು ಸುಮ್ಮನೆ ಯಾಕೆ ಗಲಾಟೆ? ಎಂಬಂತೆ. ಹರಿಶ್ಚಂದರನು ಆಮೇಲಿಂದ ಮೌನ. ವಿಚಾರಣೆ ಮತ್ತೆ ಶುರು ಆಗುತ್ತದೆ.

ಜಲ್ಲೀ ಕಲ್ಲುಗಳಿಂದ ತುಂಬಿದ ರಸ್ತೆಯ ಮೇಲೆ ಅನೇಕ ಬೂಟುಗಳ ಶಬ್ದ ಕೇಳಬರುತ್ತಿದೆ. ಆದರೆ ಕತ್ತಲಲ್ಲಿ ರಸ್ತೆಯ ಕಡೆ ನೋಡಿದರೆ ಏನೂ ಕಾಣಬರುತ್ತಿಲ್ಲ. ಕೇವಲ ದೂರದ ವಾರ್ಡರುಗಳ ಉದ್ದನೆಯ ಬ್ಯಾರಕ್ ಮುಂದಿನ ವರಾಂಡದಲ್ಲಿ ಬೆಳಗುತ್ತಿರುವ ಕಾರಿಯ ಮುಸುಗು ಹಾಕಿದ ಎಲೆಕ್ಟ್ರಿಕ್ ದೀಪದ ಬೆಳಕು ಕಾಣುತ್ತಿದೆ. ಬ್ಯಾರಕಿನ ಒಳಗಡೆ ಡ್ಯೂಟಿ ಮುಗಿದ ವಾರ್ಡರುಗಳು ಒಟ್ಟಿಗೆ ಸೇರಿ ಡೋಲು ಬಾರಿಸುತ್ತ ಹಾಡುತ್ತಿದ್ದಾರೆ - ಅವರು ದನಿ ಎತ್ತಿ ರಾಗವಾಗಿ ಹಾಡುತ್ತಿರುವುದು ಕೇಳ ಬರುತ್ತಿದೆ. ಒಂದೇ ಸಮನಾಗಿ ಕೇಳಬರುತ್ತಿದೆಯೆಂದು ಹೇಳಲಾಗುವುದಿಲ್ಲ. ಅವರು ದನಿ ಎತ್ತಿದಾಗ ಮಾತ್ರ ಅಕಸ್ಮಾತ್ತಾಗಿ ಕಿವಿಯೊಳಗೆ ಹೊಡೆಯುತ್ತದೆ. ಆದರೆ ಅಂಥ ಶಬ್ದವನ್ನೂ ಮುಚ್ಚಿ ಹಾಕಿ ಹತ್ತಿರ ಹತ್ತಿರ ಬರುತ್ತಿರುವ ಬೂಟುಗಳ ಶಬ್ದ ಇನ್ನೂ ಜೋರಾಗಿ ಕೇಳಬರುತ್ತಿದೆ. ಬಹಳ ಹತ್ತಿರ ಬಂದ ಮೇಲೆ ಕಾಣಬಂತು. ಒಂದು ದಳ ವಾರ್ಡರುಗಳು ಬಂದಿದ್ದಾರೆ. ಬಹಳ ಮಂದಿಯ ಕಾಲಲ್ಲಿ ಹಳದೀ ಬಣ್ಣದ ಕಾಬೂಲಿ ಚಪ್ಪಲಿಗಳು ಇಬ್ಬರ ಕಾಲಲ್ಲಿ ಮಾತ್ರ ಅತಿ ಹಳೆಯದಾದ ಬೂಟುಗಳು. ಯುದ್ಧದ ಪರಿಸ್ಥಿತಿಯಾದುದರಿಂದ ಎಲ್ಲರಿಗೂ ಬೂಟು ದೊರೆಯುತ್ತಿಲ್ಲ ಎಂದು ತೋರುತ್ತದೆ. ಜೈಲು ಗೇಟಿನ ಟವರಿನ ಎರಡನೆಯ ಮಹಡಿಯ ಮೇಲೆ ವಾರ್ಡರನೊಬ್ಬ ಹನ್ನೊಂದು ಗಂಟೆ ಹೊಡೆದ.

ಎರಡೆರಡರಂತೆ ಐದು ಬಾರಿ, ಪ್ರತ್ಯೇಕವಾಗಿ ಒಂದು ಬಾರಿ ಇಷ್ಟರಲ್ಲೇ ಎರಡು ಗಂಟೆಗಳ ಕಾಲ ಹೇಗೆ ಕಳೆಯಿತು? ಹತ್ತು ಗಂಟೆ ಹೊಡೆದದ್ದೇ ಕೇಳಲಿಲ್ಲವಲ್ಲ ನಾನು? ಹೇಗೆ? ಗೇಟಿನ ಮುಂದೆ ಬಂದು ನಿಂತಿದ್ದ ವಾರ್ಡರುಗಳ ದಳ ನನ್ನ ಕಡೆ ಕುತೂಹಲದಿಂದ ನೋಡತೊಡಗಿದ್ದಾರೆ.... ಇವನು ಯಾರಪ್ಪಾ ಹೊಸಬ... ಎಲ್ಲಿಂದ ಬಂದನೋ...! ಅನ್ನುವ ಭಾವ. ಒಬ್ಬ ಹತ್ತಿರ ಬಂದು ಬೆಂಕಿಪೆಟ್ಟಿಗೆ ಇದೆಯೇ ಎಂದು ಕೇಳಿದ. ನಾನು 'ಇಲ್ಲ' ಎನ್ನುತ್ತ ತಲೆ ಅಲ್ಲಾಡಿಸಿದೆ. ಇಷ್ಟರೊಳಗೆ ಒಳಗಡೆಯ ವಾರ್ಡರು ಗೇಟಿನ ಬೀಗವನ್ನು ತೆಗೆದ. ವಾರ್ಡರುಗಳ ದಳ ಕೋಲಾಹಲ ಮಾಡುತ್ತ ಒಳಗಡೆ ಹೊಕ್ಕರು. ಎಲ್ಲರೂ ಒಬ್ಬೊಬ್ಬರಾಗಿ ರಿಜಿಸ್ಟರಿನಲ್ಲಿ ಹಾಜರಿ ಬರೆಯತೊಡಗಿದರು.

ಗೇಟಿನ ವಾರ್ಡರು ನಗು ನಗುತ್ತಲೇ, "ಏನೂ ಕಾಯಿದೆ ವಿರೋಧವಾದ ಸಾಮಾನು ಒಳಗೆ ತಗೊಂಡು ಹೋಗುತ್ತಿಲ್ಲವಲ್ಲ?" ಎಂದು ಕೇಳಿದ.

"ಹುಜೂರರು ತನಿಖೆ ಮಾಡಬಹುದಲ್ಲ?" ಎಂದ ಒಬ್ಬ ವಾರ್ಡರು.

ಆಗ ಸುಬೇದಾರನು, "ಅರೇ, ಆಮೇಲೆ ನಾನು ಮನೆಗೆ ಹೋಗಿ ಸ್ನಾನ ಮಾಡಬೇಕಾ ಗತದಲ್ಲ? ಹೋಗಲಿ ಬಿಡು, ನೀವೆಲ್ಲ ನನಗೆ ಹೊಸಬರಲ್ಲ, ಎಲ್ಲಾ ತಿಳಿದೋರೆ. ಅದೂ ಯೂನಿಫಾರಂ ಜೇಬಲ್ಲಿ ಸಾಮಾನು ಹೆಂಗೆ ಇಡಾಕ ಆಗತದೆ?" ಎಂದ.

ಎಲ್ಲರೂ ಹಾಜರಿ ಬರೆದಾಯಿತು. ಜೈಲಿನ ಒಳಗಡೆಯ ಕಬ್ಬಿಣದ ಬಾಗಿಲು ತೆರೆಯಲ್ಪಟ್ಟಿತು. ಆದರೆ ಪೂರ್ತಿಯಾಗಲ್ಲ. ದೊಡ್ಡ ಬಾಗಿಲ ಮಧ್ಯ ಭಾಗದಲ್ಲಿದ್ದ ಸಣ್ಣದೊಂದು ಬಾಗಿಲು ಮಾತ್ರ. ಅದರ ಮೂಲಕ ವಾರ್ಡರುಗಳ ದಳ ಒಬ್ಬೊಬ್ಬರಾಗಿ ಒಳಗೆ ಹೋಗುತ್ತ ಹೊರಗಡೆಯ ಉಜ್ವಲವಾದ ಬೆಳಕಿನ ಪ್ರಪಂಚದಿಂದ ಜೈಲಿನ ಒಳಗಡೆಯ ಕತ್ತಲ ಲೋಕಕ್ಕೆ ಪ್ರವೇಶ ಮಾಡಿ ಅದರಲ್ಲಿ ಸೇರಿ ಹೋದರು. ಗೇಟಿನ ವಾರ್ಡರು ಚಿಕ್ಕ ಕದವನ್ನು ಮುಚ್ಚಿ ಮತ್ತೆ ಅಗುಳಿ ಹಾಕಿ ಬೀಗ ತಗುಲಿಸಿದ. ದೊಡ್ಡದೊಂದು ರಿಂಗಿನ ಸುತ್ತ ನೂರಾರು ಕೀಲಿಗಳು. ಅವುಗಳಲ್ಲಿ ಒಂದನ್ನು ಆರಿಸಿ ತೆಗೆದು ಬೀಗವನ್ನು ಮುಚ್ಚಿಬಿಟ್ಟ. ಬೀಗ ಹಾಕಿದ ಮೇಲೆ ಭದ್ರವಾಗಿದೆಯೋ ಇಲ್ಲವೋ ನೋಡಲು ಉದಾಸೀನಭಾವದಲ್ಲಿ ಬೀಗವನ್ನು ಬಲವಾಗಿ ಒಮ್ಮೆ ಎಳೆದು ನೋಡಿದ. ಹಾಗೆ ಎಳೆಯುವುದೊಂದು ವಾಡಿಕೆಯ ಅನುಸಾರವಾಗಿ - ಇಚ್ಛೆಯಿಲ್ಲದೆಯೇ ಎಂಬಂತೆ ಅನ್ನಿಸಿತು. ಆಮೇಲೆ ನನ್ನ ಕಡೆಯಿಂದ ಬಾಗಿಲ ಬಳಿ ಬಂದು ನಿಂತ. ಗೇಟಿನ ಹೊರಗಡೆ ಇದ್ದ ಬಂದೂಕು ಹಿಡಿದ ಸಂತ್ರಿ (ಕಾವಲುಗಾರ) ಯ ಬದಲಾವಣೆಯಾಗಿತ್ತು. ಮೊದಲಿದ್ದವನು ಸ್ವಲ್ಪ ಗಂಭೀರ ಪ್ರಕೃತಿಯವನಾಗಿದ್ದ. ಈಗಿರುವವನು ಅದಕ್ಕೆ ಪೂರ್ತಿ ವಿರುದ್ಧ. ಒಳಗಡೆಯ ಜಮಾದಾರನು ಹೊರಗಡೆಯ ಕಾವಲುಗಾರನಿಂದ ಸ್ವಲ್ಪ ಹೊಗೇಸೊಪ್ಪಿನ ಪುಡಿ ಕೇಳಿದ. ಆಮೇಲೆ 'ಪಿಸ ಪಿಸ' ಎಂದು ಮೆಲ್ಲಗೆ ಅವನೊಡನೆ ಮಾತುಕತೆ ಬೆಳೆಸಿದ. ಬಹುಶಃ ನನ್ನನ್ನು ಕುರಿತೇ ಇರಬೇಕು.

ಗೇಟಿನ ಒಳಗಡೆ ಹೊಸದಾಗಿ ಬಂದ ವಾರ್ಡರುಗಳಲ್ಲಿ ಒಬ್ಬನು ಸುಬೇದಾರನ ಸಂಗಡ ಮಾತಾಡುತ್ತಿದ್ದಾನೆ. ಸುಬೇದಾರನು ಎತ್ತರವಾದ ಸ್ಟೂಲಿನ ಮೇಲೆ ಕೂತು ಯಾವುದೋ ರಿಜಿಸ್ಟರಂತೆ ಕಾಣುವ ಪುಸ್ತಕದಿಂದ ಗಾಳಿ ಹಾಕಿಕೊಳ್ಳುತ್ತಿದ್ದಾನೆ. ಅವರಿಬ್ಬರ ಮಾತುಕತೆ ಯಾವುದೋ ಲೇವಾದೇವಿಯ ಬಗ್ಗೆ ಇರಬಹುದು. ಅಥವಾ ಜೈಲಿನ ಗುದಾಮಿನಿಂದ ಯಾವುದಾದರೂ ಸಾಮಾನನ್ನು ಕಳ್ಳತನದಿಂದ ಹೊರಗೆ ಸಾಗಿಸುವುದರ ಸಂಬಂಧವಾಗಿರಬೇಕು. ಹಾಗೆ ಸಾಗಿಸುವುದು ಒಬ್ಬ ಆಳಿನ ಕೈಯಲ್ಲಿ ಆಗದ ಮಾತು. ಜೈಲಿನ ಯಂತ್ರ ವ್ಯವಸ್ಥೆ ಹೇಗಿದೆಯೆಂದರೆ ಯಾವುದೇ ಇಂಥ ಕಳ್ಳತನ ಫಲಕಾರಿಯಾಗಬೇಕಾದರೆ ಯಂತ್ರದ ಎಲ್ಲ ಉಪಕರಣಗಳೂ ಸಹಕರಿಸಿ ಕೆಲಸ ಮಾಡಿದರೇನೇ ಅದು ಸಾಧ್ಯ. ಕಳ್ಳತನ ಮಾಡಿ ತಿನ್ನಬೇಕೇ? ತಿನ್ನಿ, ಅಗತ್ಯವಾಗಿ. ಆದರೆ ಎಲ್ಲರೂ ಒಟ್ಟಿಗೆ ಸೇರಿ ತಿನ್ನಿ. ಭಾಗಮಾಡಿಕೊಂಡು. ಸಣ್ಣವರೆಂದು ಯಾರನ್ನೂ ಸಹ ಅಲ್ಲಗಳೆಯಬೇಡಿ.

ಟಂಗ್ ಟಂಗ್ ಎಂದು ಕಲೆಕ್ಟರಿ ಟವರಿನಿಂದ ಹನ್ನೊಂದು ಗಂಟೆ ಹೊಡೆಯಿತು. ಎಲ್ಲಾ ಕಡೆಯ ಜೈಲುಗಳ ಗಡಿಯಾರಗಳೂ ಬಹುಶಃ ಹೀಗೇ ಹದಿನೈದು ನಿಮಿಷ ಮುಂದಿರುತ್ತವೇನೋ! ಜೈಲಿನ ಮುಂದುಗಡೆ ದೊಡ್ಡ ರಸ್ತೆ - ರಸ್ತೆಯ ಎರಡೂ ಕಡೆ ಅಕ್ಕಪಕ್ಕಗಳಲ್ಲಿ ಜೈಲಿನ ಅಧಿಕಾರಿ ವರ್ಗದವರ ವಸತಿಗಳು. ಪರದೆ ಹಾಕಿರುವ ಕೆಲವು ಕಿಟಕಿಗಳ ಕಡೆಯಿಂದ ಅಲ್ಲಲ್ಲಿ ಅಸ್ಪಷ್ಟವಾದ ಬೆಳಕು ಕಾಣಬರುತ್ತದೆ. ಇವುಗಳಲ್ಲಿ ಒಂದು ಕಡೆ ಕತ್ತಲೆಯ ನಡುವೆ ಚತುಷ್ಕೋಣದ ಬೆಳಕಿನ ಫಲಕವೊಂದು ಹಠಾತ್ತಾಗಿ ಕಾಣಿಸಿಕೊಳ್ಳುತ್ತದೆ. ಯಾವುದೋ ಒಂದು ವಸತಿಯ ಬಾಗಿಲು

ತೆಗೆದುಕೊಳ್ಳುತ್ತದೆ. ಬೆಳಕಿನ ರಶ್ಮಿ ಹೊರಗಡೆ ಒಂದು ಬಿದ್ದಿದೆ - ಸರಳ ರೇಖೆಯ ರಶ್ಮಿ ....ಬೆಳಕಿನ ಟ್ರಪಿಜಿಯಂ (ವಿಷಮ ಚತುಷ್ಕೋನ) ಬಾಗಿಲ ಕಡೆಯ ಬಾಹುಗಳು ಹ್ರಸ್ವವಾಗಿವೆ. ರೈಲ್ ಲೈನಿನ ಸಮಾಂತರ ರೇಖೆಗಳು ದಿಗಂತದಲ್ಲಿ ಸೇರಿ ಹೋಗಿರುವಂತೆ ಇವೆರಡೂ ಮನೆಯ ಒಳಗಡೆ ಸೇರಿ ಹೋಗಿವೆ. ಬೆಳಕಿನ ಭಾಗದ ಕಡೆಯಿಂದ ಯಾವುದೋ ಮನುಷ್ಯಾಕಾರ ಹೊರಗೆ ಬಂದಿರುವುದು ಕಾಣುತ್ತದೆ. ಅದರ ಹಿಂದೆ ಇನ್ನೊಂದು ಮನುಷ್ಯಾಕಾರದ ನೆರಳು ಬಾಗಿಲಲ್ಲಿ ನಿಂತಿರುವುದು ಕಾಣುತ್ತದೆ. ಒಂದು ಗಳಿಗೆಯಲ್ಲೇ ಆ ನೆರಳು ಬಾಗಿಲನ್ನು ಮುಚ್ಚಿ ಮಾಯ ವಾಗುತ್ತದೆ. ಜೊತೆಯಲ್ಲೇ ಮನೆಯ ಮುಂದಿನ ಬೆಳಕೂ ಕಣ್ಮರೆಯಾಗುತ್ತದೆ.

ಅವರ ಸ್ವಂತ ಸಂಸಾರದ ಅಲ್ಪ ಬೆಳಕಾದರೂ ಜೈಲಿನ ಕಗ್ಗತ್ತಲನ್ನು ದೂರಮಾಡಬೇಕಾದ ಅಗತ್ಯವೇನಿದೆ? ಬಾಗಿಲನ್ನು ಜೋರಾಗಿ ಮುಚ್ಚಿದುದರ ಉದ್ದೇಶ್ಯವಿಷ್ಟೇ ಇರಬಹುದು - ಏನೆಂದರೆ, ಮನೆಯ ಬೆಳಕು ಮನೆಯಲ್ಲಿದ್ದು ಕೊಂಡು ಹೋಗಲಿ, ಎಲ್ಲೆ ಮೀರಿ ಹೊರಗೆ ಹೋಗದೆ ಇರಲಿ ಎಂದೇ. ಲುಂಗಿಯುಟ್ಟ ಆಳೊಬ್ಬ ಜೈಲಿನ ಗೇಟನ್ನು ಸಮೀಪಿಸಿದ. ಮೈ ಮೇಲೆ ತೊಟ್ಟಿದ್ದುದು ಒಂದು ಬನೀನು. ಸ್ವಚ್ಛಂದವಾಗಿ ಎಲಡಿಕೆ ಜಗಿಯುತ್ತಿದ್ದಾನೆ. ಬಾಯೊಳಗೆ ಜಗಿದ ಎಲೆಯನ್ನು ತುಂಬಿಕೊಂಡಿದ್ದರೆ ಕ್ಯಾನ್ಸರ್ ಬರುವುದೇನು ನಿಜವಾಗಿ? ಹೆಗಲ ಮೇಲೆ ಒಂದು ಷರಟು ಮತ್ತು ಒಂದು ಖಾಕೀ ಹಾಫ್ ಪ್ಯಾಂಟ್. ಜೊತೆಯಲ್ಲಿ ಒಂದೆರಡು ಜುಬ್ಬಾ ಇರುವ ಹಾಗೆಯೂ ತೋರುತ್ತದೆ. ಅವನು ಗೇಟಿನ ಬಳಿ ಬರುತ್ತಲೂ ಕಾವಲುಗಾರನು 'ಖಟ್' ಎಂದು ಅಟೆನ್‌ಷನ್ ನಿಲ್ಲುತ್ತಾನೆ ಮತ್ತು ಸಲಾಂ ಮಾಡುತ್ತಾನೆ. ಒಳಗಡೆಯ ವಾರ್ಡರು "ನಮಸ್ಕಾರ" ಎನ್ನುತ್ತ ಬಾಗಿಲು ತೆಗೆಯುತ್ತಾನೆ. ಬಂದ ವ್ಯಕ್ತಿ ಸಲಾಮಿಗೆ ಬದಲಾಗಿ ತಲೆಯನ್ನು ಅಲುಗಿಸುತ್ತ ಒಳಗೆ ಬರುತ್ತಾನೆ. ಮತ್ತೆ ಗೇಟಿನ ಬಾಗಿಲು ಮುಚ್ಚಿ ಬೀಗ ಹಾಕಲ್ಪಡುತ್ತದೆ. ಸುಬೇದಾರ್ ಸಾಹೇಬನು ಸ್ಟೂಲಿನ ಮೇಲೆ ಕೂತೇ, "ಹೆಗಲ ಮೇಲಿನ ಪೋಷಾಕು ಏತಕ್ಕೋಸ್ಕರ, ಡಾಕ್ಟರ್ ಸಾಬ್?" ಎಂದು ಕೇಳುತ್ತಾನೆ.

ಡಾಕ್ಟರ್ ಬಾಬು, "ಡ್ಯೂಟಿಯೇನೋ ಆಸ್ಪತ್ರೆಯಲ್ಲಿ. ಬೆಳಗಾಗುವುದಕ್ಕೆ ಮುಂಚೆಯೇ ದೊಡ್ಡ ಡಾಕ್ಟರ್ ಸಾಹೇಬರು, ಮ್ಯಾಜಿಸ್ಟ್ರೇಟರೂ, ಇನ್ನೂ ಯಾರ್‍ಯಾರೋ ಬರತಾರೆ. ಆಗೇನಾದರೂ ಅಗತ್ಯ ಬೀಳಬಹುದು. ಆಗಂತೂ ಲುಂಗಿಯುಟ್ಟು ಸಾಹೇಬರ ಮುಂದೆ ನಿಲ್ಲುವುದಕ್ಕಾಗುತ್ತದೆಯೆ? ಫಾಸಿಯಾಗು ವಾಗೇನೋ ದೊಡ್ಡ ಡಾಕ್ಟರ್ ಸಾಹೇಬರದೇ ಡ್ಯೂಟಿ. ನನ್ನದಲ್ಲ. ಆದರೂ ಹೇಗ ಹೇಳುವುದಕ್ಕೆ ಸಾಧ್ಯ. ಸಂದರ್ಭ ಹೇಗೆ ಬರುತ್ತೋ? .... ಈಕಡೆ ಸೆಕೆಯಂತೂ ತಡೆಯುವುದಕ್ಕೇ ಅಸಾಧ್ಯ" ಎನ್ನುತ್ತಾನೆ.

. ಡಾಕ್ಟರ ಬಾಬುವಿನ ಮಾತುಕತೆಯಲ್ಲಿ ಏನೋ ಒಂದು ವಿಧವಾದ ಲಾಲಸೆಯ ಮಾತಾಡುವ ಹಾಗಿರುತ್ತದೆ. ಸುಬೇದಾರನ ಸಂಗಡ ಅತ್ಯಂತ ಸಲಿಗೆಯಿಂದಿರುವುದು ನನಗೆ ಕಂಡುಬಂತು. ಬಹುಶಃ ಅದಕ್ಕೆ ನಿಜವಾದ ಕಾರಣ ಸುಬೇದಾರನನ್ನು ಪ್ರಸನ್ನಗೊಳಿಸದೆ ಹೋದರೆ ಜೈಲಿನ ಕಡೆಯಿಂದ ಅಪ್ಪಟ ಹಸುವಿನ ಹಾಲು ದೊರೆಯದೆ ಮನೆಯ ಮಕ್ಕಳು ಮರಿ ಪುಷ್ಟಿಯಿಲ್ಲದೆ ಕಾಯಿಲೆ ಬಿದ್ದು ಬಿಟ್ಟರೆ ಏನು

ಗತಿ - ಎಂದಿರಬೇಕು. ಹಾಲೊಂದೇ ಅಲ್ಲ.... ಆಸ್ಪತ್ರೆಯ ಖರ್ಚಿನಲ್ಲಿ ಈಗ ಅವನಿಗೆ ಸಿಗುತ್ತಿರುವ ಅಲ್ಪಸಲ್ಪ ಮಾಂಸ ಸಹ ಸಿಗದೇ ಹೋದರೆ? ಮತ್ತು ಈಗ ಪುಕ್ಕಟೆ ಸಿಗುತ್ತಿರುವ ಕೆರೋಸಿನ್ ಎಣ್ಣೆಯನ್ನು ಸ್ವಂತ ದುಡ್ಡು ಖರ್ಚು ಮಾಡಿ ಪೇಟೆಯಿಂದ ತರಿಸಿಕೊಳ್ಳಬೇಕಾಗುತ್ತದೆ.

ಇವಿಷ್ಟೇನೆ? ಇನ್ನೂ ಎಷ್ಟೋ ಸಾಮಾನುಗಳು ಜೇಬಿಂದ ಒಂದು ಬಿಡಿಗಾಸು ಖರ್ಚುಮಾಡದೆ ಬರುತ್ತ ಇದ್ದುವಲ್ಲ. ಅವೇನು ಸಾಮಾನ್ಯವೆ? ಆಸ್ಪತ್ರೆಯಿಂದ ಬಂದ ಸೊಳ್ಳೇ ತೆರೆ, ಹಾಸಿಗೆಯ ಚಾದರಗಳು, ದೇವರ ದೀಪಕ್ಕೆ ಹತ್ತಿ, ಬ್ಯಾಂಡೇಜು ಪತ್ತಿ - ಸಕ್ಕರೆ, ಹಳೇ ಅಕ್ಕಿ ಇವೆಲ್ಲ ಸಹ. ಬೆಳಗ್ಗೆ ಖೈದಿಗಳು ಗುಂಪುಗುಂಪಾಗಿ ಹೊರಗೆ ಬಂದು ಕೆಲಸ ಮಾಡುತ್ತಾರಲ್ಲ? ಅವರಲ್ಲಿ ಒಬ್ಬನು ಡಾಕ್ಟರ ಹೆಂಡತಿಯು ದೇವರ ಪೂಜೆ ಮಾಡುವಾಗ 'ಹೂ'ಗಳನ್ನು ಕಿತ್ತು ತಂದುಕೊಡುತ್ತಿದ್ದ... ಡಾಕ್ಟರ್ ಬಾಬು ಬಹುಶಃ ಜೈಲಿಗೆ ಬಂದು ಸೇರಿದ ಲಾಗಾಯಿತು ಡಾಕ್ಟರಿ ವಿದ್ಯೆಯನ್ನೇ ಮರೆತು ಹೋಗಿದ್ದಾನೇನೋ? ಏಕೆಂದರೆ ನಿತ್ಯ ಮಾಡುವ ಕೆಲಸವೆಲ್ಲ ವೈದ್ಯ ವೃತ್ತಿಗೆ ಯಾವ ಸಂಬಂಧವೂ ಇಲ್ಲದ ಗುಮಾಸ್ತೆ ಮಾಡುವ ಕೆಲಸ.

ಲೆಕ್ಕಪತ್ರಗಳು, ಪತ್ರವ್ಯವಹಾರ, ರಿಜಿಸ್ಟರ್ ಖಾತೆ ತುಂಬಿಸುವುದು. ಫೈಲ್, ರಿಟರ್ನ್ - ಜಮಾ ಖರ್ಚಿನ ಪಟ್ಟಿಗಳು... ಆಸ್ಪತ್ರೆಯಲ್ಲಿ ಮೇಟ್‌ನಿಂದ ಮೊದಲುಗೊಂಡು ನರ್ಸುಗಳು ಮುಂತಾದವರೆಲ್ಲರನ್ನೂ ಒಲಿಸಿಕೊಳ್ಳುವ ಕೆಲಸ.... ಇಂಥವುಗಳ ನಡುವೆ ಅವನಿಗೆ ಡಾಕ್ಟರೀ ಕೆಲಸ ಮಾಡಲು ಸಮಯ ಎಲ್ಲಿದೆ?... ಹಿಂದೆ ನಾನು ಜೈಲಿನಲ್ಲಿದ್ದಾಗ ಅಲ್ಲಿನ ಡಾಕ್ಟರು ನನ್ನಿಂದ ಕೆಲವು ರಿಟರ್ನುಗಳನ್ನು ಬರೆಸಿಕೊಂಡ. ಅವನ ಹೆಸರು ನರೇಂದ್ರಬಾಬು. ಒಂದು ಯಾವುದೋ ರಿಟರ್ನಿನಲ್ಲಿ Spleenic Index ಎಂಬುದೊಂದನ್ನು ನಮೂದಿಸಲಾಗಿತ್ತು. ಇದನ್ನು ಯಾವ ರೀತಿ ಲೆಕ್ಕ ಮಾಡಬೇಕೆಂಬುದು ನನಗೆ ಗೊತ್ತಾಗಲಿಲ್ಲ. ಡಾಕ್ಟರನ್ನು ಕೇಳಿದರೆ ಅವನಿಗೂ ಗೊತ್ತಿರುವಂತೆ ಅನ್ನಿಸಲಿಲ್ಲ. ಆಗವನು ಬೇರೇನೂ ಹೇಳದೆ, "ಈಗ ಸದ್ಯಕ್ಕೆ ಅದನ್ನು ಹಾಗೇ ಬಿಡಿ. ಆಮೇಲೆ ನಾನೇ ಹಿಂದಿನ ವರುಷದ ರಿಟರ್ನನ್ನ ನೋಡಿ ಅಂದಾಜುಮಾಡಿಕೊಂಡು ಬರೆದು ಹಾಕಿಬಿಡತೇನೆ" ಅಂದು ಬಿಟ್ಟ.

ಜೈಲ್ ಗೇಟಿನೊಳಗೆ ಹೊಕ್ಕರೆ ಬಲಗಡೆ ಒಂದು ಕರೀ ಹಲಗೆ ಇರುವುದು ಕಾಣಬರುತ್ತದೆ. ಅದರ ಮೇಲೆ ದೊಡ್ಡದೊಂದು ಕಾಗದ ಅಂಟಿಸಿರುತ್ತದೆ. ರೈಲ್ವೆ ಸ್ಟೇಷನ್ನಿನ ಪ್ಲಾಟ್‌ಫಾರಮ್ಮಿನ ಮೇಲೆ ಟೈಂಟೇಬಲ್ ಅಂಟಿಸಿರುವ ಬೋರ್ಡು ಗಳಿರುತ್ತವಲ್ಲ ಹಾಗೆ. ಆ ಬೋರ್ಡಿನ ಮೇಲೆ ಜೈಲಿನಲ್ಲಿ ಆ ಸಮಯ ಎಷ್ಟು ಮಂದಿ ಖೈದಿಗಳಿದ್ದಾರೆ, ಅವರಲ್ಲಿ ರಾಜಕೀಯ ಖೈದಿಗಳೆಷ್ಟು ಮಂದಿ, ಇನ್ನೂ ವಿಚಾರಣೆ ಯಲ್ಲಿರುವ ಖೈದಿಗಳೆಷ್ಟು, ಸೆಕ್ಯೂರಿಟಿ ಖೈದಿಗಳೆಷ್ಟು ಸಾಧಾರಣ ಆಸಾಮಿಗಳೆಷ್ಟು ಮಂದಿ... ಎಲ್ಲದಕ್ಕೂ ಕೆಳಗಡೆ ಆಯಾ ದಿನ ಡ್ಯೂಟಿಯ ಮೇಲೆ ಇರುವ ಡಾಕ್ಟರ ಹೆಸರು ಸಹ ಬರೆಯಲ್ಪಟ್ಟಿರುತ್ತದೆ. ಡಾಕ್ಟರ್ ಬಾಬು ಅಲ್ಲಿಗೆ ಬಂದು ಅಲ್ಲೇ ಇದ್ದ ಸೀಮೆ ಸುಣ್ಣದ ತುಕಡಾ ಇಂದ ತನ್ನ ಹೆಸರನ್ನು ಅದರ ಪಕ್ಕದಲ್ಲೇ ತನ್ನ ಡ್ಯೂಟಿಯ ವೇಳೆಯನ್ನು ಸಹ ಬರೆದ. ಆಮೇಲೆ ಡಾಕ್ಟರ್ ಬಾಬು ನಗು ನಗುತ್ತ "ಆಫೀಸು ರೂಮಿನಲ್ಲಿ ಪಂಖಾ ಇದೆ, ನಿಮ್ಮ ರೂಮಿನಲ್ಲಿ ಇಲ್ಲವಲ್ಲ ಯಾಕೆ?" ಅಂದ.

ಸುಬೇದಾರ್ ಸಾಹೇಬನು ಅದಕ್ಕೆ ತನ್ನ ಹಣೆ ಮುಟ್ಟಿ ತೋರಿಸುತ್ತ "ಹಣೇಬರಹ" ಎಂದ. ಅವನ ಹಣೆಯ ಮೇಲೆ ಮಧ್ಯ ಭಾಗದಲ್ಲಿ ಸ್ವಲ್ಪ ಉಬ್ಬಿರುವ ನರವೊಂದು ದೂರದಿಂದ ಸಹ ಕಾಣುತ್ತದೆ.... ಹಣೇಬರಹ ಎಂದಾಗ ಒಂದು ವಿಷಯ ನೆನಪಿಗೆ ಬರುತ್ತದೆ.

ನಮ್ಮ ಜಿತೇನಣ್ಣನ ಮುಂಜಿಯ ಸಮಯದಲ್ಲಿ ದೊಡ್ಡಮ್ಮನ ಮನೆಯಲ್ಲಿ ಹಾಸಿಗೆ ಮೇಲೆ ಮಲಗಿಕೊಂಡು ಒಬ್ಬ ಬಡ ನೇಯಿಗೆಯವನ ಕತೆ ಓದಿದ್ದೆ. ಆ ನೇಯಿಗೆಯವನ ಹಣೆಯಲ್ಲಿ ರಾಜ ಟೀಕೆಯ ಲಕ್ಷಣವಿತ್ತಂತೆ. ಅದನ್ನು ಓದಿದ ಮೇಲಿಂದ ನಾನು ಯಾರನ್ನು ನೋಡಿದರೂ ಅವರ ಹಣೆಯ ಕಡೆ ನೋಡುತ್ತೇನೆ. ನಾನೂ, ಅಣ್ಣನೂ ಎಷ್ಟೋ ಸಲ ನಮ್ಮ ಹಣೆಯಲ್ಲೂ ಅಂಥ ರಾಜ ಟೀಕೆ ಕಾಣಿಸಿಕೊಳ್ಳಲೆಂದು ಬೆರಳನ್ನು ನೀರಿನಲ್ಲಿ ಅದ್ದಿ ಸುಮ್ಮನೆ ಹಣೆಯ ಮೇಲಿನ ತೊಗಲು ಸವೆಯುವಂತೆ ಉಜ್ಜಿಕೊಳ್ಳುತ್ತಿದ್ದೆವು. ಹಾಗೆ ಮಾಡಿ ಮಾಡಿ ಕಡೆಗೂ ಹಣೆಯ ಮೇಲೆ ತಿಲಕ ಹಚ್ಚಿದ ಹಾಗೆ ಗುರುತು ಕೂಡ ಆಗಿಬಿಟ್ಟಿತ್ತು. ಅಮ್ಮನ ಬಾಯಿಂದ ಎಷ್ಟು ಬೈಗಳು ತಿನ್ನಬೇಕಾಯಿತೋ... ಅಲ್ಲದೆ ಒಡನಾಡಿಗಳು ಗೇಲಿಮಾಡುತ್ತಾರೆಂಬ ದಿಗಿಲಿನಿಂದ ಎಷ್ಟೋ ದಿನ ಹೊರಗಡೆ ಹೋಗಲು ಹೆದರುತ್ತಿದ್ದೆವು.

ಬಾಗಿಲು ತೆಗೆಯಿತು. ಡಾಕ್ಟರ್ ಬಾಬು ಒಳಗಡೆ ಹೊಕ್ಕರು. ಒಳಗಡೆಯ ತೆರೆದ ಬಾಗಿಲಿಂದ ಅನೇಕ ಚಡಾವುಗಳ ಶಬ್ದ ಕೇಳ ಬಂತು. ಜೈಲಿನ ಒಳಗಡೆಯಿಂದ ಅನೇಕ ವಾರ್ಡರುಗಳು 'ಮಾರ್ಚ್' ಮಾಡಿಕೊಂಡು ಗೇಟಿನ ಕಡೆ ಬರುತ್ತಿರುವ ಹಾಗಿದೆ. ಕೆಲವೇ ನಿಮಿಷಗಳಲ್ಲಿ ಹೆಬ್ಬಾಗಿಲಿನ ಮಧ್ಯೆ ಇರುವ ಸಣ್ಣ ಕದ ಮುಚ್ಚಿಕೊಂಡಿತು... ಸ್ವಲ್ಪ ಹೊತ್ತಿನಲ್ಲೇ ಮತ್ತೆ ಆ ಸಣ್ಣ ಕದ ತೆಗೆಯಬೇಕಾಗಿ ಬಂತು. ಒಳಗಣಿಂದ ಯಾರೋ ಭೋಜಪುರಿ ಭಾಷೆಯಲ್ಲಿ ಬಾಗಿಲು ತೆಗೆಯೆಂದು ಕೂಗಿದ್ದು ಕೇಳ ಬಂತು. ಹೀಗೆ ವಾರ್ಡರುಗಳು ಬಾಗಿಲನ್ನು ತೆಗೆಯುವುದು, ಮುಚ್ಚುವುದರಲ್ಲೇ ನಿರತರಾಗಿರಬೇಕಾಗುತ್ತದೆ. ವಿರಾಮವೇ ಇಲ್ಲ. ಇವರಿಗೆ ಬಹುಶಃ ಬೇಸರವೂ ಆಗುವುದಿಲ್ಲ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಡಾಕ್ಟರ್ ಬಾಬುವನ್ನು ಒಳಗೆ ಬಿಡಲು ಬಾಗಿಲು ತೆಗೆಯಲಾಗಿತ್ತು. ಆಗಲೇ ಕಾಲು ಸಪ್ಪುಳದಿಂದ ಯಾರೋ ಬರುತ್ತಿರುವ ಹಾಗಿದೆ. ಬಾಗಿಲು ತೆಗೆದೇ ಇರಲಿ ಎಂದು ಇವರಿಗೆ ಅನ್ನಿಸಬೇಡವೇ ? ಇಲ್ಲ. ಇವರಿಗೆ ಹೀಗೆ ಯಾಂತ್ರಿಕವಾಗಿ ಕೆಲಸ ಮಾಡುವುದು ಜೈಲಿನ ನಿಯಮದ ಸಲುವಾಗಿಯೋ, ಅಥವಾ ಅಭ್ಯಾಸದಿಂದಲೋ ? ಈ ಬಾಗಿಲು ತೆಗೆಯುವಿಕೆಯಲ್ಲೂ ಒಂದು ತಮಾಷೆಯಿದೆ. ಈ ಜೈಲ್ ಗೇಟಿನ ಮಧ್ಯೆ ಎರಡು ದ್ವಾರಗಳಿವೆ, ನಾನು ಈಗ ಕೂತಿದ್ದೇನಲ್ಲ, ಅಲ್ಲಿ ಒಂದು ದ್ವಾರ ಇದೆ. ಇನ್ನೊಂದು ಅಲ್ಲಿಂದ ಹತ್ತು, ಹದಿನೈದು ಮಾರುಗಳಷ್ಟು ದೂರ ಒಳಗಡೆ ಇದೆ. ಇವೆರಡು ದ್ವಾರಗಳ ನಡುವೆ ಇರುವ ಜಾಗ ಒಂದು ಹಾಲಿನಷ್ಟು ಅಗಲವಾಗಿದೆ. ಜೈಲಿನ ಒಳಗಡೆಯ ಕಾರ್ಯಕ್ಷೇತ್ರ ಗೋಪುರದ ಮೇಲಿನ ಕೊಠಡಿ. ಹೊರಗಡೆಯ ಕ್ಷೇತ್ರ ಈ ಜಾಗ. ಒಂದು ಸಲ ನಾಲ್ಕು ಎತ್ತಿನ ಗಾಡಿಗಳು ಇಟ್ಟಿಗೆ ಹೇರಿಕೊಂಡು ಬಂದುವು. ವಾರ್ಡರನು ಹೊರಗಡೆಯ ಬಾಗಿಲನ್ನು ತೆಗೆದು ಎರಡು ಗಾಡಿಗಳನ್ನು ಮಾತ್ರ ಒಳಗಡೆಯ ಪ್ಯಾಸೇಜಿನ ಜಾಗದೊಳಗೆ ಬಿಡುತ್ತಾನೆ. ಆಮೇಲೆ ಬಾಗಿಲು ಮುಚ್ಚುತ್ತಾನೆ. ತರುವಾಯ

ಒಳಗಡೆಯ ಬಾಗಿಲನ್ನು ತೆಗೆದು ಎರಡು ಗಾಡಿಗಳನ್ನು ಒಳಗೆ ಹೋಗಲು ಬಿಡುತ್ತಾನೆ. ಆಮೇಲೆ ಆ ಬಾಗಿಲನ್ನು ಮುಚ್ಚುತ್ತಾನೆ. ಮತ್ತೆ ಬಂದು ಹೊರಬಾಗಿಲನ್ನು ತೆಗೆಯುತ್ತಾನೆ. ಉಳಿದ ಎರಡು ಗಾಡಿಗಳನ್ನು ಒಳಗೆ ಬಿಡುತ್ತಾನೆ. ಇಷ್ಟೆಲ್ಲ ಮಾಡುವ ಬದಲಾಗಿ ಎರಡು ಬಾಗಿಲುಗಳನ್ನು ಒಟ್ಟಿಗೇ ತೆಗೆದು ನಾಲ್ಕು ಗಾಡಿಗಳನ್ನೂ ಒಂದೇ ಸಲ ಹೋಗಲು ಬಿಟ್ಟರೆ ಊರು ಕೊಳ್ಳೆಯಾಗಿ ಹೋಗುವುದೆ ? ವಿಚಿತ್ರ ಅಂತೂ.

ಒಳಗಡೆಯ ವಾರ್ಡರುಗಳ ದಳ ಗಡಿಬಿಡಿ ಮಾಡುತ್ತಿದ್ದಾರೆ. ಅವರಲ್ಲಿ ಒಬ್ಬನನ್ನು ಕರೆದು ಫಾಸಿ ಸೆಲ್ಲಿನಲ್ಲಿ ಡ್ಯೂಟಿ ಮಾಡುವ ವಾರ್ಡರು ಯಾರು ಎಂದು ಕೇಳಿದರೆ ಹೇಗೆ ? ಆ ವಾರ್ಡರ ಕಡೆಯಿಂದ ಅಣ್ಣ ಈಗ ಏನು ಮಾಡುತ್ತಿದ್ದಾನೋ ಕೇಳಿ ತಿಳಿದುಕೊಳ್ಳಬಹುದು.... ಬೇಡ ಏಕೆ ? ಸುಮ್ಮನೆ... ಅವನು ಆಮೇಲೆ ಏನಾದರೂ ತಲೆ ಹರಟೆ ಜವಾಬು ಕೊಟ್ಟರೂ ಕೊಡಬಹುದು. ನಾನು ಅಣ್ಣನ ವಿರೋಧವಾಗಿ ಸಾಕ್ಷ್ಯ ನುಡಿದದ್ದು ಅವನಿಗೆ ಗೊತ್ತಿರಬಹುದು.... ಎಲ್ಲ ಸಾಧ್ಯ.

ಇವರೆಲ್ಲರಿಗೂ ತಮ್ಮ ತಮ್ಮ ಗೂಡು ಸೇರಿಕೊಳ್ಳುವ ಆತುರ. ಯಾಕಾಗಬಾರದು ? ರಾತ್ರಿ ಎಷ್ಟು ಹೊತ್ತಾಗಿ ಹೋಗಿದೆ, ಏನು ಕತೆ ? ಎಲ್ಲರೂ ಒಬ್ಬೊಬ್ಬರಾಗಿ ರಿಜಿಸ್ಟರಿನಲ್ಲಿ ರುಜು ಮಾಡುತ್ತಿದ್ದಾರೆ. ಒಬ್ಬನು ಎತ್ತರವಾಗಿರುವ ಡೆಸ್ಕಿನ ಮೇಲೆ ಕೈ ನೀಡಿ ಸುಬೇದಾರನಿಗೆ ಏನೋ ಕೊಟ್ಟ - ಯಾರೂ ನೋಡದೆ ಇರುವ ಹಾಗೆ. ಒಬ್ಬೊಬ್ಬರಾಗಿ ಹೊರಗೆ ಬರುತ್ತಿದ್ದಾರೆ. ಇವರಲ್ಲಿ ಒಬ್ಬ ಸ್ವಲ್ಪ ತಿಳಿಯಾದ ಬಣ್ಣವಿರುವ ಸಣ್ಣ ವಯಸ್ಸಿನವನನ್ನು ಸುಬೇದಾರ ಹತ್ತಿರ ಕರೆದು ಪಗಡಿ ತೆಗೆ ಎಂದು ಹೇಳಿದ. ಆಮೇಲೆ ಒಂದೊಂದಾಗಿ ಅವನ ಜೇಬುಗಳು, ಸೊಂಟಕ್ಕೆ ಕಟ್ಟಿದ ಬೆಲ್ಟಿನ ಕೆಳಗೆ, ಎಲ್ಲಾ ಖನಿಖಿ ಮಾಡಿದ. ಏನೂ ಸಿಗಲಿಲ್ಲ. ಈ ವಾರ್ಡರು ಹೊರಗೆ ಹೋಗುತ್ತ ಅರ್ಧ ತನ್ನಲ್ಲೇ ಬೈದುಕೊಂಡ. "ಅಲ್ಲ - ನನ್ನ ಮೇಲೇ ಇವನಿಗೆ ಗುಮಾನಿ ? ಬೇಕಂತ ಅವಮಾನ ಮಾಡತಾನೆ - ನಾನು ಹೆಡ್ ವಾರ್ಡರ್ ಕಡೆಯವನು ಅಂತ ಹಾಗೆ ಮಾಡತಾನೆ. ಅವರವರಿಗೆ ಜಿದ್ದು ಇದ್ದರೆ ನನ್ನನ್ನು ತಗಾದೆ ಮಾಡೋದು ಯಾಕೆ... ? ಆಗಲಿ, ಒಂದು ಸಲ ಜೈಲರ್ ಸಾಹೇಬರ ಹತ್ತಿರ ಹೇಳದೇ ಹೋದರೆ ನೋಡತಾ ಇರು. ಇವನಿಗೆ ತಕ್ಕ ಬಂದೋಬಸ್ತು ಮಾಡದೆ ಹೋದರೆ ನನ್ನ ಹೆಸರು.... ನನ್ನ ನೌಕರಿ ಹೋದರೂ ಸರಿ... ಕತ್ತೆ ಬಾಲ ಹೋಯಿತು!" ಎನ್ನುತ್ತ ಇನ್ನೂ ಒಂದೆರಡು ಹೇಸಿಗೆ ಮಾತುಗಳನ್ನು ಸಹ ಆಡಿದ.

ಈ ಕಡೆ ಬ್ಯಾರಕಿನ ಕಡೆಯಿಂದ ಕೀರ್ತನೆ ಹಾಡು ಒಂದೇ ಸಮನಾಗಿ ಕೇಳಬರುತ್ತಿದೆ. ಒಂದೇ ರಾಗ. ಆದರೆ ಹಾಡಿನ ಮಾತೊಂದು ಅರ್ಥ ಆಗುವುದಿಲ್ಲ. ಕೇವಲ ಮಧ್ಯೆ ಮಧ್ಯೆ "ರಾಮ ಹೋ ರಾಮಾ" ಎಂಬುದೊಂದು ಮಂತ್ರ... ಸಣ್ಣವನಿದ್ದಾಗ ಒಂದು ಪದ್ಯ ಓದಿದ್ದೆ. ಅದರ ಮಧ್ಯೆ ಒಂದು ಪಂಕ್ತಿ "ದಾರೋ ಯಾನ್ ರಾಮಾ ಹೈ" ಎಂದು ಇತ್ತು. ಪದ್ಯ ಜ್ಞಾಪಕವಿಲ್ಲ ಆದರ ಮೊದಲ ಪಂಕ್ತಿ ಮಾತ್ರ "ಭೋರ್ ಹೋಲೋ... ಖುಕು ಮಣಿ ಜಾಗೋ"- ("ಏಳಪ್ಪ ಮಗುವೇ... ಬೆಳಗಾಯಿತೇಳು") ಎಂದು ಹೀಗೇ ಇನ್ನೂ ಏನೋ, ಜ್ಞಾಪಕವಿಲ್ಲ.

ದೊಡ್ಡಮ್ಮನ ಹಿರೇ ಮಗ - ಜಿತೇನ್‌ದಾ - ದೊಡ್ಡಮ್ಮನ ಪೆಟ್ಟಿಗೆಯಿಂದ ಹಣ

ಕದ್ದು ಅನೇಕ ಕತೆ ಪುಸ್ತಕಗಳನ್ನ ತರಿಸುತ್ತಿದ್ದ. ಕಲ್ಕತೆಯಿಂದ ಪಾರ್ಸೆಲ್ ಬಂದೊಡನೆ ಎಲ್ಲರಿಗೂ ಗೊತ್ತಾಗಿ ಹೋಯಿತು. ಆಗ ಜಿತೇನದಾ ನಮ್ಮ ಆಶ್ರಮದೊಳಗೆ ಬಂದು ಇದ್ದ. ದೊಡ್ಡಪ್ಪ ಅವನನ್ನು ಮನೆಗೆ ಸೇರಿಸುವುದಿಲ್ಲ ಎಂದಿದ್ದರು. ಆ ಪುಸ್ತಕಗಳಲ್ಲಿ ಎರಡನ್ನು ತೆಗೆದು ದೊಡ್ಡಮ್ಮ ನನಗೂ ಅಣ್ಣನಿಗೂ ಒಂದೊಂದು ಕೊಟ್ಟಿದ್ದಳು. ನನಗೆ ಕೊಟ್ಟ ಪುಸ್ತಕದಲ್ಲೇ ಈ ಪದ್ಯ ಇದ್ದುದು. ಜಿತೇನ್‌ದಾ ಎಷ್ಟು ಬಾರಿ ದುಡ್ಡು ಕದ್ದು ಹೀಗೆ ಪಾರ್ಸಲುಗಳನ್ನು ತರಿಸಿದ್ದನೋ ಅದರ ಲೆಕ್ಕವೇ ಇಲ್ಲ.

ಬ್ಯಾಡ್‌ಮಿಂಟನ್ ಸೆಟ್, ಕ್ಯಾರಂ ಬೋರ್ಡ್, ಫುಟ್‌ಬಾಲ್ ಪಂಪ್ ಇಂಥವುಗಳನ್ನೆಲ್ಲ ಜಿತೇನ್‌ದಾ ಪಾರ್ಸೆಲ್ ಮೂಲಕ ತರಿಸುತ್ತಿದ್ದ. ಒಂದೊಂದು ಆಟದಲ್ಲೂ ಅವನಿಗೆ ಉತ್ಸಾಹ ಕೆಲವೇ ದಿನ ಇರುತ್ತಿತ್ತು. ಯಾವ ಆಟವನ್ನೇ ಆಗಲಿ, ಅವನು ಸಾಧಾರಣ ಪಟುತ್ವದಿಂದ ಸಹ ಆಡಲು ಆಗುತ್ತಿರಲಿಲ್ಲ. ಅಂಥ ಜಿತೇನ್‌ದಾ ಈಗ ಅದೆಷ್ಟು ಗಂಭೀರ ಪ್ರಕೃತಿಯ ಮನುಷ್ಯನಾಗಿ ಬಿಟ್ಟಿದ್ದಾನೆ. ಕಂಟ್ರಾಕ್ಟರಿ ಮಾಡಿ ಎಷ್ಟು ಹಣಗಳಿಸಿದ್ದಾನೋ! ನಮ್ಮನ್ನು ಅಂದರೆ ರಾಜನೀತಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ನಮ್ಮಂಥ ಬಡ ಕೆಲಸಗಾರರನ್ನು ಒಂದು ಬಗೆಯ ಪ್ರೋತ್ಸಾಹಕರ ವಾದ ಕೃಪೆಯಿಂದಲೂ ಒಮ್ಮೊಮ್ಮೆ ಅಸಡ್ಡೆಯಿಂದಲೂ ಕಾಣುತ್ತಿದ್ದ. ನಾವು ಅವನಂತೆಯೇ ಒಂದೇ ಹಟದಿಂದ ಮನಸ್ಸುಮಾಡಿದ್ದರೆ ಅವನಿಗಿಂತಲೂ ಹೆಚ್ಚಾಗಿ ಹಣ ಗಳಿಸಬಹುದಾಗಿತ್ತು ಎಂದು ಅವನಿಗೆ ಯಾರು ತಾನೇ ಮನದಟ್ಟು ಮಾಡಲಾಗುತ್ತದೆ ?

ಮತ್ತೆ ಒಳಗಡೆಯ ಬಾಗಿಲಿನ ಮಧ್ಯೆ ಇರುವ ಸಣ್ಣ ಕದ ಸರಿಸಲ್ಪಟ್ಟಿತು. ಯಾರೋ ಏನೋ ವಾರ್ಡರಿಗೆ ಹೇಳಿದರು, ಕತ್ತಲಲ್ಲಿ ಅವರ ಮುಖ ಕಾಣುತ್ತಿರಲಿಲ್ಲ. ಆಲಿಬಾಬನ ಗುಹೆಯಂತೆ ಇದೂ ಒಂದು ಗುಹೆ! ಎಳ್ಳೇ, ಬಾಗಿಲು ತೆಗೆ! (ಓಪನ್ ಸೀಸೇಮ್) - ಆಲೀಬಾಬನ ಗುಹೆ ತೆಗೆದುಬಿಟ್ಟರೆ ಎಷ್ಟು ಮುತ್ತು ರತ್ನಗಳು ಹೊರಗೆ ಬರುತ್ತಿದ್ದುವು! ಆದರೆ ಈ ಗುಹೆಯ ಬಾಗಿಲು ತೆಗೆದುಬಿಟ್ಟರೆ ಎಷ್ಟು ಒದುಕಿರುವ ಹೆಣಗಳು ಈಚೆಗೆ ಬಂದು ನಿಜವಾಗಿ ಬದುಕಬಹುದು ?

ಜೈಲಿನಲ್ಲಿರುವುದೆಲ್ಲ ಗುಹೆಗಳೂ ಪೌಳೀ ಗೋಡೆಗಳೂ ಅಲ್ಲ. ಎಷ್ಟೋ ಗಾಳಿ, ಬೆಳಕು ಧಾರಾಳವಾಗಿ ಓಡಾಡುವ ಖಾಲಿ ಜಾಗಗಳೂ ಇವೆ. ಅಷ್ಟೇಕೆ, ಎಷ್ಟೋ ಸಾಧಾರಣ ಮನೆಗಳ ಮುಂದಿನ ಅಂಗಳಗಳಿಗಿಂತಲೂ ಜೈಲಿನ ಹೊರ ಅಂಗಳ ಎಷ್ಟೋ ದೊಡ್ಡದು. ಆದರೆ ಅದರಿಂದ ಏನಾದೀತು ? ಜೈಲಿನ ಒಳಗಡೆ ಹೂದೋಟ, ಬೇವಿನ ಗಿಡಗಳ ಅವೆನ್ಯೂ, ವಿಶಾಲವಾದ ನೆರಳು ಪಸರಿಸುವ ಆಲದ ಮರ, ಅರಳೀಮರಗಳಿದ್ದರೂ ಸಹ ಏನಾದೀತು ? ಸುತ್ತಲ ವಾತಾವರಣವೆಲ್ಲ ಸಂಕಟ, ವಿಷಾದ, ಏಕಾಕಿತನದ ಬೇಗುದಿ ಇಂಥವುಗಳಿಂದ ತುಂಬಿ ಹೋಗಿರುತ್ತದೆ. ಆಲಿವರ್ ಲಾಜ್, ಕಾನನ್ ಡಾಯಲ್, ಲೆಡ್‌ಬೆಟರ್ ಇವರೆಲ್ಲ ಭೌತಿಕ ಅನುಭವಗಳ ವಿಷಯವಾಗಿ ಬರೆದಿರುವುದು ನಿಜವೆ ? ಗಾಢವಾದ ಚಿಂತನೆಯಲ್ಲಿ, ಮಾನಸಿಕ ಆಂದೋಳನದಲ್ಲಿರುವ ಸಮಯ ನಾವು ನಮ್ಮ ಚಿಂತಾಮೂರ್ತಿಗಳಾದ ನೆಳಲು ಗಳನ್ನು ಈ ಸ್ಥಳದಲ್ಲಿ ಕಳಚಿ ಹೋಗುತ್ತೇವೆಯೆ ? ನಮ್ಮಲ್ಲಿರುವ ಚಿಂತಾ ಸಮಷ್ಟಿಯು ಈರುಳ್ಳಿಯಂತೆಯೆ ? ಒಂದೊಂದೇ ದಪ್ಪನೆಯ ಅಥವಾ ತೆಳುವಾದ ಪದರಗಳನ್ನು

ಕಳಚಿ ಹಾಕುವ ಸಾಮರ್ಥ್ಯವುಂಟೆ ಅದಕ್ಕೆ? ಹಾವು ಪರೆ ಕಳಚಿ ಹಾಕುವ ಹಾಗೆ? ಯಾವುದಾದರೂ ಹಾಳು ಬಿದ್ದ ಪುರಾತನ ಮನೆಗೋ ದೇಗುಲಕ್ಕೋ ಹೋದರೆ ನಮಗೆ ವಿಚಿತ್ರವಾದ ಅನುಭವಗಳು ಉಂಟಾಗುತ್ತವಲ್ಲ... ಅದಕ್ಕೆ ನಿಜವಾಗಿ ಇದೇ ಕಾರಣವೇನು?

ಈಗ ತಾನೇ ಒಳಗಿಂದ ಬಂದನಲ್ಲ, ಆ ಆಳು ಬೇರೆ ಯಾರೂ ಅಲ್ಲ... ಆಸ್ಪತ್ರೆಯ ಕಾಂಪೌಂಡರ್. ಮನುಷ್ಯ ಬಹಳ ಸೊಗಸುಗಾರನೆಂದು ತೋರುತ್ತದೆ. ಕೈಯಲ್ಲೊಂದು ಹರಿಕೇನ್ ಲ್ಯಾಂಟರ್ನ್ (ಲಾಟೀನು) ಉರಿಯುತ್ತ ಇದೆ. ಹಾವಿನ ಭಯವೇನೋ ಪಾಪ! ಸಾಧಾರಣವಾಗಿ ಈತ ಜೈಲಿನೊಳಗೆ ಹೋಗುವಾಗ ಖಾಲಿ ಲಾಟೀನನ್ನ ಕೈಲಿ ಹಿಡಿದುಕೊಂಡು ಬರುತ್ತಾನೆ. ಮನೆಗೆ ಮರಳುವಾಗ ಅದರೊಳಗೆ ಎಣ್ಣೆ ತುಂಬಿಸಿಕೊಂಡು ಹತ್ತಿಸಿಕೊಂಡು ಹೋಗುತ್ತಾನೆ. ಎಲ್ಲರಿಗೂ ಗೊತ್ತಿರುವ ವಿಷಯ... ಆದರೂ ಯಾರೂ ಏನೂ ಹೇಳುವುದಿಲ್ಲ. ಇಂಥ ಸಣ್ಣಪುಟ್ಟ ಜುಜುಬಿಗಳನ್ನು ಯಾರೂ ಸಂಬಳದ ಮೇಲಿನ ಗಿಂಬಳ ಅನ್ನುವುದಿಲ್ಲ. ಇವೆಲ್ಲ ಅವರ ಸಂಬಳದ ಅಂಶವೇ. ಬಹುಶಃ ತಿಂಗಳಿಗೆ ಇಪ್ಪತ್ತೈದೋ ಮೂವತ್ತೋ ಇರುತ್ತದೆ. ಆದರೆ ವೇಷ, ಭೂಷಣಗಳೆಲ್ಲ ನೋಡಿದರೆ ಎಲ್ಲಿಂದ ಬರುತ್ತಪ್ಪಾ ಅಷ್ಟೊಂದು ಹಣ ಅನ್ನಿಸುತ್ತದೆ. ಬಹುಶಃ ಡಾಕ್ಟರ ಆದಾಯದಲ್ಲಿ ಭಾಗವಿರುವ ಹಾಗೆ ಕಾಣುತ್ತದೆ.

"ಇವತ್ತೇನು ಕಾಂಪೌಂಡರ್ ಸಾಹೇಬರಿಗೆ ತುಂಬಾ ಲೇಟ್ ಆಗಿ ಹೋಗಿದೆ ಅಂತ ಕಾಣತದ ಅಲ್ಲಾ?" ಎಂದ ಸುಬೇದಾರ್ ಸ್ವಲ್ಪ ಸಹಾನುಭೂತಿ ತೋರುತ್ತ.

"ಹೌದು ಸುಬೇದಾರ್ ಸಾಹೇಬರೆ ಈ ಜೈಲಲ್ಲಿ ಚಾಕರಿಗೆ ಸೇರಿ ನಾನು ಒಳ್ಳೇ ದಡ್ಡ ಕೆಲಸ ಮಾಡಿದೆ ಅಂತ ಅನ್ನಿಸತಾ ಇದೆ ಈಗ. ಒಂದು ನಿಮಿಷ ಪುರಸೊತ್ತಿದ್ದರೆ ಕೇಳಿ. ಬೆಳಗಿನ ಝಾವಕ್ಕೆ ಬಂದವನು ಈಗ ಹನ್ನೆರಡು ಗಂಟೆಗೆ ಹೋಗತಾಯಿದ್ದೀನಿ ಮನೆಗೆ... ಮಧ್ಯಾಹ್ನ ಬರೀ ಊಟ ಮಾಡಲಿಕ್ಕೆ ಮಾತ್ರ ಹೋದವನು. ಸಿನ್‌ಹೇಸರ್ ಬಾಬು ಒಂಬತ್ತಕ್ಕೆ ಬರಬೇಕಾಗಿತ್ತೂ ಡ್ಯೂಟಿಗೆ - ಬಂದದ್ದು ಈಗ. ಹನ್ನೆರಡು ಗಂಟೆಗೆ. ಚೆನ್ನಾಗಿ ಉಂಡು ಎಲಡಿಕೆ ಜಗಿದುಕೊಂಡು ಆರಾಮವಾಗಿ ಬರತಾ ಇದಾರೆ! ಅಂದದ್ದೇ ಒಂದು ಕೆಟ್ಟ ಮಾತನ್ನ ಅಂದ ಕಾಂಪೌಂಡರ್. ಹಾಗೆ ಬೈದದ್ದು ತನ್ನ ಕೆಟ್ಟ ಅದೃಷ್ಟವನ್ನೋ, ಅಥವಾ ಡಾ. ಸಿಂಹೇಶ್ವರ ಬಾಬೂಗಳನ್ನೋ ಅಥವಾ ತನ್ನ ಜುಬ್ಬಾ ಒಳಗಡೆ ಎಲ್ಲೋ ಸೇರಿಕೊಂಡು ಹಿಂಸೆ ಕೊಡುತ್ತಿದ್ದ ಹುಳುವನ್ನೋ ಹೇಳುವಂತಿರಲಿಲ್ಲ. ಇಷ್ಟು ಮಾತ್ರ ನನಗೆ ಗೊತ್ತಾಗಿದ್ದೇನೆಂದರೆ ಈಗ ತಾನೇ ಲುಂಗಿ ಉಟ್ಟುಕೊಂಡು ಒಳಗೆ ಹೋದನಲ್ಲ ಡಾಕ್ಟರು ಅವನ ಹೆಸರು ಸಿಂಹೇಶ್ವರ ಬಾಬು ಎಂದು ಮಾತ್ರ.

ಕಾಂಪೌಂಡರ ಬಾಬೂ ಬಹಳ ಪ್ರಯಾಸದಿಂದ ಕಡೆಗೂ ಬಟ್ಟೆಯೊಳಗೆ ಸೇರಿಕೊಂಡಿದ್ದ ಹುಳುವನ್ನು ಹೇಗೋ ತೆಗೆದದ್ದಾಯಿತು. ಈಗ ಅವನ ಮುಖ ನೋಡಿದರೆ ನಗು ಬರುವಂತಾಗುತ್ತದೆ.

ಕಾಂಪೌಂಡರ್ ಸಾಹೇಬನು ತನ್ನ ಸುಖ, ದುಃಖದ ಕತೆ ಹೇಳಿಕೊಂಡು ಹೋಗುತ್ತಾನೆ. "ಮಿತ್ತಿರ್ ಮಹಾಶಯರ ನೈಟ್ ಡ್ಯೂಟಿ ಇದ್ದರಾದರೂ ಒಂದು

ರೀತಿ ಒಳ್ಳೆಯದೇ. ಅವರು ಬಂದರೆ ಸರಿಯಾಗಿ ಒಂಬತ್ತು ಗಂಟೆಗೇ ಬಂದು ಬಿಡುತ್ತಾರೆ, ಇಲ್ಲದೆ ಹೋದರೆ ಬರೋದೇ ಇಲ್ಲ!"

ಇಬ್ಬರೂ ಒಬ್ಬರಿಗೊಬ್ಬರು ನೋಡಿಕೊಂಡು ನಗತೊಡಗುತ್ತಾರೆ. ಮತ್ತೆ ಶುರು ಆಗುತ್ತದೆ ಮಾತು.

"ಇದೆಲ್ಲ ಜೈಲರ್ ಸಾಹೇಬರಿಗೂ ಗೊತ್ತು. ಎಷ್ಟು ದಿನ ಜೈಲರ್ ಸಾಹೇಬರು ತಮ್ಮ ಗಸ್ತು ತಿರುಗಿ ನೋಡಿಕೊಂಡು ಬರುವಾಗ ಆಸ್ಪತ್ರೆಯಲ್ಲಿ ಡಾಕ್ಟರರ ರೂಮು ಖಾಲಿ. ಒಂದು ಪಕ್ಷ ತಾವೇ ಕಣ್ಣಾರೆ ನೋಡದೆ ಹೋಗಿದ್ದರೂ ಆಸ್ಪತ್ರೆಯಲ್ಲಿ ಏನು ನಡೆಯುತ್ತೆ, ಏನು ನಡೆಯೋದಿಲ್ಲ ಅಂಬೋದನ್ನ ಯಾರಿಂದಲೂ ಮುಚ್ಚಿಡುವ ಹಾಗಿಲ್ಲ. ಹಿಂದಿನ ಸಾಹೇಬರಿದ್ದಾಗ ಸಿಕ್ಕಿ ಬಿದ್ದು ಡಾಕ್ಟರು ಜವಾಬು ಏನು ಹೇಳಿದರು ಗೊತ್ತಾ? "ಏನು ಮಾಡೋದು ಸಾರ್. ಆಸ್ಪತ್ರೆಯಲ್ಲಾಗಲಿ, ವಾರ್ಡಲ್ಲಿ ಆಗಲಿ ಡಾಕ್ಟರು ಮಲಗುವ ಕೋಣೆಗೆ ಬಾಗಿಲೇ ಇಲ್ಲವಲ್ಲ? ಯಾರಾದರೂ ಬಂದು ತಟಕ್ಕಂತ ಹೊಡೆದರೋ ಕತ್ತು ಹಿಸುಕಿಯೋ ಮಾಡಿದ ಅಂದರೆ ಏನು ಗತಿ? ಯಾರು ಕೇಳತಾರೆ? ಅದಕ್ಕೆ ಅಲ್ಲಿ ಮಲಗಲಿಕ್ಕೆ ದಿಗಿಲಾಗತ್ತೆ" - ಅವರು ಹೀಗೆ ನೆಪ ಹೇಳಿದಾಗ ಸಾಹೇಬರು ಸುಮ್ಮನೆ ಹೂಗುಟ್ಟಿಕೊಂಡು ಇದ್ದರೇನು? ಅವರೂ ಪಕ್ಕಾ ಇದ್ದರು. ಅವರೇನಂದರು ಗೊತ್ತಾ? "ರಾತ್ರಿ ಖೈದಿಗಳೆಲ್ಲ ಮಲಗಿರತಾರೆ... ಅವರವರ ಸೆಲ್ಲಿನೊಳಗಡೆ. ಹೊರಗೆ ಹೇಗೆ ಬರಲು ಸಾಧ್ಯ ಅವರಿಗೆ? ಅವರಲ್ಲದೆ ಬೇರೆ ಯಾರಿದಾರೆ ಬಂದು ಹೊಡೆಯುವುದಕ್ಕೆ?" ಅದಕ್ಕೆ ಡಾಕ್ಟರೇನು ಜವಾಬು ಕೊಟ್ಟರು ಅಂದರೆ, "ಯಾಕೆ ಸಾರ್, ಕೆಲವು ಖೈದಿಗಳನ್ನ 'ಮೇಟ್' ಅಂತ ಮಾಡಿದ್ದಾರಲ್ಲ... ಅವರು ಆಸ್ಪತ್ರೆಯಲ್ಲಿ ರಾತ್ರಿ ಹೊತ್ತು ವಾರ್ಡ್ ಡ್ಯೂಟಿ ಮಾಡುವುದಿಲ್ಲವೆ? ಅವರನ್ನು ಯಾವ ಸೆಲ್ಲಲ್ಲಿ ಬಂಧಿಸಿಡತಾರೆ? ಇದಕ್ಕೆ ಹಿಂದೆ ಇದೇ ವಿಷಯದಲ್ಲಿ ಒಂದು ಸಲ ಜೈಲಲ್ಲಿ ದಂಗೆ ಆಗಿತ್ತಲ್ಲ?" - ಜೈಲರ್ ಸಾಹೇಬರು ಆಗೇನೂ ಜವಾಬು ಹೇಳಲಿಲ್ಲ. ಆದರೆ ಈಗ? ಮುಜಫರ್ ಪುರದ ಜೈಲಿನಲ್ಲಿ ಕೆಲವು ರಾಜಕೀಯ ಖೈದಿಗಳು ತಪ್ಪಿಸಿಕೊಂಡು ಓಡಿ ಹೋದಮೇಲೆ ಮೇಟ್‌ಗಳ ರಾತ್ರಿ ಡ್ಯೂಟಿಯನ್ನು ನಿಲ್ಲಿಸಿ ಬಿಟ್ಟಿದ್ದಾರೆ. ಯಾಕೆಂದರೆ ಈ ಮೇಟಗಳೇ ಆ ಖೈದಿಗಳು ಓಡಿ ಹೋಗುವುದಕ್ಕೆ ಸಹಾಯ ಮಾಡಿದ್ದು. ಈಗ ಡಾಕ್ಟರು ಇನ್ನಾವುದಾದರೂ ನೆಪ ಹೇಳಬೇಕಾಗತದೆ. ಮೊದಲಿನ ನೆಪ ಈಗ ನಡೆಯುವುದಿಲ್ಲ "ಅಚ್ಛಾ... ಯಾರ್!... ಒಂದು ಸಿಗರೇಟು ಕೊಡು ಮತ್ತೆ.... ಬಹಳ ಸುಸ್ತಾಗಿಬಿಟ್ಟಿದ್ದೇನೆ. ಮೈ ಮುರಿಯೋ ಕೆಲಸ ಹಾಳು."

ಸುಬೇದಾರನು ಸಿಗರೇಟು ತೆಗೆದುಕೊಟ್ಟ. ಕಾಂಪೌಂಡರ್ ಹತ್ತಿಸಿದ. ಆಮೇಲೆ ಇಬ್ಬರೂ ಅತ್ಯಂತ ಸಣ್ಣ ದನಿಯಲ್ಲಿ ಏನೇನೋ ಮಾತಾಡಿಕೊಳ್ಳತೊಡಗಿದರು. ಕಾಂಪೌಂಡರ್ ಲಾಟೀನಿನ ಬತ್ತಿಯನ್ನು ಮೇಲಕ್ಕೇರಿಸಿ ಆಮೇಲೆ ಅದನ್ನ ಎತ್ತಿ ಹಿಡಿದುಕೊಂಡ. ಅರ್ಧ ಸೇದಿದ ಸಿಗರೇಟನ್ನು ಸುಬೇದಾರನ ಕೈಗೆ ಕೊಟ್ಟ ಗೇಟಿನಿಂದ ಹೊರಗೆ ಹೋಗುವಾಗ ಗಟ್ಟಿಯಾಗಿ, "ಆ ವಿಷಯವಾಗಿ ನೀವೇನೂ ಯೋಚನೆ ಮಾಡಬೇಡಿ, ಸುಬೇದಾರ್ ಸಾಹೇಬರೆ! ನಾನೇ ಕೊಟ್ಟು ಬಿಡತೇನೆ." ಎಂದು ಕೂಗಿ ಹೇಳಿದ.

ಯಾವುದರ ವಿಷಯವಾಗಿ ಮಾತಾಡಿಕೊಳ್ಳುತ್ತಿದ್ದರೋ ಇಷ್ಟು ಹೊತ್ತು? ಏನಂತೆ ಕೊಟ್ಟು ಬಿಡುವುದು? ಇಂಜಕ್ಷನ್ನೇ? ಸುಬೇದಾರ ಸಾಹೇಬನಿಗೂ ಕಾಂಪೌಂಡರನಿಗೂ ಪರಸ್ಪರ ಅತ್ಯಂತ ಸ್ನೇಹವಿರುವುದು ಸ್ಪಷ್ಟವಾಗಿ ಕಾಣುತ್ತದೆ. ಗೇಟಿನ ಹೊರಗೆ ಬಂದ ಮೇಲೆ ಕಾಂಪೌಂಡರು ಮತ್ತೆ ಸುಬೇದಾರನನ್ನು ಕುರಿತು ಗಟ್ಟಿಯಾಗಿ "ಇವತ್ತು ರಾತ್ರಿ ಇಲ್ಲೇ ಮಲಗತೀರೇನು?" ಎಂದು ಕೇಳಿದ.

"ಹ್ಞಾಂ... ಆಫೀಸು ರೂಮಿನಲ್ಲಿ ಹಾಸಿಗೆ ಹಾಸಿ ಬಂದಿದ್ದೇನೆ. ಈಗ ಹೋಗಿ ಮಲಗತೇನೆ."

ಕಾಂಪೌಂಡರ್ ತಲೆಯ ಹಿಂಭಾಗದಲ್ಲಿ ಎಷ್ಟು ಉದ್ದನೆಯ ಕೂದಲಿದೆ! ಬಹಳ ಮಟ್ಟಿಗೆ ಬೆಳ್ಳಗಾಗಿ ಹೋಗಿದೆ. ಮನುಷ್ಯ ಎಷ್ಟು ಜನಗಳು ಫಾಸಿಯಾಗುವುದನ್ನು ನೋಡಿದ್ದಾನೋ! ಅರ್ಧ ರಾತ್ರಿಯಲ್ಲಿ ಫಾಸಿಯಾಗಿರುವುದನ್ನು ಜ್ಞಾಪಕದಲ್ಲಿ ಹೇಗೆ ಇಟ್ಟುಕೊಂಡಿರಲಾಗುತ್ತದೆ?... ಈ ಕಾಂಪೌಂಡರುಗಳೆಲ್ಲ ತಲೆಯ ಹಿಂದೆ ಹೀಗೆ ಉದ್ದನೆಯ ಕೂದಲಿಟ್ಟುಕೊಂಡಿರುತ್ತಾರೆಯೆ?

ನಮ್ಮ ಆ ಹರೀಶ್ ಕಾಂಪೌಂಡರ ಜ್ಞಾಪಕ ಬರುತ್ತದೆ. ತಲೆಯಲ್ಲಿ ಅರ್ಧವೆಲ್ಲ ಗುಂಗುರು ಕೂದಲು. ಮಾಧವ ಬಾಬುಗಳ ಮನೆಯವರಿಗಾಗಿ ಔಷಧಿ ತಯಾರು ಮಾಡುತ್ತಿದ್ದಾನೆ. ಎಲ್ಲರ ಮೇಲೂ ಅಪನಂಬಿಕೆ ಪಡುವ ಸ್ವಭಾವದವನಾದ ಮಾಧವ ಬಾಬು ಹಿಂದೆಯೇ ನಿಂತು ಹಣಿಕಿ ನೋಡುತ್ತಿದ್ದಾನೆ. ಕಾಂಪೌಂಡರು ಔಷಧಿ ಸರಿಯಾಗಿ ತೂಗಿ ಹಾಕುತ್ತಿದ್ದಾನೋ ಇಲ್ಲವೋ ನೋಡುವುದಕ್ಕೆ! ಸ್ವಲ್ಪ ಹೊತ್ತಾದ ಮೇಲೆ ಇದ್ದಕ್ಕಿದ್ದ ಹಾಗೆ ರೇಗಿ ಆವೇಶದಿಂದ ಕಾಂಪೌಂಡರ ವಿಶಾಲವಾಗಿ ಹರಡಿದ್ದ ಕೂದಲನ್ನು ಕೈಯಲ್ಲಿ ಬಿಗಿದು ಹಿಡಿದುಕೊಂಡು ಅವನ ತಲೆಯನ್ನು ಜಗ್ಗಿಸಿ ಬೈಯುತ್ತ ಮಾಧವ ಬಾಬು, "ಏನು ಹುಚ್ಚನೋ ನೀನು! ಕೂದಲನ್ನು ಅಷ್ಟಗಲ ಹರಡಿಕೊಂಡು ಬೆಳೆಸಿದ್ದೀಯೆ. ಸ್ವಲ್ಪ ಸಣ್ಣದಾಗಿ ಕತ್ತರಿಸಿಕೊಂಡರೆ ಏನು ಹೋಗುತ್ತೋ ನಿಂಗೆ? ಅಲ್ಲಾ, ಹಿಂದಿನಿಂದ ನೀರು ಔಷಧಿ ತಯಾರು ಮಾಡೋದು ನೋಡೋಣ ಅಂದರೆ, ಹಾಳು, ನಿನ್ನ ಕೂದಲು ಕಣ್ಣಿಗೆ ಅಡ್ಡವಾಗಿ ಬರತ್ತೆ!" ಎಂದರು. ನಾನು ಹೋಗಿ ಇದನ್ನೆಲ್ಲ ಅಮ್ಮನ ಮುಂದೆ, ಅಣ್ಣನ ಮುಂದೆ ವರ್ಣಿಸಿ ಹೇಳಿದರೆ ಅವರಿಬ್ಬರೂ ಬಿದ್ದು ಬಿದ್ದೂ ನಕ್ಕರು. ಅಮ್ಮನಂತೂ ನಗು ತಡೆಯಲಾರದೆ ಬಾಯನ್ನು ಸೆರಗಲ್ಲಿ ಮುಚ್ಚಿಕೊಂಡು "ಅಬ್ಬಬ್ಬ! ನಿನ್ನ ಕಣ್ಣಿಗೆ ಎಂಥೆಂಥಾದ್ದೆಲ್ಲ ಬೀಳತ್ತೋ!" ಎಂದಳು. ಅಮ್ಮ ನಕ್ಕಾಗೆಲ್ಲ ಕಣ್ಣಲ್ಲಿ ನೀರು ತುಂಬುತ್ತೆ. ಅಣ್ಣ ನಗುವಾಗೆಲ್ಲ ಶಬ್ದವೇ ಆಗುವುದಿಲ್ಲ. ಎಡ ಕೆನ್ನೆಯಲ್ಲಿ ಗುಳಿ ಬೀಳುತ್ತದೆ. ಎರಡೂ ಕೆನ್ನೆಗಳಲ್ಲಿಲ್ಲ. ಒಂದೇ ಕಡೆ. ಆಶ್ಚರ್ಯ! ಕಣ್ಣುಗಳ ರೆಪ್ಪೆಗಳೆರಡೂ ಅರ್ಧ ಮುಚ್ಚಿಕೊಳ್ಳುತ್ತವೆ. ಅಣ್ಣನ ನಗುಮುಖ ಕಣ್ಮುಂದೆ ನಿಲ್ಲುತ್ತಿದೆ. ದೀಪದ ಶಿಖೆ ಕ್ರಮೇಣ ದೂರ ದೂರ ಹೋಗುತ್ತಿದೆ. ಆ ಕಡೆ, ಈ ಕಡೆ ತೂಗಾಡುತ್ತಿದೆ. ಕಾಂಪೌಂಡರ ಲಾಟೀನು. ಈ ಕಾಂಪೌಂಡರು ಅಷ್ಟು ತೂಗಾಡುತ್ತ ನಡೆಯುತ್ತಿದ್ದಾನೆಯೆ? ಗೊರಿಲ್ಲಾ ನಡೆಯುವ ಹಾಗೆ. ಅವನು ಹತ್ತಿರ ಇದ್ದಾಗ ನಾನು ಸರಿಯಾಗಿ ಗಮನಿಸಲಿಲ್ಲ. ಯಾಕೆ ಅಷ್ಟು ದೂರ ಹೋಗುತ್ತಿದ್ದಾನೆ? ಬಹುಶಃ ಸರ್ಕಾರಿ ಕ್ವಾರ್ಟರಿನಲ್ಲೇನೋ ಅವನ ವಾಸ. ಅದಿನ್ನೂ ತುಂಬಾ ದೂರ ಇರಬೇಕು.

ಬಹಳ ದೂರದಿಂದ ಹಣತೆಯ ದೀಪದ ಶಿಖೆಗೂ ಲಾಟೀನ್ ದೀಪದ ಶಿಖೆಗೂ ವ್ಯತ್ಯಾಸ ಕಾಣಬರುವುದಿಲ್ಲ.

ಹಿಂದೊಮ್ಮೆ ರಾಣಿ ಪಾತ್ರಾ ಎಂಬ ಊರಿನಲ್ಲಿ ಒಂದು ರೈತರಿಗೆ ಸಂಬಂಧಿಸಿದ ಮೊಕದ್ದಮೆಯನ್ನು ನೋಡಿಕೊಂಡು ವಾಪಸು ಬರುತ್ತಿರುವ ಸಮಯದಲ್ಲಿ ನಾನೂ, ಅಣ್ಣಾ ಮತ್ತು ಸಹದೇವನೂ ತುಂಬಾ ಸುಸ್ತಾಗಿಬಿಟ್ಟಿದ್ದೆವು. ಕತ್ತಲು ಕವಿದ ದಾರಿಯಲ್ಲಿ ಮಿಕಮಿಕ ಉರಿಯುತ್ತಿರುವಂಥ ಕಿಡಿಗಳನ್ನು ನೋಡಿ ಅದನ್ನು ದೂರದಲ್ಲಿ ಯಾರದೋ ಮನೆಯಲ್ಲಿ ಉರಿಯುತ್ತಿರುವ ದೀಪವೆಂದು ಊಹಿಸಿ ರಾತ್ರಿಯನ್ನು ಕಳೆಯಲು ಅಲ್ಲಿಗೆ ಹೋಗಬೇಕೆಂದು ಮನಸ್ಸು ಮಾಡಿದೆವು. ಮಿಣುಕು ಹುಳುಗಳದಂತೆ ಅತಿ ಕ್ಷೀಣವಾದ ಬೆಳಕು ಕ್ರಮೇಣ ಹತ್ತಿರ ಬಂದು ನೋಡಿದರೆ ಅದೊಂದು ಉರಿಯುತ್ತಿರುವ ಸಣ್ಣ ಲಾಟೀನು, ಹಳೆಯ ತುಕ್ಕು ಹಿಡಿದುಹೋದ ಲಾಟೀನು!

ಗುಡಿಸಲಲ್ಲಿ ಉರಿಯುತ್ತಿದೆ ದೀಪ. ನಾವು ಬಂದದ್ದನ್ನು ನೋಡಿ ಗುಡಿಸಲಿನ ಜನ ನಮ್ಮನ್ನು ಆದರದಿಂದ ಬರಮಾಡಿಕೊಂಡರು. ನನ್ನನ್ನೂ ಅಣ್ಣನನ್ನೂ ಆ ಸರಳ ಜನ ಮಹಾತ್ಮಾ ಗಾಂಧಿಯಂತೆ ಮಹಾತ್ಮರೆಂದು ಭಾವಿಸಿ ಮಲಗಲು ಸೌಕರ್ಯ ಮಾಡಿಕೊಟ್ಟರು. ನವಾರು ಮಂಚಾ, ತಲೆ ದಿಂಬು, ಹೊದೆಯಲು ಕಂಬಳಿ ಎಲ್ಲ ಒದಗಿಸಿದರು. ವಾಲಂಟಿಯರ್ ಸಹದೇವನಿಗಾಗಿ ಒಂದು ಚಾಪೆಯ ಮೇಲೆ ಹಾಸಿಗೆ ಹಾಸಿಕೊಟ್ಟರು. ನಮ್ಮ ಮಂಚಗಳನ್ನು ಹಾಕಿದ್ದುದು ಹೊರಗಡೆ ಜೊಂಡು ಹುಲ್ಲಿನ ಎರಡೂ ಕಡೆ ಇಳಿಜಾರಾದ ಛಾವಣಿ ಇರುವ ಮನೆಯಲ್ಲಿ. ಅದಕ್ಕೆ ಗೋಡೆಗಳಿಲ್ಲ. ಒಂದು ಕಡೆ ಹುಲ್ಲಿನ ರಾಶಿ ಈ ಪ್ರಾಂತ್ಯದಲ್ಲಿ ಇಂಥ ಮನೆಗಳನ್ನು "ಹಾಓಯಾ ಟುಂಗಿ" ಎನ್ನುತ್ತಾರೆ. ಕಂಬಳಿಯ ಮೇಲೆ ಹಾಸಿರುವ ಅತಿ ಕೊಳಕಾದ ಚಾದರವನ್ನೂ ಮತ್ತು ಎಣ್ಣೆಯಿಂದ ಗಮಟು ಕಟ್ಟಿರುವ ತಲೆದಿಂಬನ್ನೂ ಕಂಡು ನನಗೆ ಮೈಯೆಲ್ಲಾ ನವೆ ನವೆಯಾಯಿತು. ಎಷ್ಟು ರೋಗಗಳ ಬೀಜಾಣುಗಳು ಅವುಗಳ ಮೇಲೆ ಓಡಾಡುತ್ತಿವೆಯೋ ಅನ್ನಿಸಿತು. ನವಾರು ಮಂಚದ ಮೇಲೆ ಅವುಗಳನ್ನು ತೆಗೆದು ಬೇರೆ ಇಟ್ಟು ಬರೇ ಕಂಬಳಿಯ ಮೇಲೇ ಕೂತೆ. ಕರಿಯ ಕಂಬಳಿಯ ಮೇಲೆ ಎಷ್ಟು ಕೊಳೆ ಇದ್ದರೂ ಕಣ್ಣಿಗಂತೂ ಕಾಣುವುದಿಲ್ಲವೆಂಬ ತೃಪ್ತಿ ಮಾತ್ರ. ನಮಗೆ ಒಳಗಣಿಂದ ಒಬ್ಬಾತ ಅವಲಕ್ಕಿ ಮೊಸರು ತಂದುಕೊಟ್ಟ. ನಾನು ಬರೇ ಮಂಚದ ಮೇಲೆ ಕೂತಿದ್ದುದನ್ನು ಕಂಡು ಕಣ್ಣರಳಿಸಿ ನೋಡಿದ. ಅಣ್ಣನಂತೂ ಅವಲಕ್ಕಿ, ಮೊಸರು ತಿಂದು ಆ ಮಂಚ ಆ ಕೊಳೆಯ ಚಾದರ, ತಲೆದಿಂಬಿನ ಮೇಲೆ ಸುಖವಾಗಿ ನಿದ್ದೆ ಮಾಡಿದ. ಅದೃಷ್ಟವಾದ ಅಥವಾ ವಿಧಿವಾದದ ಕುರುಹುಗಳನ್ನು ಅಣ್ಣನಲ್ಲಿ ಈ ಮೊದಲೇ ನಾನು ಕಂಡಿದ್ದೇನೆ. ಪರಿಸರಕ್ಕೆ ಅನುಗುಣವಾಗಿ ಹೊಂದಿಕೊಂಡು ಹೋಗುವ ಸಾಮರ್ಥ್ಯ ಅವನಲ್ಲಿ ಬೇಕಾದಷ್ಟಿದೆ. ಏನಾದರೂ ಅಂದರೆ ಕೂಡಲೇ ಏನು ಜವಾಬು ಕೊಡುತ್ತಾನೆಂದರೆ, ಮೂಲ ತತ್ತ್ವಕ್ಕೆ ಪೆಟ್ಟಾಗದೇ ಇರುವ ಹಾಗಿದ್ದರೆ ಸಾಕು ಹಾಗಿಲ್ಲದಿರುವಾಗ ಸಣ್ಣ ಸಣ್ಣ ಅಸೌಕರ್ಯಗಳಿಗೋಸ್ಕರ ನಮ್ಮಲ್ಲಿರುವ ಸೌಜನ್ಯವನ್ನೇಕೆ ಕಳೆದುಕೊಳ್ಳಬೇಕು? ಇವನ ಆತ್ಮ ಕೇಂದ್ರಿತ ಮನಸ್ಸು ಚಿಂತನೆಗಳ ನಡುವೆ ತನ್ನನ್ನೇ ಮುಳುಗಿಸಿಕೊಳ್ಳಲು ಆಶಿಸುತ್ತದೆ. ಯಾವುದೇ ಪ್ರಶ್ನೆಯನ್ನೂ

ಅವನು ತನ್ನ ಅಭಿಪ್ರಾಯಗಳು ತನ್ನ ಸಿದ್ಧಾಂತಗಳಿಗೆ ಅನುಗುಣವಾಗಿಯೇ ಯೋಚಿಸುತ್ತಾನೆ. ಮನಸ್ಸಿನಲ್ಲೇ ಎಲ್ಲಾ ವಿಷಯಗಳನ್ನೂ ಕೂಲಂಕಷವಾಗಿ ವಿಶ್ಲೇಷಣ ಮಾಡುತ್ತಾನೆ.

ಯಾವುದೇ ಸೂಕ್ಷ್ಮ ವಿಷಯವನ್ನೂ ನನಗಿಂತಲೂ ಚೆನ್ನಾಗಿ ಸುಲಭವಾಗಿ ಅರ್ಥ ಮಾಡಿಕೊಂಡುಬಿಡುತ್ತಾನೆ. ಆದರೆ ವ್ಯಾವಹಾರಿಕ ಕ್ಷೇತ್ರದಲ್ಲಿ, ವ್ಯಕ್ತಿಗತ ಜೀವನದಲ್ಲಿ ಮಾತ್ರ ಅವನ ಆಚರಣೆಯಂತೂ ವಿವೇಕಪೂರ್ವಕವಾಗಲಿ, ತರ್ಕಬದ್ಧವಾಗಲಿ ಆಗಿರುವುದಿಲ್ಲ. ಯಾವುದಾದರೂ ಒಂದು ಮಾತನ್ನು ಕೇಳಿದ ಒಡನೆ ನಾನು ರೇಗಿ, ಕೋಪದಿಂದ ಮೈ ನಡುಗಲಾರಂಭಿಸಿದರೆ, ಅದೇ ಮಾತನ್ನು ಇವನು ಮುಗುಳ್ನಗೆಯಿಂದ ಸಣ್ಣದೊಂದು, ಮೃದುವಾದ ಜವಾಬು ಕೊಟ್ಟು, ಹೇಗೋ ಸೈರಿಸಿಕೊಂಡು ಹೋಗಿಬಿಡುತ್ತಾನೆ. ಥೇಟ್, ವಿಷ ನುಂಗಿದ ನೀಲಕಂಠನೇ ನಮ್ಮ ಅಣ್ಣ! ಅವನಲ್ಲಿ ಸಾಹಸ, ಧೈರ್ಯಗಳ ಅಭಾವವಿಲ್ಲ. ಯಾವ ಕೆಲಸವನ್ನಾದರೂ ಭಯಪಟ್ಟು ಅರ್ಧದಲ್ಲಿ ನಿಲ್ಲಿಸಿದುದನ್ನು ನಾನು ಇದುವರೆಗೆ ನೋಡಿಲ್ಲ. ಆದರೆ ಒಂದೇನೆಂದರೆ ಅವನ ರಕ್ತ ಎಂದಿಗೂ ಕಾವೇರುವುದಿಲ್ಲ. ಬುದ್ಧಿಶಕ್ತಿಯ ತೀಕ್ಷ್ಣತೆ ಮತ್ತು ಅನುಭೂತಿಯ ತೀವ್ರತೆ ಬೇಕಾದಷ್ಟಿದ್ದರೂ ಆವೇಶದ ಉಗ್ರತೆ ಮತ್ತು ಪ್ರಾಣಶಕ್ತಿಯ ಪ್ರಚಂಡತೆ ಮಾತ್ರ ಅವನಲ್ಲಿ ಕಂಡುಬರುವುದೇ ಇಲ್ಲ. ಒಂದೊಂದು ಅಡಿ ಮುಂದಿಡುವಾಗಲೂ ನಾಲ್ಕೂ ಕಡೆ ನೋಡಿ ಜಾರಿಕೆ ಇರುವ ದಾರಿಯಲ್ಲಿ ಕಾಲಿಡುವ ಹಾಗೆ ಅತಿ ಜಾಗರೂಕತೆಯಿಂದ ಹೆಜ್ಜೆಯ ಮೇಲೆ ಹೆಜ್ಜೆ ಹಾಕಿಕೊಂಡು ಹೋಗುತ್ತಾನೆ.

ನಮ್ಮ ಚಿಕ್ಕಂದಿನಲ್ಲಿ ನಾವಿಬ್ಬರೂ ಒಮ್ಮೆ ಮೂರುಕಾಲಿನ ಓಟ ಪಂದ್ಯದಲ್ಲಿ ಸೇರಿಕೊಂಡಿದ್ದಾಗ ಅದೇನು ನಿಧಾನವಾಗಿ ಕಾಲಿಡುತ್ತಿದ್ದನೋ! ಒಂದು ಸಲ ಕುಮಾರ್ ಸಾಹೇಬರು ಏರ್ಪಾಡು ಮಾಡಿಸಿದ್ದ ಜಾತ್ರೆಯಲ್ಲಿ ಹುಡುಗರ ಆಟಗಳ ಪಂದ್ಯ ಆಗಿತ್ತು. ಮೂರು ಕಾಲಿನ ಓಟದಲ್ಲಿ ನಾನೂ ಅಣ್ಣ ಒಟ್ಟಾಗಿ ಸೇರಿಕೊಂಡಿದ್ದವು. ನಾವಿಬ್ಬರೂ ಎಲ್ಲರಿಗಿಂತಲೂ ಬಹಳ ಹಿಂದೆ ಬಿದ್ದುಬಿಟ್ಟಿದ್ದೆವು. ನಮಗೆ ಗೆಲುವಾಗಲೇಇಲ್ಲ. ಇದು ಮುಗಿದ ಮೇಲೆ ನಾನು ಅಣ್ಣನ ಮೇಲೆ ರೇಗಿಗೊಂಡೆ. "ನಿನ್ನನ್ನು ಕಟ್ಟಿಕೊಂಡು ರೇಸಿನಲ್ಲಿ ಓಡುವುದೂ ಕತ್ತಿಗೆ ದೊಡ್ಡದೊಂದು ಕಲ್ಲು ಕಟ್ಟಿಕೊಂಡು ಓಡುವುದು ಎರಡೂ ಒಂದೇ" ಎಂದಾಗ ಅಣ್ಣತುಂಬಾ ನೊಂದುಕೊಂಡ. "ನಾನು ಮೊದಲೇ ಹೇಳಿದ್ದೆ ನಿನಗೆ. ನೀನಂತೂ ಆಟಗಳೆಲ್ಲದರಲ್ಲೂ ಫಸ್ಟ್ ಬರುವವನು. ಸುಮ್ಮಸುಮ್ಮನೆ ನನ್ನನ್ನೂ ಎಳೆದುಕೊಂಡು ಹೋದೆ. ಪಾನ್ನಾ ಜೊತೆಯಲ್ಲಿ ಜೋಡಿ ಮಾಡಿಕೊಳ್ಳಬಹುದಾಗಿತ್ತು" ಎಂದು ತುಂಬಾ ನಾಚಿಕೆಯಿಂದ ನೊಂದ ದನಿಯಲ್ಲಿ ಹೇಳಿದ. ಅವನನ್ನೆಂದೂ ಆ ಸ್ಥಿತಿಯಲ್ಲಿ ನೋಡಿರಲಿಲ್ಲ. ಈಗ 1943ನೆಯ ವರುಷ. ಈಗ್ಗೆ ಇಪ್ಪತ್ತೊಂದು ವರುಷಗಳ ಹಿಂದಿನ ಮಾತು. ಅಂದರೆ 1922ರಲ್ಲಿ ಆದ ವಿಷಯ ಇದು. ಅಣ್ಣನ ಮುಖ ಬೆವರಿನಿಂದ, ಆಯಾಸದಿಂದ ಬಣ್ಣಗೆಟ್ಟು ಹೋಗಿತ್ತು. ಕೆದರಿದ ತಲೆಗೂದಲು ಧೂಳಿನಿಂದ ತುಂಬಿಹೋಗಿತ್ತು. ಜೋರಾಗಿ ಉಸಿರುಬಿಡುತ್ತ ಬಿಡುತ್ತ ಪಂಚೆಯ ಕಚ್ಚೆಯ ನಿರಿಗೆಯಿಂದ ಕಾಲಿನ ಧೂಳನ್ನು ಝಾಡಿಸಲು ತೊಡಗಿದ. ಅವನನ್ನು ಅಷ್ಟು

ಕ್ರೂರವಾಗಿ ಬೈದು ನೋಯಿಸಿದೆನಲ್ಲ ಎಂದು ನನ್ನ ಮನಸ್ಸೇ ತುಂಬಾ ಕೆಟ್ಟು ಹೋಯಿತು. ಬೇರೆಲ್ಲ ಸ್ಪರ್ಧೆಗಳಲ್ಲಿ ನಾನು ಗೆದ್ದ ಬಹುಮಾನಗಳನ್ನು ಅಮ್ಮನಿಗೆ ತೋರಿಸಿ ಹಿಗ್ಗಲು ಮನಸ್ಸು ಬರಲಿಲ್ಲ. ಅಣ್ಣನೇ ಅವುಗಳನ್ನೆಲ್ಲ ಅಮ್ಮನಿಗೆ ತೋರಿಸಿದ. ಅಷ್ಟೇ ಅಲ್ಲದೆ ಅವುಗಳನ್ನು ಮತ್ತೆ ಮರುದಿನ ಬಂಧುಬಳಗಗಳಿಗೆಲ್ಲ ತೋರಿಸಿದ. ಆಮೇಲೆ ಅಮ್ಮನಿಗೇ ಹೇಳಿದ - "ಅಮ್ಮಾ ನೀನು ಅವನ ಬಾಯಲ್ಲೇ ಕೇಳಬೇಕಮ್ಮ. ಆ ರೊಜೇರಿಯೋ ಸಾಹೇಬನ ತಮಾಷೆ ನನಗೆ ಅದನ್ನು ಚೆನ್ನಾಗಿ ಹೇಳೋಕೇ ಬರೋದಿಲ್ಲ" ಅಣ್ಣಾ ನನ್ನ ಆಗಿನ ಮನಸ್ಸಿನ ಸ್ಥಿತಿಯನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವನೆಂದು ನನಗೆ ಗೊತ್ತಾಯಿತು. ಅವನ ಅತಿ ತೀಕ್ಷ್ಣವಾದದ್ದೇ ಅಲ್ಲದೆ ಕರುಣಾಮಯವೂ ಆದ ದೃಷ್ಟಿ ನನ್ನ ಮನಸ್ಸಿನ ಅಂತರಾಳದಲ್ಲಿರುವುದನ್ನೆಲ್ಲ ಹೊಕ್ಕು ಅರಿತುಕೊಳ್ಳಬಲ್ಲದು. ಅದಕ್ಕೇ ಅಣ್ಣಾ ನನ್ನ ಮನಸ್ಸಿನ ಭಾರವನ್ನಿಳಿಸಿ ಅದನ್ನು ಆದಷ್ಟು ಹಗುರ ಮಾಡಲು ಯತ್ನಿಸುತ್ತಿದ್ದುದು. ನನ್ನ ಪರವಾಗಿ ನಾನು ಮಾಡಿದ ಕ್ರೂರ ಕೆಲಸಕ್ಕೆ ನಾನು ಪ್ರಾಯಶ್ಚಿತ್ತ ಮಾಡಬೇಕಾಗಿತ್ತು. ರೊಜೇರಿಯಾ ಸಾಹೇಬರ ಸಂಗತಿಯನ್ನು ನಾನು ಹೇಳಲೇಬೇಕಾಯಿತು. ರೊಜೇರಿಯೋ ಸಾಹೇಬರು ಕುಮಾರ್ ಸಾಹೇಬರ ಮ್ಯಾನೇಜರು. ಆಟಗಳ ಸ್ಪರ್ಧೆಗಳನ್ನು ಏರ್ಪಾಡು ಮಾಡಿದುದು ಅವರ ನೇತೃತ್ವದಲ್ಲೇ.

ನೂರು ಗಜ ಓಡುವ ಸ್ಪರ್ಧೆಯಲ್ಲಿ ಖೋಕನ್‌ದಾ ಸಂಗಡ ಯಾರೂ ಪೈಪೋಟಿ ಮಾಡುವ ಹಾಗಿಲ್ಲ. ಅವನ ನಿಜವಾದ ಹೆಸರು ಕ್ರಿಂಕಾರಿ ರಂಜನ್ ದತ್ತ. ಅವನೇ ಓಟದಲ್ಲಿ ಮೊದಲನೆಯವ, ನಾನು ಎರಡನೆಯವನಾದೆ. ಸಣ್ಣ ಹುಡುಗರ ಓಟದಲ್ಲಿ ಅಂಗಿಯ ಮೇಲೆ ನಂಬರು ಹಾಕುವುದು ಪದ್ಧತಿಯಲ್ಲ. ಗೋಲ್ ಪಾಯಿಂಟ್ ಸೇರಿದ ತರುವಾಯ ರೊಜೇರಿಯೋ ಸಾಹೇಬರು ಎಲ್ಲರ ಹೆಸರುಗಳನ್ನೂ ಕೇಳಿ ಒಂದು ಕಾಗದದಲ್ಲಿ ಬರೆದುಕೊಂಡರು. ಖೋಕನ್‌ದಾನ ಹೆಸರನ್ನು ಕೇಳಿದರು. ಆಗ ಸುತ್ತಮುತ್ತಲೂ ದೊಂಬಿ, ಗಡಿಬಿಡಿ, ಇಂಥ ಸ್ಪರ್ಧೆಗಳಲ್ಲೆಲ್ಲ ಹೀಗೇ. ಖೋಕನ್‌ದಾ ತನ್ನ ಹೆಸರನ್ನೇನೋ ಹೇಳಿದ. ಸಾಹೇಬರಿಗೆ ಸರಿಯಾಗಿ ಕೇಳಿಸದೆ ಮೂರು, ನಾಲ್ಕು ಸಲ ಕೇಳಿದರೂ ಸಹ ಕಡೆಗೂ ಅವರಿಗೆ ಸರಿಯಾಗಿ ಕೇಳಿಸಿದಂತೆ ಅನ್ನಿಸಲಿಲ್ಲ. ಆಮೇಲೆ ನನ್ನ ಹೆಸರನ್ನು ಕೇಳಿ ಬರೆದುಕೊಂಡರು. ನಾನಾದ ಮೇಲೆ ಇನ್ನಿಬ್ಬರ ಹೆಸರುಗಳನ್ನು ಬರೆದುಕೊಂಡರು. ಪ್ರೈಜುಗಳನ್ನು ಹಂಚುವಾಗ ನೋಡುತ್ತೇನೆ ಮೊದಲನೆಯ ಪ್ರೈಜು ನನಗೇ ಬಂದಿದೆ! ಅದು ಹೇಗೆ? ಈ ಕಡೆ, ಪಾಪ, ಖೋಕನ್‌ದಾನ ಹೆಸರನ್ನೇ ಕರೆಯಲಿಲ್ಲ. ಅವನ ಕಣ್ಣಲ್ಲಿ ನೀರು ತುಂಬಿತು. ಜಿತೇನ್‌ದಾ ಅವನನ್ನು ಗೇಲಿ ಮಾಡುತ್ತ, "ಅಲ್ಲೋ, ಮುಚ್ಚಪ್ಪ, ಕ್ರಿಂಕಾರಿ ರಂಜನ್‌ದತ್ತ ಅನ್ನೋ ಅಷ್ಟು ದೊಡ್ಡ ಹೆಸರನ್ನು ಆ ಸಾಹೇಬ ಹೇಗೆ ಬರೆಯಲಿಕ್ಕ ಸಾಧ್ಯವೋ? ನೋಡು ಮತ್ತೆ, ಅಪ್ಪ ಅಮ್ಮ ಇಂಥ ವಿಚಿತ್ರ ಹೆಸರು ಇಟ್ಟಿರೋದರಿಂದಲೇ ಈಗ, ಪಾಪ, ನಿನಗೆ ಬಂದಿದ್ದ ಪ್ರೈಜ್ ಮಣ್ಣು ತಿಂದುಕೊಂಡು ಹೋಯಿತು. ಈಗ ಒಂದು ಕೆಲಸ ಮಾಡು. ನಾಳೆ ಬೆಳಗ್ಗೆ ಎದ್ದಿದ್ದೇ ಸೀದಾ ಕುಮಾರ ಸಾಹೇಬರನ್ನು ಹೋಗಿ ನೋಡು" ಎಂದ. ಅಮ್ಮ ಈ ಕತೆ ಕೇಳಿ ಚೆನ್ನಾಗಿ ನಗುತ್ತಾಳೆ ಅಂತ ಅಂದುಕೊಂಡಿದ್ದೆ. ಆದರೆ ಆದದ್ದು ಅದಕ್ಕೆ ವ್ಯತಿರಿಕ್ತವೇ. ನನಗೆ ಬಂದಿದ್ದ

ಫ್ರೈಜನ್ನು ಮಾರನೆಯ ದಿನವೇ ಖೋಕನ್‌ದಾಗೆ ಕೊಟ್ಟು ಬರಬೇಕಾಯಿತು. ನನ್ನ ಫ್ರೈಜೇ ಮಣ್ಣು ತಿಂದುಕೊಂಡು ಹೋದದ್ದು. ಅವನದಲ್ಲ. ರೊಜೇರಿಯೋ ಸಾಹೇಬರನ್ನು ನೋಡಿದೊಡನೆ ನನ್ನ ಈ ಅವಮಾನದ ಕತೆ ಜ್ಞಾಪಕಕ್ಕೆ ಬರುತ್ತದೆ.

ಅವತ್ತಿನಿಂದ ಅಣ್ಣ ನನ್ನ ಜತೆಯಲ್ಲಿ ಪಾರ್ಟನರ್ ಆಗಿ ಯಾವ ಆಟದಲ್ಲೂ ಭಾಗವಹಿಸಲು ಬರುತ್ತಿರಲಿಲ್ಲ. ಯಾವುದಾದರೊಂದು ನೆಪದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಅಷ್ಟೇಕೆ? ಅಣ್ಣನಿಗೆ ಆಟಪಾಟಗಳಲ್ಲೇ ಅಂಥದೇನೂ ಉತ್ಸಾಹವಿರಲಿಲ್ಲ. ಬ್ಯಾಡ್‌ಮಿಂಟನ್ ಒಂದು ಬಿಟ್ಟರೆ ಬೇರೆ ಯಾವ ಆಟವೂ ಅವನಿಗೆ ಸರಿಯಾಗಿ ಬರುತ್ತಿರಲಿಲ್ಲ. ಆದರೆ ಇದರಲ್ಲೂ ಅವನು ಯಾವ ಮ್ಯಾಚಿನಲ್ಲೂ ನನ್ನ ಪಾರ್ಟ್‌ನರ್ ಆಗಿ ಆಡಿಲ್ಲ. ಪ್ರೀತಿ, ಕನಿಕರ ಮತ್ತು ಪರೋಪಕಾರಗಳಲ್ಲಿ ಅವನ ದೃಢತೆಯಂತೂ ಅಪಾರವಾದುದು. ಅವನನ್ನು ಪೂರ್ತಿಯಾಗಿ ಅರಿಯಲು ಪ್ರಯತ್ನ ಮಾಡಲು ಸ್ವಲ್ಪ ದೂರದವರೆಗೂ ಹೋದರೆ ಎಲ್ಲೋ ಒಂದು ಕಡೆ ನಿಂತು ಹೋಗಬೇಕಾಗುತ್ತದೆ. ಅವನ ಹೃದಯ ನಮಗೆ ಇನ್ನು ಎಟುಕಲಾರದು ಅನ್ನಿಸುತ್ತದೆ. ಎಷ್ಟು ಹತ್ತಿರವೇ ಆದರೂ ಏಕೋ ಅಷ್ಟಷ್ಟು ದೂರ ಎಲ್ಲರಿಗಿಂತಲೂ ಬೇರೆಯಾಗಿ ಪೂರ್ತಿಯಾಗಿ ಸ್ವತಂತ್ರವಾಗಿದೆ, ಅವನ ವ್ಯಕ್ತಿತ್ವ. ಅವನ ಈ ಅಭಿಮಾನವನ್ನು ಈ ಇಪ್ಪತ್ತೊಂದು ವರುಷಗಳಲ್ಲಿ ಒಂದು ನೂರು ಸಲ ಮುರಿಯಲು ಯತ್ನಿಸಿದರೂ ಸಾಧ್ಯವಾಗಲಿಲ್ಲ.

ಬ್ಯಾರಕುಗಳಲ್ಲಿನ ವಾರ್ಡರುಗಳ ಭಜನೆ ಇನ್ನೂ ನಡೆದುಕೊಂಡು ಹೋಗುತ್ತಿದೆ. ಅಲ್ಲಿಂದ ಬರುತ್ತಿರುವ ಕೋಲಾಹಲದ ಸದ್ದಿನಿಂದ ಚೆನ್ನಾಗಿ ಕಳೆಕಟ್ಟಿರುವಂತೆ ಅನ್ನಿಸುತ್ತದೆ. ಈಗ "ಸೀಯಾರಾಮ್" (ಸೀತಾರಾಮ್) ನಾಮ ಕೀರ್ತನೆಯಲ್ಲ ಆಗುತ್ತಿರುವುದು. ಈಗ ಆಗುತ್ತಿರುವುದು "ನಾ... ರಾ... ಯ... ಣ..... ನಾ.... ರಾ.... ಯ.... ಣ ನಾ... ರಾ.... ಯ... ಣ.... ಅ" ಸಾಧಾರಣವಾಗಿ ಈ ನಾಮಕೀರ್ತನೆಯಾದ ಮೇಲೇ ಇಂಥ ಭಜನೆಗಳು ಕೊನೆಗಾಣುವುದು. ಜೈಲು ಸೂಪರಿಂಟೆಂಡೆಂಟರು ಈ ಬ್ಯಾರಕುಗಳ ಬದಿಯಲ್ಲೇ ವಾಸ ಮಾಡುತ್ತಿರುವುದು. ಪಾಪ, ಅವರು ಈ ಜನರ ವಿಕಟ ಅರಚಾಟವನ್ನು ಅರ್ಧ ರಾತ್ರಿಯವರೆಗೂ ಹೇಗೆ ಸಹಿಸಿಕೊಂಡಿರುತ್ತಾರೋ! ಬಹುಶಃ ವಾರ್ಡರುಗಳನ್ನು ದಂಡಿಸುವುದಕ್ಕೆ ಅವರಿಗೆ ಇಷ್ಟವಿಲ್ಲವೇನೋ! ಅವರುಗಳನ್ನು ಅಸಮಾಧಾನ ಮಾಡಿದರೆ ಯಾರಿಗೆ ನಷ್ಟ? ಅವರುಗಳ ಸಂಪೂರ್ಣ ಸಹಕಾರವಿಲ್ಲದಿದ್ದರೆ ಜೈಲನ್ನು ಸರಿಯಾಗಿ ಉಸ್ತುವಾರಿಯಲ್ಲಿಟ್ಟುಕೊಳ್ಳುವುದು ಅಸಾಧ್ಯವಾಗಿ ಹೋಗುತ್ತದೆ.

ಈ ಸಂದರ್ಭದಲ್ಲಿ ಹಿಂದೆ ನಡೆದ ಒಂದು ಸಂಗತಿ ನೆನಪಿಗೆ ಬರುತ್ತದೆ. ಎಷ್ಟು ದಿನಗಳ ಹಿಂದಿನದೋ! ಸ್ಲಿಪರ್ ಸಾಹೇಬ... ಬಡಕಲು ಬಡಕಲಾದ ಮೈಯುಳ್ಳ ಮುಂಗೋಪಿಯಾದ ಜಜ್ ಸ್ಲಿಪರ್ ಸಾಹೇಬ. ಜನರು ಅವನನ್ನು "ಅರೆ ಹುಚ್ಚ" ಅನ್ನುತ್ತಿದ್ದರು. ಈ ಮನುಷ್ಯ ವ್ಯಾಯಾಮಕ್ಕೆಂದು ಪ್ರತಿದಿನ ಕೊಡಲಿಯಿಂದ ಸೌದೆ ಕಡಿಯುತ್ತಿದ್ದ. ಹಿಂದೆ ಜರ್ಮನ್ ಸಮ್ರಾಟನಾಗಿದ್ದ ಕೈಸರ್‌ನಿಗೂ ಈ ಹುಚ್ಚು ಇತ್ತಂತೆ. ಕೋರ್ಟಿನ ನಾಜರನಾದ ಫಜಲೇ ಮಿಯಾ ಸಾಹೇಬನಿಗೆ, ಜಜ್ ಸಾಹೇಬರು ಹೀಗೆ ಒಡೆಯುತ್ತಿದ್ದ ಸೌದೆಗಳನ್ನು ತೆಗೆದು ತೆಗೆದು ಪೇರಿಸಿಡುವುದರಲ್ಲೇ

ಪ್ರಾಣ ಹೋಗುವ ಹಾಗಾಗುತ್ತಿತ್ತು. ವಕೀಲ ಬಜರಂಗ್ ಪ್ರಸಾದರ ಮಗಳ ಮದುವೆ ಸಮಯದಲ್ಲಿ ಆಗುತ್ತಿದ್ದ ಬಾಜಾ ಭಜಂತ್ರಿ (ಓಲಗ-ಮೇಳ)ಯನ್ನು ಸಹಿಸಲಾರದೆ ಈ ಸಾಹೇಬ ದೊಡ್ಡ ಕುರುಕ್ಷೇತ್ರವೇ ಮಾಡಿಬಿಟ್ಟ. ಆ ಓಲಗದ ಶಬ್ದದಿಂದ ತನ್ನ ಶಾಂತಿಗೆ ಭಂಗವಾಯಿತೆಂದು ಕನಲಿದ್ದೇ ಎದ್ದು ದೊಡ್ಡದೊಂದು ಲಾಠಿ ಕೈಲಿ ಹಿಡಿದು ಮದುವೆ ಮನೆಗೆ ನುಗ್ಗಿದ್ದೇ, ಮೇಳದವರ ಮುಂದೆ ಹೋಗಿ ಅವರ ಡೋಲಿನ ಮೇಲೆ ಲಾಠಿಯಿಂದ ಹೊಡೆದು ಅದರ ಚರ್ಮವನ್ನು ಛಿದ್ರ ಛಿದ್ರ ಮಾಡಿಬಿಡುವವರೆಗೂ ಅವನಿಗೆ ತೃಪ್ತಿಯಾದರೆ ತಾನೆ? ಮರುದಿನ ವಕೀಲ ಬಾಬುಗಳು ಜಜ್ ಸಾಹೇಬರ ವಿರುದ್ಧವಾಗೇ ಮೊಕದ್ದಮೆ ಹೂಡುವವರೆಗೂ ಹೋಗಿಬಿಟ್ಟರು. ಕೆಲವು ದಿನಗಳಾದ ಮೇಲೆ ಪರಸ್ಪರ ಮಾತುಕತೆಯಾಗಿ ಮೊಕದ್ದಮೆಯನ್ನು ವಾಪಸು ತೆಗೆದುಕೊಳ್ಳಬೇಕಾಯಿತು. ತಲೆ ಸ್ವಲ್ಪ ತಣ್ಣಗಾದ ಮೇಲೆ ವಕೀಲರು ನಿಧಾನವಾಗಿ ಯೋಚನೆ ಮಾಡಿದರು. ವಕಾಲತಿ ಮಾಡಿ ಹೊಟ್ಟೆ ಹೊರೆಯಬೇಕಾದ ತಾವು ಜಜ್ ಸಾಹೇಬರ ಸಂಗಡ ಹಗೆತನ ಕಟ್ಟಿಕೊಂಡರೆ ಬದುಕುವುದು ಹೇಗೆ ಅನ್ನಿಸಿರಬೇಕು. ಬಂಧು ಬಳಗಗಳು, ಬೀಗರು, ಅತಿಥಿಗಳು ಇವರೆಲ್ಲರ ಮುಂದೆ ಆದ ಅವಮಾನವನ್ನು ಇನ್ನು ಅಳಿಸಿ ಹಾಕುವ ಹಾಗಿಲ್ಲ. ಅದನ್ನು ಅಷ್ಟಕ್ಕೇ ಬಿಡದೆ ಇನ್ನೂ ಬೆಳೆಸಿಕೊಂಡು ಹೋಗುವುದು ಅವಿವೇಕ ಎಂದುಕೊಂಡು ತೆಪ್ಪಗಾಗಿ ಬಿಟ್ಟರು ವಕೀಲ ಬಾಬುಗಳು.

ನಮ್ಮ ದೇಶದ ಜನರನ್ನು ಮಾತ್ರ ಯಾಕೆ ಬೈಬೇಕು? ಎಲ್ಲ ದೇಶದ ಜನರೂ ಹಾಗೆಯೇ. ಈ ಇಂಗ್ಲಿಷ್ ಜನರು ನಮಗೆ ಯಾವುದರಲ್ಲಿ ಕಮ್ಮಿ? ಅವರೂ ನಮ್ಮಲ್ಲಿ ಎಷ್ಟೋ ಜನರಂತೆಯೇ ಬೂಟಾಟಿಕೆ ದಾಸಯ್ಯರೇ! ಅವರೂ "ಕಾರ್ಯವಾಸಿ" ಗಳಾದರೆ ಕತ್ತೆಯ ಕಾಲು ಹಿಡಿದುಕೊಳ್ಳುವುದಕ್ಕೂ ತಯಾರಾಗಿರುತ್ತಾರೆ. ಬಿಹಾರಿನಲ್ಲಿ ಕಾಂಗ್ರೆಸ್ ಪ್ರಭುತ್ವ ನಡೆಯುತ್ತಿದ್ದಾಗ ಜಿಲ್ಲಾ ಮ್ಯಾಜಿಸ್ಟ್ರೇಟ್ ವರ್‌ನನ್ ಸಾಹೇಬ ನಮ್ಮ ಆಶ್ರಮಕ್ಕೆ ಬಂದು ನಮ್ಮ ಜತೆಯಲ್ಲಿ ಅನ್ನ ತಿನ್ನಲು ಕೂತರು. ಮಿಸೆಸ್ ವರ್‌ನನ್ ಅನ್ನವನ್ನು ಹುಳಿಯಲ್ಲಿ ಕಲಸಿಕೊಂಡು ಬರಿಗೈಯಲ್ಲಿ ತುತ್ತನ್ನೆತ್ತಿ ಬಾಯಲ್ಲಿಟ್ಟುಕೊಳ್ಳುವುದಕ್ಕೆ ಅದೆಷ್ಟು ಹೆಣಗಿದರೋ! ಕೈಬೆರಳುಗಳನ್ನು ಚಮಚದಂತೆ ಜೋಡಿಸಿಕೊಂಡು, ಚಮಚದಲ್ಲಿ ಆಹಾರವನ್ನು ಎತ್ತುವಂತೆ ಕಲಸಿದ ಅನ್ನವನ್ನು ಎತ್ತಿ ಚಮಚವನ್ನು ಬಾಯಲ್ಲಿ ತೂರಿಸಿಕೊಳ್ಳುವಂತೆ ಅನ್ನದ ಸಮೇತ ಕೈಯನ್ನು ಬಾಯಲ್ಲಿ ತೂರಿಸಿಕೊಳ್ಳುತ್ತಿದ್ದರೆ ನಮಗೆಲ್ಲ ನಗು ತಡೆಯುವುದಕ್ಕಾಗಲಿಲ್ಲ. ಏಕೆಂದರೆ ಅವರ ಬಾಯ ಮೇಲೆಲ್ಲ ಹುಳಿಯನ್ನದ ಅಗುಳುಗಳು ಅಂಟಿಕೊಂಡು ಬಿಟ್ಟಿದ್ದುವು. ಏನೇನೋ ನೆಪ ಮಾಡಿಕೊಂಡು ವರ್‌ನನ್ ಸಾಹೇಬರು ಆಗಾಗ ಆಶ್ರಮಕ್ಕೆ ಬರುತ್ತಲೇ ಇದ್ದರು. ಖದ್ದರ್ ಮತ್ತು ಗಾಂಧಿ ಟೋಪಿಯ ಮೇಲೆ ಅವರಿಗೆ ಅದೇನು ಶ್ರದ್ಧೆ! ಈ ಸಾಹೇಬರ ಮಗಳು ಒಂದು ಮುಂಗುಸಿಯನ್ನು ಸಾಕಿದ್ದಳು. "ಮುಂಗುಸಿ ನಮ್ಮ ಮನೆಯಲ್ಲಿ ಸುಮ್ಮನೆ ತೊಂದರೆ ಕೊಡುತ್ತದೆ. ನಿಮ್ಮ ಆಶ್ರಮದಲ್ಲಿ ಯಾಕೆ ಇಟ್ಟುಕೊಳ್ಳಬಾರದು" ಎಂದು ಹೇಳಿ ಅದನ್ನು ಅಣ್ಣನಿಗೆ ಒಪ್ಪಿಸಿದರು. ಅದನ್ನು ಅಣ್ಣ ಆಶ್ರಮದ ಹೊರಗೆ ಕಟ್ಟಿ ಹಾಕಿದ್ದ. ಅದನ್ನು ನೋಡಿಕೊಂಡು ಹೋಗುವ ನೆಪದಲ್ಲಿ ಮ್ಯಾಜಿಸ್ಟ್ರೇಟ್ ದಂಪತಿ ಮಗಳೊಂದಿಗೆ

ಆಗಾಗ ಸಮಯಾಸಮಯವೆನ್ನದೆ ಆಶ್ರಮಕ್ಕೆ ಬರುತ್ತಲೇ ಇದ್ದರು. "ಮಗಳು ರಿಕಿ (Ricky) ಯನ್ನು ತುಂಬಾ ನೆನಸಿಕೊಳ್ಳುತ್ತಾಳೆ. ಅದಕ್ಕೇ ಬಂದೆವು" ಎಂದು ಹೇಳುತ್ತಿದ್ದರು. ಆಮೇಲೆ ಅವರೆಲ್ಲ ರಿಕಿಯ ಬಳಿ ಹೋಗಿ ಮಗುವನ್ನು ಮುದ್ದಾಡುವ ಹಾಗೆ ಮುದ್ದು ಮಾತುಗಳಾಡುತ್ತ ಅದೇನು ಲಲ್ಲೆ ಮಾಡುತ್ತಿದ್ದರೋ!

ನನ್ನ ಯೋಚನಾ ಸರಣಿಯನ್ನು ಕತ್ತರಿಸಿ ಹಾಕುತ್ತ, ಸುತ್ತ ಕವಿದಿದ್ದ ಮಬ್ಬನ್ನೂ, ಮೌನವನ್ನೂ ಚದರಿಸುತ್ತ ಟವರಿನ ಗಡಿಯಾರ ಹನ್ನೆರಡು ಗಂಟೆ ಹೊಡೆಯಿತು. ಡಾಕ್ಟರರ ವಸತಿಯಲ್ಲಿದ್ದ ನಾಯಿಯೊಂದು "ಬೌ ಬೌ" ಎಂದು ಬೊಗಳತೊಡಗಿತು. ಪಾಪ, ಅದೇನು ಮಾಡೀತು? ಅದರ ಸುಖ ನಿದ್ರೆಯು ಒಡೆದುಹೋಗಿದೆ. ಈ ಕಡೆ "ಹೋ.. ಓ ಹೈ" ಎಂದು ಅರಚುತ್ತ ಖಂಜನಿ, ಡೋಲುಗಳಿಂದ ಶಬ್ದ ಮಾಧುರ್ಯವನ್ನು ಕೊಲೆ ಮಾಡುತ್ತ ನಡೆಸುತ್ತಿದ್ದ ವಾರ್ಡರುಗಳ "ಭಜನೆ" ಕೊನೆಗೊಂಡಿತು. ಇವರೇನು ಹಾಗಾದರೆ ಗಂಟೆ ನೋಡಿಕೊಂಡು ಸರಿಯಾಗಿ ಹನ್ನೆರಡರವರೆಗೂ ಈ ಗಲಾಟೆ ನಡೆಸುತ್ತಿರುತ್ತಾರೇನು?

ಆಶ್ರಮದಲ್ಲಿ ಅಪ್ಪನು ಮಾಡುತ್ತಿದ್ದ ಭಜನೆಯಂತೂ ಸರಿಯಾಗಿ ಎಂಟು ಗಂಟೆಗೇ ಮುಗಿದುಹೋಗುತ್ತಿತ್ತು. ಮಹಾತ್ಮಾ ಗಾಂಧಿಯವರ ಅತಿ ಪ್ರಿಯವಾದ "ರಘುಪತಿ ರಾಘವ ರಾಜಾರಾಮ್, ಪತಿತ ಪಾವನ ಸೀತಾರಾಮ್" ಎಂಬ ಭಜನೆಯು ಕಟ್ಟ ಕಡೆಯಲ್ಲಿ ಹಾಡಲ್ಪಡುತ್ತಿತ್ತು. ಆಶ್ರಮದಲ್ಲಿರುತ್ತಿದ್ದ ಕಾಂಗ್ರೆಸ್ ಕರ್ಮಚಾರಿಗಳೆಲ್ಲ ಭಜನೆಯಲ್ಲಿ ಸೇರಿಕೊಳ್ಳುತ್ತಿದ್ದರು. ಇದರಿಂದ ಅಪ್ಪನಿಗೆ ಸಂತೋಷವಾಗುವುದೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು. ನಿಜವಾಗಿ ಅಪ್ಪನ ಭಜನೆಯ ಹುಚ್ಚು ಈ ಪ್ರಾಂತ್ಯದ ಜನರಿಗೆಲ್ಲ ಗೊತ್ತು. ಮೀಟಿಂಗ್ ಹಾಲಿನಲ್ಲಿ ಭಜನೆ ನಡೆಯುತ್ತಿದ್ದುದು. ಸಿಮೆಂಟಿನ ನೆಲ, ಮಣ್ಣಿನ ಗೋಡೆಗಳು, ಜೊಂಡು ಹುಲ್ಲಿನ ಛಾವಣಿ. ಗೋಡೆಗಳನ್ನು ಅಮ್ಮನು ಕೈಯಾರೆ ಸಗಣಿಯಿಂದ ಸಾರಿಸಿ ಶುಭ್ರವಾಗಿಡುತ್ತಿದ್ದಳು. ಗೋಡೆಗಳ ನಡುವೆ ಸಣ್ಣ ಸಣ್ಣ ಕಿಟಕಿಗಳು. ಎಲ್ಲೂ ಕಪಾಟುಗಳಿಲ್ಲ. ಗೋಡೆಗಳ ಮೇಲುಭಾಗದಲ್ಲಿ ಸಾಲುಸಾಲಾಗಿ ರಾಜಕೀಯ ಮುಖಂಡರ ಪಟಗಳು. ಒಂದು ಕಡೆ ಎರಡು ರಾಷ್ಟ್ರೀಯ ಧ್ವಜಗಳು ಕ್ರಾಸಿನ ಆಕಾರದಲ್ಲಿ ಅಂಟಿಸಲ್ಪಟ್ಟಿದ್ದುವು. ಅದರ ಮೇಲುಗಡೆ ಕೆಂಪು ಶಾಲಿನ ಮೇಲೆ ಬಿಳಿಯ ಹತ್ತಿಯಿಂದ "ಸ್ವಾಗತಮ್" ಎಂದು ಬರೆಯಲ್ಪಟ್ಟಿದೆ. ಅದರ ಕೆಳಗಡೆ ಗಾಂಧೀಜಿಯವರ ದೊಡ್ಡ ಪಟವೊಂದಿದೆ. ಹಾಲಿನ ಪೂರ್ವ ಮತ್ತು ಉತ್ತರ ದಿಕ್ಕಿನ ಭಾಗಗಳು ಸ್ವಚ್ಛವಾಗಿಡಲ್ಪಟ್ಟಿಲ್ಲ. ಸೋಡಾಪುಡಿ ಕಬ್ಬಿಣದ ತಟ್ಟೆಗಳು ಮತ್ತು ಬಟ್ಟೆಯೊಗೆಯುವ ಸಾಬೂನನ್ನು ತಯಾರು ಮಾಡಲು ಉಪಯೋಗಿಸುವ ಸಾಮಾನು ಸರಂಜಾಮುಗಳುಳ್ಳ ಮರದ ಹಲಗೆಯ ಮುಚ್ಚಳವಿರುವ ಅತಿ ದೊಡ್ಡ ಪೆಟ್ಟಿಗೆಯೊಂದು ಇಲ್ಲಿತ್ತು. ಈ ಪೆಟ್ಟಿಗೆಯನ್ನು ಫೂಲ್ ವಾಹಾದ ನಂದಲಾಲ್ ತಿವಾರಿಯವರು ನಮ್ಮ ಜಿಲ್ಲಾ ಕಾಂಗ್ರೆಸಿಗೆ ಕೊಟ್ಟಿದ್ದರು. ಒಂದು ಮೂಲೆಯಲ್ಲಿ ಹತ್ತಿ ಹಿಂಜುವ ಧನೂಕ್ (ಬಿಲ್ಲು ಮತ್ತು ಕಮಾನು) ಒಂದು ಗೋಡೆಗೆ ಒರಗಿಸಲ್ಪಟ್ಟಿದೆ. ಬೆಳಗ್ಗೆ ಹೊತ್ತು ಇವುಗಳಿಂದ ಚರಖಾ ಹತ್ತಿಯನ್ನು ಹಿಂಜಿ ಹಂಜಿಗಳಾಗಿ ಮಾಡಲಾಗುತ್ತದೆ. ಆಶ್ರಮದ ಭಜನೆಯು "ದೇಶೇರ್ ಛೇಲೇ ಗಾಂಧೀಜಿಕೆ ಚಿನ್‌ಲೀನಾರೆ ಜಾನಲೀನಾ" (ನಾಡಿನ ಮಕ್ಕಳು ಗಾಂಧೀಜಿಯನರಿ

ಯಲಿಲ್ಲವೇಕೆ, ಅನುಸರಿಸಲಿಲ್ಲವೇಕೆ) ಎಂಬ ಹಾಡಿನಿಂದ ಶುರುವಾಗುತ್ತಿತ್ತು. ಈ ಹಾಡನ್ನು ಅಪ್ಪನೇ ಸ್ವತಃ ರಚಿಸಿದ್ದರು. ಅಮ್ಮನು ಈ ಸಮಯದಲ್ಲಿ ತಟ್ಟೆಯೊಂದರಲ್ಲಿ ಧೂಪ ಹತ್ತಿಸಿಕೊಂಡು ಪ್ರವೇಶಿಸುವಳು. ಗಾಂಧೀಜಿಯ ಪಟಕ್ಕೆ ಒಂದು ಹೂಮಾಲೆ ಹಾಕಿ ಧೂಪದ ತಟ್ಟೆಯನ್ನು ಅದರ ಮುಂದುಗಡೆ ನೆಲದ ಮೇಲಿಟ್ಟು ಕೈ ಜೋಡಿಸಿಕೊಂಡು ಸ್ವಲ್ಪ ದೂರದಲ್ಲಿ ಗಂಭೀರವಾಗಿ ಕೂಡುವಳು. ಅಪ್ಪ ಲಾಟೀನಿನ ದೀಪವನ್ನು ಸ್ವಲ್ಪ ಕೆಳಗಿಳಿಸಿ ಭಜನೆಯ ಹಾಡಿನ ಶ್ರುತಿ ಹಿಡಿಯುವರು. ಸಹದೇವನೂ ಮತ್ತು ಇತರರೂ ಈ ಬಂಗಾಳೀ ಹಾಡನ್ನು ವಿಕೃತ ಉಚ್ಚಾರಣೆಯಿಂದ ಹಾಡ ತೊಡಗುವರು. ಮೊದಲನೆಯ ಹಾಡು ಮುಗಿಯುವುದು. ಅಮ್ಮ ಎದ್ದು ನಿಂತು ಭಕ್ತಿಯಿಂದ ಪ್ರಣಾಮ ಮಾಡುವಳು. ಇಷ್ಟು ಮಂದಿಯ ಊಟ, ತಿಂಡಿಯ ವ್ಯವಸ್ಥೆ ಆಕೆಯೇ ಮಾಡಬೇಕಾಗುತ್ತದೆ. ಭಜನೆಯಲ್ಲಿ ಕೂತುಕೊಂಡಿದ್ದರೆ ಅಡಿಗೆ ಮಾಡುವವರು ಯಾರು ? ನಾನೂ, ಅಣ್ಣನೂ ಚಿಕ್ಕ ವಯಸ್ಸಿನಲ್ಲಿದ್ದಾಗ ಭಜನೆಯಲ್ಲಿ ಕೂಡುತ್ತಿದ್ದೆವು. ಮುಂಜಿಯಾದ ಮೇಲೂ ಕೆಲವು ದಿನ ಕೂಡುತ್ತಿದ್ದೆವು. ಅಣ್ಣ ಭಜನೆಯಲ್ಲಿ ಭಾಗವಹಿಸುವುದನ್ನು ಬಿಟ್ಟ ಕೆಲವು ದಿನಗಳನಂತರ ನಾನೂ ಬಿಟ್ಟು ಬಿಟ್ಟೆ. ಆಗ ಅಮ್ಮ ಎಷ್ಟು ಅತ್ತು ಗೋಳಾಡಿದಳೋ. "ನೀವು ಬರದೇ ಹೋದರೆ ಅವರಿಗೆ ತುಂಬ ದುಃಖವಾಗುತ್ತೆ ಕಾಣಿರೋ. ನಿಮಗೆ ಮನಸ್ಸಿಲ್ಲದೆ ಹೋದರೂ ಅವರ ತೃಪ್ತಿಗಾದರೂ ಹೋಗಿ ಕೂಡುವುದಕ್ಕೇನಿರೋ ?" ಎನ್ನುವಳು. ಅಣ್ಣ ಅದಕ್ಕೆ ಯಾವ ಉತ್ತರವನ್ನೂ ಕೊಡುತ್ತಿರಲಿಲ್ಲ. ಅಣ್ಣ ಮನೆಯಲ್ಲಾಗುವ ಭಜನೆಯಲ್ಲಿ ಕೂಡದಿದ್ದರೂ ಕಾಂಗ್ರೆಸ್ ಪ್ರಚಾರಕ್ಕಾಗಿ ಹಳ್ಳಿಗಳಿಗೆ ಹೋದಾಗ, ದೊಡ್ಡ ದೊಡ್ಡ ಗ್ರಾಮಗಳಲ್ಲಿ ಮುಖ್ಯಸ್ಥರು ಕೆಲವರು ನಮ್ಮ ಸಂತೋಷಕ್ಕಾಗಿ ಭಜನೆ ಕೂಟ ಸೇರಿಸುತ್ತಿದ್ದರು. ನಮ್ಮ ತಂದೆ ಹೋದಾಗ ಅವರು ಹೀಗೆ ಭಜನೆ ಏರ್ಪಾಡು ಮಾಡುವುದು ವಾಡಿಕೆಯಾಗಿತ್ತು. ಅದಕ್ಕಾಗಿ ಮಾಸ್ಟರ್ ಮಹಾಶಯರ ಮಕ್ಕಳು ಬಂದಾಗಲೂ ಈ ಜನರು ಈ ಮರ್ಯಾದೆ ಸಲ್ಲಿಸುತ್ತಿದ್ದರು. ಈ ಭಜನೆಗಳಲ್ಲಿ ಅಣ್ಣ ಮಾತ್ರ ಯಾವ ಬೇಜಾರನ್ನೂ ತೋರಗೊಡುತ್ತಿರಲಿಲ್ಲ. ನಾನೇನಾದರೂ ಬೇಸರ ತೋರಿಸಿದಾಗ ಕಣ್ಣು ಸನ್ನೆ ಮಾಡಿ ಸುಮ್ಮನೆ ಕೂಡೆಂದು ಹೇಳುತ್ತಿದ್ದ.

ಬಾಯಿಸೀ ಥಾಣೆಯ ಬಾಗ್ ಹಾ ಸಂತೆಯಲ್ಲಿ ಮೀಟಿಂಗ್ ಆಯಿತು. ಶುರು ಮಾಡಿದಾಗ ಜನ ಇನ್ನೂ ಸೇರಿರಲಿಲ್ಲ. ಸಹದೇವನು ಕಾಂಗ್ರೆಸ್ ಧ್ವಜವನ್ನು ಮಣ್ಣಲ್ಲಿ ನೆಟ್ಟು "ಇಂಕಿಲಾಬ್ ಜಿಂದಾಬಾದ್" "ಗಾಂಧೀಜಿ ಕೀ ಜೈ" ಎಂದು ಎಷ್ಟು ಬಾರಿ ಕೂಗಿ ಆಯಿತೋ! ನಗಾರಿ ಬಾರಿಸುವುದು, ಗಂಟೆ ಹೊಡೆಯುವುದು ಮುಂತಾದ ಕೆಲವು ಉಪಾಯಗಳನ್ನೆಲ್ಲ ಸಾಧಾರಣವಾಗಿ ಸಂತೆ ಜಾತ್ರೆಗಳಲ್ಲಿ ಜನರನ್ನು ಸೇರಿಸುವುದಕ್ಕೆ ಮಾಡುವ ಹಾಗೆ ಮಾಡಿಯೂ ಆಯಿತು. ಆದರೂ ಮಂದಿ ಬರವೊಲ್ಲರು. ಆಗ ಆ ಸ್ಥಳದ ಕಾಂಗ್ರೆಸ್ ಕರ್ಮಚಾರಿಯಾದ ರಾಮದತ್ತ ಮಂಡಲ್ ಗೊಲ್ಲರ ಭಜನಾ ಕೂಟವನ್ನು ಬರ ಮಾಡಿದರು. ಅದರೊಂದಿಗೆ ಒಂದೇ ಮೆಟ್ಟಲಿರುವ (single reed) ಹಾರ್ಮೋನಿಯಮ್ ಸಹ ತರಿಸಿದರು. ಹತ್ತೇ ನಿಮಿಷಗಳೊಳಗೆ ಇಡೀ ಸಂತೆಯ ಜನರಲ್ಲ ಇಲ್ಲಿ ಬಂದು ಸೇರಿಬಿಟ್ಟರು. ಆಮೇಲೆ ನಾವು ಬೇಗ ಬೇಗ ನಮ್ಮ ನಮ್ಮ ಭಾಷಣಗಳನ್ನು ಕೊಡಲು ತೊಡಗಿದೆವು. ಆ

ಜನರು ಸಂತೆಯ ವ್ಯವಹಾರದಲ್ಲಿ ಮಗ್ನರಾಗಿದ್ದರು. ಹುಳಕಡ್ಡಿಯ ಮುಲಾಮಿನ ಕ್ಯಾನ್‌ವಾಸರ್ ಮಾಡುವ ಭಾಷಣಕ್ಕೂ ಮಹಾತ್ಮಾಗಾಂಧಿಯ ಶಿಷ್ಯರು ಮಾಡುವ ಭಾಷಣಕ್ಕೂ ನಡುವೆ ಯಾವ ವ್ಯತ್ಯಾಸವನ್ನೂ ಈ ಜನ ಕಾಣುತ್ತಿರಲಿಲ್ಲ. ಹೇಗೂ ಸಂತೆಗೆ ಬಂದಿದ್ದಾಗಿದೆ. ಅಲ್ಲಿನ ಇತರ ತಮಾಷೆಗಳ ಜತೆಗೆ ಗಾಂಧೀ ತಮಾಷೆಯನ್ನು ಒಂದೆರಡು ನಿಮಿಷ ನೋಡಿದರೆ ನಷ್ಟವೇನು ? ಅವರಲ್ಲಿ ಎಷ್ಟೋ ಜನ ಮಹಾತ್ಮಾ ಗಾಂಧಿಯನ್ನು 'ಉಪ್ಪಿನ ಸತ್ಯಗ್ರಹ'ಕ್ಕೆ ಮೊದಲೇ ನೋಡಿಬಿಟ್ಟಿದ್ದಾರೆ. ಈಗ ಈ ಚಿಗುರು ಮೀಸೆಯ ಹುಡುಗರು ಹೊಸದಾಗಿ ಏನು ಹೇಳುತ್ತಾರೋ ಕೇಳೋಣವೆಂಬ ಕುತೂಹಲ. ಆದರೆ ಇವರು ಏನೇನೋ ಹೇಳುತ್ತಿದ್ದಾರೆ. ಅದರಲ್ಲಿ ಹದಿನೈದಾಣೆ ಭಾಗ ಅರ್ಥವೇ ಆಗುವುದಿಲ್ಲ. ನಮ್ಮ ಗ್ರಾಮದಲ್ಲಿ ಕಾಲ್ನಡೆಗಳು ಮೇಯುವುದಕ್ಕೆ ದೊಡ್ಡ ಹುಲ್ಲುಗಾವಲನ್ನು ಏರ್ಪಾಡು ಮಾಡುತ್ತಾರೇನು ? ಕಂದಾಯದ ದರ ಇಳಿಸುತ್ತಾರಾ ? ತಹಶೀಲ್‌ದಾರರ, ಪಂಚಾಯತಿ ಅಧ್ಯಕ್ಷರ ಎಮ್ಮೆ ತಮ್ಮ ಜಮೀನುಗಳಿಗೆಲ್ಲ ನುಗ್ಗಿ ಫಸಲನ್ನು ತಿಂದುಹಾಕಿ ಹೋಗುತ್ತದೆ. ಅದನ್ನು ನಿಲ್ಲಿಸಲಿ. ನಮಗೆ ಸಂತೋಷವಾಗುತ್ತದೆ. ಅದೆಲ್ಲ ಎಲ್ಲಿ ? ಬರೇ ಕಾಂಗ್ರೆಸಿಗೆ "ನಂಬರು ದಾರ"ರನ್ನ ಕೂಡಿಸಿ ಚಂದಾ ವಸೂಲು ಮಾಡುವುದಕ್ಕೆ ಇದೆಲ್ಲ ಆಟ. ಮಂತ್ರಿಗಳು ಗದ್ದುಗೆ ಮೇಲೆ ಕೂತು ಕಂದಾಯದ ಬಾಕಿ ವಸೂಲಿಗೆ ಕಾನೂನು ಮಾಡಿದ್ದಾರೆ. ಅಲ್ಲ, ಸಂತೆಯಲ್ಲಿ ಭಾಷಣ ಮಾಡಲಿಕ್ಕೆ ಬರುತಾರೆ. ಇವರಲ್ಲಿ ಯಾರೂ ನಾಲ್ಕಾಣೆಗಿಂತ ಹೆಚ್ಚಾಗಿ ದರಖಾಸ್ತಿ (ಅರ್ಜಿ)ನಲ್ಲಿ ಖರ್ಚಿಗೆ ಬರುವುದಿಲ್ಲ. ಖರ್ಚಾಗುವುದು ಅದರ ಇಪ್ಪತ್ತರಷ್ಟು. ಅರ್ಧದಷ್ಟು ಜನರ ದರಖಾಸ್ತು ವಜಾ ಕೂಡ ಆಗಿಹೋಯಿತು. ಮಹಾತ್ಮ ಗಾಂಧಿಯ ಚೇಲಾ (ಶಿಷ್ಯ) ಪುಣ್ಯಾ ದೇವಜೀ ಹತ್ತಿರ ದರಖಾಸ್ತು ಕೊಡಲು ಹೋಗಿದ್ದರೆ ಅದರ ಮೆಹನತ್ತು ಮಾಡಲಿಕ್ಕೆ ಎಂಟಾಣೆ ವಸೂಲು ಮಾಡಿದ್ದರು. ಇವರೆಲ್ಲ ಅಷ್ಟೇ. ಕೆಲಸಕ್ಕೆ ಬಾರದ ಜನ. ಮಾಸ್ತರ್ ಜೀ ಒಬ್ಬರೇ ಬೇರೆ ತರಹ. ಅಂಥವರೊಬ್ಬರಿದ್ದಾರೆ ಅಂತಲೇ ಈ ಜಿಲ್ಲೆಯಲ್ಲಿ ಗಾಂಧೀಜಿಯವರ ಕೆಲಸ ಸ್ವಲ್ಪ ನಡೆದುಕೊಂಡು ಹೋಗುತ್ತದೆ. ಉಳಿದವರೆಲ್ಲ ಪಕ್ಕಾ ಠಕ್ಕರು. ನಿಜವಾಗಿ ಈ ಕಾಂಗ್ರೆಸ್ ಸಂಸ್ಥೆಯೇ ಪೂರ್ತಿಯಾಗಿ ಹಣವಂತರಾದ ರೈತರ ಕೈಯಲ್ಲಿದೆ. ಈ ಜನರು ಜಮೀನುದಾರರ ಶೋಷಣೆಯಿಂದ ಬಿಡುಗಡೆಯಾಗಲು ಬಯಸುತ್ತಾರೆ. ಆದರೆ ತಾವೇ ತಮ್ಮ ತಮ್ಮ ಸೀಮಿತ ಕ್ಷೇತ್ರಗಳಲ್ಲಿ ಗುತ್ತಿಗೇದಾರರ, ಮತ್ತು ಇತರ ಸಣ್ಣ ಪುಟ್ಟ ಬಡರೈತರೂ ಅಲ್ಲದೆ ದಿನಗೂಲಿಯವರ ಮೇಲೆ ದಬ್ಬಾಳಿಕೆ ಮಾಡುವುದನ್ನು ನಿಲ್ಲಿಸಲು ಇಷ್ಟವಿಲ್ಲ. ಕಾಂಗ್ರೆಸ್ ಮಂತ್ರಿಮಂಡಲ ಆಡಳಿತ ಮಾಡುವಾಗ ಆಸ್ತಿಪಾಸ್ತಿ ಇಲ್ಲದ ಬಡ ರೈತರ ಮೇಲ್ಮೆಗೆಂದು ಎಷ್ಟು ಕಾನೂನು, ನಿಬಂಧನೆಗಳನ್ನು ತಯಾರು ಮಾಡಿದ್ದರೋ ! ಎಲ್ಲವನ್ನೂ ಈ ಜನರು ತಮ್ಮ ಕುತಂತ್ರದಿಂದ ವ್ಯರ್ಥ ಮಾಡಿಬಿಟ್ಟಿದ್ದಾರೆ. ಸಹದೇವನಂಥ ನುರಿತ ಕಾಂಗ್ರೆಸ್ ಕರ್ಮಚಾರಿಯೂ ಸಹ ಗೇಣಿದಾರರ ಖಾಯಂ ಸ್ವತ್ವವನ್ನು ರದ್ದು ಮಾಡುವಂಥ ಸುಳ್ಳು ದಸ್ತಾವೇಜೊಂದನ್ನು ತಯಾರು ಮಾಡಿದ್ದಾನಲ್ಲ !

ದಹಿಭಾತ್ ಗ್ರಾಮದ ಆ ಮಧ್ಯವಯಸ್ಕ ಹೆಂಗಸಿನ ಗತಿ ಏನಾಯಿತು ಅನ್ನುವುದು ಇನ್ನೂ ಜ್ಞಾಪಕ ಇದೆ. ಅವಳು ಆಗಾಗ ಕಾಂಗ್ರೆಸ್ ಆಫೀಸಿಗೆ ಬರುತ್ತಲೇ ಇದ್ದಳು.

ಅವಳ ಕತ್ತಿನಲ್ಲಿ ಎಷ್ಟು ದೊಡ್ಡ ಗಲಗಂಡ ಇತ್ತು! ಬಂದು ಸುಮ್ಮನೆ ಅಳುತ್ತಾ ಕೂಡುತ್ತಿದ್ದಳು. ಅಣ್ಣನಿಗೆ, "ನೀವಲ್ಲದೆ ಬೇರೆ ಯಾರೂ ಇದನ್ನು ಬಂದೋಬಸ್ತು ಮಾಡಲಿಕ್ಕೆ ಆಗೋದಿಲ್ಲ" ಎಂದು ಹೇಳುತ್ತಿದ್ದಳು. "ಅಲ್ಲಾ, ಆಕಾಶದಾಗೆ ಇನ್ನೂ ಚಂದ್ರ, ಸೂರ್ಯ ಇರೋವಾಗಲೂ ನನ್ನ ಮೇಲೆ ಇಂತಾ ಜುಲುಮು! ನೋಡಿದಿರಾ ನೀವೇ? ನಿಮ್ಮ ಸಹದೇವಪ್ಪ ಇದಾನಲ್ಲ ಅವನಣ್ಣನೇ.... ಅದೇ ಏನಂತಾರೆ ಅವನಿಗೆ? ಕಪಿಲದೇವ? ಹ್ಞಾ ಅವನೇ. ನನಗೆ ಇದ್ದಬದ್ದ ಆ ತುಕಡಾ ಜಮೀನನ್ನೂ ನುಂಗಿ ಹಾಕಬೇಕು ಅಂತ ಕುಂತವನೇ! ಅವರಜ್ಜನ ಮನೆ ಗಂಟಲ್ಲವಾ! ಒಂದಲ್ಲ, ಎರಡಲ್ಲ.... ಐವತ್ತು... ಐವತ್ತು ಬಿಘಾ ಹೊಲ! ಅವರ ಮನೆ ಹತ್ತಿರ ಅಲ್ಲವಾ ಜಮೀನು? ಅರೇ ಮಾಂದಾತಾ*ತಂಬಾಕು ಹೆಂಗೆ ಬೆಳೀತಾದೆ ಜಮೀನಲ್ಲಿ! ಅದಕ್ಕೆ ಅಲ್ಲವಾ ಅವನಿಗೆ ಇದರ ಮೇಲೆ ಕಣ್ಣು? ನನ್ನ ಗಂಡ ಗಾಣಿಗರವನಲ್ಲವಾ? ಎಂತಾ ಪ್ರಾಯದ ಮಗ ಇದ್ದ.... ಅವರಪ್ಪ ಇದ್ದಾಗಲೇ ದೇವರು ಕರಕೊಂಡು ಬಿಟ್ಟ. ಅವನ ಹೆಂಡತಿ ನನ್ನ-ಸೊಸೆಗೆ ಆಗ ಹೊಟ್ಟೇಲಿ ಕೂಸು. ಒಂದು ವರುಷ ಕೂಡ ಆಗಿಲ್ಲ ಮಗ ಹೋಗಿ, ಅವರಪ್ಪನೂ ಹೋದ ಅವನ ಹಿಂದೇನೆ. ಇನ್ನು ನಾನು ಯಾಕೆ ಇರಬೇಕು ಅಂತ ಸೊಸೆ ಕೂಡ ಅವನ ದಾರಿ ಹಿಡಿದಳು ನನ್ನ ಗ್ರಹಚಾರಕ್ಕೆ. ಇಷ್ಟೂ ಸಾಲದು ಅಂತ ಆ ಸಣ್ಣ ಕೂಸಿಗೂ ವಾಯು ಹಿಡೀಬೇಕಾ ಹೇಳಿ ನೀವೇ? ಇಪ್ಪತ್ತನಾಲ್ಕು ಗಂಟೇನೂ ಅಜ್ಜಿ ಹೆಗಲಿಗೇ ಅಂಟಿಕೊಂಡಿರಬೇಕು ಅದಕ್ಕೆ. ಏನೇನು ಔಷಧಿ ಕೊಡಿಸಿದ್ದೇನೋ... ಏನೂ ಆಗಲಿಲ್ಲ. ಸೂಜಿ ಚುಚ್ಚಿಸೋಣ ಅಂದರೆ ಕೂಸಿಗೆ ನೋವು ತಡೆಯೋಕೆ ಆಗತಾದಾ ಅಂತ ಚುಚ್ಚಿಸಲಿಲ್ಲ. ಚುಚ್ಚಿಸಿದ್ದರೆ ವಾಸಿ ಆಗತಾ ಇತ್ತೇನೋ! ಇನ್ನೂ ಬದುಕತಾ ಇತ್ತೇನೋ. ಇಲ್ಲ ಆಗಲಿಲ್ಲ. ನನ್ನ ಹಣೆಯಾಗಿ ಬರೆದಿಲ್ಲ. ಅದು ಹೋಯಿತು ನೋಡಿ. ಅದರ ಜತೇಲೆ ನಮ್ಮ ಕೇರಿಯವನೇ ಆ ಗೋರೇ ಗೋಪನ ಮಗು ಕೂಡ ಹಂಗೇ ಸಾಯಬೇಕಾ? ಅದರ ಹಣೇಬರಾ ಹಂಗಿರಬೇಕಾದರೆ ಯಾರೇನು ಮಾಡಾಕಾಗತದೆ ಹೇಳಿ. ಈ ನಿಮ್ಮ ಇವನಿದಾನಲ್ಲ ಅದೇ ಈ ಕಪಿಲದೇವ ಊರಿನ ಪಂಚಾಯತಿ ಮುಂದೆ ನನ್ನ ಮೇಲೆ ದೂರು ಕೊಟ್ಟವನೆ. ಏನಂತ ಗೊತ್ತಾ? ನಾನು ಮಾಟ ಮಾಡಿ ಆ ಕೂಸನ್ನು ಕೊಂದೆ ಅಂತ... ಕೇಳಿದಿರಾ... ಎಂತಾ ಮಾತು? ನನ್ನ ಮನೇವರನ್ನೆಲ್ಲ ಮುಗಿಸಿಬಿಟ್ಟು ಈಗ ಗೋರೇ ಗೋಪನ ಮಗೀಗೂ 'ಬಾಣ'ಬಿಟ್ಟು ಮುಗಿಸಿಬಿಟ್ಟೆ. ಅಂತಾನೆ.... ಆಹಾಹಾ! ಅರೇ ಬೇಕೂಫಾ, ಇಷ್ಟು ಗೊತ್ತಾಗಕಿಲ್ಲವೇನೋ? ನಾನು ಆಗಲೇ ನನ್ನ ಗಂಡ, ಮಗ, ಸೊಸೆ ಮೊಮ್ಮಗು ಎಲ್ಲಾ ನುಂಗಿ ಹಾಕಿರಬೇಕಾದರೆ ಇನ್ನೂ ನನ್ನ ಹೊಟ್ಟೇಲಿ ಜಾಗ ಹೆಂಗೋ ಇರತಾದ? ಆಮೇಲೆ ನನ್ನ ಆ ಊರಿನಿಂದ ಓಡಿಸಿಬಿಡಬೇಕು ಅಂತ ಅವನ ಮಾತು ಕೇಳಿ ಅವತ್ತಿನ ರಾತ್ರೀನೆ ಈ ರಾಧೋ, ಶನೀಚರಿ, ಭೇದಿ.... ಇವರೆಲ್ಲ ಸೇರಿ ನನ್ನ ಪಟ್ಟೀಗೆ ಬೆಂಕಿ ಹಚ್ಚಿ ಬೂದಿ ಮಾಡಿಬಿಟ್ಟರು. ನೋಡಿ ಅಪ್ಪಾ, ನೀವೇ...! ಎಂತೆಂತ ಕಟುಕತನ ಈ ಒಬ್ಬ ಮುದಿ ಹೆಂಗಸಿನ ಮೇಲೆ? ಒಂದು ಹಿಡಿಕಾಳು ಕೂಡ ಉಳಿಸಿಕೊಳ್ಳಾಕೆ ಆಗಲಿಲ್ಲ ನೋಡಿ ಅವತ್ತು! ಆದರೆ ನೋಡಿ, ನನ್ನಪ್ಪ... ಎಲ್ಲಾ

*ಒಂದು ಜಾತಿಯ ತಂಬಾಕು.

ತಗಂಡರು, ಎಲ್ಲಾ ಸುಟ್ಟು ಬೂದಿ ಮಾಡಿದರು... ಆದರೆ ನಾನು ಊರು ಬಿಡತೀನಾ ? ನನ್ನ ಜಮೀನು ಬಿಟ್ಟು ಕೊಡತೀನಾ... ಹ್ಹಾ! ನನ್ನ ಜೀವ ಹೋಗಲಿ, ಜಮೀನು ಬಿಡಾಕಿಲ್ಲ. ಅಲ್ಲೇ ಝಂಡಾ ಹಾಕಿ ಕೂತಿವನಿ. ಕದಲಿಸಲಿ, ನೋಡತೀನಿ! ಯಾವನು ಬರತಾನೇ! ಈಗ ಯಾರೋ ಹೇಳಿದರು, ಕೇಳಿಸಿಕೊಂಡೆ.... ಸದರ್ (ಡಿಸ್ಟ್ರಿಕ್ಟ್ ಕೋರ್ಟು)ನಲ್ಲಿ ನನ್ನ ಮೇಲೆ 'ಡಿಕ್ರಿ' ಮಾಡಿದಾನಂತೆ. ಈ ಕಪಿಲದೇವ ನನ್ನ ಜಮೀನು ಕಸುಕೊಳ್ಳಲಿಕ್ಕೆ ಅಂತ.... ಏ... ನಾನೇನು ನಿನ್ನ ಹುಟ್ಟಿದ ಕೂಸಲ್ಲ ಕಣೋ ಇದನ್ನ ನಂಬೋಕೆ! ಜಮೀನಿರೋದು ದಹಿಭಾತಲ್ಲಿ ಡಿಕ್ರಿ ಮಾಡೋದು ಪೂರ್ಣಿಯಾದಲ್ಲಾ? ಎಲ್ಲಾದರೂ ಆಗತಾದಾ ಹಂಗೆ?" ಹೀಗೇ ಏನೇನೋ ಮನಸ್ಸಿಗೆ ಬಂದ ಹಾಗೆ ಮಾತಾಡತಾ ಇರುತಾಳೆ. ಮಧ್ಯೆ ಮಧ್ಯೆ ಹಣೆ ಹೊಡೆದುಕೊಂಡು ಬಿಕ್ಕಳಿಸಿ ಅಳುತಾಳೆ ಮುದುಕಿ. ಮಾಸ್ಟರ್ ಸಾಹೇಬರಿಗೆ ಪುರಸೊತ್ತಿಲ್ಲದೆ? ಇದ್ದಿದ್ದರೆ ಅವರನ್ನು ಒಂದು ಸಲ ದಹಿಭಾತ್ ಗ್ರಾಮಕ್ಕೆ ಕರೆದುಕೊಂಡು ಹೋಗಿ ಎಲ್ಲಾ ತೋರಿಸಬಹುದಾಗಿತ್ತು. ಆದ್ದರಿಂದ ಈಗ ಬಿಲೂ ಬಾಬುವನ್ನು ಬಿಟ್ಟರೆ ಅವಳನ್ನು ಉದ್ಧಾರ ಮಾಡುವವರು ಯಾರಿದ್ದಾರೆ? ನಾನೂ ಮತ್ತು ಅಣ್ಣನೂ ಕಪಿಲದೇವರು ಮಾಡಿರುವ ಈ ಅನ್ಯಾಯವನ್ನು ಸರಿ ಮಾಡಲು ಎಷ್ಟು ಪ್ರಯತ್ನಗಳನ್ನು ಮಾಡಿದರೂ ಆಗಲಿಲ್ಲ. ನಾವು ದಹಿಭಾತ್ ಗ್ರಾಮಕ್ಕೆ ಹೋದರೆ ಕಪಿಲದೇವರು ನಮಗೆ ಪೂರಿ, ಪಲ್ಯ ಚೆನ್ನಾಗಿ ತಿನ್ನಿಸುತ್ತಿದ್ದರು. ಆದರೆ ಏನೇನೋ ಮಾತುಗಳಾಡಿ ನಮ್ಮನ್ನು ನಾವು ಬಂದಿರುವ ಕೆಲಸವನ್ನು ಕುರಿತು ಏನು ಹೇಳುವುದಕ್ಕೂ ಅವಕಾಶ ಕೊಡುವುದಿಲ್ಲ. ಬೇಕೆಂತಲೇ ಎಲ್ಲೆಲ್ಲೋ ಸುತ್ತಿಕೊಂಡು ಮಾತು ತಿರುಗಿಸುತ್ತ ತಾನೂ ಸಹ ಮಹಾತ್ಮಾ ಗಾಂಧಿಯ ಭಕ್ತನೆಂದೂ ಮತ್ತು ಜಿಲ್ಲಾ ಕಾಂಗ್ರೆಸ್ ಸಮಿತಿಯ ನೇತಾರನೆಂದೂ ಹೇಳಿಕೊಂಡು ವರುಷ ವರುಷವೂ ಆಶ್ರಮದ ಛಾವಣಿಯನ್ನು ಒಪ್ಪವಾಗಿಡಲು ಬೇಕಾದಷ್ಟು ಒಣಹುಲ್ಲನ್ನು ಒದಗಿಸುತ್ತ ಇರುವುದಾಗಿಯೂ ಒತ್ತಿ ಒತ್ತಿ ಹೇಳುವನು. ಅಷ್ಟೇ ಅಲ್ಲದೆ ತನ್ನ ಮನೆಯಿಂದ ಇರುವ ಒಬ್ಬನೇ ತಮ್ಮನನ್ನು ಕಾಂಗ್ರೆಸ್ ಸಂಸ್ಥೆಗೆ ದಾನ ಮಾಡಿಲ್ಲವೆ? ಹೀಗೆಲ್ಲ ಕಪಿಲದೇವರು ತಮ್ಮ ಮೂಗಿಗೆ ನೇರವಾಗಿರುವ ಹಾಗೆ ಹೇಳಿಕೊಂಡರೂ ನಿಜವಾದ ಸಂಗತಿಯೇ ಬೇರೆ. ಅವರ ಕುಟುಂಬ ಎಷ್ಟೇ ದೊಡ್ಡದಿದ್ದರೂ ಮನೆಯಲ್ಲಿರುವ ಎಲ್ಲರೂ ಜಮೀನು ಸಂಬಂಧವಾಗಿ ಕೆಲಸ ಮಾಡುವ ಆಗತ್ಯವೇನಿರುವುದಿಲ್ಲ. ಮನೆಯಲ್ಲಿ ಸುಮ್ಮನೆ ಕೂತು ಅನ್ನ ಅರಗಿಸಿಕೊಳ್ಳುವ ಬದಲಾಗಿ ಒಬ್ಬಿಬ್ಬರನ್ನು ಕಾಂಗ್ರೆಸ್ಸಿಗೆ ಸೇರಿಸಿಬಿಟ್ಟರೆ ಎಷ್ಟೋ ಒಳ್ಳೆಯದು. ಇದೇ ಇಂಥ ದೊಡ್ಡ ರೈತಾಪಿ ಮನೆಯವರ ಮನೋವೃತ್ತಿ. ಕಾಂಗ್ರೆಸ್ ಸಂಸ್ಥೆಯಿಂದ ಎಷ್ಟರಮಟ್ಟಿಗೆ ಅನುಕೂಲಗಳನ್ನು ಪಡೆಯಬಹುದೋ ಅದೆಲ್ಲವನ್ನೂ ಈ 'ದಾನ'ದಿಂದ ಒದಗಿಸಿಕೊಳ್ಳಬಹುದು. ಅಷ್ಟೇಕೆ ಈ 'ದಾನ' ಮಾಡಲ್ಪಟ್ಟಿರುವ ತಮ್ಮನು ಕಾಂಗ್ರೆಸ್ಸಿನ ಮುಂದಾಳುಗಳನ್ನು ಒಲಿಸಿಕೊಂಡದ್ದೇ ಆದರೆ ಕ್ರಮೇಣ ಅವರ ಬೆಂಬಲದಿಂದ ಡಿಸ್ಟ್ರಿಕ್ಟ್ ಬೋರ್ಡಿನ ಮೆಂಬರಾಗಿ ಚುನಾವಣೆಯಾಗಿ ಬರುವುದರಲ್ಲಿ ಸಂಶಯವಿಲ್ಲ. ಬೇರೆ ಏನಿಲ್ಲದಿದ್ದರೂ ಒಂದು ಪಕ್ಷ ಆಕಸ್ಮಾತ್ ಕಾಂಗ್ರೆಸ್ ಸಂಸ್ಥೆಯು ಧನಿಕ ಕೃಷಿಕರ ಮೇಲೆ ಭಾರ ಹೊರಿಸುವ ಸಂದರ್ಭ ಬಂದಾಗ ಅದು ತಮ್ಮ ಮೈಗೆ ಹತ್ತದಿರುವ

ಹಾಗೆ ಮಾಡಿಕೊಂಡರೆ ಸಾಕು. ಎಷ್ಟಾದರೂ ನೈತಿಕ ಪ್ರಭಾವಕ್ಕಿಂತಲೂ ಹೆಚ್ಚಾಗಿ ಕಾಂಗ್ರೆಸ್ಸಿಗೆ ಬೇರೆ ಶಕ್ತಿಯೇನಿದೆ ?

ಹೀಗೆ ನಾವು ಮಾಡಿದ ಪ್ರಯತ್ನ ವ್ಯರ್ಥವಾದಾಗ ಈ ಗಾಣಿಗರ ಹೆಂಗಸು ಕೋಪದಿಂದಲೂ ದುಃಖದಿಂದಲೂ ಅಣ್ಣನನ್ನು ಕಂಡು, "ಈ ಕಪಿಲ ದೇವನಿದಾನಲ್ಲ... ಅವನು ನಮ್ಮ ಊರಿನ ಪೊಲೀಸ್ ದರೋಗನನ್ನು ಕೊಂಡುಕೊಂಡಿರುವುದು ಗೊತ್ತು ನನಗೆ ಆಗಲೇ. ಹಾಗೇ ನಿಮ್ಮನ್ನೂ ಕೊಂಡುಕೊಂಡು ಬಿಟ್ಟಿದ್ದಾನೇನು ?" ಎಂದುಬಿಟ್ಟಳು. ಇನ್ನೂ ಏನೇನೋ ಹೇಳಹೋಗಿದ್ದಳು. ಅಷ್ಟರಲ್ಲಿ ಹಠಾತ್ತಾಗಿ ಸಹದೇವನು ಅಲ್ಲಿಗೆ ಬಂದುಬಿಟ್ಟ. ಆಗ ನಿಲ್ಲಿಸಿಬಿಟ್ಟಳು. ಶತ್ರುವಾದರೂ ಏನು ಸಹದೇವನು ಭೂ ಇಯಾ ಬ್ರಾಹ್ಮಣ. ದೊಡ್ಡ ಜಾತಿಯವನು. ಗ್ರಾಮದಲ್ಲಿ ದೊಡ್ಡವನೆನ್ನಿಸಿಕೊಂಡಿರುವ ವ್ಯಕ್ತಿ. ಇಂಥವನ ಎದುರಿಗೆ ಗಾಣಿಗರ ಹೆಂಗಸಾದವಳೊಬ್ಬಳು ಗಟ್ಟಿಯಾಗಿ ಮಾತಾಡುವುದೆಂದರೇನು ? ಅಲ್ಲದೆ ನಾವು ಸಹ ಅವನೊಂದಿಗೆ ಇದರ ವಿಷಯ ಎತ್ತಿದರೆ, "ನಮ್ಮಣ್ಣ ಕಪಿಲದೇವರೇ ಮನೆಗೆ ಯಜಮಾನರು. ನನಗಿದೆಲ್ಲ ಏನು ಗೊತ್ತು ?" ಎಂದುಬಿಟ್ಟ.

ಆಗ ನನಗೆ ಇವನನ್ನು ಕುತ್ತಿಗೆ ಹಿಡಿದು ಕಾಂಗ್ರೆಸ್ ಆಶ್ರಮದ ಹೊರಗೆ ದಬ್ಬಿ ಬಿಡೋಣ ಎಂದೆನ್ನಿಸಿತು. ಇದಾದ ಮೇಲೆ ಬಹಳ ದಿನ ಅವನೊಂದಿಗೆ ಮಾತಾಡುವುದನ್ನೇ ಬಿಟ್ಟುಬಿಟ್ಟೆ. ಆಗ ಅಣ್ಣ ನನಗೆ ಸಮಾಧಾನ ಹೇಳುತ್ತ ಅಂದ, "ಇವನ ಮೇಲೆ ರೇಗಿ ಏನು ಪ್ರಯೋಜನವೋ ? ತಪ್ಪಿರುವುದು ಸಂಸ್ಥೆಯ ಮೂಲದಲ್ಲಿ."

ಸಾವಿರದ ಒಂಬೈನೂರ ಮೂವತ್ತು ಮತ್ತು ಮೂವತ್ತೆರಡರ ಆಂದೋಳನದಲ್ಲಿ ನಾವಿಬ್ಬರೂ ಕ್ಯಾಂಪ್ ಜೈಲಿನಲ್ಲಿದ್ದಾಗ ನಮ್ಮ ರಾಜಕೀಯ ದೃಷ್ಟಿ ಭಂಗಿಯ ವ್ಯರ್ಥತೆಯನ್ನು ನಾವು ಅನುಭವ ಮಾಡಿಕೊಂಡೆವು. ಜೈಲಿನಲ್ಲಿ ಇದರ ಸಂಬಂಧ ವಾಗಿ ಎಷ್ಟೋ ಚರ್ಚೆ, ವಾಗ್ವಾದಗಳೂ, ಮನಸ್ತಾಪಗಳೂ ಆಗಿಹೋದುವು. ಈ ವ್ಯರ್ಥತೆಯ ಮಾತನ್ನು ಬಹಿರಂಗವಾಗಿ ಹೇಳದಿರುವವರ ಮುಖದ ಮೇಲೆ ಹತಾಶಭಾವವು ಸುಸ್ಪಷ್ಟವಾಗಿ ಅಚ್ಚಾಗಿ ಹೋಗಿತ್ತು. ಅದೇ ಬೀಜ ಇಷ್ಟು ದಿನಗಳಾದ ಮೇಲೆ ಮೊಳಕೆ ಬಿಟ್ಟಿತು. ಆಗಲೇ ನಾನೂ ಅಣ್ಣನೂ ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿಯಲ್ಲಿ ಸೇರಿಕೊಂಡೆವು. ಗಾಣಿಗಿತ್ತಿಯ ಶೋಚನೀಯ ಘಟನೆಯು ಈ ಮೊಳಕೆ ಬೆಳೆಯಲು ಕಾವನ್ನೂ ನೀರನ್ನೂ ಒದಗಿಸಿಕೊಟ್ಟಿತು. ಈ ಹೆಂಗಸು ತನ್ನ ಗಂಡನ ಜಮೀನನ್ನು ಇನ್ನೂ ಬಿಗಿಯಾಗಿ ಹಿಡಿದಿಟ್ಟುಕೊಂಡಿದ್ದಾಳೋ ಇಲ್ಲವೋ ಗೊತ್ತಿಲ್ಲ. ಆದರೆ ಆಕೆಯ ಕಣ್ಣೀರು ಮಾತ್ರ ನಮ್ಮ ಎದೆಯೊಳಗಣ ದ್ವಂದ್ವ ಮತ್ತು ಸಂದೇಹಗಳನ್ನು ಹೊಡೆದೆಬ್ಬಿಸಿತ್ತು. ಹೃದಯದ ಅಂತರಾಳದೊಳಗೆ ಅರ್ಧ ಎಚ್ಚೆತ್ತಿದ್ದ ಆಸೆ, ಆಕಾಂಕ್ಷೆಗಳು ಗವಾಕ್ಷ ದ್ವಾರದಿಂದ ಸೂರ್ಯೋದಯದ ಬೆಳಕನ್ನು ಕಂಡವು. ಅದಾದ ಮೇಲೆ ಅಣ್ಣನೂ ನಾನೂ ಒಂದೇ ಪಾರ್ಟಿಯಲ್ಲಿ ಸೇರಿ ಎಷ್ಟು ಉತ್ಸಾಹದಿಂದ ಕೆಲಸ ಮಾಡಿಕೊಂಡು ಹೋಗುತ್ತಿದ್ದೆವು ! ಅವನಾಗ ಕೇವಲ ಸಹ ಕರ್ಮಿಯಲ್ಲ, ಕಾಮ್ರೇಡ್ (ಸಾಥಿ) ಅಲ್ಲ. ಅವನು ನಮ್ಮ ಅಣ್ಣ. ಎಷ್ಟು ಸುಖ, ದುಃಖಗಳಿಂದ ತುಂಬಿ ಒಂದೇ ಸೂತ್ರದಲ್ಲಿ ಪೋಣಿಸಲ್ಪಟ್ಟಿತ್ತು ನಮ್ಮಿಬ್ಬರ ಜೀವನ !

ಯಾವುದರಿಂದ ನನಗೆ ಒಳ್ಳೆಯದಾಗುತ್ತದೆ, ಯಾವುದರಿಂದ ನನಗೆ ಸ್ವಲ್ಪವಾದರೂ ಸಂತೋಷವಾಗುತ್ತದೆ ಇದೇ ಚಿಂತೆ ಅವನ ಮನಸ್ಸಿನಲ್ಲಿ ಸದಾ ಇರುತ್ತಿದ್ದುದು. ತಾನಂತೂ ಕಾಲೇಜಿನಲ್ಲಿ ಓದಲಿಲ್ಲ. ಇದರ ಸಲುವಾಗಿ ಅವನಲ್ಲಿ ಆಗುತ್ತಿದ್ದ ದುಃಖ ಅಷ್ಟಿಷ್ಟಲ್ಲ. ಭೂಕಂಪದಲ್ಲಿ ಹಾನಿ ಹೊಂದಿದವರ ಸಹಾಯದ ಫಂಡಿನಲ್ಲಿ ಕೆಲಸ ಮಾಡುವುದಕ್ಕೆ ಬರುತ್ತಿದ್ದ ವೇತನವನ್ನು ನನ್ನ ಕಾಲೇಜು ವ್ಯಾಸಂಗಕ್ಕೆ ಖರ್ಚು ಮಾಡಿದ ಅಣ್ಣಾ. ತನ್ನ ಮನಸ್ಸಿನ ಬಯಕೆಯನ್ನು ನನ್ನನ್ನು ಓದಿಸುವುದರ ಮೂಲಕ ತೃಪ್ತಿ ಮಾಡಿಕೊಂಡ. ಭೂಕಂಪದ ಪರಿಹಾರ ಕೊನೆಗೊಂಡಾಗ ಆ ಸಂಸ್ಥೆಯ ಕೆಲವು ಸಾಮಾನುಗಳನ್ನು ಹರಾಜಿಗೆ ಹಾಕಿದಾಗ ಅಣ್ಣಾ ನನಗೊಂದು ಸೈಕಲನ್ನು ಕ್ರಯಕ್ಕೆ ಕೊಂಡು ಕೊಟ್ಟ. ಇವೆಲ್ಲ ಸಾಮಾನ್ಯ ವಸ್ತುಗಳು. ಅಣ್ಣನ ಪ್ರೀತಿಯ ವಿಷಯ ಹೇಳುವಾಗ ಇಂಥ ಜುಜುಬಿ ಸಾಮಾನುಗಳ ಮಾತನ್ನೆತ್ತುವುದು ಆ ಪ್ರೀತಿಯನ್ನು ಅತಿ ಸಣ್ಣದಾಗಿ ಮಾಡಿದಂತಾಗುವುದು. ನನಗೆ ಸ್ವಲ್ಪ ತಲೆ ನೋವಾದರೆ ಸಾಕು, ಅಣ್ಣನ ಮನಸ್ಸಿಗೆ ವ್ಯಥೆ. ಜೈಲಿನಲ್ಲಿ ಪ್ರತಿ ಭಾನುವಾರ ಕೊಡುತ್ತಿದ್ದ ಬೆಲ್ಲವನ್ನು ಅಣ್ಣಾ ತಾನು ತಿನ್ನದೆ ತೆಗೆದಿಡುತ್ತಿದ್ದುದನ್ನು ಗಮನಿಸಿದೆ. ನಾನು ನಿತ್ಯವೂ ಅನ್ನ ತಿನ್ನುವಾಗ ಸ್ವಲ್ಪವಾದರೂ ಸಿಹಿ ಇಲ್ಲದಿದ್ದರೆ ಊಟ ಮಾಡಿದ ಹಾಗೇ ಅನ್ನಿಸುತ್ತಿರಲಿಲ್ಲವೆಂದು ಅವನಿಗೆ ಗೊತ್ತು. ಜೈಲಿನಲ್ಲಿ ನನ್ನ ಯೂನಿಫಾರಮ್ ಆಗಿದ್ದ ಬನಿಯನ್ ಮತ್ತು ಜಾಂಗಿಯಾ (ಪಾಯಿಜಾಮ)ಗಳನ್ನು ಅವನೇ ಸಾಬೂನು ಹಾಕಿ ಒಗೆಯುತ್ತಿದ್ದ. ಬೇಡ ಎಂದರೆ ಕೇಳಿದರೆ ತಾನೇ. "ನಿನಗೆ ಒಗೆಯುವುದು ಅಭ್ಯಾಸವಿಲ್ಲ" ಎಂದು ಬಿಟ್ಟ. ನಾನೂ ಹೆಚ್ಚು ಬಲವಂತ ಮಾಡದೆ ಸುಮ್ಮನಿದ್ದು ಬಿಟ್ಟೆ. ಅಣ್ಣಾ ಹೀಗೆಲ್ಲ ನನ್ನ ಸೇವೆ ಮಾಡುತ್ತಿರುವುದು ಅಸ್ವಾಭಾವಿಕವೇನಲ್ಲ. ಅದು ತಮ್ಮನ ಹಕ್ಕು, ಅಣ್ಣನಾದವನ ಕರ್ತವ್ಯ ಎಂದು ಅವನ ಅಭಿಪ್ರಾಯ.

ಆದರೆ.... ಆದರೆ ಅಣ್ಣನಿಗೆ ನನ್ನ ವಿಷಯದಲ್ಲಿ ಬರೇ ಕರ್ತವ್ಯವೊಂದೇನೆ? ಹಕ್ಕೇನೂ ಇರಕೂಡದೆ? ಇರಲಿಕ್ಕೆ ಸಾಕು. ಇರಲಿಕ್ಕೆ ಸಾಕೇನು ಇದ್ದೇ ಇದೆ. ಗೊತ್ತು. ಆದರೆ ಆ ಹಕ್ಕು ಇರುವುದು ರಾಜಕೀಯ ಕ್ಷೇತ್ರದ ಹೊರಗಡೆ. ರಾಜಕೀಯ ಕ್ಷೇತ್ರದಲ್ಲಿ ಮಾತ್ರ ನಾನು ನೀಲೂ, ಅವನು ಅಣ್ಣಾ ಎಂಬ ಸಂಬಂಧವಿಲ್ಲ– ಇರಕೂಡದು. ಇಲ್ಲಿ ವ್ಯಕ್ತಿಗತ ಪ್ರಶ್ನೆಯನ್ನು ತೊರೆದು ತರ್ಕದ, ವಿಚಾರದ ಕಠಿಣವಾದ ಕಲ್ಲಿನ ಹಾದಿಯಲ್ಲಿ ಪ್ರತ್ಯೇಕವಾದ ಕೆಲಸದ ಪದ್ಧತಿಯನ್ನು ಆರಿಸಿಕೊಳ್ಳಬೇಕಾಗುತ್ತದೆ. ನಮ್ಮ ನಮ್ಮ ಪಾರ್ಟಿಯ ದೃಷ್ಟಿಕೋನದಲ್ಲಿಯೇ ಎಲ್ಲ ವಿಧವಾದ ಧರ್ಮಗಳನ್ನೂ ವಿಚಾರ ಮಾಡಬೇಕಾಗುತ್ತದೆ. ಹೊಸ ಪ್ರಪಂಚವು ನಮ್ಮನ್ನು ಕುರಿತು ಇಷ್ಟ ಬಂದ ಹಾಗೆ ತಿಳಿದುಕೊಳ್ಳಬಹುದು. ಆದರೆ ನಮ್ಮ ಅಣ್ಣನು ಮಾತ್ರ ನನ್ನ ಯಥಾರ್ಥವಾದ ಮನೋಭಾವವನ್ನು ಸರಿಯಾಗಿ ಅರ್ಥಮಾಡಿ ಕೊಳ್ಳುತ್ತಾನೆ. ಅವನಲ್ಲಂತೂ ಕೀಳುತನವಾಗಲಿ, ಸಂಕೀರ್ಣತೆಯಾಗಲೀ ಎಳ್ಳಷ್ಟೂ ಇಲ್ಲ.

ಸಾವಿರದ ಒಂಬೈನೂರ ನಲವತ್ತರಲ್ಲಿ ನಾವಿಬ್ಬರೂ ದಸ್ತಗಿರಿ ಮಾಡಲ್ಪಟ್ಟಾಗಲೂ ಸಿ.ಎಸ್.ಪಿ. (ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ)ಯ ಸದಸ್ಯರಾಗಿದ್ದೆವು. ಆದರೆ ಜೈಲಿಗೆ ಹೋದ ಕೆಲವೇ ತಿಂಗಳುಗಳಲ್ಲಿ ನಮ್ಮಲ್ಲೇ ಅದೇನು ಅಸಾಧಾರಣ

ಬದಲಾವಣೆಗಳಾಗಿ ಹೋದುವು! ಅಲ್ಲೇ ನಮ್ಮ ವಾರ್ಡಿನ ಮುಂಭಾಗದಲ್ಲಿ ಇದ್ದ ಹಲಸಿನ ಮರದ ಕೆಳಗಡೆ ಕಾಮ್ರೇಡ್ ಚಂದ್ರದೇವರ ಸಂಗಡ ಮೊದಲ ಬಾರಿ ಪರಿಚಯವಾದುದು. ಅವರ ಬಳಿಯಿದ್ದ ಪುಸ್ತಕಗಳನ್ನು ಕೊಂಡೊಯ್ದು ಓದುವುದು, ಅವರ ಭಾಷಣಗಳನ್ನು ಕೇಳುವುದು–ಹಲಸಿನ ಮರದ ಅಡಿಯಲ್ಲಿ ಕಂಬಳಿ ಹಾಸಿ ಅದರ ಮೇಲೇ ಅವರ ಲೆಕ್ಚರ್ ಕ್ಲಾಸ್ ಕೂಡುತ್ತಿದ್ದುದು–ಈಗಲೂ ಅವೆಲ್ಲ ಕಣ್ಣ ಮುಂದೆ ನಿಲ್ಲುತ್ತಿದೆ. ಚಂದ್ರದೇವರ ಎದುರಿಸಲಾಗದ ತರ್ಕದ ಎದುರಿಗೆ ನನ್ನ ತಲೆ ತಗ್ಗಿಸಬೇಕಾಯಿತು. ನನ್ನ ಬುದ್ಧಿಯ ದೃಷ್ಟಿಯ ಎದುರಿಗಿದ್ದ ದಪ್ಪನೆಯ ತೆರೆಯೊಂದು ನಿಧಾನವಾಗಿ ಸರಿದುಹೋಗುತ್ತಿರುವರಂತೆ ಅನ್ನಿಸಿತು. ಇದುವರೆಗೆ ಅಣ್ಣನ ರೆಕ್ಕೆಯ ನೆರಳಲ್ಲಿದ್ದುಕೊಂಡು ಅವನ ಪಾರ್ಟಿಯ ಸದಸ್ಯನಾಗಿ ನಾನು ರಾಜಕೀಯ ಕ್ಷೇತ್ರದಲ್ಲಿ ಇಟ್ಟುಕೊಂಡಿದ್ದ ದೃಷ್ಟಿಕೋನವು ಅತ್ಯಂತ ರುಗ್ಣ, ಕಾಮಾಲೆಯಿಂದ ನರಳುವವರು ಹೊರ ಪ್ರಪಂಚವನ್ನು ನೋಡುವ ಭ್ರಾಂತಿ ದೃಷ್ಟಿ. ಅದು ಅನುಕೂಲವಾದಿಗಳಾದ ಕೆಲ ಮಧ್ಯಮದರ್ಜೆಯವರ ಭಾವಾವೇಶದ ಉಚ್ಛ್ವಾಸ ಮಾತ್ರ. ನಿಜವಾದ ದೀನದಲಿತರ, ಎಲ್ಲ ಕಳೆದುಕೊಂಡವರ ಶಕ್ತಿಯುತ ರೋಷದ ಉದ್ದಾಮತೆ ಅದರಲ್ಲಿರುವುದಿಲ್ಲ. ಹೇಗಿರಲು ಸಾಧ್ಯ? ರಾಷ್ಟ್ರೀಯತೆಯ ಹೊರಗಡೆ ಅವರ ದೃಷ್ಟಿ ಓಡಲು ಸಾಧ್ಯವಿಲ್ಲ. ಇಡೀ ವಿಶ್ವದ ದಲಿತ ಜನತೆಯ ಭವಿಷ್ಯದ ಯೋಚನೆ ಅವರಿಗೆ ನಿಲುಕದು. ಚಂದ್ರದೇವರ ದಳದಲ್ಲಿ ಒಬ್ಬನಾಗಿ ಸೇರಿಕೊಳ್ಳುವ ಮುನ್ನ ಅಣ್ಣನ ಸಲಹೆ ಕೇಳಬೇಕೆಂದುಕೊಂಡಿದ್ದೆ. ಕೇಳೋಣ, ಕೇಳೋಣ ಎಂದುಕೊಂಡರೂ ಕೇಳಲು ಆಗಲೇ ಇಲ್ಲ. ಒಂದು ಕಾರಣ, ಸಂಕೋಚದಿಂದ ಆಗಲಿಲ್ಲ. ಮುಖ್ಯವಾದ ಕಾರಣ. ಕೇಳಿಬಿಟ್ಟರೆ ಆಗ ಅಣ್ಣನ ತರ್ಕಧಾರೆಯ ಮುಂದೆ ಉತ್ತರ ಹೇಳಲು ಆಗುತ್ತೋ ಇಲ್ಲವೋ ಎಂಬ ಭಯ. ಆದರೂ ನನಗೆ ಅಣ್ಣನ ತರ್ಕ ಸರಿಯಲ್ಲವೆಂದು ಖಂಡಿತ ತಿಳಿದಿತ್ತು. ಅವನ ಪ್ರತಿಯೊಂದು ಪ್ರಶ್ನೆಗೂ ಚಂದ್ರದೇವರ ಬಳಿ ಕೇಳಿ ಉತ್ತರ ತಿಳಿದುಕೊಂಡು ಅಣ್ಣನ ಮುಂದೆ ಹೇಳಿದ್ದರೆ ಸಾಧ್ಯವಾಗುತ್ತಿತ್ತು. ಕಡೆಗೂ ಅಣ್ಣನ ಸಲಹೆ ಕೇಳದೆಯೇ ಹೊಸ ಪಾರ್ಟಿಗೆ ಸೇರಿಕೊಂಡುಬಿಟ್ಟಿದ್ದೆ. ಕೇಳಬೇಕಾದ ಅಗತ್ಯವಾದರೂ ಏನು? ರಾಜಕೀಯ ಕ್ಷೇತ್ರದಲ್ಲಿದ್ದುಕೊಂಡೂ ಸಹ ಅಪ್ರಾಪ್ತ ವಯಸ್ಕನಂತೆ ಎಷ್ಟು ದಿನ ಇರಲಿಕ್ಕಾದೀತು? ಅವತ್ತಿನ ದಿನದಿಂದ ಮೊದಲು ಗೊಂಡು ನಮ್ಮಿಬ್ಬರ ನಡುವೆ ಅತಿಕ್ರಮಿಸಲಾಗದ ಅಡ್ಡ ಗೋಡೆಯೊಂದು ಎದ್ದು ನಿಂತುಕೊಂಡಿತು. ಅದು ಇವತ್ತಿನವರೆಗೂ ನಿಂತುಕೊಂಡೇ ಇದೆ. ರಾಜಕೀಯ ಕರ್ಮಚಾರಿಯ ಜೀವನವೆಲ್ಲ ಅವನ ಪಕ್ಷದ ಒಳಗಡೆಯೇ. ಪಕ್ಷದ ಹೊರಗಡೆಯ ಅಸ್ತಿತ್ವವನ್ನು ಅವನು ನಿರ್ದಾಕ್ಷಿಣ್ಯವಾಗಿ ಹೊಸಕಿ ಹಾಕಿಬಿಡಬೇಕಾಗುತ್ತದೆ. ಇದಾದ ಮೇಲಿಂದ ನಾನು ಅಣ್ಣನ ದೃಷ್ಟಿಯಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸುತ್ತಿದ್ದೆ. ಕೇವಲ ವ್ಯಕ್ತಿಗತವಾದ ಮಾತುಕತೆ ಬಿಟ್ಟರೆ ಬೇರೆ ಯಾವ ಮಾತನ್ನೂ ಆಡುತ್ತಿರಲಿಲ್ಲ. ನನ್ನ ಪಾರ್ಟಿಯವರು ನಮ್ಮಿಬ್ಬರ ಸಂಬಂಧವನ್ನು ಕುರಿತು ಏನೇನು ಅಭಿಪ್ರಾಯ ಪಡುತ್ತಾರೋ ಎಂಬ ಭಯ ನನ್ನಲ್ಲಿ ಸದಾ ಇರುತ್ತಿತ್ತು. ಅಣ್ಣನೋ, ನಮ್ಮ ಪ್ರತಿದ್ವಂದ್ವಿ ದಳದ ಒಬ್ಬ ಹೆಸರಾಂತ ಮುಂದಾಳು. ಇಂಥವನ ಸಂಗಡ ನಾನು ವಿಶೇಷ ಅಂತರಂಗವಿಟ್ಟುಕೊಂಡಿರುವುದನ್ನು ನನ್ನ

ಪಾರ್ಟಿಯವರಂತೂ ಎಂದಿಗೂ ಸಹಿಸುವುದಿಲ್ಲ. ನನ್ನ ಮುಂದೆಯೇನೋ ಬಹುಶಃ ಏನೂ ಹೇಳುವುದಿಲ್ಲ. ಆದರೆ ಅವರವರಲ್ಲೇ ಇದರ ವಿಷಯವಾಗಿ ಚರ್ಚೆ ಮಾಡೇ ಮಾಡುತ್ತಾರೆ. ಜೈಲಿನಲ್ಲಿ ಈ ಎರಡು ದೊಡ್ಡ ದಳಗಳಲ್ಲದೆ ಇನ್ನೂ ಎಷ್ಟೋ ರಾಜಕೀಯ ಉಪದಳಗಳ ಕರ್ಮಚಾರಿಗಳಿದ್ದರು. ಪ್ರತಿಯೊಬ್ಬ ದಳದವರಲ್ಲೂ ತಮ್ಮೊಳಗೆ ಒಬ್ಬಿಬ್ಬರಾದರೂ ಇತರ ವಿರೋಧಿದಳಗಳ ಕಡೆಯವರು ಗೂಢಚಾರ ರಾಗಿ ಸೇರಿಕೊಂಡಿದ್ದಾರೆಂದು ಖಚಿತವಾಗಿ ತಿಳಿದಿದ್ದರು. ಅದನ್ನು ಸಮರ್ಥಿಸುವಂತೆ, ನಿಜವಾಗಿಯೂ ಎಷ್ಟೇ ಗುಟ್ಟಾಗಿರಲು ಪ್ರಯತ್ನಿಸಿದರೂ ಕೆಲವು ಮುಖ್ಯ ವಿಷಯಗಳು ಇತರ ಉಪದಳಗಳಿಗೆ ಹೇಗೋ ತಿಳಿದುಹೋಗುತ್ತಿತ್ತು. ಜೈಲಿನಲ್ಲಿ ಗೋಡೆಗಳಿಗೂ ಕಿವಿಗಳಿದ್ದುವು.

ಅಣ್ಣನೂ ನನ್ನ ಸಂಕೋಚವನ್ನು ತಿಳಿದು ತಾನಾಗೇ ನನ್ನ ದೃಷ್ಟಿಯಿಂದ ದೂರವಾಗಿರಲು ಯತ್ನಿಸಿದ. ಪಾರ್ಟಿಯ ವ್ಯಾಸಂಗ ಗೋಷ್ಠಿಯಿಂದ ರಾತ್ರಿ ಹೊತ್ತಾಗಿ ಮರಳಿ ಬಂದು ನೋಡಿದರೆ ನನ್ನ ಹಾಸಿಗೆ ಆಗಲೇ ಹಾಸಿ ಆಗಿರುತ್ತದೆ. ಈ ಚೊಕ್ಕವಾದ ಹಾಸಿಗೆಯಲ್ಲಿ ಅಣ್ಣನ ಪ್ರೀತಿಯ ಕೈ ಗುಣವನ್ನು ಕಾಣುತ್ತಿದ್ದೆ. ಅಮ್ಮನ ಅಥವಾ ಅಪ್ಪನ ಕಾಗದ ಬಂದಾಗ ಮಾತ್ರ ಅಣ್ಣನ ಸಂಗಡ ಮಾತಾಡುವ ಸುಯೋಗ ಸಿಕ್ಕುವುದು. ಅಮ್ಮನ ಪೋಸ್ಟ್‌ಕಾರ್ಡ್ ಬಂದಿದೆ. ನಾನು ಓದಿ ಅದನ್ನು ಅಣ್ಣನ ಹಾಸಿಗೆ ಮೇಲೆ ಇಟ್ಟೆ. "ಯಾರ ಕಾಗದ ? ಅಮ್ಮನದೇ ?" "ಹ್ಞಾಂ" ಅಣ್ಣ ಕಾಗದ ಓದುತ್ತಾನೆ. "ಬೆಳಗ್ಗೆ ಎದ್ದು ಬರೀ ಹೊಟ್ಟೆಯಲ್ಲಿ ಚಹಾ ಕುಡಿಯಬೇಡ. ಆಗಾಗ ತ್ರಿಫಲ ಅಥವಾ ಇಸಬ್‌ಗೋಲ್ ತೆಗೆದುಕೊಳ್ಳುತ್ತಾ ಇರು. ಬಿಲ್ವದ ಹಣ್ಣನ್ನು ಸುಡುವ ಅನುಕೂಲ ಇದ್ದರೆ ಅದನ್ನು ತೆಗೆದುಕೊಳ್ಳಬಹುದಾಗಿತ್ತು. ಅದು ಎಲ್ಲದಕ್ಕೂ ಒಳ್ಳೆಯದು. ನನಗೊಂದೇ ಭಯ. ಜೈಲಿನಲ್ಲಿ ನಿನಗೆ ಪ್ರತಿ ಸಲವೂ ಆಮಶಂಕೆ ಬರುತ್ತೆ. ಸೆಕ್ಯೂರಿಟಿ ಖೈದಿಗಳಿಗೆ ಈ ಸಾಮಾನುಗಳು ದೊರಕುವುದು ಕಷ್ಟವಲ್ಲ. ಹಣದ ಅವಶ್ಯಕತೆ ಇದ್ದರೆ ಬರೆಯುವುದಕ್ಕೆ ಹಿಂಜರಿಯಬೇಡ. ಹೇಗಾದರೂ ಏಗಲಿ, ಕಳಿಸಿಕೊಡುತ್ತೇನೆ."

"ನೋಡು ಅಮ್ಮನ ಹುಚ್ಚು!" ಎಂದು ಅಣ್ಣ ನಸುನಗುತ್ತ ಹೇಳಿದ. ಅವನ ಎಡ ಕೆನ್ನೆಯ ಮೇಲೆ ಗುಳಿಬಿದ್ದಿತ್ತು. ಎಷ್ಟು ಮಾತಾಗಳನ್ನಾಡಬೇಕೆಂದು ಆಸೆಯಾಗುತ್ತಿತ್ತು. ಮೊದಲಿನಂತೆ ಆಗಿದ್ದರೆ ಅಮ್ಮನನ್ನು ಕುರಿತೇ ಎಷ್ಟೋ ತಮಾಷೆಯಾದ ಮಾತುಗಳನ್ನು ಆಡಬಹುದಾಗಿತ್ತು. ಈಗ ಬರೇ "ಹ್ಞಾಂ" ಎಂದಷ್ಟು ಮಾತ್ರ ಹೇಳಿದೆ. ಎದೆ ತುಂಬಾ ಎಷ್ಟೋ ಮಾತುಗಳು. ಆದರೇನು ಸಂಕೋಚದ ಶೈತ್ಯದಿಂದ ಎಲ್ಲಾ ಹೆಪ್ಪುಗಟ್ಟಿ ಹೊರಗೆ ಬರದಂತಾಗಿ ಬಿಟ್ಟಿದೆ. ಎಳೆತನದಲ್ಲಿ ನಾನೂ, ಅಣ್ಣನೂ ಒಂದೇ ಲೇಪಿನ ಮೇಲೆ ಮಲಗಿಕೊಂಡು ಒಂದು ರಾತ್ರಿ ಬೆಳಗಿನ ಝಾವ ನಾಲ್ಕು ಗಂಟೆಯವರೆಗೂ ಮಾತಾಡುತ್ತ ಕಳೆದಿದ್ದೆವು. ಆದರೂ ಮಾತು ಮುಗಿಯುವಂತಿಲ್ಲ. ಈಗಲೋ "ಹ್ಞಾಂ" ಎಂದು ಒಂದೇ ಒಂದು ಮಾತು ಆಡಿಬಿಟ್ಟು ಇನ್ನು ಮುಂದೆ ಮಾತೇ ಹೊರಡದಂತಾಗಿಬಿಟ್ಟಿದೆ. ಮಾತೆಲ್ಲ ಪೂರೈಸಿ ಹೋಯಿತಲ್ಲ ಎಂಬ ಕೊರತೆ ಮುಖದ ಮೇಲೆ, ಕಣ್ಣಲ್ಲಿ ಒಡೆದು ಕಾಣುತ್ತಿದೆ. ಅದನ್ನು ಮರೆಮಾಡಿಕೊಳ್ಳುವುದಕ್ಕೋಸ್ಕರ ಯಾವುದೋ ಕೆಲಸದ ನೆಪ ಹೇಳಿ

ಅಲ್ಲಿಂದ ಜಾರಿ ಕೊಳ್ಳಬೇಕಾಗುತ್ತದೆ.

ಅದಾದನಂತರ ದೇವುಲಿ ಜೈಲಿಗೆ ನನ್ನನ್ನು ವರ್ಗಾಯಿಸುವ ದಿನ. ನಮ್ಮಲ್ಲಿ ಕೆಲವು ಜನರನ್ನು ಮಾತ್ರ ದೇವುಲಿ ಜೈಲಿಗೆ ವರ್ಗಾಯಿಸಲಾಗಿತ್ತು. ಅಣ್ಣ ಮಾತ್ರ ನಮ್ಮ ಗುಂಪಿನಲ್ಲಿರಲಿಲ್ಲ. ಹೊರಡುವ ದಿನ ಅಣ್ಣ ನನ್ನ ಪೆಟ್ಟಿಗೆಯನ್ನು ಅಣಿ ಮಾಡಿಕೊಟ್ಟ. ಪೆಟ್ಟಿಗೆಯ ಕೆಳಗಡೆ ತಾಳೆ ಎಲೆಯ ಒಂದು ಬೀಸಣಿಗೆಯನ್ನಿಟ್ಟ. ಆ ಬೀಸಣಿಗೆಯ ಹಿಡಿಯ ಮೇಲೆ ಅಮ್ಮ ಹೆಣಿಗೆ ಕೆಲಸ ಮಾಡಿದ್ದಳು. ಅದರ ಮೇಲೆ ಒಂದು ಕಡೆ "ನೀಲೂ ಬಿಲೂ ಪಿಲೂ ಪಿಲೂ" ಎಂದು ಬರೆಯಲ್ಪಟ್ಟಿತ್ತು. ಮನಸ್ಸಿನಲ್ಲಿ ಏನು ಹೊಳೆದು ಹಾಗೆ ಅಮ್ಮ ಬರೆದಿದ್ದಳೋ ಗೊತ್ತಿಲ್ಲ.... ಅಣ್ಣ ತನ್ನ ಫೌಂಟನ್ ಪೆನ್ ಸಹ ನನ್ನ ಪೆಟ್ಟಿಗೆಯಲ್ಲಿಟ್ಟ. ಇವತ್ತಿಗೂ ಅದರಲ್ಲೇ ನಾನು ಬರೆಯುವುದು.

"ನಿದ್ದೆ ಬಂತೇ ಬಾಬೂಗಳಿಗೆ ?"

ಸುಬೇದಾರ್ ಸಾಹೇಬ ಹತ್ತಿರ ಬಂದು ನಿಂತು ಕೇಳಿದ.

"ಇಲ್ಲವಲ್ಲ. ಯಾಕೆ ?" ಎಂದೆ. ಈ ಮನುಷ್ಯ ತನ್ನ ಡ್ಯೂಟಿ ಬಿಟ್ಟು ಗೇಟಿನ ಹೊರಗಡೆ ಏಕೆ ಬಂದ ?

"ನಿಮ್ಮ ಡ್ಯೂಟಿ ಮುಗಿಯಿತು ಅಂತ ಕಾಣುತ್ತೆ ?"

"ಹ್ಹಾಂ..... ನಮ್ಮ ಡ್ಯೂಟಿ ರಾತ್ರಿ ಹೊತ್ತು ಇರುವುದಿಲ್ಲ. ಅರ್ಧ ರಾತ್ರಿಯಲ್ಲಿ ಆಫೀಸರ್ ಗೀಫೀಸರ್ ಬಂದರೂ ಬರಬಹುದು.' ಅದಕ್ಕೇ ಇಲ್ಲೇ ಮಲಗೋಣ ಅಂದುಕೊಂಡೆ. ಇದಕ್ಕೆ ಮುಂಚೆ ಆದ ಫಾಸಿ ವೇಳೆಯಲ್ಲಿ ಆಫೀಸರ್ ರೌಂಡಿನ ಮೇಲೆ ಬಂದಿದ್ದರು. ಫಾಸಿ ಸ್ತಂಭದ ಸುತ್ತ ದೊಡ್ಡ ದೊಡ್ಡ ದೀಪಗಳನ್ನು ಹತ್ತಿಸಿ ಆ ಜಾಗವನ್ನು ಹಗಲಿನಂತೆ ಬೆಳಗಿಸಿರತಾರೆ. ನಾಲ್ಕು ಮಂದಿ ವಾರ್ಡರುಗಳು ಅದರ ಸುತ್ತ ಪಹರೆ ಇರುತಾರೆ. ಹಾಳು ಈ ಜೈಲುಗಳ ಹಣೇಬರಹವೇ ಇಷ್ಟು. ಎಷ್ಟು ವಿಧವಾದ ಖೈದಿಗಳು, ಎಷ್ಟು ವಿಧವಾದ ವಾರ್ಡರುಗಳು. ಇರುತಾರೆ. ಯಾರಾದರೂ ದುಡ್ಡುಗಿಡ್ಡು ತಿಂದು ಫಾಸಿ ಸ್ತಂಭದಲ್ಲಿ ಏನಾದರೂ ಗಲಾಟೆ ಮಾಡಿಬಿಟ್ಟ ಅಂದರೆ ಅಂಥ ಸಂದರ್ಭದಲ್ಲಿ ಕೆಲಸ ಆಗಲಿಕ್ಕೆ ಮುಂಚೆಯೇ ಗೊತ್ತಾಗಲಿಕ್ಕೆ ಸಾಧ್ಯವಿಲ್ಲ. ಅದಕ್ಕೆ ಇಷ್ಟೊಂದು ಎಚ್ಚರಿಕೆ. ಒಂದು ಫಾಸಿಯಾಗುವಾಗ ಸ್ವಲ್ಪ ಗಲಾಟೆ ಆಯಿತು ಅಂತ ಅಂದರೆ ಸಾಹೇಬರಿಂದ ಹಿಡಿದು ವಾರ್ಡರವರೆಗೂ ಕೆಟ್ಟ ಹೆಸರು ತಪ್ಪೋದಿಲ್ಲ. ಈ ವಿಷಯಗಳೆಲ್ಲದರ ಜವಾಬುದಾರಿಯೂ ಈ ಒಳಗಡೆಯ ಹೆಡ್ ವಾರ್ಡರನ ಮೇಲೆ ಇರಬೇಕಾದ್ದು. ಆದರೆ ಆ ನನ್ನ ಮಗನು, ಸಾಹೇಬರಿಗೆ ತುಂಬಾ ಸಲಿಗೆ. ಅವನು ಅವರ ಹತ್ತಿರ ಏನು ಹೇಳಿಬಿಟ್ಟಿದಾನೋ ಏನೋ, ಸಾಹೇಬರಿಗೆ ನನ್ನ ಮೇಲೆ ಸುಮ್ಮನೆ ಅನುಮಾನ. ಸಾಹೇಬರು ಹೊಸದಾಗಿ ಈ 'ಡಿಪಾರ್ಟ್‌ಮೆಂಟ'ಲ್ಲಿ ಬಂದಿದ್ದಾರೆ. ಜೈಲಿನ ಕಾಯಿದೆ, ಕಾನೂನು ಸ್ವಲ್ಪವೂ ಗೊತ್ತಿಲ್ಲ. ತಿಳಿದುಕೊಳ್ಳೋದೂ ಇಲ್ಲ. ಇಂಥ ಎಷ್ಟು ಮಂದಿ ಸಾಹೇಬರನ್ನು ಯುದ್ಧದ ಸಮಯದಲ್ಲಿ ನೋಡಿದ್ದೇನೆ ನಾನು ! ಎಷ್ಟು ಮೇಮ್ ಸಾಹೇಬರು ಕೊಟ್ಟಿರುವ 'ಸಂತ್ರಾ' (ಕಿತ್ತಲೇ ಹಣ್ಣು) ತಿಂದಿದ್ದೇನೆ. ಈಗ ನೋಡಿ, ಮತ್ತೇ ಈ ಹಾಳು ಹೊಟ್ಟೆಗೋಸ್ಕರ, ತಪ್ಪೇ ಇಲ್ಲದೆ ಬೈಗಳು ತಿನ್ನಬೇಕಾಗತದೆ."

ಆಗ ಈ ಸುಬೇದಾರ ಏನೋ ಹೇಳಬೇಕೆಂದಿದಾನೆ. ಅದಕ್ಕೇ ಇಷ್ಟೆಲ್ಲಾ ಪೀಠಿಕೆ

ಅಂತ ಅನ್ನಿಸಿತ್ತು. "ಹಾಗಾದರೆ ಈಗ ಎಲ್ಲಿ ಹೋಗತಾ ಇದ್ದೀರಿ ?" ಎಂದು ಕೇಳಿದೆ.

"ಈ ಹಾಳು ಸೊಳ್ಳೇ ಕಾಟ, ಬಾಬೂಜಿ, ನಿದ್ದೆ ಮಾಡುವುದಕ್ಕಾಗುತ್ತಾ ಹೇಳಿ.... ಆಫೀಸು ರೂಮಲ್ಲಿ ಹಾಸಿಗೆ ಏನೋ ಹಾಸಿಟ್ಟಿದ್ದೇನೆ. ನಿಮಗೂ ಕೂಡ ಸೊಳ್ಳೇ ಕಾಟ ಖಂಡಿತ ಇರತ್ತೆ. ಅದಕ್ಕೆ ಅಂದುಕೊಂಡೆ. ನಿಮ್ಮನ್ನೂ ಕರಕೊಂಡು ಮನೆಗೆ ಹೋಗಿ ಚಹಾ ಕುಡಕೊಂಡು ಬರೋಣ ಅಂತ. ಹಾಳು, ಯುದ್ಧಕ್ಕೆ ಹೋಗಿ ಈ ಕೆಟ್ಟ ಅಭ್ಯಾಸ ಬಂದುಬಿಟ್ಟಿದೆ. ಅದಕ್ಕೆ ಬನ್ನೀ ಮತ್ತೆ ಹೋಗಿ ಬರೋಣ. ಈ ಸೊಳ್ಳೇ ಕಡಿತದಲ್ಲಿ ಇಡೀ ರಾತ್ರಿ ಕಳೆಯಬೇಕು ಅಂತ ಏನು ಅಗತ್ಯ, ಹೇಳಿ. ನೋಖೇ ಸಿಂಗ್ ಇದಾನೆ. ಅವನ ಜೊತೆಯಲ್ಲಿ ಸಂಸಾರ ಇಲ್ಲ. ಅವನ ಮನೆಯಲ್ಲಿ ನಾವು ಹೋಗಿ ರಾತ್ರಿ ಕಳೆಯೋದಕ್ಕೆ ಬಿಡತಾನೆ. ತಾವಿದ್ದೀರಲ್ಲ.... ತಮ್ಮ ಮನಸ್ಸಿನ ಕಷ್ಟ ನಮಗೆ ಗೊತ್ತು... ಎಷ್ಟು ಇಷ್ಟ ಇದ್ದರೂ ಅದನ್ನ ಕಮ್ಮಿ ಮಾಡಲಿಕ್ಕೆ ನಮ್ಮ ಕೈಲಿ ಆಗತ್ತಾ ಹೇಳಿ. ಆದರೆ ಹಾಗಂತ ಹೇಳಿ ಕೈಲಾದಷ್ಟು ನಿಮ್ಮ ಸೇವೆ ಮಾಡಕೂಡದು ಅಂತ ಇಲ್ಲವಲ್ಲ. ಅದಕ್ಕೇ ಹೇಳಿದೆ, ನಮಗೂ ಕೂಡ ಮಕ್ಕಳು, ಮರಿ ಇದಾರೆ. ನಾವೇನೂ ವಿಲಾಯಿತಿ ಇಂದ ಬಂದವರಲ್ಲ"

ಆಗ ನಾನಂದೆ, "ಇರಲಿ ಬಿಡಿ ಪರವಾ ಇಲ್ಲ. ಸೊಳ್ಳೆ ಕಡಿತ ಅಷ್ಟೇನೂ ಇಲ್ಲ. ಈ ನಡುರಾತ್ರಿಯಲ್ಲಿ ಸುಮ್ಮನೆ ಯಾಕೆ ಅಲ್ಲಿಂದಿಲ್ಲಿಗೆ ಓಡಾಟ ಅಲೆದಾಟ ?"

ಆತನ ಒಳ್ಳೇತನ ನನಗೆ ತುಂಬಾ ಹಿಡಿಸಿತು. ನನ್ನ ಮೆತ್ತಗಿನ ಆಕ್ಷೇಪಣೆಯನ್ನು ಅಸಡ್ಡೆ ಮಾಡಿ ಸುಬೇದಾರನು ಸ್ವಲ್ಪ ಬಲಾತ್ಕಾರವಾಗಿಯೇ ನನ್ನನ್ನು ಕೈಹಿಡಿದು ಎಳೆದ. ನಾನು ಅವನನ್ನೇಕೆ ಅಸಮಾಧಾನ ಪಡಿಸಬೇಕೆಂದುಕೊಂಡು ಕಂಬಳಿಯನ್ನು ಎತ್ತಲು ತೊಡಗಿದೆ. ಆಗ ಸುಬೇದಾರನು ಸಹ ನನಗೆ ನೆರವು ನೀಡಲು ಬಂದು, "ತಡೀರಿ ತಡೀರಿ.... ನನ್ನದೂ ಸ್ವಲ್ಪ ಸಹಾಯ ಇರಲಿ. ನಾನು ಕೆಲವು ನೀವು ಕೆಲವು, ಹೊತ್ತುಕೊಂಡು ಹೋಗೋಣ" ಎಂದ.

"ಛೇ... ಇದೇನು ಭಾರ ?" ಎಂದೆ.

ಅವನು ಬಿಡದೆ ತಾನು ಮೂರು ಕಂಬಳಿಗಳನ್ನು ಹೆಗಲಮೇಲೆ ಹಾಕಿಕೊಂಡು ನನಗೆ ಒಂದು ಕಂಬಳಿಯನ್ನು ಕೊಟ್ಟ.

"ನಡೀರಿ, ಹತ್ತಿರವೇ ಇದೆ ಕ್ವಾರ್ಟರ್ಸ್" ಎಂದ.

ರಸ್ತೆಯನ್ನು ಪಾರಾಗಿ ಡಾಕ್ಟರುಗಳ ಕ್ವಾರ್ಟರ್ಸನ್ನು ಹಿಂದೆಬಿಟ್ಟು ವಾರ್ಡರುಗಳ ವಸತಿಗೃಹಗಳ ಮುಂದೆ ಬಂದು ನಿಂತೆವು. ಆ ಮನೆಗಳು ಅಷ್ಟೇನೂ ಹೆಚ್ಚಿಲ್ಲ. ಸೀನಿಯರ್ ವಾರ್ಡರಿಗೆ ಮಾತ್ರ ಮನೆ ಸಿಗುತ್ತದೆ. ಉಳಿದವರೆಲ್ಲ ಬ್ಯಾರಕುಗಳಲ್ಲಿ ವಾಸ ಮಾಡಬೇಕು. ಒಂದರ ಮುಂದೆ ಹೋಗಿ ಬಾಗಿಲನ್ನು ಬಡಿದು ಇದ್ದಕ್ಕಿದ್ದ ಹಾಗೆ ಏನೋ ತೋಚಿದವನಂತೆ ಸುಬೇದಾರ್ ಸಾಹೇಬನು, "ಅರೇ ಎಂಥ ಕೆಲಸ ಆಗಿಹೋಯಿತು ಬಾಬೂಜಿ. ಬಾಗಿಲು ಬೀಗ ಹಾಕಿದೆ. ಮರೆತೇ ಹೋಯಿತು ನನಗೆ. ನೋಖೇಸಿಂಗ್ ಈಗ ಡ್ಯೂಟಿ ಮೇಲೆ ಇದಾನೆ. ಸುಮ್ಮಸುಮ್ಮನೆ ನಿಮಗೆ ಕಷ್ಟಕೊಟ್ಟು ಇಷ್ಟು ದೂರ ನಡೆಸಿಕೊಂಡು ಬಂದೇ" ಎಂದ.

ಆಗ ನಾನು, "ಏನೀಗ ಅಂಥಾ ಕಷ್ಟ ? ಮತ್ತೆ ವಾಪಸು ಹೋಗತೇನೆ.... ಎಷ್ಟು ದೂರ ಇದೆ ಮಹಾ ?" ಎಂದೆ.

"ಇರಿ ಸ್ವಲ್ಪ ಹಾಗಾದರೆ. ದೀಪ ತಗೊಂಡು ಬರತೇನೆ."

"ಬೇಡಪ್ಪ ಯಾಕೆ ದೀಪ. ಅಷ್ಟೇನೂ ಕತ್ತಲಿಲ್ಲ. ನೀವು ಹೋಗಿ ಸುಧಾರಿಸಿಕೊಳ್ಳಿ" ಎಂದವನೇ ಗೇಟಿನ ಕಡೆ ನಡೆದು ಹೊರಟೆ. ರಾತ್ರಿಯ ಮೌನವನ್ನು ಸೀಳಿಕೊಂಡು ಒಡಕೊಡಕಾದ ಕರ್ಕಶ ಶಬ್ದವೊಂದು ಕೇಳಿಬಂತು - "ಲೆಫ್ಟ್ ಟರ್ನ್". ದೂರತ್ವವು ಈ ದನಿಯ ಕರ್ಕಶತೆಯನ್ನು ಆದಷ್ಟು ತಗ್ಗಿಸಿ ಸ್ವಲ್ಪವಾದರೂ ಕೇಳುವುದಕ್ಕೆ ಹಿತವಾಗಿರುವಂತೆ ಪ್ರಯತ್ನಿಸಿತು. ಈ ಶಬ್ದ ಜೈಲಿನ ಒಳಗಡೆಯಿಂದ ಬಂದದ್ದು. ಬಹುಶಃ ವಾರ್ಡರುಗಳ ದಳ ಬದಲಾಯಿಸಲ್ಪಡುತ್ತ ಇದೆ. ಸರಿಯಾಗಿ ಗೇಟಿನ ಮುಂದೆ ಕೂತಿದ್ದಾಗ ಎರಡು ಗಂಟೆಗಳ ಹಿಂದಿನ ಡ್ಯೂಟಿ ಬದಲಾಯಿಸುವ ಸಮಯದಲ್ಲಿ ಈ ಶಬ್ದವನ್ನು ಕೇಳಿಸಿಕೊಳ್ಳಲಿಲ್ಲ ಏಕೋ. ಈಗ ಗೇಟಿನಿಂದ ಸ್ವಲ್ಪ ದೂರ ಇರುವುದರಿಂದ ಶಬ್ದ ಕೇಳಿಸಿತಲ್ಲ, ಹೇಗೆ ? ಗೇಟ್ ಏನು ಸೌಂಡ್ ಪ್ರೂಫ್ ?

ಮತ್ತೆ ಗೇಟಿನ ಮುಂದೆ ಕಂಬಳಿ ಹಾಸಿದೆ. ಇರುವುದೆಲ್ಲ ಒಂದೇ ಕಂಬಳಿ. ಉಳಿದ ಮೂರು ಕಂಬಳಿಗಳು ಸುಬೇದಾರ್ ಸಾಹೇಬರ ಬಳಿ ಉಳಿದು ಹೋಗಿವೆ. ಇದಕ್ಕೇ ಏನೋ ಹಾಗಾದರೆ ಸುಬೇದಾರ್ ಸಾಹೇಬರು ನನಗೆ ಅಷ್ಟು ಉಪಚಾರ ತೋರಿದ್ದು ? ಇದಕ್ಕೆ ಏನೋ ಅವರಿಗೆ ಮಧ್ಯರಾತ್ರಿಯಲ್ಲಿ ಮನೆಗೆ ಹೋಗಬೇಕೆಂಬ ಚಪಲ ಹುಟ್ಟಿದ್ದು! ಒಂದು ಕಂಬಳಿಯನ್ನು ಯಾರಾದರೂ ಜೈಲಿನ ಹೊರಗಡೆ ಸಾಗಿಸಬೇಕಾದರೆ ಇನ್ನು ಮೂರು ಕಂಬಳಿಗಳನ್ನು ಮೂರು ಜನ ಸಹಕರ್ಮಿಗಳಿಗೆ ಕೊಡಬೇಕಾಗುತ್ತದೆ. ಇದು ಇಂಥ ಜನ ಪಾಲಿಸುತ್ತಿರುವ ನಿಯಮ. ಹಾಗೆ ಮಾಡದೆ ಹೋದರೆ ಸಿಕ್ಕಿಬೀಳುವ ಸಂಭವ ಉಂಟು. ಹೀಗಿರುವಾಗ ಈ ಸಮಯದಲ್ಲಿ ಒಂದೇ ಬಾರಿ ಮೂರು ಕಂಬಳಿಗಳನ್ನು ಮನೆಗೆ ತೆಗೆದುಕೊಳ್ಳುವ ಸುಯೋಗವನ್ನು ಸುಬೇದಾರ ಸಾಹೇಬನು ಹೇಗೆತಾನೇ ತಳ್ಳಿ ಹಾಕಬಲ್ಲ ? ಅದರಲ್ಲೂ ಯುದ್ಧಕಾಲದ ತುಟ್ಟಿ ದಿನಗಳಲ್ಲಿ ?

ಮತ್ತೆ ಮೊದಲಿನ ಜಾಗದಲ್ಲೇ ಬಂದು ಕೂತೆ. ದೇಶದ ವಿರಾಟ ಅರೆಯುವ ಯಂತ್ರಗಳಲ್ಲಿ ಜೈಲನ್ನು ಅಲ್ಲಗಳೆಯುವ ಹಾಗಿಲ್ಲ. ಚಕ್ರದೊಳಗೆ ಚಕ್ರ. ಇಂತಹ ಒಂದು ಚಕ್ರದ ಮುಂದೆಯೇ ಕೂತಿದ್ದೇನೆ. ಜೈಲ್ ಗೇಟು ಅತ್ಯಂತ ಕಠೋರ ಮತ್ತು ಪ್ರಾಣಹೀನ. ಎಲ್ಲವೂ ನಿಯಮಿತವಾಗಿ ನಡೆಯುತ್ತದೆ. ಗಡಿಯಾರದ ಮುಳ್ಳುಗಳಂತೆ. ಹೇಗೆ ಗಡಿಯಾರದ ಒಳಗಡೆ ಮುಖ್ಯ ಮುಖ್ಯ ಜಾಗಗಳಲ್ಲಿ "ಜ್ಯೂಯೆಲ್" ಇಟ್ಟಿರುವ ಹಾಗೆ ಈ ಜೈಲೆಂಬ ಅರೆಯುವ ಯಂತ್ರದೊಳಗೆ ಎರಡು "ಜ್ಯೂಯೆಲ್" - ಗೇಟಿನ ಹೊರಗೆ ಸುಬೇದಾರ ಸಾಹೇಬ, ಜೈಲಿನ ಒಳಗೆ ಸೆಂಟ್ರಲ್ ಟವರಿನಲ್ಲಿರುವ ಹೆಡ್‌ವಾರ್ಡರ್.

ಈ ನಾಲ್ಕೈದು ಗಂಟೆಗಳಿಂದ ನಾನು ನೋಡುತ್ತಿರುವ ಜೈಲಿನ ಏಕತಾನತೆ ಅಸಹ್ಯವೆನ್ನಿಸುತ್ತಿದೆ. ಈಗ ತಾನೇ ಕತ್ತಲಲ್ಲಿ ವಾರ್ಡರುಗಳ ವಸತಿಗಳವರೆಗೆ ನಡೆದು ಮರಳಿ ಬಂದದ್ದರಿಂದ ಈ ತಲೆನೋವು ತರುವ ಏಕತಾನದಿಂದ ಸ್ವಲ್ಪಮಟ್ಟಿಗೆ ತಪ್ಪಿಸಿಕೊಂಡೆ. ಮತ್ತೆ ಅದೇ ವಾರ್ಡರುಗಳ ದಳ ಗಡಿಯಾರದ ಮುಳ್ಳನ್ನು ಅನುಸರಿಸಿಕೊಂಡು ಬಾಗಿಲು ತೆಗೆಯುವಿಕೆ, ಮತ್ತ ಮುಚ್ಚುವಿಕೆ. ಗೇಟಿನ ಬಳಿ ವಾರ್ಡರನ್ನು ಇಡದೆ ಬರೇ ಯಂತ್ರದಿಂದಲೇ ಈ ಕೆಲಸ ಮಾಡಿಸಿದರೆ ಏನಾಗುತ್ತದ ?

ಒಂದೇ ಕೆಲಸದ ಪುನರಾವೃತ್ತಿ ಇರುವ ಕಡೆ ಯಂತ್ರದ ಸಹಾಯವನ್ನು ಪಡೆಯುವುದು ಖಂಡಿತ ಸಾಧ್ಯ, ಅಲ್ಲದೆ ಸರಿಯಾದ ಕೆಲಸ.

ದೊಡ್ಡ ಗೇಟಿನ ಮೊದಲನೆಯ ಮಾಳಿಗೆಯ ಮೇಲಿದ್ದ ವಾರ್ಡರನು ಮೆಟ್ಟಲಿಳಿದು ಕೆಳಗೆ ಬರುತ್ತಿದ್ದಾನೆ. ಎರಡನೆಯ ಮಾಳಿಗೆಯ ಮೇಲೆ ಜೈಲರ್ ಸಾಹೇಬರ ವಸತಿ ಗೃಹ. ಅದರ ಮುಂದುಗಡೆ ವರಾಂಡ. ಬಂದೂಕು ಹಿಡಿದ ಸಂತ್ರಿಯೊಬ್ಬ ಗಂಟೆ ಹೊಡೆಯುತ್ತಾನೆ - ಚಳಿಗಾಲವಾಗಲಿ, ಬೇಸಗೆಯಾಗಲಿ, ಮಳೆಗಾಲವಾಗಲಿ - ಹಗಲಾಗಲಿ, ರಾತ್ರಿಯಾಗಲಿ - ಪ್ರತಿಯೊಂದು ಗಂಟೆ ಮುಗಿದಾಗಲೂ ಗಂಟೆ ಹೊಡೆಯುವುದಂತೂ ಇದ್ದೇ ಇದೆ. ಅದರ ಮಧ್ಯೆ ಸಾಹೇಬರು ಮನೆಯೊಳಗೆ ಬಂದ ತತ್‌ಕ್ಷಣ ಒಂದು ಗಂಟೆ ಬೇರೆಯಾಗಿ ಹೊಡೆಯಬೇಕು. ಘನತೆಯುಳ್ಳ ದೊಡ್ಡ ಅತಿಥಿ ಬಂದಾಗ ಎರಡು ಗಂಟೆ. ಇದು ಜೈಲಿನೊಳಗೆ ಇರುವ ನೌಕರರಿಗೆಲ್ಲ ಎಚ್ಚರಿಕೆ ಕೊಡುವುದಕ್ಕಾಗಿ. ಬಹುಶಃ. ಮತ್ತು ಅಲ್ಲಲ್ಲಿ ಏನಾದರೂ ಸ್ಪಷ್ಟವಾಗಿ ಕಾಣುವಂಥ ತಪ್ಪುಗಳೇನಾದರೂ ಇದ್ದರೆ ಆದಷ್ಟು ಬೇಗ ಸರಿ ಮಾಡಿಡುವುದಕ್ಕಾಗಿ. ಇವೆಲ್ಲ ಅಲ್ಲದೆ ಆಗಾಗ "ಪಾಗಲೀ"* ಗಂಟೆಯೂ ಹೊಡೆಯುತ್ತಿರುತ್ತದೆ. ಈ ಸಮಯದಲ್ಲಂತೂ ಗಂಟೆ ಹೊಡೆಯಲು ತೊಡಗಿತೆಂದರೆ ವಿರಾಮವೇ ಇಲ್ಲದೆ ಹೊಡೆಯುತ್ತಿರುತ್ತದೆ. ಭಾನುವಾರದ ದಿನ ಕ್ರಿಶ್ಚಿಯನ್ನರನ್ನು ಪ್ರಾರ್ಥನೆಗೆ ಕರೆಯಲು ಚರ್ಚಿನಲ್ಲಿ ಗಂಟೆ ಹೊಡಯುತ್ತಿರುತ್ತಲ್ಲ, ಹಾಗೆ. ಚರ್ಚಿನ ಗಂಟೆಯಾದರೋ ತನ್ನ ಪಂಗಡದವರನ್ನು ಒಂದು ಕಡೆ ಸೇರಿಸುವುದರಲ್ಲಿ ವ್ಯಸ್ತವಾಗಿದ್ದರೆ ಜೈಲಿನ ಗಂಟೆ ಮಾತ್ರ ಒಂದು ಶ್ರೇಣಿಯವರನ್ನು ಸುರಕ್ಷಿತವಾಗಿ ಇಡುವುದಕ್ಕಾಗಿಯೇ ಹೊಡೆಯುತ್ತದೆ.

ಗಂಟೆ ಹೊಡೆಯುವ ವಾರ್ಡರು ಎರಡು ಗಂಟೆ ಹೊತ್ತು ಈ ಕೆಲಸ ಮಾಡಿ ಎಷ್ಟು ದೊಡ್ಡ ಜವಾಬುದಾರಿ ನಿರ್ವಹಿಸಿದೆನೆಂಬ ಗರ್ವದಿಂದ, ಗೇಟಿನ ಮುಂದುಗಡೆ ನಡೆದುಕೊಂಡು ಹೋಗುತ್ತಿದ್ದ. ಗೇಟಿನ ಹೊರಗಡೆ ಇರುವ ಸಂತ್ರಿಯು, "ಏನಣ್ಣ ಇವತ್ತು ಇಷ್ಟು ಹೊತ್ತಾಗಿ ಹೋಯಿತು ನಿನಗೆ. ನಿನ್ನ ಸರದಿ ಬದಲಾಯಿಸುವ ವಾರ್ಡರು ಆಗಲೇ ಮೇಲೆ ಹತ್ತಿ ಹೋದನಲ್ಲ" ಎಂದು ಕೇಳಿದ.

ಅದಕ್ಕೆ ಇವನು, "ಅಲ್ಲಪ್ಪಾ, ಯಾಕೆ ಹೇಳತೀಯಾ, ಬಿಡು. ಡ್ಯೂಟಿ ಶುರು ಆಗುವಾಗ ಮೊದಲನೆಯ ವಾರ್ಡರು ಹೇಳಿ ಹೋಗತಾನೆ. ಒಂದು ಗಂಟೆ ಅಷ್ಟು ಹೊತ್ತಿಗೆ ಸಾಹೇಬರನ್ನು ಹೋಗಿ ಎಬ್ಬಿಸು ಅಂತ. ನಾನು ಅಂದುಕೊಂಡೆ ಅಷ್ಟು ಹೊತ್ತಿಗೆ ಎಬ್ಬಿಸಿದರೆ ಸಾಹೇಬರು ರೌಂಡು (ಗಸ್ತು) ಹೊಡೆಯಲಿಕ್ಕೆ ಹೊರಗೆ ಹೊರಡುತಾರೆ ಅಂತ. ನಾನು ಹೋಗಿ ಬಾಗಿಲ ಹೊರಗೆ ಸ್ವಲ್ಪ ಕೂಗಿದ್ದಕ್ಕೆ ಏನು.... ಹಾಂ..... ಹೂಂ.... ಅಂತ ಉರಿದು ಮೈಮೇಲೆ ಬೀಳೋಕೇ ಬರೋದಾ ? 'ಯಾಕೆ ಹಂಗೆ ಅರಚತೀಯಾ ?' ಅಂತ.... ನೋಡಿದೆಯಾ... ಹೆಂಗೈತೆ ? ದೊಡ್ಡ ಆಫೀಸರು ನಾವೇನು ಹೇಳಾಕಾಗತ್ತೈತ ? ಅವರು ಏನಂದರೂ. ಏನು ಮಾಡಿದರೂ 'ಭೇಷ್' ಅನ್ನಿಸಿಕೋತಾರೆ. ಹಂಗೆ ನಾಕು ಮಾತು ನನಗೆ ಬೈದು ಬಿಟ್ಟು ಆಮೇಲೆ ಅಂತಾರೆ 'ಆ ಹೊಸಾ ವಾರ್ಡರು ಬರತಾನಲ್ಲ ? ಅವನಿಗೆ ಹೇಳಿ ಹೋಗು.... ಮೂರು

*ಖೈದಿಗಳು ತಪ್ಪಿಸಿಕೊಂಡು ಹೋದಾಗ ಹೊಡೆಯುವ ಗಂಟೆ.

ಗಂಟೆಗೆ ಎಬ್ಬಿಸು ಅಂತ...' ಆ ವಾರ್ಡರೇನಾದರೂ ಅವರಿಗೆ ಕೂಗದೆ ಹೋದರೆ ಆಗ ನೋಡು ಮಜಾ.... ಅವರೇ ಎದ್ದು ಬಂದು ಅವನಿಗೇ ಕೂಗತಾರ!"

ಗೇಟಿನ ವಾರ್ಡರು ಅವನಿಗೆ ಹೇಳುತ್ತಾನೆ, "ನಿಲ್ಲಣ್ಣಾ.... ಸ್ವಲ್ಪ ಖಯನಿ-ಟಯನಿ (ಹೊಗೇಸೊಪ್ಪಿನ ಪುಡಿ) ತಗೊಂಡು ಹೋಗುವಿಯಂತೆ"

"ಬ್ಯಾಡಣ್ಣಾ ಈಟೊತ್ತಿನಾಗೆ ಮತ್ತೆ ಖಯನಿ-ಟಯನಿ ಯಾಕೆ, ಹೋಗಿ ಸ್ವಲ್ಪ ಮನೀಕೊಳ್ಳಾಣ."

ಹೀಗೆ ಹೇಳಿದರೂ ಅವನು ಮುಂದೆ ಹೆಜ್ಜೆ ಹಾಕದೆ 'ಖಯನಿ'ಯ ನಿರೀಕ್ಷೆಯಲ್ಲಿ ನಿಂತೇ ಇರುತ್ತಾನೆ. ತಲೆಯ ಮೇಲಿನ ಪಗಡಿಯನ್ನು ತೆಗೆದುಬಿಟ್ಟು ಕೆಳಗಿಡುತ್ತಾನೆ. ಸೆಕೆಯಿರಬೇಕು. ಬಹುಶಃ ಅವನ ತಲೆಯ ಮೇಲೆ ಮಧ್ಯದಲ್ಲಿ ಕೂದಲುದುರಿ ಬಟ್ಟ ತಲೆಯಾಗಿದೆ.

ಗೇಟಿನ ಸಂತ್ರಿ ಹೇಳುತ್ತಾನೆ, "ಸ್ವಲ್ಪ ತಂಪಾದ ಎಣ್ಣೆ ತಿಕ್ಕು ತಲೆಗೆ. ತಣ್ಣಗಾಗತ್ತೆ. ಜಮಾದಾರ್ ಸಾಹೇಬರು ಎಣ್ಣೆ ಇಟ್ಟುಬಿಟ್ಟು ಹೋಗವರೆ. 'ಬಿ' ಡಿವಿಜನ್ ಖೈದಿಯದಿರಬೇಕು. ಖಂಡಿತ ಕಂಟರಾಕ್ಟರ್ ಸಾಹೇಬನ ಕಾಣಿಕೆ. ಬೋಳುತಲೆ ಮೇಲೆ ಎಣ್ಣೆ ಹಚ್ಚಿಕೋಬ್ಯಾಡ. ಕೂದಲು ಹರಡಿಕೊಂಡುಬಿಡು–ಅದರ ಮೇಲೆ ಮುಚ್ಕೋ ಹಂಗೆ–ಸೊಳ್ಳೇ ಅದರ ಮೇಲೆ ಕಡಿಯೋಕಿಲ್ಲ"

ಇವನ ತಲೆ ಬಟ್ಟತಲೆಯಾಗಿರತ್ತೆ ಅಂತ ಹೇಳುವುದಕ್ಕೇ ಆಗುತ್ತಿರಲಿಲ್ಲ. ಮೇರಿ ಸ್ಟೂವರ್ಟಳ* ಗುಂಗುರು ಕೂದಲು ಲೋಕಪ್ರಸಿದ್ಧ. ವಧ್ಯಭೂಮಿಗೆ ಕೊಂಡೊಯ್ದಾಗ ಜನರಿಗೆ ಆ ಕೂದಲು ಸ್ವಂತದ್ದಲ್ಲ, 'ಚೌರಿ' ಕೂದಲೆಂದು ತಿಳಿದುಹೋಯಿತು. ಇವರ ಹಾಗೇ ಒಬ್ಬ ಪೋಲೀಸ್ ಕಾನ್‌ಸ್ಟೇಬಲಿನ ತಲೆಯಲ್ಲಿ ಬಟ್ಟ ತಲೆ ನೋಡಿದ್ದೆ. ಯಾವಾಗ, ಎಲ್ಲಿ ಎನ್ನುವುದು ನೆನಪಿಲ್ಲ. ಇವರುಗಳ ತಲೆಯ ಮೇಲೆ ಪಗಡಿ ಇರತ್ತೆ ಬಟ್ಟ ತಲೆ ಬಹಳವಾಗಿ ಇತರರಿಗೆ ಕಾಣದು. ಸಂನ್ಯಾಸಿಗಳು ಜಟೆಯಿಂದ ಮುಚ್ಚಿಕೊಳ್ಳುತ್ತಾರೆ.

ನಾನೂ, ಅಣ್ಣ ಒಮ್ಮೆ ಅಖವರಿ ಸಿಂಗರ ಬೈಠಕ್ ಖಾನೆಗೆ ಹೋಗಿದ್ದೆವು. ನಾನು ಅವರನ್ನು ಭೆಟ್ಟಿಯಾಗಲು ಅವರ ಮ್ಯಾನೇಜರ್ ನಮಗೆ ಪತ್ರ ಬರೆದಿದ್ದರು. ಧೂರ್ತನಾದ ಸಂತಾಲ ಅಂಬಿಗನು ತನ್ನ ಸಣ್ಣದೊಂದು ಹೊಲವನ್ನು ಜಮೀನ್‌ದಾರನ ಕೈಯಿಂದ ಕಾಪಾಡಿಕೊಳ್ಳುವ ಸಲುವಾಗಿ ಗಾಂಧಿ ಆಶ್ರಮಕ್ಕೆ ದಾನವಾಗಿ ಕೊಟ್ಟುಬಿಟ್ಟಿದ್ದ. ಆ ಹೊಲ ಜಮೀನದಾರನ 'ಪರಿಶೆ'ಯ ಜಮೀನಿನ ಅಂಚಿನಲ್ಲಿತ್ತು. ಪರಿಶೆಯ ಮುಖ್ಯ ಆಕರ್ಷಣೆಯಾದ ವೇಶ್ಯೆಯರ 'ತಾಂಬೂ' (ಟೆಂಟ್)ಗಳು ಸಾಲುಸಾಲಾಗಿ ಈ ಅಂಬಿಗನ ಹೊಲದ ಆಚೆಯ ಬದಿಯಲ್ಲಿರುತ್ತಿದ್ದುವು. ಅಭಿವೃದ್ಧಿಗೆ ಬರುತ್ತಿದ್ದ ಈ 'ತಾಂಬೂ'ಗಳಿಗೆ ಇನ್ನೂ ಹೆಚ್ಚಾಗಿ ಜಾಗ ಬೇಕಾಗಿತ್ತು. ಅದರ ಸಲುವಾಗೇ ಜಮೀನ್‌ದಾರನಿಗೆ ಈ ಹೊಲದ ಮೇಲೆ ಕಣ್ಣು. ಆ ಅಂಬಿಗನಾದರೋ ಸ್ವಲ್ಪ ಬುದ್ಧಿ ಉಪಯೋಗಿಸಿದ–ನೆಲವನ್ನು ಗಾಂಧಿ ಪಕ್ಷಕ್ಕೆ ದಾನ ಮಾಡಿಬಿಟ್ಟರೆ ಆಗ ಆ ಪಕ್ಷವೇ ಜಮೀನ್‌ದಾರನೊಂದಿಗೆ

* ಸ್ಕಾಟ್ಲೆಂಡಿನ ರಾಣಿ ಮೇರಿಯು ಇಂಗ್ಲೆಂಡಿನ ಮೇಲೆ ಯುದ್ಧ ಹೂಡಿದಾಗ ರಾಣಿ ಎಲಿಜಬೆತ್‌ಳ ಕಡೆಯಿಂದ ಸೆರೆ ಹಿಡಿಯಲ್ಪಟ್ಟು ವಧೆ ಮಾಡಲ್ಪಟ್ಟಳು.

ಹೋರಾಡಿ ಅದನ್ನು ಅವನ ಬಾಯಿಗೆ ಬೀಳದಂತೆ ನೋಡಿಕೊಳ್ಳುತ್ತದೆ. ಆ ಮೇಲೆ ಬೇಕಾದರೆ ಹೊಲವನ್ನು ಕಾಂಗ್ರೆಸಿನ ವಶಕ್ಕೆ ಕೊಡದಿದ್ದರೆ ಆಯಿತು. ಮೊದಲಲ್ಲಿ ನಾವು ಇವನ ಕುತಂತ್ರವನ್ನು ಊಹಿಸಲಾಗಲಿಲ್ಲ. ಅಪ್ಪನೂ ಉತ್ಸಾಹ ತೋರಿಸಿರಲಿಲ್ಲ. ನಾವು ಆ ಜಮೀನನ್ನು ತೆಗೆದುಕೊಂಡು ಏನು ಲಾಭ ಎಂದಿದ್ದರು. ಆದರೆ ಅವರ ಮಾತು ಕೇಳದೆ ನಾನೇ ಮ್ಯಾನೇಜರಿಗೆ ಪತ್ರ ಬರೆದಿದ್ದೆ. ಅದಕ್ಕೆ ಉತ್ತರ ಬರೆಯುತ್ತ ನಮ್ಮನ್ನು ಭೆಟ್ಟಿಯಾಗಲು ಬರಹೇಳಿದ್ದ. ಬೈಠಕ್ ಖಾನೆಯನ್ನು ಹೊಗುತ್ತಲೂ ಅಖ್ಯೆರಿ ಸಿಂಗನನ್ನು ಗುರುತು ಹಿಡಿಯಲಾಗಲಿಲ್ಲ. ಅವರ ತಲೆಗೆ ಟೋಪಿಯಿರಲಿಲ್ಲ. ಪೂರ್ತಿಯಾಗಿ ಬಟ್ಟ ತಲೆ. ಆದರೆ ಹಿಂದುಗಡೆ ಮಾತ್ರ ಗಂಟಿರುತ್ತಿದ್ದ ಕಡೆ ಉದ್ದನೆಯ ಕೂದಲ ರಾಶಿ. ಇದನ್ನೇ ಸುರುಳಿ ಸುರುಳಿಯಾಗಿ ಸುತ್ತಿ ಬ್ರಿಲಿಯಂಟೈನ್ ಹಚ್ಚಿ ತಲೆಯ ಮುಂಭಾಗದಲ್ಲಿ ಕೂಡಿಸಲ್ಪಟ್ಟಿತ್ತು. ಈ ಕಂಟ್ರಾಕ್ಟರುಗಳಿಗೆ ಇಷ್ಟೊಂದು ಹಣ ಇರುತ್ತದೆಯೆ ? ಮ್ಯಾಥಮ್ಯಾಟಿಕ್ಸ್ ಟೀಚರ್ ನಮಗೆ ಜ್ಯಾಮಿಟ್ರಿ (ರೇಖಾಗಣಿತ) ಹೇಳಿಕೊಡುತ್ತಿದ್ದಾರೆ. ಅವರ ತಲೆಯ ಮಧ್ಯ ಭಾಗದಲ್ಲಿ ಸರಿಯಾಗಿ ಕೂದಲು ಉದುರಿ ಬೋಳಾಗಿ ಬಿಟ್ಟಿದೆ. "ಮಧ್ಯ ಭಾಗಕ್ಕೆ ತೆಗೆದುಕೊಳ್ಳಿ" ಎನ್ನುತ್ತಿದ್ದಾರೆ. ಇಡೀ ಕ್ಲಾಸಿಗೆ ಕ್ಲಾಸೇ 'ಘೊಳ್' ಎಂದು ನಗತೊಡಗಿದರು. ಬಹುಶಃ ಇದರ ಸಲುವಾಗೇ ಹಿಂದಿನ ಕಾಲದಲ್ಲೂ ಗಂಡಸರು ಹೆಂಗಸರಂತೆ "ಟೋಫನ್" ಅಥವಾ "ಚವುರಿ"ಗಳನ್ನು ಉಪಯೋಗಿಸುತ್ತಿದ್ದುದು ? ಅಖ್ಯೆರಿಸಿಂಗನು ಮ್ಯಾನೇಜರಿಗೆ ಇಂಗ್ಲಿಷಿನಲ್ಲಿ ಏನೋ ಹೇಳಿದ. ಆಮೇಲೆ ಮ್ಯಾನೇಜರನು ನಮಗೆ ಹೀಗೆ ಹೇಳುತ್ತ ಹೋದ, "ನೀವಿಬ್ಬರೂ ಮಾಸ್ತರ್ ಸಾಹೇಬರ ಮಕ್ಕಳೇ ? ನಿಮ್ಮ ಕಾಂಗ್ರೆಸಿನ ವಾಲಂಟೀರುಗಳು ಆ ಅಂಬಿಗನ ಹೊಲದ ಮೇಲೆ ಕ್ಯಾಂಪ್ ಹಾಕಿದ್ದಾರಂತೆ, ಹೌದಾ ? ಈ ಕಡೆಯಿರುವ ತಾಂಬೂಗಳ ಮುಂದೆ ಪಿಕೆಟಿಂಗ್ ಮಾಡತಾರಂತೆ ಹೌದಾ ? ನಿಮಗೆ ಗೊತ್ತಿರಬೇಕು. ನಿನ್ನೆ ರಾತ್ರಿ ಇಬ್ಬರು ವಾಲಂಟೀರುಗಳನ್ನು ಪೊಲೀಸರು ಹಿಡಿದುಕೊಂಡು ಹೋದರು. ಯಾಕೆ ಗೊತ್ತಾ ? ಈ ತಾಂಬೂಗಳ ಒಳಗಿಂದ ಅರ್ಧ ರಾತ್ರಿಯಲ್ಲಿ ಹೊರಗಡೆ ಬಂದದ್ದಕ್ಕೆ! ಹೀಗಿದಾರೆ ನಿಮ್ಮ ವಾಲಂಟೀರುಗಳು. ಪರಿಶೆಯ ಪೊಲೀಸರಿಗೆ ಕಾನೂನು ಚೆನ್ನಾಗಿ ಗೊತ್ತಿದೆ ಅಂತ ಕಾಣತ್ತೆ. ರಾತ್ರಿ ಹನ್ನೆರಡು ಗಂಟೆಯಾದ ಮೇಲೆ ಈ ಪರಿಶೆಯ ತಾಂಬೂಗಳಿಂದ ಯಾರೂ ಹೊರಗೆ ಬರಕೂಡದು ಅಂತ. ಹನ್ನೆರಡಕ್ಕೆ ಮುಂದೆ ಅಥವಾ ಬೆಳಗ್ಗೆ ಆದ ಮೇಲೆ ಬರಬಹುದು. ನೀವುಗಳು ಯಾರ ಬಲೆಯಲ್ಲಿ ಬಿದ್ದಿದ್ದೀರಿ ಅಂತ ? ಆಮೇಲೆ ಯಾರ ಪಕ್ಷ ವಹಿಸಿಕೊಂಡು ಹೋರಾಡತಾ ಇದ್ದೀರಿ ? ಈ ಅಂಬಿಗನಿಗೆ ಬೇರೆ ಎಲ್ಲಾದರೂ ಮೂರು ನಾಲ್ಕು "ಬಿಘಾ" (ಎಕರೆ) ಜಮೀನು ಕೊಟ್ಟರೆ ಸಾಕು. ನಮ್ಮ ಕಡೆ ಸೇರಿಕೊಂಡುಬಿಡತಾನೆ. ಕಾಂಗ್ರೆಸಿಗೆ ಬೇಕಿದ್ದರೆ ಒಳ್ಳೇ ಚಂದಾ ಕೊಡು ಅನ್ನಿ ಅಗತ್ಯವಾಗಿ ಕೊಡಲಿಕ್ಕೆ ಸಿದ್ಧ! ಆದರೆ ನಿಮಗಿಷ್ಟ ಬಂದ ಹಾಗೆ ಈ ತರಹ ಎಲ್ಲಾ ಕಿತಾಪತಿ ಶುರು ಮಾಡಿದಿರಿ ಅಂದರೆ ಆಗ"

"ಬಾಬೂಜಿ ನಮಸ್ಕಾರ!"

ಗಂಟೆ ಹೊಡೆಯುವ ವಾರ್ಡರು ಹೋಗುವಾಗ ಮತ್ತೆ ನನಗೆ 'ನಮಸ್ಕಾರ' ಹೇಳುತ್ತಾನಲ್ಲ, ಯಾಕ ?

ಅವನು ಹೇಳುತ್ತಾನೆ, "ಮೊನ್ನೆ ಮಧ್ಯಾಹ್ನ ಫಾಸಿ ಸೆಲ್ಲಿನಲ್ಲಿ ನನ್ನ ಡ್ಯೂಟಿ ಇತ್ತು ಬಾಬೂಜಿ! ಬಾಬೂ ಸಮಾಚಾರ ಪತ್ರಿಕೆ ಓದತಾ ಇದ್ದದ್ದು ನೋಡಿದೆ." ಈ ವಾರ್ಡರು ತಾನಾಗೇ ನನ್ನಣ್ಣನ ಸಮಾಚಾರ ಹೇಳುವುದಕ್ಕೆ ಬಂದಿದಾನೆ. ಎಷ್ಟೋ ಹೊತ್ತಿನಿಂದ ಈ ವಾರ್ಡರುಗಳನ್ನು ಕರೆದು ಅಣ್ಣನ ವಿಚಾರವಾಗಿ ಏನಾದರೂ ಕೇಳಿ ತಿಳಿದುಕೊಳ್ಳೋಣ ಎನ್ನಿಸುತ್ತಿತ್ತು. ಪ್ರತಿ ವಾರ್ಡರರ ದಳ ಹೊರಗೆ ಬಂದೊಡನೆ ಅವರಲ್ಲಿ ಯಾರು ಯಾರಿಗೆ ಫಾಸಿ ಸೆಲ್ಲಿನಲ್ಲಿ ಡ್ಯೂಟಿ ಇತ್ತು ಎಂದು ಕೇಳಿ ತಿಳಿದುಕೊಳ್ಳಲು ಆಸೆಯಾಗುತ್ತಾ ಇತ್ತು. ಆದರೂ ಏನೋ ಬಾಧಿಸುತ್ತಿತ್ತು. ಕೇಳಲಿಕ್ಕೆ ಮನಸ್ಸೇ ಬರಲಿಲ್ಲ. ಇವರಿಗೆಲ್ಲ ಬಹುಶಃ ನಾನು ಅಣ್ಣನ ವಿರೋಧವಾಗಿ ಸಾಕ್ಷ್ಯ ನುಡಿದದ್ದು ಗೊತ್ತೇ ಇರುತ್ತದೆ. ಜೈಲಿನೊಳಗಲ್ಲವೇ ವಿಚಾರಣೆ ಆಗಿದ್ದುದು. ಇವರೆಲ್ಲ ನನ್ನ ವಿಷಯವಾಗಿ ಏನು ತಿಳಿದುಕೊಂಡಿದ್ದಾರೋ ಏನು ಗೊತ್ತು?

ಅಣ್ಣನ ವಿಷಯವಾಗಿ ಈ ಅನಿರೀಕ್ಷಿತವಾದ ಸುದ್ದಿಯನ್ನು ಕೇಳಿ ತುಂಬಾ ಆನಂದವಾಯಿತು. ವಾರ್ಡರನನ್ನು ಎಷ್ಟು ವಿಷಯಗಳನ್ನು ಕುರಿತು ಚುಚ್ಚಿ ಕೇಳಿದೆನೋ ನೇಹಾಲ್ ಸಿಂಗನ ಕಡೆಯಿಂದ ಯಾವ ಯಾವ ಸಂಗತಿಗಳನ್ನು ಕೇಳಿದ್ದೆನೋ ಅವೆಲ್ಲವನ್ನೂ ಒಂದೊಂದಾಗಿ ಈ ವಾರ್ಡರನನ್ನ ಕೇಳಿ ಒಂದಕ್ಕೊಂದು ಹೋಲಿಸಿ ನೇಹಾಲ್‌ಸಿಂಗ್ ಹೇಳಿದುದುರ ಯಥಾರ್ಥತೆ ಎಷ್ಟು ಎಂದು ತಿಳಿದುಕೊಳ್ಳಲು ಯತ್ನಿಸಿದೆ. ಅಣ್ಣನ ಊಟಕ್ಕೆ ಪ್ರತ್ಯೇಕವಾದ ವ್ಯವಸ್ಥೆ ಏನಾದರೂ ಆಗಿದೆಯೇ ಎಂಬುದು ತಿಳಿಯಲಾಗಲಿಲ್ಲ. ಹಾಗಾದರೆ ನಾನು ಅಣ್ಣನಿಗೆ ತಿಂಡಿ ತಿನಿಸು ತಂದುಕೊಡಲೆಂದು ಕೊಟ್ಟ ಹಣವಷ್ಟನ್ನೂ ನೇಹಾಲ್ ಸಿಂಗನು ತಾನೇ ಕಬಳಿಸಿ ಬಿಟ್ಟಿರುವನೇನು? ಅಣ್ಣನಿಗೆ ಏನೂ ತಂದುಕೊಟ್ಟಿಲ್ಲವೆ? ಬಾಬೂಜಿ ಸೆಲ್ಲಿನಲ್ಲಿ ಎಷ್ಟು ಹೊತ್ತಿನವರೆಗೆ ಸುಮ್ಮನೆ ಅತ್ತಿಂದಿತ್ತ ಕಾಲು ಹಾಕುತ್ತ ಇರುತ್ತಾನೆ, ಯಾವಾಗ ಏಳುತ್ತಾನೆ, ಯಾವಾಗ ಸ್ನಾನ ಮಾಡುತ್ತಾನೆ, ಯಾವಾಗ ಮಲಗುತ್ತಾನೆ ಈ ಪ್ರಶ್ನೆಗಳಿಗೆಲ್ಲ ವಾರ್ಡರನು ಜವಾಬು ಹೇಳಿದ. ಆದರೆ ಬಹುಮಟ್ಟಿಗೆ ಬರೇ ಅಂದಾಜಿನಿಂದ ಹೇಳುತ್ತಿದ್ದಾನೆ, ಅನ್ನಿಸಿತು. ನಿಜವಾಗಿ, ಅವನು ಸ್ವತಃ ಯಾವುದನ್ನೂ ಗಮನಿಸಿ ನೋಡಿದ್ದಾನೆ ಎಂದು ಅನ್ನಿಸಲಿಲ್ಲ. ಒಂದು ಸಲ ಅವನು ಬಾಬೂಜಿ ಬೆಕ್ಕಿಗೆ ಮೊಸರು ತಿನ್ನಿಸುತ್ತಿದ್ದುದನ್ನ ನೋಡಿದನಂತೆ. ನೋಡಿರಬಹುದು. ನಿಜ, ಸುಳ್ಳು ಬೆರತ ಅವನ ಉತ್ತರಗಳೆಲ್ಲ ನನಗೇನೋ ಎಷ್ಟೋ ಹಿಡಿಸಿದುವು. ಒಟ್ಟಿನಲ್ಲಿ ಇದಂತೂ ನಿಜ. ಅವನು ಅಣ್ಣನನ್ನು ಖಂಡಿತ ನೋಡಿದ್ದಾನೆ. ಇಷ್ಟೆಲ್ಲ ಹೇಳಿ ವಾರ್ಡರು ಹೊರಟುಹೋದ. ಅವನ ಕಾಲಲ್ಲಿ ಪಟ್ಟಿಯೂ ಇಲ್ಲ, ಕಾಲುಚೀಲವೂ ಇಲ್ಲ. ಸೆಕೆಯಿಂದಿರಬೇಕು. ಖಾಕೀ ನಿಕ್ಕರ್ ಕೆಳಗಡೆ ಕಾಲುಗಳೆರಡೂ ಬಿಲ್ಲಿನಂತೆ ಬಾಗಿರುವಂತೆ ಕಾಣುತ್ತಿತ್ತು.

ಚೀಣಾ ವಾಸಿಗಳ ಕಾಲುಗಳು! ದೈತ್ಯನ ನೆರಳು ಕೊನೆಯಾಗುವ ಕಡೆ ಆ ಕಡೆ ಮುಂದೆ ಹೋಗುತ್ತಿರುವ ಎರಡು ಕಾಲುಗಳು! ಕತ್ತಲೆ. ಗೇಟಿನ ಒಂದು ರಶ್ಮಿ ಬೆಳಕಿನಿಂದ ಬೆಳಗಲ್ಪಟ್ಟ ಟಾರಿನ ರಸ್ತೆಯ ಒಂದು ತುಣುಕು... ಕತ್ತಲು ತುಂಬಿರುವ ಗೋಡೆ... ಗೇಟಿನ ಸಲಾಕೆಗಳು... ಮತ್ತ ಗೇಟಿನ ಒಳಗಡೆ ನೋಟ ನಿಲ್ಲುವುದು. ಎಲ್ಲೆಲ್ಲೋ ತಿರುಗಿ ತಿರುಗಿ ಮತ್ತ ಈ ಬೆಳಕು ಕಾಣುವ ಅಂಶವೇ ನೋಟವನ್ನು

ಸೆಳೆದು ಹಿಡಿಯುವುದು. ಇದರ ಹೊರಗಡೆ ಇದಕ್ಕಿಂತ ಹೆಚ್ಚಾಗಿ ಎಷ್ಟು ಅಗಾಧ ಕತ್ತಲೆ ಮತ್ತು ಯೋಜನವ್ಯಾಪಿಯಾದ, ಲೆಕ್ಕವಿಲ್ಲದಷ್ಟು ತಾರೆಗಳಿಂದ ತುಂಬಿದ ವಿಸ್ತಾರವಾದ ಮೇರೆಯಿಲ್ಲದ ಆಕಾಶವಿದೆ. ಆದರೂ ಅವು ನನ್ನ ದೃಷ್ಟಿಯನ್ನು ಸೆಳೆದು ನಿಲ್ಲಿಸುವುದಿಲ್ಲ. ಗೇಟಿನ ಒಳಗಡೆ ಹೊಕ್ಕರೆ ಮಧ್ಯೆ ಹಾಲು, ಬಲಗಡೆ ಜೈಲಿನ ಆಫೀಸ್, ಎಡಗಡೆ ಜೈಲ್ ಸೂಪರಿಂಟೆಂಡೆಂಟರೂ, ಜೈಲರೂ ಕೂಡುವ ಖಾಸಗೀ ಕೊಠಡಿಗಳು. ಆಫೀಸಿನ ಹೊರಗಡೆಯ ಸಲಾಕೆಗಳ ಮೇಲೆ ತಂತಿಯ ಜಾಲರಿಯನ್ನು ಹೊಡೆದಿರುತ್ತಾರೆ. ಖೈದಿಗಳನ್ನು ಅವರ ಮನೆಯವರು ಬಂದು ಭೆಟ್ಟಿಯಾಗಬೇಕಾದರೆ ಅವರು ಈ ಜಾಲರಿಯ ಹೊರಗಡೆ ನಿಂತು ಮಾತಾಡಬೇಕು. ಈ ಜೈಲಿನ ವ್ಯವಸ್ಥೆ ಬಲು ವಿಚಿತ್ರ. ಈ ಬಂಧುಗಳು ಬರುತ್ತಾರಲ್ಲ, ಅವರನ್ನು ಮಳೆ, ಬಿಸಿಲುಗಳಿಂದ ರಕ್ಷಿಸುವುದಕ್ಕೆ ತಲೆಯ ಮೇಲೆ ಯಾವ ಛಾವಣಿಯೂ ಇರುವುದಿಲ್ಲ. ಈ ತಂತಿಯ ಜಾಲರಿ ಹಾಕಿರುವುದು ಏಕೆಂದರೆ ಜೈಲಿನವರ ಅನುಮತಿಯಿಲ್ಲದೆ ಯಾವ ಸಾಮಾನೂ ಹೊರಗಿಂದ ಒಳಗೂ ಒಳಗಿಂದ ಹೊರಗೂ ಹೋಗದೆ ಇರಲೆಂದು. ಅನುಭವವಿಲ್ಲದಿರುವಂಥವರು ಜೈಲಿನ ಖೈದಿಗಳನ್ನು ಭೆಟ್ಟಿಯಾಗಲು ಇಷ್ಟಪಟ್ಟರೆ ಎಷ್ಟೋ ದುಡ್ಡು ಖರ್ಚು ಮಾಡಿ, ಎಷ್ಟೋ ದೇಹಶ್ರಮದಿಂದ ಜೈಲು ಗೇಟಿಗೆ ಬರುತ್ತಾರೆ. ಅಲ್ಲಿ ಬಂದೊಡನೆ ಭೆಟ್ಟಿಯಾಗಲು ಅರ್ಜಿ ಬರೆದುಕೊಡುವ ಮತ್ತು ಅದನ್ನು ಆದಷ್ಟು ಬೇಗ ಮಂಜೂರು ಮಾಡಿಸಿಕೊಳ್ಳುವುದಕ್ಕಾಗಿ ಹಣ ಖರ್ಚು ಮಾಡುವ ಕಷ್ಟ, ಕೋಟಲೆಗಳಿಂದ ದಿಕ್ಕು ತೋಚದವರಾಗಿ ಬಿಡುತ್ತಾರೆ. ಈ ದುಸ್ತರ ಸಮುದ್ರವನ್ನು ಪಾರಾಗಿ, ಗಂಟೆಗಳ ಗಟ್ಟಲೆ ಕಾದು ಕಡೆಗೆ ಕೆಲವೇ ನಿಮಿಷಗಳ ಭೆಟ್ಟಿಗಾಗಿ ಈ ಜಾಲರಿ ಹಾಕಿದ ಸಲಾಕೆಗಳ ಹೊರಗೆ ಬಂದು ನಿಂತೊಡನೆ ಒಳಗಡೆ ತಮ್ಮ ಮುಂದೆ ನಿಂತಿರುವ ಕೆದರಿದ ಕೂದಲ, ಜೈಲಿನ ಒರಟು ಉಡುಪಿನಲ್ಲಿರುವ ಬಡಕಲು ಮೈಯ ಮನುಷ್ಯನನ್ನು ತಮ್ಮವನೇ ಎಂದು ಗುರುತು ಹಿಡಿಯುವುದಕ್ಕೆ ಎಷ್ಟೋ ಹೊತ್ತು ಹಿಡಿಯುತ್ತದೆ. ಸಾಧಾರಣವಾಗಿ ಮೇಟ್ ಮತ್ತು ವಾರ್ಡರುಗಳ ಅಸಭ್ಯ ಮಾತುಗಳು, ಗದರಿಕೆಗಳೂ 'ಸುರಿಮಳೆಯಂತೆ ಹೊಡೆಯುತ್ತಿರುತ್ತವೆ. ಖೈದಿಗಳ ಪೋಷಾಕು, ಅವರ ಕಂಗಾಲಾದ ಕಣ್ಣ ನೋಟ, ಸಲಾಕೆಗಳು, ಬೀಗ, ಸಿ.ಐ.ಡಿ. (ಗೂಢಚಾರ ಪೊಲೀಸರು) ಇವೆಲ್ಲ ಕೂಡಿ ಸೃಷ್ಟಿಯಾಗಿರುವ ಈ ವಿಕೃತವಾದ ಪರಿಸರವು ಎಂಥವರನ್ನೂ ಕಂಗೆಡಿಸಿ ಮೂರ್ಛೆ ಬೀಳುವ ಹಾಗೆ ಮಾಡದೆ ಇದ್ದರೆ ಆಶ್ಚರ್ಯ. ಬೇಕಾದುದೋ, ಬೇಡವಾದುದೋ ಒಂದೆರಡು ಮಾತುಗಳಾಡಿದೊಡನೆ ಇನ್ನು ಸಮಯ ಆಗಿಹೋಯಿತು, ಹೊರಡಿ ಎಂದು ಸಿಡಿಲು ಹೊಡೆದ ಹಾಗೆ ವಾರ್ಡರು ನಿಷ್ಕರುಣೆಯಿಂದ ಹೇಳುವ ಮಾತು ಅವರನ್ನು ಇನ್ನೂ ತಬ್ಬಿಬ್ಬು ಮಾಡಿಬಿಡುತ್ತದೆ. ಅವರು ಆದಾವ ಒಂದೆರಡು ನಿಮಿಷಗಳಲ್ಲಿ ಮನೆ ಕಡೆ ಕಾಲು ಹಾಕುವಾಗ, ಅವರ ಕಣ್ಣ ಮುಂದೆ ಅವರ ಬಂಧುವಿನ ಎರಡು ಬೇರೆ ಬೇರೆ ಪ್ರತಿಮೆಗಳು ಕಾಣಬರುತ್ತಿರುತ್ತವೆ. ಒಂದು - ಮೊದಲ ಬಾರಿ ಖೈದಿ ಸಲಾಕೆಯ ಮುಂದೆ ನಿಂತಾಗ, ಅವಮಾನದಿಂದ, ಪಶ್ಚಾತ್ತಾಪದಿಂದ ತುಂಬಿದ ನೋಟವುಳ್ಳ, ಏನೋ ಆಸೆಯಿಂದ ಮತ್ತೆ ತಲೆಎತ್ತಿ ನಿರೀಕ್ಷಿಸುತ್ತಿರುವ ವಿಗ್ರಹ.... ಎರಡು - ಆಮೇಲೆ ಆಶಾಭಂಗದಿಂದ ಮತ್ತೆ ತನ್ನ ನರಕಕ್ಕೆ ವಾಪಸು ಹೋಗುತ್ತಿರುವ,

ಕರುಣೆ ಮತ್ತು ನಿಸ್ಸಹಾಯತೆಯೇ ಮೈವೆತ್ತಿರುವಂಥ ಮೂರ್ತಿ. ಆಗ ಹೊರಟುಹೋಗುವಾಗ ಆ ಖೈದಿ ಬಲವಂತವಾಗಿ ತುಟಿಗಳ ಮೇಲೆ ತಂದುಕೊಳ್ಳುವ ಹರುಷವಿಲ್ಲದ ಸಪ್ಪೆ ನಗೆಯಂತೂ ಎದೆಯೊಡೆಯುವಂತೆ ಅಳುವುದಕ್ಕಿಂತ ಹೆಚ್ಚಾಗಿ ಕರುಳು ಕೊಯ್ಯುತ್ತದೆ.

ಸಾವಿರದ ಒಂಬೈನೂರ ಮೂವತ್ತಮೂರರಲ್ಲಿ ನಾನು ಅಪ್ಪನನ್ನು ಭೆಟ್ಟಿಯಾಗಲು ಹಜಾರಿ ಬಾಗ್ ಜೈಲಿಗೆ ಹೋಗಿದ್ದೆ. ದೊಡ್ಡಮ್ಮನು ಅಪ್ಪನಿಗೆಂದು ಒಂದು ಟಿಫಿನ್ ಕ್ಯಾರಿಯರ್ ತುಂಬ ಏನೇನೋ ತಿಂಡಿ, ತಿನಿಸುಗಳನ್ನು ಕಳಿಸಿದ್ದರು. ಆದರೆ ಅಲ್ಲಿ ಹೋದಾಗ ಅವತ್ತು ಮೇಲಿನ ದರ್ಜೆಯ ಖೈದಿಗಳನ್ನು ಭೆಟ್ಟಿಯಾಗುವ ದಿನವಲ್ಲ ಎಂದು ತಿಳಿಯಿತು. 'ಸಿ' ಕ್ಲಾಸ್ ಖೈದಿಗಳನ್ನು ಭೆಟ್ಟಿಮಾಡುವ ದಿನ. ಅನೇಕ ಜನ ಭೆಟ್ಟಿಮಾಡಲು ಬಂದಿರುವವರು, ರೈಲ್ವೆ ಸ್ಟೇಷನ್ನಿನ ಟಿಕೆಟ್ ಬುಕಿಂಗ್ ಆಫೀಸಿನ ಮುಂದೆ ಪ್ರಯಾಣಿಕರು ನಿಂತಿರುವ ಹಾಗೆ ನುಗ್ಗಾಡಿಕೊಂಡು ನಿಂತಿದ್ದರು. ಈ ಕಡೆ ಒಳಗಡೆ ಸಹ ಸಲಾಕೆಗಳ ಹಿಂದೆ ಅನೇಕ ಖೈದಿಗಳು ತಮ್ಮ ತಮ್ಮ ಬಂಧುಗಳನ್ನು ನೋಡುವ ಆತುರದಿಂದ ಸಲಾಕೆಗಳ ಹತ್ತಿರ ಬರಲು ಪರಸ್ಪರ ತಳ್ಳಿಕೊಂಡು ದೊಡ್ಡ ಗಲಾಟೆ ಮಾಡುತ್ತಿದ್ದರು. ಬರೇ ಗಡಿಬಿಡಿ. ಕೂಗಾಟ, ಅರಚಾಟ. ಈ ಗಲಭೆಯಲ್ಲಿ ಯಾರು ಯಾರಿಗೆ ಏನು ಹೇಳುತ್ತ ಇದ್ದಾರೆ ಎಂಬುದೇ ತಿಳಿಯುತ್ತಿರಲಿಲ್ಲ. ಒಬ್ಬ ವಯಸ್ಕಳಾದ ಹೆಂಗಸು ಬಿಕ್ಕಿಬಿಕ್ಕಿ ಅಳುತ್ತ ಗ್ರಾಮ್ಯಭಾಷೆಯಲ್ಲಿ ಏನೇನೋ ಹೇಳುತ್ತಾಳೆ. ಅವಳು ಏನು ಹೇಳುತ್ತಾಳೆ ಎಂಬುದು ಅವಳ ಮಗನಾದ ಖೈದಿಗೆ ಏನಾದರೂ ತಿಳಿದುಬರುತ್ತದೆಂಬುದು ಸಂದೇಹ. ಒಬ್ಬ ಮುದುಕಿಯಾದ ವಿಧವೆ ತನ್ನ ಮಗನಿಗೆ ಕೆಲವು ಸೀಬೆಹಣ್ಣುಗಳನ್ನೂ ಒಂದು ಎಲೆಯಲ್ಲಿ ಕೆಲವು ಬೋಂಡಾಗಳನ್ನೂ ತಂದಿದ್ದಳು. ಇವನ್ನು ತನ್ನ ಮಗನಿಗೆ ತೆಗೆದುಕೊಂಡು ಹೋಗುವಂತೆ ವಾರ್ಡರನನ್ನು ಪುಸಲಾಯಿಸುತ್ತಿದ್ದಾಳೆ. ವಾರ್ಡರನು ತನಗೆ ಅವಳಿಂದ ಬರಬೇಕಾದ ಲಂಚದ 'ದರ' ಏರಿಸುತ್ತಿದ್ದಾನೆ. ಡಾಕ್ಟರ್ ಸಾಹೇಬರು ಇದಕ್ಕೆ ಒಪ್ಪಿಗೆ ಕೊಡದೆ ಹೋದರೆ ಏನು ಮಾಡುವುದು ? 'ಸಿ' ಕ್ಲಾಸಿನ ಖೈದಿಗಳು ಹೊರಗಿನವರಿಂದ ಬರುವ ತಿಂಡಿ ಪದಾರ್ಥ ತಿನ್ನುವುದಕ್ಕೆ ಹುಕುಂ ಇಲ್ಲ. ಹಾಗಿರುವಾಗ 'ಸಿ' ಕ್ಲಾಸು ಖೈದಿಗೆ ತಿಂಡಿ ಪದಾರ್ಥ ಕೊಟ್ಟರೆ ನನಗೆ ಕಷ್ಟ ಆಗುತ್ತದೆ. ಒಂದು ರೂಪಾಯಿ ಕೊಟ್ಟರೆ ಸಿದ್ಧ. "ಡಾಕ್ಟರ್ ಸಾಹೇಬರು ಮಂಜೂರು ಮಾಡಬೇಕಾದರೆ ಇನ್ನೊಂದು ರೂಪಾಯಿ. ನನ್ನ ನೌಕರಿಗೇ ಖೋತಾ ಬರಬಹುದು. ಇಂಥದಲ್ಲ ಸುಮ್ಮನೆ ಆದಾಯ ಇಲ್ಲದೆ ನಾನೇಕೆ ಮಾಡಬೇಕು ?" ಅನೇಕ ವಿಧವಾಗಿ ಬೇಡಿಕೊಂಡ ಮೇಲೆ ಒಂದು ರೂಪಾಯಿಗೆ ಮಾಡುವುದಾಗಿ ಒಪ್ಪಿಕೊಳ್ಳುತ್ತಾನೆ. ಬಹುಶಃ ಈ ಒಂದು ರೂಪಾಯಿ ಆ ಬಡ ಹೆಂಗಸಿನ ಒಂದು ವರುಷದ ಸಂಚಯ. ರೂಪಾಯಿಯನ್ನು ವಾರ್ಡರನು ತನ್ನ ಪಗಡಿಯೊಳಗೆ ಇಟ್ಟುಕೊಳ್ಳುತ್ತಾನೆ. ಆದರೆ ಮುದುಕಿ ಕೊಟ್ಟ ತಿಂಡಿ ಪದಾರ್ಥ ಅವಳ ಮಗನಿಗೆ ತಲಪಿತೋ ಇಲ್ಲವೋ ಅನ್ನುವುದು ಯಾರಿಗೆ ಗೊತ್ತು ?

ಗೇಟಿನ ಎಡಭಾಗದ ಗೋಡೆಯ ಮೇಲೆ ಒಂದು ಗಾಜಿನ ಫ್ರೇಮಿನ ಮಧ್ಯೆ ಒಂದು ನೋಟೀಸ್ ಬೋರ್ಡು ಇದೆ. ಅದರ ಒಳಗಡೆ ಕರಿಬಣ್ಣದ ಬೋರ್ಡಿನ

ಮೇಲೆ ಅನೇಕ ಬಿಳೀ ಕಾಗದಗಳನ್ನು ಅಂಟಿಸಿದ್ದಾರೆ. ನೋಟೀಸ್ ಏತರದೋ ಗೊತ್ತಿಲ್ಲ. ಇತರ ಜೈಲುಗಳಲ್ಲಿ ನನಗೆ ಕಂಡ ಹಾಗೆ ಜೈಲ್ ಕಮಿಟಿಯ ಮೆಂಬರುಗಳ ಹೆಸರುಗಳನ್ನು ಸೂಚಿಸಿರುತ್ತಾರೆ. ಇದರಲ್ಲಿ ಯಾವ ಯಾವುದೋ ನೋಟೀಸುಗಳು. ಬಹುಶಃ ಅವುಗಳಲ್ಲಿ ಒಂದು ಐ.ಜಿ. (ಇನ್‌ಸ್ಪೆಕ್ಟರ್ ಜನರಲ್ ಆಫ್ ಜೈಲ್ಸ್) ಇಷ್ಟರಲ್ಲೇ ಬರುವವರಿದ್ದಾರೆ ಎಂದಿರಬಹುದು. ನೋಟೀಸ್ ಬೋರ್ಡಿನ ಅಡಿಯಲ್ಲಿ ಕೆಳಗಡೆ ಟೆಲಿಫೋನ್ ರಿಸೀವರ್, ಇದರ ಪಶ್ಚಿಮ ದಿಕ್ಕಿನಲ್ಲಿ ಗೋಡೆಗೆ ಅಂಟಿದಂತೆ ಒಂದು ತೂಕ ಮಾಡುವ ಯಂತ್ರ ರೈಲ್ವೆ ಸ್ಟೇಷನ್ನಿನಲ್ಲಿ ಇರುವುದಲ್ಲ, ಹಾಗೆ.... ಸರಿಯಾಗಿ ಗೇಟಿನ ನಡುವೆ ಒಂದು ಸಣ್ಣ ರೈಲ್ ಲೈನ್ ಹೋಗುತ್ತದೆ. ಜೈಲಿನ ಕಾರ್ಖಾನೆಯಲ್ಲಿ ತಯಾರಾಗುವ ವಸ್ತುಗಳನ್ನು ಹೊರಗೆ ಸಾಗಿಸುವುದಕ್ಕೆ ಒಂದು ನ್ಯಾರೋ ಗೇಜ್ ಲೈನ್ ಪ್ರತ್ಯೇಕವಾಗಿ ತಯಾರು ಮಾಡಲ್ಪಟ್ಟಿದೆ. ಡಿ.ಟಿ.ಆರ್. ದಿಲ್ಲಿ-ತಿರಹಟ್ ರೈಲ್ವೆಗೆ ಸೇರಿದ್ದ ಬಿಷನ್‌ಗಂಜ್ ಲೈನಿನಲ್ಲಿ ಒಂದು ಸಲ ಆ ಸಣ್ಣ ಇಂಜನ್ನಿಗೆ ಒಂದು ಹಸು ಢಿಕ್ಕಿ ಹೊಡೆದುಬಿಟ್ಟು ಚುಂಗೀಪಾಡಾ ಹತ್ತಿರ ಗಾಡಿ ಉರುಳಿಕೊಂಡುಬಿಟ್ಟಿತ್ತು.

ಈ ಜೈಲಿನ ರೈಲ್ ಲೈನಿನುದ್ದಕ್ಕೂ ಅಲ್ಲಲ್ಲಿ ಸಗಣಿ ಬಿದ್ದಿದೆ. ಬಹುಶಃ ಎತ್ತಿನ ಗಾಡಿ ಅದರ ಮೇಲೆ ಸಾಗಿ ಹೋಗಿರಬೇಕು... ಸೂಪರಿಂಟೆಂಡೆಂಟ್ ಸಾಹೇಬರೂ, ಮ್ಯಾಜಿಸ್ಟ್ರೇಟರೂ ಬರುವವರಿದ್ದಾರೆಂದು ಎಲ್ಲರೂ ಸಂಭ್ರಮವಾಗಿದ್ದಾರೆ. ಆದರೆ ರೈಲ್ ಲೈನನ್ನು ಚೊಕ್ಕವಾಗಿಡುವುದಕ್ಕೆ ಯಾರಿಗೂ ತೋಚಿಲ್ಲ. ಬಹುಶಃ ತೋಚಿದ್ದರೂ ಬೆಳಗ್ಗೆ ಖೈದಿಗಳು ಹೊರಗಿನ ಕೆಲಸಕ್ಕೆ ತರಲ್ಪಡುವವರೆಗೂ ಈ ಗುಡಿಸುವ ಕೆಲಸ ಮಾಡುವವರು ಯಾರು ? ಘನ ವ್ಯಕ್ತಿಗಳಾದ ವಾರ್ಡರ್ ಸಾಹೇಬರುಗಳು ಈ ಹೇಸಿಗೆ ಕೆಲಸ ಮಾಡಬೇಕೇನು ? ಈ ರೈಲ್ ಲೈನ್, ನೋಟೀಸ್ ಬೋರ್ಡ್, ತೂಕ ಮಾಡುವ ಯಂತ್ರ, ಟೆಲಿಫೋನ್, ಕಲ್ಲಿನ ಚಪ್ಪಡಿಗಳಿಂದ ಮಾಡಿರುವ ನೆಲ ಇವೆಲ್ಲ ಸೇರಿ ನನ್ನ ಮನಸ್ಸಿಗೆ ಯಾವುದೋ ರೈಲ್ವೆ ಸ್ಟೇಷನ್ನಿನ ಭಾವ ತರುತ್ತವೆ. ಗಾಡಿಗಾಗಿ ಕಾಯುತ್ತ ಪ್ಲಾಟ್‌ಫಾರಮ್ಮಿನ ಮೇಲೆ ಕಂಬಳಿ ಹಾಸಿ ಕೂತಿದ್ದೇನೇನೋ ಎನ್ನಿಸುತ್ತದೆ.

ರಾಮಕೃಷ್ಣ ಮಿಷನ್ನಿನ ಸತ್ಕಾರ ಕಮಿಟಿಗೆ ಸುದ್ದಿ ತಿಳಿಸಲು ಸೌರೀನನಿಗೆ ಹೇಳಿದ್ದೇನೆ. ಎಲ್ಲರೂ ಖಡಿಯಾಬಾದ್ ಘಾಟಿನಲ್ಲಿ ಸಿದ್ಧವಾಗಿರಬೇಕೆಂದು ತಿಳಿಯಹೇಳಿದ್ದೇನೆ. ಸಣ್ಣ ಊರು. ಬಹಳ ಮಂದಿ ಜನ ಯಾವುದಾದರೊಂದು ರೀತಿಯಲ್ಲಿ ಗವರ್ನ್‌ಮೆಂಟಿನ ಸಂಗಡ ಸೇರಿಕೊಂಡಿರುತ್ತಾರೆ. ವಕೀಲರು, ಮೊಕ್ತಾರರು (ಫೂಟ್ ಲಾಯರು) ಗುಮಾಸ್ತರು. ಅವರುಗಳೆಲ್ಲರಿಗೂ ಸರ್ಕಾರದ ಈಗಿನ ಮನೋಭಾವ ದೊಂದಿಗೆ ಹೊಂದಿಕೊಂಡು ಹೋಗುವ ಅಗತ್ಯವಿದೆ. ರಾಮಕೃಷ್ಣ ಕಮಿಟಿಯ ಜನ ಬರದೆ ಹೋದರೆ ಏನು ಮಾಡುವುದು ? ಪೋಲೀಸರ ಭಯದಿಂದ ಬರದೆ ಹೋದರೂ ಸಾಧ್ಯ. ಆಗ ಮುಂದಿನ ದಾರಿ ? ಏನೀಗ ಹಾಗಾದರೂ ಸಹ ಜೈಲಿನವರೇ ದಹನ ಮಾಡುವರು. ಜೈಲಿನ ಅಧಿಕಾರಿಗಳು ಇಂಥ ಸಂದರ್ಭಗಳಲ್ಲಿ ಐದು ರೂಪಾಯಿ ಖರ್ಚಿಗೆ ಮತ್ತು ಜೈಲಿನ ಮೋಟಾರು ಲಾರಿ, ಹೆಣ ಸಾಗಿಸುವುದಕ್ಕೆ ಒದಗಿಸಲು ವ್ಯವಸ್ಥೆ ಮಾಡಿದ್ದಾರೆ. ಈ ಸೌರೀನನಿಗೆ ಒಂದು ಪ್ರೊಸೆಷನ್ ಏರ್ಪಾಡು ಮಾಡುವ ಅಭಿಪ್ರಾಯವಿರುವ ಹಾಗೆ ತೋರುತ್ತದೆ. ಬೃಹಸ್ಪತಿವಾರ ಕಲೆಕ್ಟರ್

ಸಾಹೇಬರೊಂದಿಗೆ ಭೆಟ್ಟಿಯಾಗಲು ಹೋಗಿದ್ದೆ. ಕಲೆಕ್ಟರ್ ಸಾಹೇಬರು ಪ್ರೊಸೆಷನ್ ಏರ್ಪಾಡು ಮಾಡದೆ ಇರುವ ಷರತ್ತಿನ ಮೇಲೆ ಶವವನ್ನು ನನ್ನ ವಶಕ್ಕೆ ಕೊಡಲು ಒಪ್ಪಿಕೊಂಡಿರುವುದು. ಆದರೆ ನನ್ನ ಮಾತನ್ನು ಇವರೆಲ್ಲ ಕೇಳುತ್ತಾರೆಯೆ ? ಸ್ಮಶಾನದಲ್ಲಿ ಎಲ್ಲರೂ ಸೇರಿರುವಾಗ ಮಂದಿ ಎಷ್ಟೇ ಇದ್ದರೂ ನಾನು ಹೇಳಿದ ಮಾತನ್ನು ಕೇಳಬಹುದು. ಆದರೆ ಮೆರವಣಿಗೆ ಆಗಲೇಬೇಕೆಂದು ಹಟ ಹೂಡಿದರೆ ಯಾರನ್ನು ತಡೆಯಲಾಗುತ್ತದೆ ? ಸಣಬು ಕಾರ್ಖಾನೆಯ ಕೆಲಸಗಾರರ ಯೂನಿಯನ್ ಸೆಕ್ರೆಟರಿ ಅಣ್ಣಾ, ಎಕ್ಕಾಗಾಡಿ (ಜಟಕಾಗಾಡಿ) ಹೊಡೆಯುವವರ ಯೂನಿಯನ್ ಪ್ರೆಸಿಡೆಂಟ್ ಅಣ್ಣಾ - ಈ ಯೂನಿಯನ್‌ಗಳ ಸದಸ್ಯರನ್ನು ತಡೆಯುವವರು ಯಾರು ? ಕಲೆಕ್ಟರ್ ಸಾಹೇಬರಿಗೆ ನಾನು ಮಾತು ಕೊಟ್ಟಿದ್ದರೇನು, ಕೊಡದಿದ್ದರೇನು ಅದೊಂದೇ ದೊಡ್ಡದೇನು ? ಇಲ್ಲ ಆಗಲೇಬೇಕು ಮೆರವಣಿಗೆ. ಅಣ್ಣಾನ ಮೃತದೇಹ, ದೇಶಕ್ಕಾಗಿ ಜೀವವನ್ನೇ ಬಲಿದಾನ ಮಾಡಿದ ದೇಶಭಕ್ತನ ಶವ-ಬಿಲೂ ಬಾಬು - ಮಾಸ್ತರ್ ಸಾಹೇಬರ ಹಿರೇಮಗನ ಮೃತದೇಹ ಇದಕ್ಕಲ್ಲದೆ ಬೇರೆ ಯಾವ ಶವಕ್ಕೆ ಮೆರವಣಿಗೆ ಮಾಡುತ್ತಾರೆ ? ಗಾಡಿ-ಮೋಟಾರು ಲೆಕ್ಕವಿಲ್ಲದಷ್ಟು ಜನ ಸಂದಣಿ ಹೂಮಾಲೆಗಳು ದೇವದಾರು ಮರದ ಎಲೆಗಳು - ಮನೆ, ಮನೆಗಳ ಮಾಳಿಗೆಗಳಿಂದ ಗಂಗಾಜಲ ಪ್ರೋಕ್ಷಣೆ - ಯಾವುದೋ ಎರಡನೆಯ ಮಾಳಿಗೆಯಿಂದ ಒಂದು ತಾಳೆಗರಿಯ ಬೀಸಣಿಗೆ ಬೀಳುತ್ತದೆ. ಅದನ್ನ ಕೈವಶ ಮಾಡಿಕೊಳ್ಳಲು ಜನರ ಪೈಪೋಟಿ, ನೂಕುನುಗ್ಗಲು, ಕೂಗಾಟ, ಕೋಲಾಹಲ - ಆಮೇಲೆ ಕೊಣೆಯೇ ಇಲ್ಲದ ಜನ ಸಂದಣಿಯ ಸರ್ಪಿಲ (ಹಾವಿನಾಕಾರದ) ಗತಿ - ನಿಶ್ಯಬ್ದ - 'ಗಾಂಧೀಜಿ ಕೀ ಜೈ' ಇಲ್ಲ 'ಬಿಲೂ ಬಾಬೂ ಕಿ ಜೈ' - ಇಲ್ಲ ಮೌನ ಶೋಕದ "ಮಾರ್ಸಿಯಾ" - (ವಿಶ್ವದ ದಲಿತ ಜನರ ಸಂಘ ಗೀತೆ) ಗೀತೆಯಿಲ್ಲ. ವಿಶೃಂಖಲ ಜನ ಸಮುದ್ರದ ಉನ್ಮಾದವಿಲ್ಲ - ಜ್ಞಾನತಪ್ಪುವಂಥ ಶೋಕದ ನಿಷ್ಕ್ರಿಯತೆಯಿದೆ - ಅದ್ವಿತೀಯವಾದಂಥ ಒಂದು ರಾಷ್ಟ್ರೀಯ ಕುಟುಂಬದ ಬಗ್ಗೆ (ಒಬ್ಬ ಮನುಷ್ಯನನ್ನು ಬಿಟ್ಟು) ಅಪಾರವಾದ ಅನುಕಂಪವಿದೆ - ಸುಪ್ತವಾದ ರಾಷ್ಟ್ರೀಯ ಜಾಗೃತಿಯ ಧಿಕ್ಕಾರವಿದೆ. ಉರಿದು ತಣ್ಣಗಾಗಿರುವ ಚಿತೆಯ ಬೂದಿಯ ವ್ಯರ್ಥ ಆಕ್ರೋಶದ ನಡುವೆಯೂ ಇನ್ನೂ ಕೆಂಪಗೆ ಉರಿಯುತ್ತಿರುವ ಚಿರಂಜೀವವಾದ ಬೆಂಕಿಯಿದೆ. ಒಂದು ಸನ್ನೆ ಸಾಕು, ಒಂದೇ ಒಂದು ಕೂಗು ಸಾಕು, ಈ ಶಾಂತ, ಅಸಹಾಯ ಶೋಕ ಪೀಡಿತ ಜನತಾ ಸಮುದ್ರ ಅಕಸ್ಮಾತ್ ಸಿಡಿದೆದ್ದು ಆರ್ಭಟಿಸಿ ನನ್ನ ಮೇಲೆ ಬಿದ್ದು ಚೂರುಚೂರಾಗಿ ಕತ್ತರಿಸಿ ಬಿಸಾಡಲು ಸಾಧ್ಯ ! ಹೆಸರಿಲ್ಲದಂತೆ ಅಳಿಸಿಹಾಕಲು ಸಾಧ್ಯ ! ಸಂಪೂರ್ಣ ಹರತಾಳ. ಅಂಗಡಿಗಳೆಲ್ಲ ಮುಚ್ಚಿವೆ. ಮೆರವಣಿಗೆ ಹೊರಡುತ್ತದೆ. ಒಂದೇ ಒಂದು ಗಳಿಗೆ ದೊಡ್ಡಮ್ಮನ ಮನೆ ಮುಂದೆ ನಿಲ್ಲುತ್ತದೆ. ದೊಡ್ಡಮ್ಮ ಹತ್ತಿರ ಬಂದು ಒಮ್ಮೆಯಾದರೂ ಶವದ ಮುಖದ ಮೇಲಿಂದ ಹೂ ರಾಶಿಯನ್ನು ಸರಿಯಿಸಿ ತನ್ನ ಪ್ರೀತಿಯ ದತ್ತು ಮಗನ ಕಡೆ ನೋಡಬಲ್ಲಳೆ ? ಮುಖ ಮಾತ್ರ ಕಾಣುವ ಹಾಗೆ ಮಾಡುತ್ತಾರೆ. ಕುತ್ತಿಗೆಯ ಸುತ್ತ ಬಟ್ಟೆಯಿಂದ ನಾನು ಮುಚ್ಚಿಬಿಡುತ್ತೇನೆ. ಚಂದನ ಲೇಪದಿಂದ, ಹೂಗಳಿಂದ ಮುಖದ ಬೀಭತ್ಸತೆ ಮರೆಮಾಡಲ್ಪಟ್ಟಿದೆ. ಬಾಯಿಯ ಒಂದು ಕೊನೆಯಲ್ಲಿ, ಯಾವಾಗ ಬಿತ್ತೋ ಏನೋ,

ಕೆಂಪನೆಯ ಜೊಲ್ಲು ಒಂದೆರಡು ತೊಟ್ಟು ಬಿದ್ದು ಈಗ ಒಣಗಿ ರಕ್ತ ಚಂದನದ ಲೇಪದಂತೆ ಕಾಣುತ್ತದೆ. ಇಲ್ಲ, ದೊಡ್ಡಮ್ಮನ ಮನೆಯ ಮುಂದ ಮೆರವಣಿಗೆ ಹೋಗದಂತೆ ಏನಾದರೂ ಮಾಡಿ ತಡೆಯಬೇಕು.

ಸ್ಮಶಾನ ಭೂಮಿಯಲ್ಲಿ ಸಹ ಎಲ್ಲಿ ನೋಡಿದರೆ ಅಲ್ಲಿ ಜನ.... ಜನ... ಕಿಕ್ಕಿರಿದು ತುಂಬಿರುವ ಜನ. ಕೆಂಪು ಪಗಡಿಗಳು ನಾಲ್ಕೂ ಕಡೆ ಕಾಣಿಸಿಕೊಳ್ಳುತ್ತವೆ. ಪೊಲೀಸ್ ಬಂದೋಬಸ್ತು. ಬಂದೂಕು ಹಿಡಿದ ಅಂಗರಕ್ಷಕರ ಸಮೇತ ಮ್ಯಾಜಿಸ್ಟ್ರೇಟರೂ ಮತ್ತು ಪೊಲೀಸ್ ಸೂಪರಿಂಟೆಂಡೆಂಟ್ ಸಾಹೇಬರೂ ಮೋಟಾರ್ ಕಾರಿನಿಂದ ಇಳಿಯುತ್ತಾರೆ. ಶವ ಸಂಸ್ಕಾರದಲ್ಲಿ ಅನುಭವವುಳ್ಳ ಮನತೀದಾ ಚಿತೆಯನ್ನು ಸಜ್ಜುಗೊಳಿಸುತ್ತಿದ್ದಾನೆ. ಅವನು ಮಾತ್ರ ಎಲ್ಲಾ ವಿಧವಾದ ಉದ್ರೇಕ ಮತ್ತು ಭಾವಾವೇಶಗಳಿಗೆ ದೂರನಾದವನು. ಅವನು ಕೇಳುತ್ತಾನೆ. "ಏನಯ್ಯಾ - ಇದು ಮುನಿಸಿಪಾಲಿಟಿಯವರ ಕಟ್ಟಿಗೆಯೋ - ಬಡುಕೊಂಡ ಹಾಗೇ ಇದೆ ಬಿಡು. ಹೆಣ ಸುಡಲಿಕ್ಕೆ ಯಾವಾಗಲಿಂದಲೋ ಸೌದೆ ಸ್ಟಾಕ್ ಮಾಡುವುದಕ್ಕೆ ಶುರು ಮಾಡಿದೆ. ಆಗಲಿಂದಲೂ ಇದೇ ಸೌದೆಯನ್ನೇ ನೋಡತಾಯಿದ್ದೇನೆ. ಎಲ್ಲಾ ಹುಳು ತಿಂದು ಹಾಕಿಬಿಟ್ಟದೆ. ಇನ್ನು ಹ್ಯಾಗಿರತ್ತೆ. ಥರ್ಡ್ ಕ್ಲಾಸ್ ದ್ರಾಬೆ ಮುನಿಸಿಪಾಲಿಟಿ! ಸೌದೆಗೆ ಖರ್ಚು ಮಾಡಲಿಕ್ಕೂ ಹಣ ಎಲ್ಲಿದೆ ಇದಕ್ಕೆ?" ಹೀಗೇ ಅವನ ಮಾತು. ಹೆಣ ಸುಡುವ ದಿನ ಮನತೀದಾಗೆ ಒಂದು ಬಾಟಲಿಗಿಂತ ಹೆಚ್ಚಾಗಿ ದೇಶೀ ಮದ್ಯ ಕೊಡಬೇಕಾಗುತ್ತದೆ. ಇದು ಎಲ್ಲರಿಗೂ ಗೊತ್ತಿರುವ ವಿಷಯ. ನನ್ನಿಂದಲೂ ಮದ್ಯ ಕೇಳುತಾನೇನು? ಛೇ.... ಈ ಜುಜುಬಿ ವಿಷಯಗಳನ್ನು ಕಟ್ಟಿಕೊಂಡು ಏನು ಯೋಚನೆ ಹಾಳು! ಹೆಂಗಸರು ಸೊಂಟಕ್ಕೆ ಸೆರಗು ಸುತ್ತು ಹಾಕಿಕೊಂಡು ಸುತ್ತ ನೆರೆಯುತ್ತಾರೆ. ಕೆಲವರು ಮಕ್ಕಳ ಹಣೆಯ ಮೇಲೆ ಕೈ ಒರೆಸುತ್ತಿದ್ದಾರೆ. ಈ ಸಮಯದಲ್ಲಿ ಯಾವ ತಾಯಿಯಾದರೂ ತನ್ನ ಮಗುವನ್ನು ಎದೆಗೆ ತಬ್ಬಿಕೊಂಡು ಮನಸ್ಸಿನಲ್ಲೇ, "ನೀನೂ ಬಿಲೂ ಬಾಬು ಹಾಗೇ ಆಗಪ್ಪ ಮಗೂ" ಎಂದು ಹಾರೈಸುವಳೇನು? ಎಂದಿಗೂ ಇಲ್ಲ. ಆಗೊಂದು ಸಲ ನಾನೂ ಅಣ್ಣನೂ ಒಟ್ಟಿಗೇ ಶೀತಾಳ ಸಿಡುಬಿನಿಂದ ನರಳುತ್ತ ಎತ್ತಿನ ಗಾಡಿಯಿಂದ ಆಶ್ರಮದಲ್ಲಿ ಇಳಿದೆವು. ನಮ್ಮಿಬ್ಬರನ್ನೂ ಒಂದೇ ಹಾಸಿಗೆ ಮೇಲೆ ಅಕ್ಕಪಕ್ಕ ಮಲಗಿಸಿ ಅಮ್ಮ ಮನಸ್ಸಿನ ಸಂಕಟ ತಡೆಯಲಾರದೆ, "ಏನು ಮಕ್ಕಳಮ್ಮ! ಇಬ್ಬರೂ ಸೇರಿ ಹುಚ್ಚು ಹಿಡಿಸಿಬಿಟ್ಟರಿ ನನಗೆ!" ಅಂದಳು. ಅಮ್ಮ ನಿಜವಾದ ಮಾತೇ ಅಂದಿದ್ದಳು. ಸ್ಮಶಾನದಲ್ಲಿ ಈಗ ನೆರೆದಿದ್ದ ಜನಸ್ತೋಮದ ಶಾಂತಿ ಮುರಿದುಬಿದ್ದಿದೆ. ಜಯಜಯಕಾರಗಳ ಘೋಷ ಕೇಳಿಬರುತ್ತದೆ.

"ಜಯ್ ಜಯ್ ಗಾಂಧೀಜಿ ಕಿ ಜಯ್" "ಬಿಲೂ ಬಾಬೂಕಿ ಜಯ್!" "ನೌಕರ್ ಶಾಹಿ ನಾಶ್ ಹೋ!" ಜಯ ಜಯಕಾರಗಳ ನಿಬಿಡವಾದ ಕೂಗು ಆಕಾಶಕ್ಕೆ ಏರುತ್ತದೆ. ಬಡಕಲು ದೇಹದ ಮಿಲ್ ಕೂಲಿಯೊಬ್ಬನು ಈ ಜಯಘೋಷದ ನೇತೃತ್ವ ವಹಿಸಿದ್ದಾನೆ. ಆ ಎಮಕೆ ಗೂಡಿನಂತಿರುವ ಎದೆಯಲ್ಲಿ ಅದೆಷ್ಟು ಜೋರಾಗಿ ಬರುತ್ತದೆ ದನಿ! ಅವನು "ವಂದೇ" ಅಂದಾಗ ಸಾವಿರಾರು ಕೊರಳುಗಳು "ಮಾತರಮ್" ಅನ್ನುತ್ತಾರೆ. ಅವನು "ಬಿಲೂ ಬಾಬೂಕಾ" ಅಂದರೆ ಜನತೆ "ಜೈ

ಹೋ!" ಅಂತಾರೆ. ಪ್ರತಿಸಲ ಕೂಗುವಾಗಲೂ ಅವನು ತನ್ನ ಎಡಗೈಯನ್ನು ಮೇಲಕ್ಕೆತ್ತುತ್ತಾನೆ. ತರ್ಜನೀ ಬೆರಳಿನಿಂದ ಆಕಾಶದ ಯಾವುದೋ ದಿಕ್ಕಿನ ಕಡೆ ತೋರಿಸುತ್ತಿದ್ದಾನೇನೋ ಅನ್ನಿಸುತ್ತದೆ. ಪೊಲೀಸರು ಗುಂಪನ್ನು ಚದರಿಸುತ್ತಿದ್ದಾರೆ. ಮೃದುವಾದ ಲಾಠಿಛಾರ್ಜಿನಿಂದ ಪ್ರಯೋಜನವಾಗಲಿಲ್ಲ. ಕೂಲಿಗಳ ಮುಂದಾಳು ಗಂಟಲು ಒಡೆಯುವ ಹಾಗೆ ಕಿರಲುತ್ತಿದ್ದಾನೆ. ಕೈಚಾಚಿ ಮೇಲೆತ್ತಿ ಮಧ್ಯೆ ಮಧ್ಯೆ ಜಯಧ್ವನಿ ಮಾಡುವ ಪ್ರಯತ್ನ ಮಾಡುತ್ತಿದ್ದಾನೆ. ಆದರಿಂದ ಗಾಳಿ ತುಂಬಿದ ರಬ್ಬರ್ ಟೈರ್ ಇದ್ದಕ್ಕಿದ್ದ ಹಾಗೆ ಒಡೆದು ಹೋದರೆ ಯಾವ ಶಬ್ದ ಬರುತ್ತದೋ ಆ ಶಬ್ದ ಬರುತ್ತದೆ.

ಜೈಲ್ ಸೂಪರಿಂಟೆಂಡೆಂಟರ ಮನೆ ಇರುವಕಡೆ ಜೈಲ್ ಗೇಟಿನ ಒಂದು ಮೂಲೆಯಲ್ಲಿ ಗೋಡೆಯ ಮೇಲೆಲ್ಲ, ನಾನಾ ವಿಧವಾದ ಶಾಸ್ತಿ ಮಾಡುವ ಆಯುಧಗಳನ್ನು ತೂಗು ಹಾಕಲಾಗಿವೆ. ನಾನಾ ಬಗೆಯ ಕೈಬೇಡಿಗಳು, ಡಾಂಡಾಬೇಡಿ, ಶಿಕಲೀ ಬೇಡಿ-ಖೈದಿ ಯಾರಾದರೂ, ವಾರ್ಡರನೊಂದಿಗೆ ಒರಟಾಗಿ ಮಾತಾಡಿದ್ದಾನೆ-ಇನ್ನೊಬ್ಬ ಖೈದಿ ಜೈಲರ್ ಸಾಹೇಬರಿಗೆ ಊಟ ಬಡಿಸುವ ಸೌಟಿನಲ್ಲಿ ನಿಗದಿಯಾಗಿರುವಂತೆ ಐದೂವರೆ ಚಟಾಕು ಅಕ್ಕಿಯ ಅನ್ನದ ಬದಲಾಗಿ ಮೂರುವರೆ ಚಟಾಕು ಅಕ್ಕಿಯ ಅನ್ನ ಮಾತ್ರ ಹಿಡಿಸುತ್ತದೆ ಎಂದು ದೂರಿರುತ್ತಾನೆ ಅಥವಾ ಇನ್ನೂ ಒಬ್ಬ ಖೈದಿ ಮೂರು ತಿಂಗಳಿಂದ ಬರೇ ಕುಂಬಳಕಾಯಿ ಹೊರತು ಬೇರೆ ತರಕಾರಿ ಯಾವುದನ್ನೂ ಬಡಿಸಿಲ್ಲ ಎಂದು ಗಲಾಟೆ ಮಾಡಿರುತ್ತಾನೆ ಇಂಥವೇ ಅನೇಕ "ಅಪಾಯಕರ" ಅಪರಾಧಗಳಿಗಾಗಿ ಪ್ರತ್ಯೇಕವಾಗಿ ಗೊತ್ತು ಮಾಡಿರುವ ಶಿಕ್ಷೆಗಳು ಈ ಬೇಡಿಗಳನ್ನು ತೊಡಿಸುವಿಕೆ. ಕೆಲವು ದೊಡ್ಡ ದೊಡ್ಡ ಪೈಪುಗಳ ಮಧ್ಯೆ ನೂರಾರು ಗಳುವಿನ ಲಾಠಿಗಳು. ಅದರ ಪಕ್ಕದಲ್ಲೇ ಒಂದು ಸ್ಟ್ಯಾಂಡಿನ ರಂಧ್ರಗಳಲ್ಲಿ ಅನೇಕ ದಪ್ಪನೆಯ ಬೆತ್ತದ ಲಾಠಿಗಳನ್ನು ಇಡಲಾಗಿದೆ. ಕೈಯಲ್ಲಿ ತಿರುಗಿಸಲು ಅನುಕೂಲವಾಗುವಂತೆ ಆ ಲಾಠಿಗಳ ಒಂದು ಕೊನೆಯಲ್ಲಿ ನವಾರು ದಾರದಿಂದ ಚೆನ್ನಾಗಿ ಸುತ್ತು ಹಾಕಿ ಮೆತ್ತಗಿನ 'ಹಿಡಿ' ಮಾಡಿರಲಾಗಿದೆ. ಮೇಲಿನ ಗೋಡೆಯಲ್ಲಿ ಅನೇಕ ಪೊಲೀಸ್ ಬೇಟನ್‌ಗಳನ್ನ ತೂಗುಹಾಕಲಾಗಿವೆ. ಇನ್ನೊಂದು ಕಡೆ ಗೋಡೆಗೆ ಕೊಕ್ಕೆಗಳಿಂದ ತೂಗುಹಾಕಿರುವ ಕೆಲವು ಕೆಂಪು ಬಕೆಟ್ಟುಗಳಿವೆ. ಅವುಗಳ ಮೇಲೆ "ಫೈರ್" ಎಂದು ಬರೆಯಲಾಗಿದೆ. ಒಂದು ಕಡೆ ಹರಕು ಚಿಂದಿಗಳಿಂದ ಸುತ್ತಿರುವ ಅನೇಕ "ಮಶಾಲು"ಗಳನ್ನು ರಾಶಿ ಹಾಕಲಾಗಿದೆ. ರಾತ್ರಿ ಖೈದಿಗಳ ಹಾಜರಿಯ ಲೆಕ್ಕ ಏನು ಮಾಡಿದರೂ ಸರಿಹೋಗದಿದ್ದರೆ ಯಾರಾದರೂ ಖೈದಿ ತಪ್ಪಿಸಿಕೊಂಡು ಹೋಗಿರುವನೆಂದು ನಿರ್ಣಯಿಸಿ ಅವನನ್ನು ಆಗಲೇ ಹುಡುಕಿಕೊಂಡು ಬರುವುದಕ್ಕಾಗಿ ಈ 'ಮಶಾಲು' (ದೀವಿಗೆ) ಗಳನ್ನು ಉಪಯೋಗಿಸುತ್ತಾರೆ. ಇವನ್ನು ಕೆರೋಸಿನ್ ಎಣ್ಣೆಯಲ್ಲಿ ನೆನಸಿ ಹತ್ತಿಸಿ ಹಿಡಿದು ವಾರ್ಡರುಗಳು ಜೈಲೆಲ್ಲ ಸುತ್ತುವರು. ಟಾರ್ಚ್ ಅಥವಾ ಲಾಟೀನುಗಳನ್ನು ಕೊಟ್ಟರೂ ಆಗುತ್ತದೆ. ಆದರೆ ಏಕೋ ಅವನ್ನು ಬಳಸುವ ವಾಡಿಕೆಯಿಲ್ಲ.

ಹಿಂದೊಮ್ಮೆ ನಾನು ಜೈಲಿನಲ್ಲಿದ್ದಾಗ ಖೈದಿ ಓಡಿಹೋದರೆ ಅವನನ್ನು ಹೇಗೆ ಹಿಡಿಯಬೇಕೆಂಬುದನ್ನು ಕಲಿಸುವುದಕ್ಕಾಗಿ "ರಿಹರ್ಸಲ್" ನಡೆಯಿತು. "ವಾಗಲಾ"

ಗಂಟೆ ಬಾರಿಸುತ್ತಿದ್ದಾರೆ. ಜೈಲರ್ ಸಾಹೇಬ ಸೆಂಟ್ರಲ್ ಟವರಿನ ಮೇಲೆ ನಿಂತಿದ್ದಾನೆ. ವಾರ್ಡರುಗಳು ಸಾಹೇಬರಿಗೆ ತಮ್ಮ ತಮ್ಮ ಕೆಲಸದ ದಕ್ಷತೆಯನ್ನು ತೋರಗೊಡಲೆಂದು ಕೈಯಲ್ಲಿ ದೀವಟಿಗೆಗಳನ್ನು ಹಿಡಿದುಕೊಂಡು ಅಲ್ಲಿಂದಿಲ್ಲಿಗೆ ಓಡಾಡುತ್ತ ಕೋಲಾಹಲ ಮಾಡುತ್ತಿದ್ದಾರೆ. ಮರಗಳ ಕೆಳಗಡೆ ಮತ್ತು ಪಾಯಿಖಾನೆಗಳ ಕಡೆಯೇ ಅವರ ನಿಗಾ ಹೆಚ್ಚು. ಜೋಗೀಲಾಲ್ ವಾರ್ಡ್ ನಡುವೆಯಿಂದ ಸೂಪರಿಂಟೆಂಡೆಂಟನನ್ನು ದೊಡ್ಡ ದನಿಯಲ್ಲಿ ಕೂಗುತ್ತ "ಸೂಪರಿಂಟೆಂಡೆಂಟ್ ಸಾಹೇಬ್ ಏಯ್ ಸೂಪರೆಂಟ್ ಸಾಹೇಬ್! ಖೈದಿ ನಿಜವಾಗಿ ತಪ್ಪಿಸಿಕೊಂಡು ಹೋಗಿದ್ದಾನಾ, ಇಲ್ಲಾ 'ಪಗಲೀ' ಪರಾಕ್ಟೀಸ್ ಮಾತ್ರಾನಾ ?" ಎಂದು ಕೇಳುತ್ತಾನೆ. ರಿಹರ್ಸಲ್ ಮುಗಿದುಹೋದ ಮೇಲೆ ಸೂಪರಿಂಟೆಂಡೆಂಟ್ ಸಾಹೇಬರು ನಮ್ಮ ಸೆಲ್ಲಿಗೆ ಬಂದರು. ನಾವೆಲ್ಲ ಆಗ ಒಳ್ಳೇ ಹುಡುಗರಂತೆ ನಮ್ಮ ನಮ್ಮ ಹಾಸಿಗೆಗಳಲ್ಲಿ ಮಲಗಿದ್ದೆವು. ಈ ಸಂಗತಿ ಅಲ್ಲೇ ನಿಂತುಹೋಯಿತು.

ಟಂಗ್.... ಟಂಗ್ ಎಂದು ಎರಡು ಗಂಟೆ ಹೊಡೆಯಿತು.

ಇನ್ನು ಮೂರೇ ಮೂರು ಗಂಟೆ. ಈಗಿನ ದಿನಗಳಲ್ಲಿ ಹೊಸ ಟೈಂ*(ಕಾಲ ಗಣನೆ) ಪ್ರಕಾರ ಸೂರ್ಯೋದಯವು ಐದೂವರೆ ಗಂಟೆಗೆ ಮೊದಲು ಬಹುಶಃ ಆಗಲಾರದು. ಸೂರ್ಯ ಹುಟ್ಟುವುದಕ್ಕೆ ಮುನ್ನವೇ ಇವರೆಲ್ಲ ತಮ್ಮ ತಮ್ಮ ನಿತ್ಯದ ಕೆಲಸಗಳನ್ನು ಮುಗಿಸಿಬಿಡಬೇಕಾಗುತ್ತದೆ. ಏಕೆಂದರೆ ಸೂರ್ಯ ಹುಟ್ಟಿದೊಡನೆಯೇ ಜೈಲಿನ ಹಗಲ ಕಾರ್ಯಕ್ರಮ ಶುರುವಾಗಿ ಬಿಡುತ್ತದೆ. ಏಳು ಗಂಟೆಗೆ ಮೊದಲೇ ಬೆಳಗ್ಗೆಯ ಫಲಾಹಾರವಾದ ಗಂಜಿಯೂಟ ಪೂರೈಸಿಬಿಡಬೇಕಾಗುತ್ತದೆ. ಏಕೆಂದರೆ ಏಳು ಹೊಡೆದೊಡನೆ ಕಾರ್ಖಾನೆ ತೆಗೆಯುತ್ತದೆ. ಐದೂವರೆ ಗಂಟೆಗೆ ಒಲೆಹಚ್ಚದೆ ಹೋದರೆ ಏಳು ಗಂಟೆಗೆ ಗಂಜಿ ತಯಾರಾಗುವುದು ಹೇಗೆ ? ಅಲ್ಲದೆ ಅಡಿಗೆ ಮನೆ ಕೆಲಸಕ್ಕೆ ನಿಗದಿಯಾಗಿರುವ ಖೈದಿಗಳಿಗೂ ಅವರ ಪ್ರಾತಃಕಾರ್ಯಗಳಿಗೆ ಸ್ವಲ್ಪ ಸಮಯ ಕೊಡಬೇಕಲ್ಲ. ಆದಕ್ಕೇ ಐದುಗಂಟೆಗೇ ಅವರೆಲ್ಲ ಏಳಬೇಕಾಗುತ್ತದೆ.

ಅಣ್ಣ ಈಗ ಏನು ಮಾಡುತ್ತಿದ್ದಾನೋ ? ಬಹುಶಃ ಸಲಾಕೆಗಳನ್ನು ಹಿಡಿದುಕೊಂಡು ಕತ್ತಲೆಯಲ್ಲಿ ನಕ್ಷತ್ರಗಳು ತುಂಬಿದ ಆಕಾಶವನ್ನು ದಿಟ್ಟಿಸುತ್ತ ಏನೇನೋ ಯೋಚನೆಗಳಲ್ಲಿ ಮುಳುಗಿರುತ್ತಾನೆ. ನನ್ನ ವಿಷಯವಾಗಿಯೂ ಒಮ್ಮೆಯಾದರೂ ಯೋಚನೆ ಮಾಡುತ್ತಾನಾ ? ಅಣ್ಣ ನನ್ನನ್ನೆಂದಿಗೂ ತಪ್ಪು ತಿಳಿದುಕೊಳ್ಳುವುದಿಲ್ಲ. ಇದನ್ನು ಕುರಿತು ಅಣ್ಣನ ಸಂಗಡ ಎಂದಾದರೂ ಎಲ್ಲಾ ವಿಶದವಾಗಿ ಮಾತಾಡಿದ್ದರೆ ಎಷ್ಟು ಚೆನ್ನಾಗಿತ್ತು ? ಆದರೆ ನನಗೆ ಗೊತ್ತು. ನನ್ನ ಆಚರಣೆಯನ್ನು ಕುರಿತು ಅಣ್ಣನ ಮುಂದೆ ಪ್ರತ್ಯೇಕವಾಗಿ ವಿವರಿಸಿ ಹೇಳುವ ಅಗತ್ಯವೇನಿಲ್ಲ. ಆದರೂ ಸಹ ಮನಸ್ಸಿನ ಭಾರ ಸ್ವಲ್ಪ ಇಳಿಯುತ್ತಿತ್ತೋ! ತನ್ನ ಪಾರ್ಟಿಯ (ಕಾಂಗ್ರೆಸ್ ಸೋಷಲಿಸ್ಟ್ ಪಾರ್ಟಿ) ಪ್ರೋಗ್ರಾಂಅನ್ನು ಚಲಾವಣೆಗೆ ತರುವುದರಿಂದ ಪರೋಕ್ಷವಾಗಿ ಫ್ಯಾಸಿಸ್ಟ್ ಪದ್ಧತಿಗೆ ಬೆಂಬಲ ನೀಡಿದಂತಲ್ಲವೇ ?-ಇದು ಅಣ್ಣನಿಗೆ ಗೊತ್ತಾಗುವುದಿಲ್ಲವೆ ? ನಾನು ಹೀಗೆಲ್ಲ ತರ್ಕಬದ್ಧವಾಗಿ ಯೋಚನೆ ಮಾಡಿದರೂ ಈ ತರ್ಕಗಳನ್ನೆಲ್ಲ ಉರುಳಿಸಿ ನನ್ನ

* ಯುದ್ಧದ ಕಾಲದಲ್ಲಿ ಕಾಲಗಣನೆ ಒಂದು ಗಂಟೆ ಮುಂದ ಹಾಕಿ ಎಣಿಸುತ್ತಿದ್ದರು.

ಅಂತರಾಳದೊಳಗೆ ಎಲ್ಲೋ ಏನೋ ಕಚ್‌ಕಚ್ ಎಂದು ಕೊರೆಯುತ್ತಿದೆ. ಬಹುಶಃ ತರ್ಕಕ್ಕೆ ದೂರವಾದ ಭಾವಾವೇಗದ ಫಲವಾಗಿ ಕಾರಣವಿಲ್ಲದ ಅನುತಾಪವೇನೋ! ನನ್ನ ಸ್ವಂತ ಪಾರ್ಟಿಯ (ಕಮ್ಯುನಿಸ್ಟ್ ಪಾರ್ಟಿ) ಸ್ಥಾನೀಯ ಕಮಿಟಿಯ ಮೆಂಬರುಗಳಲ್ಲಿ ಬಹು ಮಂದಿಯೇನೋ ನಾನು ಅಣ್ಣನ ವಿರುದ್ಧವಾಗಿ ಸಾಕ್ಷ್ಯ ಹೇಳಿದುದು ಸರಿಯಲ್ಲವೆಂದು ಅಭಿಪ್ರಾಯಪಡುತ್ತಾರೆ. ಅಣ್ಣನ ವಿರುದ್ಧವಾಗಿ ಎಂದು ಮಾತ್ರ ಅಲ್ಲ, ಅವರು ಹೇಳುವುದೇನೆಂದರೆ ದೇಶದ ಜನ ತಪ್ಪು ಮಾಡಿದರೆ ಅವರ ಭ್ರಮೆಯನ್ನು, ಕಣ್ಣಿಗೆ ಬೆರಳಿಟ್ಟು ತೋರಿಸಿಕೊಡಬೇಕು, ಅವರಿಗೆ ಚೆನ್ನಾಗಿ ಅರ್ಥವಾಗುವ ಹಾಗೆ ತಿಳಿಯಹೇಳುವುದು ನಮ್ಮ ಕರ್ತವ್ಯ. ಅವರನ್ನು ಪೊಲೀಸಿಗೆ ಹಿಡಿದುಕೊಡುವುದು ನಮ್ಮ ಕರ್ತವ್ಯಗಳಲ್ಲಿ ಒಂದಲ್ಲ. ಇದನ್ನು ನಾನು ನಿರೀಕ್ಷೆ ಮಾಡಿರಲಿಲ್ಲ. ಪ್ರಪಂಚದ ಬೇರೆ ಜನರೆಲ್ಲ ನನ್ನ ಆಚರಣೆಯನ್ನು ಕುರಿತು ಏನೇ ಹೇಳಲಿ, ನನಗೆ ಚಿಂತೆಯಿಲ್ಲ. ಆದರೆ ನನ್ನ ಪಾರ್ಟಿಯವರೇ ಹೀಗೆ ಹೇಳಿದರೆ ಇದಂತೂ "ಎಲ್ಲಕ್ಕಿಂತ ಅತ್ಯಂತ ನಿರ್ದಯ ಹತ್ಯೆ."*

ಮಾರ್ಕ್ಸ್ ವಾದದ ಸೂಕ್ಷ್ಮ ವಿಶ್ಲೇಷಣ ಬಹುಶಃ ನನಗೆ ಸರಿಯಾಗಿ ಗೊತ್ತಾಗಿಲ್ಲ. ಅಣ್ಣನ ದಳದಲ್ಲಿ ಇದ್ದಷ್ಟು ಕಾಲವೂ ಅಣ್ಣನ ಆಜ್ಞೆಯೇ ವೇದವಾಕ್ಯವೆಂದು ನಂಬಿದ್ದೆ. ನಲವತ್ತೆರಡನೆಯ ಇಸವಿಯ ಫೆಬ್ರವರಿ ತಿಂಗಳಲ್ಲಿ ಅಣ್ಣನನ್ನು ಜೈಲಿನಿಂದ ಬಿಟ್ಟರು. ಸೆಕ್ಯೂರಿಟಿ ಖೈದಿಗಳ ಕೇಸುಗಳ ತನಿಖೆಯಾಗುತ್ತಿತ್ತು ಆಗ. ಇದನ್ನು ಒಬ್ಬ ಹೈಕೋರ್ಟು ಜಜ್ಜರಿಗೆ ವಹಿಸಲಾಗಿತ್ತು. ಜಸ್ಟಿಸ್ ಭಾಟೆ - ಮರಾಠಿಯವರು. ಅಣ್ಣನನ್ನು ಬಿಡುಗಡೆ ಮಾಡಿದ ಮೇಲೆ ನನ್ನನ್ನು ಏಪ್ರಿಲ್ ತಿಂಗಳಲ್ಲಿ ದೇವುಲಿ ಜೈಲಿನಿಂದ ಹಜಾರಿಬಾಗ್ ಜೈಲಿಗೆ ವರ್ಗಾಯಿಸಿದರು. ಖೈದಿಗಳೆಲ್ಲರನ್ನೂ ಅವರವರ ಸ್ವಂತ ಪ್ರಾಂತ್ಯಕ್ಕೆ ಕಳಿಸಬೇಕೆಂದು ತೀರ್ಮಾನವಾಗಿತ್ತು ಎಂದು ಕೇಳಿದೆ. ಅಲ್ಲದೆ ಫ್ಯಾಸಿಸ್ಟ್ ವಿರೋಧಿಗಳಾದ ಖೈದಿಗಳನ್ನು ಸೆರೆಯಲ್ಲಿಡುವುದು ಅರ್ಥವಿಲ್ಲ ಎಂದು ಸರ್ಕಾರಕ್ಕೆ ಗೊತ್ತಾಯಿತು. ನನ್ನ ಬಿಡುಗಡೆಯಾದಾಗ ನನಗೆ ಆದ ಆನಂದ ಬೇರೆ ಯಾವಾಗಲೂ ಆಗಿಲ್ಲ. ದಲಿತ ಜನರ ಭವಿಷ್ಯಕ್ಕೆ ಕೊಡಲಿಯೇಟು ಕೊಡುವ 'ಫ್ಯಾಸಿಸಂ' ವಿರುದ್ಧವಾಗಿ ಹೋರಾಡುವುದರಲ್ಲಿ ಪೂರ್ತಿ ಮುಳುಗಿ ಬಿಡಬೇಕು - ಅಗತ್ಯ ಬಿದ್ದರೆ ನಗುನಗುತ್ತಾ ಪ್ರಾಣ ಕೂಡ ಬಿಡುವುದಕ್ಕೆ ತಯಾರಾಗಿರಬೇಕು ಎಂದು ಸಂಕಲ್ಪ ಮಾಡಿಕೊಂಡೆ. ಈ ಸುಯೋಗವನ್ನು ನನಗೆ ಕೊಟ್ಟಿದ್ದಕ್ಕಾಗಿ ಸರ್ಕಾರದ ಪ್ರತಿಯಾಗಿ ನನ್ನ ಎದೆ ಕೃತಜ್ಞತೆಯಿಂದ ತುಂಬಿತು. ಸ್ಪೇನಿನ ದೇಶಭಕ್ತರ ರೋಮಾಂಚಕ ಕತೆಗಳು, ಕಮ್ಯೂನಿಸ್ಟ್ ಚೈನಾ ದೇಶದ ಸಾವನ್ನೇ ಗೆಲ್ಲುವಂಥ ಅದ್ವಿತೀಯ ವೀರರ ಸಾಹಸ ಕತೆಗಳು, ಮಾಓ-ತ್ಸೆ-ತುಂಗರ ಧೈರ್ಯ ಮತ್ತು ಏಕನಿಷ್ಠತೆ, ಕಾಮ್ರೇಡ್ ಚಂದ್ರದೇವರ ಮಾರ್ಕ್ಸಿಸಂ ಕ್ಲಾಸಿನ ಪ್ರತಿದಿನದ ಭಾಷಣಗಳು, - ಇವೆಲ್ಲ ಸೇರಿ ನನ್ನ ಶರೀರದ ನರನಾಡಿಗಳಲ್ಲೆಲ್ಲ ವಿದ್ಯುತ್ತಿನ ಪ್ರವಾಹ ಹರಿಯುವಂತೆ ಮಾಡಿದ್ದುವು. ನನ್ನ ಜನ್ಮಸ್ಥಳವಾದ ಪೂರ್ಣಿಯಾ ಜಿಲ್ಲೆಯಲ್ಲಿ

---

*ಷೇಕ್ಸ್‌ಪಿಯರ್‌ನ 'ಜೂಲಿಯಸ್ ಸೀಸರ್' ನಾಟಕದಲ್ಲಿ ಸೀಸರನ ಪ್ರಾಣ ಸ್ನೇಹಿತನಾದ ಬ್ರೂಟಸ್ಸನೇ ಚೂರಿಯಿಂದ ಅವನನ್ನು ತಿವಿದದ್ದನ್ನು ಮಾರ್ಕ್ ಆಂಟೋನಿ "ಎಲ್ಲಕ್ಕಿಂತ ಅತ್ಯಂತ ನಿರ್ದಯ ಹತ್ಯೆ" ಎನ್ನುತ್ತಾನೆ.

ನನಗಾಗಿ ಎಷ್ಟು ಅಗತ್ಯವಾದ ಕೆಲಸಗಳು [illegible]ಯೋ. ಆ ಪ್ರದೇಶದ ಜನರು ಮಹಾತ್ಮಾಗಾಂಧಿ ಮತ್ತು ಮಾಸ್ಟರ್ ಸಾಹೇಬ್ (ನನ್ನ ತಂದೆ) [illegible] ಬಿಟ್ಟರೆ ಬೇರೆ ಯಾರನ್ನೂ ಅರಿಯರು. ಕುರುಡು ನಂಬಿಕೆಗಳಿಂದ ತುಂಬಿರುವ ಈ ಪ್ರಾಂತ್ಯದಲ್ಲಿ ನನ್ನ ತರ್ಕದ, ವಿಚಾರ ಜ್ಞಾನದ ಫಸಲನ್ನೇ ಬೆಳೆಸಬೇಕಾಗಿದೆ. ಆಶ್ರಮಕ್ಕೆ ಹೋಗಿ ಒಂದು ಸಲ ಅಮ್ಮನನ್ನು ನೋಡಿಬರಬೇಕೆಂದು ಅನ್ನಿಸುತ್ತಿದೆ. ನನ್ನ ಆಪರೇಷನ್ ವಿಷಯವಾಗಿ ಅಮ್ಮ ತುಂಬಾ ಚಿಂತಿಸುತ್ತಿರುತ್ತಾಳೆ ಖಂಡಿತ. ಒಂದು ಸಲ ಹೋಗಿ ಅಲ್ಲಿರುವವರೆಲ್ಲರನ್ನೂ ನೋಡಿಕೊಂಡು ಬಂದು ಆಮೇಲೆ ನಾನು ಮಾಡಬೇಕಾಗಿರುವ ಕೆಲಸಗಳನ್ನು ಆರಂಭಿಸಬೇಕು... ಮೋಟರ್ ಬಸ್... ಕೊಡಾಮಾರ್ ಸ್ಟೇಷನ್... ಗಯಾ ವೈಟಿಂಗ್ ರೂಮಿನಲ್ಲಿ ಏನು ಸೊಳ್ಳೆ ಕಾಟ... ಕಿವೂಲ್... ಸಾಹೇಬ್ ಗಂಜ್... ಮಣಿ ಹಾರಿಘಾಟ್... ಕಾಟೀಹಾರ್... ಪ್ರಯಾಣದ ಹಾದಿಗೆ ಕೊನೆಯೇ ಇಲ್ಲವೆಂದು ತೋರುತ್ತದೆ.

ಇದೇ ವ್ಯಾಕುಲತೆಯೇ ನನ್ನನ್ನು ಈಗಿನ ಪರಿಸ್ಥಿತಿಯಲ್ಲಿ ತಂದು ನಿಲ್ಲಿಸಿದೆ. ಅಣ್ಣಾ ಜನರ ಅಭಿಪ್ರಾಯ ಮತ್ತು ಎಲ್ಲಕ್ಕಿಂತಲೂ ದುಸ್ಸಹವಾದುದು ನನ್ನ ಸ್ವಂತ ಪಾರ್ಟಿಯವರ ಅಭಿಪ್ರಾಯದಂತೆ ನಾನು ಮಾಡಿದ ಕೆಲಸ ತಪ್ಪು ಎಂದಲ್ಲವೆ? ತಪ್ಪು? ನನ್ನದು ತಪ್ಪೇ? ಇಡೀ ಪ್ರಪಂಚದ್ದೆಲ್ಲಾ ತಪ್ಪಾಗಬಹುದು. ನನ್ನದಲ್ಲ! ನಲವತ್ತೆರಡರ ಆಗಸ್ಟ್ ತಿಂಗಳಲ್ಲಿ ನಡೆಯಿತಲ್ಲ? ಆ ಘಟನೆಗಳ ಪರಂಪರೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಅದರ ಹಿನ್ನೆಲೆಯಲ್ಲಿ ನನ್ನ ಆಚರಣೆಯನ್ನು ವಿಮರ್ಶೆ ಮಾಡಬೇಕು. ಆ ದಿನಗಳಲ್ಲಿ ಯಾವುದೋ ಒಂದು ಪೈಶಾಚಿಕ ವಿದ್ಯುತ್ತಿನ ಶಕ್ತಿ ಇಡೀ ದೇಶದಲ್ಲೆಲ್ಲ ವ್ಯಾಪಿಸಿ ಜನತೆಯನ್ನು ಕೆರಳಿಸಿ ಹುಚ್ಚು ಹಿಡಿಸಿಬಿಟ್ಟಿತ್ತು. ದಿಕ್ಕು ತೋಚದವರಾಗಿ ಮಾಡಿಬಿಟ್ಟಿತ್ತು. ಎಲ್ಲಿ ಹೋಗಿ ನೋಡಿ, ಹುಚ್ಚಾಸ್ಪತ್ರೆಯ ಹೆಬ್ಬಾಗಿಲುಗಳನ್ನು ತೆರೆದು ಎಲ್ಲರನ್ನೂ ಹೊರಗೆ ಬಿಟ್ಟುಬಿಟ್ಟಿರುವಂತೆ ತೋರುತ್ತಿತ್ತು. ಆವೇಶಭರಿತರಾದ ಕೆರಳಿದವರಾದ ಜನತೆ ಏನು ಮಾಡುತ್ತಿದ್ದೇವೆಂಬ ಅರಿವಿಲ್ಲದೆ ಕಂಗೆಟ್ಟು ಹೋಗಿದ್ದಾರೆ. ತಾರತಮ್ಯ ಜ್ಞಾನವಿದ್ದರೂ ಈಗ ಮೈಮರೆತು ಹೋಗಿದ್ದಾರೆ. ಮೈಲಾದ ಮೇಲೆ ಮೈಲು ರೈಲ್ ಲೈನುಗಳನ್ನು ಕಿತ್ತು ಬಿಸಾಡುತ್ತಿದ್ದಾರೆ. ಕಬ್ಬಿಣದ ರೈಲ್ ಕಂಬಿಗಳು, ಭಾರಿ ಭಾರಿ ಮರದ ಸ್ಲೀಪರುಗಳು, ಇನ್ನೂ ಯಾವ ಯಾವುದೋ ಸಾಮಾನುಗಳು - ಇವೆಲ್ಲವನ್ನೂ ಕಿತ್ತು ದೂರದ ನದಿಯಲ್ಲಿ ಎಸೆದು ಬರುತ್ತಿದ್ದಾರೆ. ಟೆಲಿಗ್ರಾಫಿನ ತಂತಿಯನ್ನು ಕತ್ತರಿಸಿ ಹಾಕುವುದು, ಪೋಸ್ಟಾಫೀಸ್ ಮತ್ತು ಹೆಂಡದ ಅಂಗಡಿಗಳನ್ನು ಸುಡುವ ಕೆಲಸ ಗ್ರಾಮದ ಹುಡುಗರ ಮೇಲೆ ವಹಿಸಲಾಗಿದೆ.

ದೊಡ್ಡವರಿಗೆ, ಈ ಕೀಳು ಕೆಲಸಗಳನ್ನು ಮಾಡಿ ತಮ್ಮ ಕೈಗಳನ್ನು ಹೊಲಸು ಮಾಡಲು ಇಷ್ಟವಿಲ್ಲ. ತಂತಿಗಳನ್ನು ಕಡಿಯುವುದು ಬಹು ಸುಲಭವಾದ ಕೆಲಸ. ಟೆಲಿಗ್ರಾಫ್ ತಂತಿಗಳನ್ನು ಮುರಿಯಲು ಎಷ್ಟು ಸುಲಭ ಎಂದು ಗೊತ್ತೇ ಇರಲಿಲ್ಲ. ಕಟಿಂಗ್ ಪ್ಲಯರ್ಸ್ ಮುಂತಾದ ಯಾವ ಆಯುಧವೂ ಬೇಕಾಗಿಲ್ಲ. ಹಗ್ಗ ಕುಣಿಕೆ ಕಟ್ಟಿ ಹುಡುಗರು ಉಯ್ಯಾಲೆಯಾಡುತ್ತಾರೆ. ಎಲ್ಲೋ ಒಂದು ಕಡೆ ತಂತಿ ಮುರಿದು ಕುಸಿದು ಬೀಳುತ್ತದೆ. ದೊಡ್ಡವರಿಗೆ ಹೊಸ ಕಾರ್ಯಕ್ರಮ ಬೇಕು. ಆದರೆ ಏನು

ಮಾಡಬೇಕು ಎಂದು ತೋಚುತ್ತಿಲ್ಲ. ರೈಲ್ವೇ ಸ್ಟೇಷನ್, ತಾಲ್ಲೂಕು ಕಚೇರಿ. ಸಬ್ ರಿಜಿಸ್ಟ್ರಾರ್ ಆಫೀಸು, ಪೊಲೀಸ್ ಠಾಣೆ ಎಲ್ಲವನ್ನೂ ಸುಟ್ಟು ಆಗಿಹೋಗಿದೆ. ಈಗ ಕೈಯಲ್ಲಿ ಕೆಲಸವೇನೂ ಇಲ್ಲ. ಎಲ್ಲೆಲ್ಲಿ ಅವರು ಗುಂಪುಗೂಡಿ ಹೋಗುತ್ತಾರೋ ಅಲ್ಲೆಲ್ಲ ಅವರ ಕಣ್ಣ ಮುಂದೆಯೇ ಶಕ್ತಿಯ ಸ್ತಂಭಗಳು ಕುಸಿದು ಬೀಳುತ್ತಿವೆ. ಅತ್ಯಾಚಾರದ ಪ್ರತೀಕಗಳು ಪೊಲೀಸರ ತಲೆ ಬಾಗಿಸಿ ನಿಲ್ಲುತ್ತವೆ. ಸರ್ಕಾರಿ ಕೆಲಸಗಾರರು ಶಿಸ್ತನ್ನೆಲ್ಲ ಒತ್ತಟ್ಟಿಗೆ ಒಗೆದು ಅಮಲೇರಿದ ಜನತೆಗೆ ಪ್ರೋತ್ಸಾಹ ನೀಡುತ್ತಿದ್ದಾರೆ. ಲೋಭಿಯಾದ ಮಾರವಾಡೀ ಧಣಿ ಬಿಚ್ಚುಗೈಯಿಂದ ಚಂದಾ ಕೊಡುತ್ತಾನೆ. ಜಮೀನ್‌ದಾರ್ ಕಛೇರಿಯ ನಾಯಬನು ಜನರ ಒಂದು ವರುಷದ ಕಿಸ್ತನ್ನು ಮಾಫೀ ಮಾಡಲು ಮಾತುಕೊಡುತ್ತಾನೆ. ತಾಲೂಕು ಕಛೇರಿಯ ಮ್ಯಾನೇಜರನು ಅಷ್ಟು ಜನರಿಗೂ ಊಟದ ವ್ಯವಸ್ಥೆ ಮಾಡುತ್ತಾನೆ. ಪೊಲೀಸ್ ಸಬ್ ಇನ್ಸ್‌ಪೆಕ್ಟರನು ಗಾಂಧಿ ಟೋಪಿ ಧರಿಸಿ ತ್ರಿವರ್ಣ ಧ್ವಜವನ್ನು ಕೈಲಿ ಹಿಡಿದು ಅವರನ್ನೆಲ್ಲ ನಗುವಿನ ಹೊಳೆಯಲ್ಲಿ ಮುಳುಗಿಸುತ್ತಾನೆ. ಚೌಕೀದಾರನು ತನ್ನ 'ದಿರಸ'ನ್ನು ಬೆಂಕಿ ಕಡ್ಡಿಗೀಚಿ ಸುಡುತ್ತಾನೆ. ಮತ್ತು ಕೂಡಲೆ ತನ್ನ ನೌಕರಿಗೆ ರಾಜೀನಾಮೆ ಕೊಡುತ್ತಾನೆ. ಜಮೀನ್‌ದಾರರಿಗೆ ತಾವು ಇನ್ನು 'ಕಿಸ್ತು' (ಗುತ್ತಿಗೆ ಹಣ) ಕೊಡಬೇಕಾಗಿಲ್ಲ. ಚೌಕೀದಾರನಿಗೆ ಸುಂಕ ಕೊಡಬೇಕಾಗಿಲ್ಲ ಎಂದು ಬಡ ರೈತರಿಗೆ ಹಿಗ್ಗೋ ಹಿಗ್ಗು! ಈಗ ಹೊಸದಾಗಿ ಏನು ಮಾಡಬೇಕು, ಎಂಬುದು ಯಾರಿಗೂ ತೋಚುತ್ತ ಇಲ್ಲ. ಫರ್‌ಬಿಷ್‌ಗಂಜ್ ಲೈನಿನಲ್ಲಿ ಇನ್ನೂ ಹಾಳು ಮಾಡದಿದ್ದ ರೈಲ್ ಲೈನ್ ಇದ್ದ ಕಡೆ ಎಂಜಿನ್ ಡ್ರೈವರನೂ ಮತ್ತು ಗಾರ್ಡು ಜನತೆಯ ಇಷ್ಟದ ಪ್ರಕಾರ ರೈಲನ್ನು ನಡೆಸತೊಡಗಿದ್ದಾರೆ. ಪ್ರತಿ ಸ್ಟೇಷನ್ನಿನ ಟಿಕೆಟ್ ಆಫೀಸಿನ ಮೇಲೂ "ಟಿಕೆಟ್ಟು ತೆಗೆದುಕೊಂಡು ಪ್ರಯಾಣ ಮಾಡುವುದು ನಿಷಿದ್ಧ" ಎಂದು ಬೋರ್ಡು ಬರೆದು ತಗುಲಿ ಹಾಕಿದ್ದಾರೆ. ಗಡಬ್‌ನೇಲಿ ಸ್ಕೂಲಿನ ಹುಡುಗರು ಒಟ್ಟಿಗೆ ಸೇರಿ ಅರಚುತ್ತಿದ್ದಾರೆ. "ಗಾಡೀ ಯಾರದು ?" ಎಂದು ಒಬ್ಬ ಕೂಗುತ್ತಾನೆ. ಉಳಿದವರೆಲ್ಲ "ನಮ್ಮದು" ಎನ್ನುತ್ತಾರೆ. "ಎಂಜಿನ್ ಯಾರದೂ ?" "ನಮ್ಮದೂ!" ಇನ್ನೊಬ್ಬ ಹುಡುಗ ಟ್ರೈನಿನಲ್ಲಿ ಟಿಕೆಟ್ ಚೆಕರ್ ಕೆಲಸ ಮಾಡುತ್ತಾನೆ. ಟಿಕೆಟ್ ಉಳ್ಳವರನ್ನು ಇಳಿಸಿಬಿಡುವುದೇ ಅವನ ಕೆಲಸ. ಯಾರೋ ಒಬ್ಬ ಪ್ರಯಾಣಿಕನ ಬಳಿ ರಿಟರ್ನ್ ಟಿಕೆಟ್ಟಿನ ಅರ್ಧ ಭಾಗ ಇತ್ತು. ಅವನನ್ನು ಕೂಡಲೇ "ಇಳಿದು ಬಿಡು ಈಗಲೇ ಇಳಿದು ಬಿಡು ಸ್ವರಾಜ್ಯಕ್ಕೆ ನೀನು ಲಾಯಖ್ಖಿಲ್ಲ!" ಎಂದು ಗದರಿ ಇಳಿಸುತ್ತಾನೆ. ಪಾಪ, ಅವನು ಎಷ್ಟು ಅಂಗಲಾಚಿಕೊಂಡರೂ ಕೇಳುವುದಿಲ್ಲ. ಚೈನನ್ನು ಎಳೆದು ಗಾಡಿ ನಿಲ್ಲಿಸಿ ಅವನನ್ನು ಬಲವಂತವಾಗಿ ಇಳಿಸಲಾಯಿತು. ಸ್ವಲ್ಪ ದೂರ ಹೋಗಿ ಮತ್ತೆ ಟ್ರೈನ್ ನಿಲ್ಲುತ್ತದೆ. ತಿವಾರಿಜೀ ಎಂಬ ಕಾಂಗ್ರೆಸ್ ನಾಯಕರು ಈ ಕಡೆ ಎಲ್ಲೋ ಮೀಟಿಂಗು ನಡೆಸಲು ಹೋಗಿದ್ದರು. ಅವರನ್ನ ಮೇಲೆ ಹತ್ತಿಸಲು ಟ್ರೈನ್ ನಿಂತದ್ದು. ಅವರು ಹತ್ತಿದ ಕೂಡಲೇ ಪ್ರಯಾಣಿಕರೆಲ್ಲ "ಇಂಕಿಲಾಬ್ ಜಿಂದಾಬಾದ್" ಎಂದು ಘೋಷಿಸಿದರು.

ಗಾಡಿ ಹೊರಟಿತು. ಪ್ರತಿ ಸ್ಟೇಷನ್ನಿನಲ್ಲೂ ಮೇಜು, ಕುರ್ಚಿಗಳು, ಗೋಡೆಗೆ ತಗುಲಿಸುವ ಗಡಿಯಾರ, 'ಸ್ಟೇಷನ್ ಮಾಸ್ಟರರ ಆಫೀಸು' ಎಂದು ಬರೆದಿರುವ

ಸೈನ್‌ಬೋರ್ಡ್, ದೊಡ್ಡ ದೊಡ್ಡ ರಿಜಿಸ್ಟರುಗಳು ಎಲ್ಲಾ ರಾಶಿ ಹಾಕಿ ಬೆಂಕಿ ಹಚ್ಚುತ್ತಿದ್ದರು. ರೈಲ್ವೆ ನೌಕರುಗಳು ಸಹ ಅನೇಕ ಸ್ಥಳಗಳಲ್ಲಿ ಜನರೊಂದಿಗೆ ಸೇರಿ ಹಾವಳಿ ಮಾಡತೊಡಗಿದ್ದರು. ಎಲ್ಲೂ ಇವರಿಗೆ ತಡೆಬರುವುದಿಲ್ಲ. ಒಬ್ಬ ವಿದ್ಯಾರ್ಥಿಯು ಪ್ಲಾಟ್‌ಫಾರಮ್ಮಿನಲ್ಲಿ ನಿಂತು ಕೈಯಲ್ಲೊಂದು ದೀಪ ಎತ್ತಿ ಹಿಡಿದುಕೊಂಡು ನರ್ತನ ಮಾಡುತ್ತ ಜನರಿಗೆ ಮನೋರಂಜನೆ ಮಾಡುತ್ತಿದ್ದಾನೆ. ಜನ "ಹೋಹೋ" ಎಂದು ಅಟ್ಟಹಾಸದಿಂದ ನಗುತ್ತಾರೆ. ಕಸಬಾ ಸ್ಟೇಷನ್ನಿನ ಪ್ಲಾಟ್‌ಫಾರಮ್ಮಿನಲ್ಲಿ ಕೆಲವು ಶಾಲಾ ಮತ್ತು ಕಾಲೇಜು ಹುಡುಗರು ಗುಂಪು ಸೇರಿ ಟಿಕೆಟ್ ಚೆಕರ್ ಬಾಚ್ಚೀ ಸಿಂಗನನ್ನು ಚೆನ್ನಾಗಿ ಹೊಡೆದು ಹಿಂದೆ ಅವನ ಮೇಲೆ ಇದ್ದ ಜಿದ್ದನ್ನು ತೀರಿಸಿಕೊಳ್ಳುತ್ತಾರೆ.

ಚೂಕರಿ ಠಾಣೆಯಲ್ಲಿ "ಮಹಾತ್ಮಾಜಿ ಕೋರ್ಟು" ವಿಚಾರಣೆಗೆ ಕೂಡುತ್ತದೆ. ಯಾರೂ ಸರಕಾರಿ ಕೋರ್ಟಿಗೆ ಹೋಗುವುದಿಲ್ಲ. ಪೊಲೀಸ್ ಇನ್‌ಸ್ಪೆಕ್ಟರನ್ನು ಅರೆಸ್ಟ್ ಮಾಡಿ ವಿಚಾರಣೆಗೆ ಗುರಿ ಪಡಿಸಲಾಗುತ್ತದೆ. ಅವನನ್ನು "ಕೌಮೀ" (ರಾಷ್ಟ್ರೀಯ) ಜೈಲಿಗೆ ಕೊಂಡೊಯ್ಯಲಾಗುತ್ತದೆ. ಇನ್‌ಸ್ಪೆಕ್ಟರ್ ಸಾಹೇಬನಿಗೆ "ಎರಡನೆಯ ಡಿವಿಜನ್" ಖೈದಿಯೆಂದು ತೀರ್ಮಾನ ಮಾಡಲಾಗಿದೆ. "ಅವನಿಗೆ ಪ್ರತಿನಿತ್ಯ ಪೂರಿ ತಿನ್ನಲಿಕ್ಕೆ ಕೊಡಬೇಕು ಮತ್ತು ಅವನ ಹೆಂಡತಿ ಅವನ ಬಳಿ ಹೋಗಬೇಕೆಂದರೆ ಮರ್ಯಾದೆಯಿಂದ ಆಕೆಯನ್ನೂ ಅವನ ಬಳಿ ಕಳಿಸಿಕೊಡಬೇಕು" ಎಂಬ ತೀರ್ಪು! ಜೈಲುಗಳ ಬಾಗಿಲುಗಳನ್ನು ತೆಗೆದು ಖೈದಿಗಳನ್ನು ಹೊರಗೆ ಓಡಿ ಹೋಗಲು ಬಿಟ್ಟರು. ಜೈಲಿನ ಟವರಿನ ಮೇಲೆ ಕಾಂಗ್ರೆಸ್ ಪತಾಕೆ ಹಾರುತ್ತಿತ್ತು. ಸರ್ಕಾರಿ ಟ್ರೆಜರಿಗಳಲ್ಲಿನ ಕರೆನ್ಸಿ ನೋಟುಗಳನ್ನು ರಾಶಿ ಹಾಕಿ ಸುಟ್ಟರು. ಪಶ್ಚಿಮದಲ್ಲಿ ಗೋರಖ್‌ಪುರದಿಂದ ಹಿಡಿದು ಪೂರ್ವದಲ್ಲಿ ಪೂರ್ಣಿಯಾವರೆಗೆ ಈ ಆಂದೋಳನ ಹರಡಿತ್ತು. ಎಲ್ಲೆಲ್ಲೂ ಅರಾಜಕತೆ ಸ್ವೇಚ್ಛಾಚಾರ ಹೇಳುವವರಿಲ್ಲ, ಕೇಳುವವರಿಲ್ಲ, ಫ್ಯಾಸಿಸ್ಟರ ನಿರಂಕುಶ ಪ್ರಭುತ್ವ! ರಾಷ್ಟ್ರೀಯ ಶಕ್ತಿಯ ವಿರಾಟ, ನಿರಾತಂಕ ಅಪವ್ಯಯ - ಯಾರಿಗೂ ಎಗ್ಗಿಲ್ಲ - ವಿವೇಚನೆಯಿಲ್ಲ - ದೂರಾಲೋಚನೆಯಿಲ್ಲ. ಅವ್ಯವಸ್ಥೆಯೇ ಜನರ ಗುರಿ. ಆದರೂ ಸಹ ಎಷ್ಟೋ ಕಡೆ ದುರ್ಲಭವಾದ ನಿಸ್ವಾರ್ಥ ತ್ಯಾಗದ ಮಹಿಮೆಯೂ ಗಮನಕ್ಕೆ ಬರುತ್ತಿತ್ತು. ಕೆಂಪು ಪಗಡಿಯ ಕರೀ ಮುಖಗಳು, ಹೆಲ್‌ಮೆಟ್ (ಶಿರಸ್ತ್ರಾಣ) ಧರಿಸಿದ ಕೆಂಪು ಮುಖಗಳು, ಬಂದೂಕು, ಟಾಮಿಗನ್‌ಗಳೂ ಯಾವುವೂ ಈ ರೊಚ್ಚಿಗೆದ್ದ ಜನಶಕ್ತಿಯನ್ನು ತುಳಿದಿಡಲಾಗಲಿಲ್ಲ.

ದೂರದಲ್ಲಿ ವೀರ್‌ಗಾಂವ್ ಸ್ಟೇಷನ್ನಿನಲ್ಲಿ ಟಾಮೀಗನ್‌ಗಳ ಶಬ್ದ ಗಾಳಿಯಲ್ಲಿ ಬರುತ್ತಿದೆ. ಈ ಕಡೆ ಮುಸುಕಿನ ಜೋಳದ ಹೊಲದಲ್ಲಿ ಈ ಶಬ್ದವನ್ನು ನಕಲು ಮಾಡುತ್ತ ಬೆಳ್ಳುಳ್ಳಿ ಪಟಾಸುಗಳನ್ನು ಸಿಡಿಸುತ್ತಿದ್ದಾರೆ. ಏಕೆ ಹಾಗೆ ಮಾಡಿದರೋ ಅವರಿಗೇ ಗೊತ್ತಿಲ್ಲ. ಹೋಳಿ ಹಬ್ಬದ ದಿನ ಇಡೀ ಊರಿಗೆ ಊರೇ ಹಬ್ಬದ ಹುಚ್ಚೇರಿ ಮನಸ್ಸಿಗೆ ಬಂದ ಹಾಗೆ ಮಾಡುವಂತೆ ವರ್ತಿಸುತ್ತಿದ್ದಾರೆ ಈಗ. ಈ ಅಂಕೆಯಿಲ್ಲದ ಆವೇಶಕ್ಕೆ ಅಣ್ಣನ ಪಕ್ಷದವರು 'ವಿಪ್ಲವದ' 'ಡ್ರೆಸ್ ರಿಹರ್ಸಲ್' ಎಂದು ಹೇಗೆ ಕರೆಯುತ್ತಾರೋ ನನಗೆ ಅರ್ಥವಾಗದು. ."ಕ್ರಾಂತಿಯ ಪ್ರಚೇಷ್ಟೆ"ಯಂತೆ! ಆಹಾ ವೀರ್‌ಗಾಂವ್ ಊರಿನ ಕ್ರಾಂತಿಯ ಪ್ರಚೇಷ್ಟೆಯ ಮುಖಂಡನು—ಯಾರು?

ವಿನಾಯಕ ಮಿಶ್ರ! ಅವನು ಎಲ್ಲಾ ಗಲಾಟೆಗಳಲ್ಲೂ ಹಾಜರು. ಆಸುಪಾಸಿನ ಗ್ರಾಮಗಳಲ್ಲಿ ಹೋಗಿ ಹರಿಕತೆ ಮಾಡುತ್ತಾನೆ. ಹಬ್ಬ, ಹುಣ್ಣಿಮೆಗಳಲ್ಲಿ ಪೌರೋಹಿತ್ಯ ನಡೆಸುತ್ತಾನೆ. ಹಿಂದೂ ಮಿಶನ್ನಿನಲ್ಲಿ ಉಪನ್ಯಾಸ ಕೊಡುತ್ತಾನೆ. ಕ್ರಿಶ್ಚಿಯನ್ ಮತಕ್ಕೆ ಸೇರಿದ ಸಂತಾಲರನ್ನು ಪುನಃ "ಶುದ್ಧಿ" ಮಾಡಿ ಹಿಂದೂ ಮತಕ್ಕೆ ಸೇರಿಸುತ್ತಾನೆ. ಕಾಂಗ್ರೆಸ್ ಮಂತ್ರಿಮಂಡಲ ಇದ್ದಾಗ, ಮಂತ್ರಿ ಯಾರಾದರೂ ಊರಿಗೆ ಬಂದರೆ ಅವರ ಕಾರಿನಲ್ಲಿ ಅವರ ಹೆಗಲ ಮೇಲೆ ಕೈ ಹಾಕಿಕೊಂಡು 'ಟೂರ್' ಹೋಗುತ್ತಾನೆ - ಮದುವೆ, ಮುಂಜಿಗಳಲ್ಲಿ ಲಗ್ನ, ನಕ್ಷತ್ರ ಲೆಕ್ಕ ಹಾಕಿಕೊಡುತ್ತಾನೆ, "ಹೋಮೋಪಥಿ' ಆಯುರ್ವೇದ ವೈದ್ಯ ವೃತ್ತಿ ನಡೆಸುತ್ತಾನೆ. ಬೇಕಾದಷ್ಟು ಹಣ ಸಹ ಗಳಿಸಿದ್ದಾನೆ. ಅವನ ಬಳಿ ಇರುವ ದೊಡ್ಡದೊಂದು ಹಿಂದಿ ಪುಸ್ತಕವೇ ಅವನ ಅನೇಕ ವೃತ್ತಿಗಳಿಗೆ ಬಂಡವಾಳ. ಹಳ್ಳಿ ಜನರ ಮದುವೆ, ಶ್ರಾದ್ಧಗಳಲ್ಲಿ ಆ ಪುಸ್ತಕದಿಂದ ಯಾವುದೋ ಹಿಂದಿ ಪದ್ಯವನ್ನು ಶ್ಲೋಕದಂತೆ, ಮಂತ್ರದಂತೆ ಉಚ್ಚರಿಸಿ ದಕ್ಷಿಣೆ ವಸೂಲು ಮಾಡುತ್ತಾನೆ. ಈ ಪುಸ್ತಕದಲ್ಲಿ ಸಮಸ್ಯೆಗಳಿಗೆ ಉತ್ತರಗಳಲ್ಲದೆ 'ನಾಟಿ' ಔಷಧಿ, ಪಥ್ಯಗಳು ಸಹ ಇವೆ. ಇಂತಹ ಕ್ರಾಂತಿವೀರರ ನೈತೃತ್ವದಲ್ಲಲ್ಲವೇ ಇಂತಹ ಸಮಯದಲ್ಲಿ ಈ ನಮೂನೆಯ ಸಂಘಟನೆ, ಈ ರೀತಿಯ 'ಕ್ರಾಂತಿ?' ಈ ವಿವರವನ್ನು ಅಣ್ಣನಿಗೆ ಯಾರು ತಿಳಿಯ ಹೇಳುತ್ತಾರೆ? ನಾನು ಯಾವ ವಿಧವಾಗಿಯೂ ಅನ್ಯಾಯ ಮಾಡಿಲ್ಲ, ನನ್ನ ಕರ್ತವ್ಯವನ್ನು ಮಾತ್ರ ಮಾಡಿದ್ದೇನೆ ಮತ್ತು ನಾನು ಸಾಕ್ಷ್ಯ ಹೇಳದಿದ್ದರೂ ಬೇರೆ ಯಾರಾದರೂ ಹೇಳುತ್ತಿದ್ದರು. ಸರ್ಕಾರಕ್ಕೆ ಇಂಥ ಸಾಕ್ಷಿಗಳ ಅಭಾವವಿಲ್ಲ. ವ್ಯತ್ಯಾಸ ಇಷ್ಟೇ. ನಾನು ಸಾಕ್ಷ್ಯ ಹೇಳಿರುವುದು ನನ್ನ ರಾಜಕೀಯ ಸಿದ್ಧಾಂತಗಳ ಪ್ರೇರಣೆಯಿಂದಲೇ ಮತ್ತು ಕರ್ತವ್ಯದ ದೃಷ್ಟಿಯಿಂದ. ಬೇರೆ ಜನ ಸಾಕ್ಷ್ಯ ಹೇಳುವುದು ದುಡ್ಡಿನಾಸೆಯಿಂದ. ಅಣ್ಣನ ಸಂಗಡ ಈ ವಿಷಯವಾಗಿ ಹೃದಯ ಬಿಚ್ಚಿ ಮಾತಾಡುವ ಹಾಗಿದ್ದಿದ್ದರೆ ಎಷ್ಟು ಒಳ್ಳೆಯದಾಗಿತ್ತು! ಇಲ್ಲ ಅದು ನಿರರ್ಥಕವಾಗುತ್ತಿತ್ತು. ನಾನೇನೋ ನನ್ನ ಇಷ್ಟದ ಪ್ರಕಾರ ಹೇಳಿಕೊಂಡು ಹೋಗುತ್ತಿದ್ದೆ. ಅಣ್ಣ ಮಾತಾಡದೆ ತಾಳ್ಮೆಯಿಂದ ಸುಮ್ಮನೆ ಕಿವಿಗೊಟ್ಟು ಕೇಳುತ್ತ ಆಗಾಗ ಸಣ್ಣದಾಗಿ ನಗುತ್ತ ಇರುತ್ತಿದ್ದ ಅಷ್ಟೇ. ಇಲ್ಲದೆ ಹೋದರೆ ಮಧ್ಯೆ ಮಧ್ಯೆ ಸೂಕ್ಷ್ಮವಾದ ಒಂದು ಉತ್ತರ ಕೊಟ್ಟು ಅಥವಾ ಒಂದು ಪ್ರಶ್ನೆ ಹೇಳಿ ನನ್ನ ತರ್ಕ ಸರಣಿಯನ್ನೇ ತಲೆ ಕೆಳಗು ಮಾಡಿಬಿಡುತ್ತಿದ್ದ. ಅವನ ಸಣ್ಣ ನಗುವನ್ನು ಕೇಳಿದೊಡನೆ, ಅವನ ಕೆನ್ನೆಯಲ್ಲಿ ಗುಳಿ ಬಿದ್ದುದನ್ನು ನೋಡಿದೊಡನೆ ನನ್ನ ಅತಿ ಗಂಭೀರವಾದ ತರ್ಕ ಸರಣಿಯು ಅಣ್ಣನ ದೃಢವಾದ ವಿಚಾರ ಶಕ್ತಿಯ ಮೇಲೆ ಎಳ್ಳಷ್ಟೂ ಪ್ರಭಾವ ಬೀರಿಲ್ಲವೆಂದು ತಿಳಿದುಕೊಂಡುಬಿಡುತ್ತಿದ್ದೆ. ಅಣ್ಣನ ನಗು ನನ್ನನ್ನು ಸೋಲಿಸುವುದಕ್ಕೆಂದಲ್ಲ. ಕೇವಲ ನನ್ನನ್ನು ಸುಮ್ಮನಾಗಿಸುವುದಕ್ಕೋಸ್ಕರ. ಒಂದೆರಡು ಸೂಕ್ಷ್ಮವಾದ ಪ್ರಶ್ನೆಗಳಿಂದಲೇ ನನ್ನ ತರ್ಕದ ಸೌಧ ಧೂಳಿನಲ್ಲಿ ಕುಸಿದು ಬೀಳುತ್ತದೆ!

ಹೋದ ವಾರ ನಾನು ಅಣ್ಣನನ್ನು ಭೆಟ್ಟಿಯಾಗಲು ಹೋದಾಗ ಈ ಪ್ರಶ್ನೆಯನ್ನು ಕೇಳಲಿಲ್ಲ. ಅವನ ತರ್ಕದಿಂದ ಸೋಲುತ್ತೇನೆಂಬ ಭಯದಿಂದಲ್ಲ. ಬರೇ ಸಂಕೋಚದಿಂದ. ಇದೇನು ತಪ್ಪಿತಸ್ಥನ ಮನಸ್ಸಿನಲ್ಲಾಗುವ ಸಂಕೋಚವೇ? ಯಾಕೆ.

ನಾನು ಯಾವ ತಪ್ಪನ್ನೂ ಮಾಡಿಲ್ಲವಲ್ಲ! ಹಾಗಿರುವಾಗ ತಪ್ಪು ಮಾಡಿದ್ದರಿಂದ ಹುಟ್ಟುವ ಸಂಕೋಚ ನನಗೆ ಹೇಗೆ ಆಗುತ್ತದೆ ? ಇಂಥ ವೇಳೆಯಲ್ಲಿ ಈ ಪ್ರಶ್ನೆಗಳನ್ನೆಲ್ಲ ಕೇಳುವುದು ಸೂಕ್ತವಲ್ಲ ಎಂದು ಅನ್ನಿಸಿದ್ದರಿಂದಲೇ ಸಂಕೋಚ. ಸಾವಿನ ಕಡೆಯ ಗಳಿಗೆಯಲ್ಲಿ ತುಳಸೀ ಕಟ್ಟೆಯ ಬಳಿ ತಂದು ಇಡಲ್ಪಟ್ಟವನನ್ನು "ವಿಲ್ ಎಲ್ಲಿಟ್ಟಿದ್ದೀರಿ ?" ಎಂದು ಕೇಳುವುದು ಸೂಕ್ತವೇ ? ಹಾಗೇ ಇದು ಸಹ ಅಲ್ಲ. ಅಣ್ಣನಿಗೆ ನನ್ನ ಮನಸ್ಸಿನ ಸ್ಥಿತಿಯನ್ನು ತಿಳಿಯ ಹೇಳುವ ಅವಶ್ಯಕತೆಯಿಲ್ಲ. ಅವನು ತಾನಾಗಿಯೇ ತಿಳಿದುಕೊಂಡಿದ್ದಾನೆ. ಒಬ್ಬ ಖಾಕೀ ಹಾಫ್ ಪ್ಯಾಂಟ್ ಧರಿಸಿರುವ ಅಲ್ಪ ವಯಸ್ಸಿನ ಆಫೀಸರ್ ಗೇಟಿನೊಳಗೆ ಹೊಕ್ಕ. ಬಹುಶಃ ಅಸಿಸ್ಟೆಂಟ್ ಜೈಲರ್ ಇರಬೇಕು. ರಾತ್ರಿಯ ಗಸ್ತಿನ ಮೇಲೆ ಹೊರಟಿರುತ್ತಾನೆ.

ಹೋದವಾರ ನಾನು ಅಣ್ಣನನ್ನು ಭೆಟ್ಟಿಯಾಗಲು ಹೋದದ್ದು ಅವನಿದ್ದ ಸೆಲ್ಲಿನಲ್ಲಿ. ಸಂಗಡ ಸಿ.ಐ.ಡಿ. ಆಫೀಸರೂ ಬಂದ. ಒಬ್ಬ ವಾರ್ಡರನು ಮೊದಲಿಂದಲೇ ಅಲ್ಲಿ ನಿಂತಿದ್ದ. ಇವರುಗಳು ಎದುರಿಗೆ ನಿಂತಿರುವಾಗ ಅಂಥದೇನು ಮಾತುಕತೆಯಾಡಲು ಸಾಧ್ಯ ? ನನ್ನ ಕೈಲಿ ಕರವಸ್ತ್ರದಲ್ಲಿ ಸುತ್ತಿದ್ದ ಕೆಲವು ಹಣ್ಣುಗಳಿದ್ದುವು. ಒಳಗಡೆ ಹೋಗುವಾಗ ಸಿ.ಐ.ಡಿ. ತಮಾಷೆ ಮಾಡುತ್ತ, "ನೋಡೀಪ್ಪ, ಅವರಲ್ಲೇನೂ ಅಪಾಯಕರವಾದ ಸಾಮಾನಿಲ್ಲವಲ್ಲ ? ಆಮೇಲೆ ನನ್ನ ನೌಕರಿಗೇ ಖೋತಾ ಬಂದೀತು. ಈ ದೇಶದಲ್ಲಿ ಬಂಗಾಳಿಗಳ ನೌಕರಿ ಪರಿಸ್ಥಿತಿ ನಿಮಗೆ ಗೊತ್ತಿಲ್ಲದೆ ಇಲ್ಲ. ಇಷ್ಟದಿಂದ ಈ ಡಿಪಾರ್ಟ್‌ಮೆಂಟಿಗೆ ಬಂದೆ ಅಂದುಕೊಂಡಿರಾ ?" ಎಂದ. ಆಗ ನಾನು ಕರವಸ್ತ್ರ ಬಿಚ್ಚಿ ತೋರಿಸಲು ಹೋದಾಗ ನಕ್ಕು ಬೆನ್ನುತಟ್ಟುತ್ತ ಅವನು, "ಅರೇ, ಇರಲಿ ಬಿಡೀಪ್ಪಾ.... ತಮಾಷೆ.... ತಮಾಷೆಗೆ ಹೇಳಿದೆ. ನೀವೂ ಸರಿಯೇ ಅಲ್ಲ ಮನುಷ್ಯರನ್ನು ಗುರುತು ಹಿಡೀಲಿಕ್ಕಾಗೋದಿಲ್ಲವೇ ನನಗೆ ?" ಎಂದ. ಹಾಗಾದರೆ ಈ ಸಿ.ಐ.ಡಿ. ಸಹ ನನ್ನಲ್ಲಿ ನಂಬಿಕೆ ಇಟ್ಟಿದ್ದಾನೆ! ರಾಜಕೀಯ ಕೆಲಸಗಾರನಿಗೆ ಇದಕ್ಕಿಂತಲೂ ದೊಡ್ಡ ಸರ್ಟಿಫಿಕೇಟ್ ಬೇಕೆ ? ಇಷ್ಟರವರೆಗೆ ನಾನು ನಿರೀಕ್ಷಿಸಿರಲಿಲ್ಲ. ಅಣ್ಣನ ವಿರುದ್ಧವಾಗಿ ಸಾಕ್ಷ್ಯ ಹೇಳಿದ ಮೇಲೆ ಇವರುಗಳಿಗೆ ನನ್ನ ಮೇಲಿದ್ದ ಸಂದೇಹ ಹೊರಟುಹೋಗಿದೆ. ಅಣ್ಣ ಸೆಲ್ಲಿನಲ್ಲಿ ಸಲಾಕೆಗಳ ಹಿಂದೆ ನಿಂತಿದ್ದ. ಎಣ್ಣೆ ಕಾಣದ ಒರಟು ಕೂದಲು. ಬಹಳ ಬಡಕಲಾಗಿ ಬಿಟ್ಟಿದ್ದಾನೆ. ಮೂಗು ಕತ್ತಿಯಂತೆ ಮೇಲೆದ್ದು ಕಾಣುತ್ತದೆ. ಮೈಬಣ್ಣ ಮೊದಲಿಗಿಂತಲೂ ಬೆಳ್ಳಗಾಗಿದೆ. ಕೈಕಾಲುಗಳ ಮೇಲೆ ಕಜ್ಜಿಯ ಕಲೆಗಳು. ಅವನ ನಗು ಮುಖ, ಉತ್ಸುಕತೆಯಿಂದ ತುಂಬಿದ ಕೋಮಲ ದೃಷ್ಟಿ ನನ್ನ ಅಳುಕನ್ನು ದೂರ ಮಾಡಿದುವು. ನನ್ನನ್ನು ನೋಡಿದೊಡನೆ ಅವನೇ "ಕೈಲಿ ಏನೋ ಅದು ?" ಎಂದ. "ದೊಡ್ಡಮ್ಮ ಕಳಿಸಿದ್ದಾಳೆ ಇದನ್ನ" ಅಂದೆ. "ಓ-ಹಾಗಾ ? ಹೇಗಿದ್ದಾಳೆ ದೊಡ್ಡಮ್ಮ ? ಏನಾದರೂ ಹೇಳಿದಳಾ ?" ಎಂದು ಕೇಳಿದ. ಮೊದಲು ಅನ್ನಿಸಿತು. ದೊಡ್ಡಮ್ಮ ಸ್ನಾನ, ಊಟ ಎಲ್ಲ ತೊರೆದು ಬಿಟ್ಟಿದ್ದಾಳೆ ಎಂದು ಇದ್ದ ಸ್ಥಿತಿ ತಿಳಿಸಿ ಬಿಡೋಣವೇ ಎಂದು. ಆಮೇಲೆ, ಯಾಕೆ, ಈ ಸಂಕಟಕರವಾದ ಸುದ್ದಿ ಹೇಳಿ ಅವನ ಸ್ನೇಹಕಾತರವಾದ ಮನಸ್ಸನ್ನು ಕೆಡಿಸುವುದು ? ಎಂದುಕೊಂಡು, "ಇದ್ದಾಳೆ ಒಂದು ರೀತಿಯಾಗಿ ನಿನ್ನ ವಿಷಯ ಆಗಾಗ ಕೇಳತಾನೇ ಇರತಾಳೆ" ಅಂದೆ.

ನಾನು ನಿಜಸ್ಥಿತಿ ಮರೆಮಾಚಲು ಮಾಡಿದ್ದ ಪ್ರಯತ್ನವನ್ನು ಅಣ್ಣ

ಕಂಡುಹಿಡಿದುಬಿಟ್ಟಿದ್ದ. ಅದು ಅವನ ಮುಖ ನೋಡಿದರೆ ಗೊತ್ತಾಗಿ ಹೋಯಿತು. ಸಿ.ಐ.ಡಿ. ಹೇಳಿದ, "ಬಾಗಿಲು ತೆಗಿಸತೇನೆ ಒಳಗೆ ಹೋಗಿ ಕೂಡಿ ಮತ್ತೆ" "ಇರಲಿ ಪರವಾಯಿಲ್ಲ" ಎಂದು ನಾನು ಹೇಳಿದರೂ ವಾರ್ಡರು ಬಾಗಿಲನ್ನು ತೆಗೆದುಬಿಟ್ಟ. ಒಳಗೆ ಹೋಗಿ ಅಣ್ಣನ ಕಂಬಳಿಯ ಮೇಲೆ ಕೂತೆ. ಅವತ್ತು ನಾನಾಗಿ ಯಾವ ಮಾತನ್ನೂ ಆಡಲು ಆಗಲಿಲ್ಲ. ಯಾಕೋ ಮಾತೇ ಹೊರಡಲೊಲ್ಲದು. ಅಣ್ಣನಿಗೆ ಬಹುಶಃ ನನ್ನ ಮನಸ್ಸಿನ ಅವಸ್ಥೆ ಗೊತ್ತಾಗಿರಬೇಕು. ಆಗ ಅವನೇ ನನ್ನನ್ನು ಏನೇನೋ ಪ್ರಶ್ನೆಗಳನ್ನು ಕೇಳಿದ. ನಾನು ಸುಮ್ಮನೆ ಜವಾಬು ಹೇಳುತ್ತ ಹೋದೆ. ಹೊರಟು ಬರುವಾಗ ಅಣ್ಣ, "ಅಮ್ಮನ್ನ ಹೋಗಿ ನೋಡು ಒಂದು ಸಲ" ಎಂದು ಹೇಳಿದ್ದ. ನನ್ನೊಡನೆ ಇದೇ ಅಣ್ಣನ ಕೊನೆಯ ಮಾತು. ಅವನ ಈ ಕಡೆಯ ಮಾತನ್ನು, ಈ ಕಡೆಯ ಅನುರೋಧವನ್ನು ನಾನು ಪಾಲಿಸಲಾಗಲಿಲ್ಲ. ಅಮ್ಮ ನನ್ನನ್ನು ನೋಡಿದೊಡನೆ ಬಿಕ್ಕಿ ಬಿಕ್ಕಿ ಅಳಲು ತೊಡಗಿ ನನಗೆ ಏನೇನು ಅನ್ನುವಳೋ ಎಂಬುದನ್ನು ಊಹಿಸಿದೊಡನೆ ನನಗೆ ಹೇಗೆ ಹೇಗೋ ಆಗುವುದು. ಇಲ್ಲ. ಅಮ್ಮನನ್ನು ನೋಡುವ ಧೈರ್ಯವಿಲ್ಲ ನನಗೆ. ಅಣ್ಣ ನನ್ನನ್ನು ಎಷ್ಟೋ ಅರ್ಥ ಮಾಡಿಕೊಂಡಿದ್ದಾನೆ. ಆದರೂ ನಾನು ಈಗ ಇರುವ ಸ್ಥಿತಿಯಲ್ಲಿ ಅಮ್ಮನ ಮುಂದೆ ಹೋಗಿ ಮಾತಾಡುವುದು ಹೇಗೆ ತಾನೇ ಸಾಧ್ಯ ಅನ್ನುವುದು ಅವನಿಗೆ ಹೊಳೆದಿರುವುದು ಆಶ್ಚರ್ಯ. ನನಗೆ ಯಾವುದು ಇಷ್ಟ, ಯಾವುದಿಷ್ಟವಿಲ್ಲ ಅನ್ನುವುದು ಅವನಿಗೆ ಚೆನ್ನಾಗಿ ಗೊತ್ತು. ನಾನು ಒಮ್ಮೆ ಅಣ್ಣನಿಗೆ ಒಳ್ಳೇದೊಂದು, ನನ್ನ ಮನಸ್ಸಿಗೆ ಹಿಡಿಸುವಂಥ ಕವಿತೆಯೊಂದನ್ನು ಬರೆದುಕೊಡು ಎಂದು ಕೇಳಿದ್ದೆ. ನನಗೆ ಈ ದೊಡ್ಡ ದೊಡ್ಡ ಕವಿಗಳ ಆವೇಶದ ಅಳುದನಿಯ ಕವಿತೆಗಳು ಅರ್ಥವಾಗುವುದಿಲ್ಲ. ಅದಕ್ಕೇ ಅಣ್ಣ ನನಗೆ ಅರ್ಥವಾಗುವಂಥ ಪದ್ಯ ಒಂದನ್ನು ಬರೆದುಕೊಟ್ಟಿದ್ದ.

ಪೂರ್ಣ ಸ್ವಾತಂತ್ರ್ಯ ಬೇಕು ಎಲ್ಲರಿಗೂ,
ಸ್ವಲ್ಪವಿದ್ದರೆ ಸಾಲದು, ತೃಪ್ತಿಯಾಗದು ನಿನಗೆ
ಮಲೆತ ಧನಿಕರ ಅಸಡ್ಡೆ ಅಸಹ್ಯವೆನಗೆ,
ಎಂದು ಶ್ರಮಿಕರ ಶೋಷಣೆ ಹೋಗಿ, ಅದರ ಪ್ರತೀಕಾರವಾಗುವುದೋ
ಅಂದಿನ ದಿನಕಾಗಿ ಕಾದು ಕೂತಿರುವೆ ನಾನು,
ಯಂತ್ರದಲಿ ಸಿಲುಕಿ ಪುಡಿಯಾದ
ದಲಿತರ ನಿಶ್ವಾಸ ತರುವುದು ಪ್ರಳಯ ಇದೆನ್ನ ವಿಶ್ವಾಸ.
ಬೇರಾವ ದಾರಿಯಿಲ್ಲ. ಹೊಸ ಸೂರ್ಯ ಹುಟ್ಟುವನು,
ತರುವನು ನಗೆ ಬೆಳಕ ಹಸಿದ ಬಾಡಿದ ಮುಖಗಳ ಮೇಲೆ,
ಯಾರಿಗೂ ಬೇಡ ಅಪಾರ ರಾಶಿ ಹಣ.

ಆಮೇಲೆ ಇನ್ನೂ ಏನೋ ನೆನಪಿಲ್ಲ. ಒಂದು ಕಾಲದವರೆಗೆ ಈ ಪದ್ಯವೆಲ್ಲ ಬಾಯಲ್ಲೇ ಇತ್ತು ಈ ಎರಡು ವರುಷಗಳೊಳಗೆ ನನ್ನಲ್ಲಿ ಎಷ್ಟು ಬದಲಾವಣೆ ಆಗಿಹೋಗಿದೆಯೋ. ನಾನು ಅಣ್ಣನ ಪ್ರಭಾವದಿಂದ ಪೂರ್ತಿಯಾಗಿ ಬಿಡುಗಡೆಯಾಗಲು ಅದೆಷ್ಟು ಪ್ರಯತ್ನ ಮಾಡಿದ್ದೇನೋ. ಆ ಕಾರಣದಿಂದ ನನ್ನ

ಸುಪ್ತ ಚೇತನ ಮನಸ್ಸೂ ಸಹ, ಬಹುಶಃ ಈ ಕವಿತೆಯನ್ನು ನನ್ನ ನೆನಪಿನಿಂದ ಅಳಿಸಿ ಹಾಕಲು ಸಹಾಯ ಮಾಡಿದೆ. ಅಣ್ಣಾ ಬರೆದುಕೊಟ್ಟ ಈ ಪದ್ಯವನ್ನು ರಟ್ಟು ಹಾಕಿ ಆಶ್ರಮದಲ್ಲಿ ಅಮ್ಮನ ಕೊಠಡಿಯ ವರಾಂಡದಲ್ಲಿ ಗೋಡೆಗೆ ತೂಗು ಹಾಕಿದ್ದೆ. ಅದು ಇನ್ನೂ ಇದೆಯೋ ಇಲ್ಲವೋ, ಯಾರಿಗೆ ಗೊತ್ತು? ಇಷ್ಟು ದಿನ ಅದು ನನಗೆ ಜ್ಞಾಪಕವೇ ಬರಲಿಲ್ಲ. ಈ ಸಲ ಹೋಗಿ ನೋಡಬೇಕು.

"ಎಚ್ಚರವಿದ್ದೀರಾ ಬಾಬೂಜಿ ?" ಸುಬೇದಾರ್ ಸಾಹೇಬ ತನ್ನ ವಸತಿಯಿಂದ ಹಿಂದಿರುಗಿ ಬಂದಿದ್ದಾನೆ. ಅವನ ಮುಖ, ಕಣ್ಣು ನೋಡಿದರೆ ಚೆನ್ನಾಗಿ ನಿದ್ದೆ ಮಾಡಿ ಬಂದಿದಾನೆ ಎಂದು ಕಾಣುತ್ತದೆ. ದಡಬಡವೆಂದು ಎದ್ದು ಕೂಡುತ್ತೇನೆ.

"ಬೈಠಿಯೇ, ಬೈಠಿಯೇ ಆರಾಮ್ ಕೀಜಿಯೇ ಬಾಬೂಜಿ" ಎಂದ. ನನಗೆ ಯಾರ ಸಂಗಡವೂ ಮಾತಾಡಲು ಇಷ್ಟವಾಗುತ್ತಿರಲಿಲ್ಲ. ಸುಬೇದಾರ್ ಸಾಹೇಬ ಗೇಟಿನ ಒಳಗೆ ಪ್ರವೇಶಿಸಿದ. ಆಫೀಸ್ ರೂಮಿನ ಕಡೆ ಹೋಗುತ್ತಿದ್ದ. ಬಹುಶಃ ಸಂಜೆಯ ವೇಳೆ ಹಾಸಿದ್ದ ಹಾಸಿಗೆಯನ್ನು ಸುತ್ತಿ ಎತ್ತಿಡುವುದಕ್ಕೇನೋ. ಅಣ್ಣಾ ಈಗ ಏನು ಮಾಡುತ್ತಿದ್ದಾನೋ! ಬಹುಶಃ ಪತ್ರಗಳನ್ನು ಬರೆಯುತ್ತಿದ್ದಾನೆ. ಖಂಡಿತ ಎಷ್ಟೋ ಪತ್ರಗಳನ್ನು ಬರೆಯುತ್ತಾನೆ. ನಾನು ನೇಹಾಲ್‌ಸಿಂಗನಿಗೆ ಕೊಟ್ಟ ಹಣದಲ್ಲಿ ಅಣ್ಣನಿಗೆ ಕಾಗದ, ಪೆನ್ಸಿಲ್‌ಗಳನ್ನು ಕೊಂಡುಕೊಟ್ಟಿದ್ದಾನೋ ಇಲ್ಲವೋ ಗೊತ್ತಿಲ್ಲ. ಕೊಟ್ಟಿದ್ದರೂ ಅವನ್ನು ಸೆಲ್ಲಿನಲ್ಲಿ ಇಡುವುದಕ್ಕೆ ಸಾಧ್ಯವಿಲ್ಲ. ಪ್ರತಿನಿತ್ಯ ತನಿಖೆ ಆಗುತ್ತಲೇ ಇರುತ್ತದೆ. ಬರೆಯುವ ಸೌಕರ್ಯವಿದ್ದರೂ ಅಣ್ಣನಿಗೆ ಈಗ ಎಲ್ಲರಂತೆ ಪತ್ರಗಳನ್ನು ಬರೆಯಲು ಬಹುಶಃ ಆಗುವುದಿಲ್ಲ. ಆಶ್ಚರ್ಯ, ಅವನ ಮನಸ್ಸು! ಅವನು ಯಾವ ಕೆಲಸವನ್ನಾದರೂ ಇದು ಅಸಭ್ಯ ಮತ್ತು ಇದು ನೋಡುವುದಕ್ಕೆ ಚೆನ್ನಲ್ಲವೆಂದು ತಿಳಿಯುತ್ತಾನೆಂದು ನನಗೆ ಗೊತ್ತಿಲ್ಲ. ಮೇರಿ ಆಂಟೋಯಿನೆಟ್ ರಾಣಿಗೆ* ಶೂಲಕ್ಕೇರಿಸುವ ಹಿಂದಿನ ರಾತ್ರಿ ಕೂದಲೆಲ್ಲ ಬೆಳ್ಳಗಾಗಿ ಹೋಗಿತ್ತು. ಅಣ್ಣನ ಕೂದಲು ಬೆಳ್ಳಗಾಗುವುದನ್ನು ಕಲ್ಪನೆ ಸಹ ಮಾಡಲಾರೆ. ಅವನು ಬಹುಶಃ ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿರುತ್ತಾನೆ. ಸರ್ ವಾಲ್ಟರ್ ರ್‍ಯಾಲೆ**ಯನ್ನು ವಧಸ್ಥಾನಕ್ಕೆ ಕೊಂಡೊಯ್ಯುವ ಮುನ್ನ ಅವನು ಕೊಲೆಗಡುಕನಿಗೆ, "ನೋಡಪ್ಪ, ನಾನು ಅಷ್ಟು ಇಷ್ಟದಿಂದ ಬೆಳೆಸಿದ್ದ ದಾಡಿಯನ್ನು ಮಾತ್ರ ಕತ್ತರಿಸಿ ಬಿಸಾಡಬೇಡಿ" ಎಂದು ತಮಾಷೆ ಮಾಡುತ್ತ ಹೇಳಿದನಂತೆ. ಪೂರ್ವದಲ್ಲಿ ಇದಕ್ಕೆ ಸ್ವಲ್ಪ ಅತ್ಯುಕ್ತಿಯೆಂದು ಹೇಳುತ್ತಿದ್ದರು. ಆದರೆ ಅಣ್ಣಾ ಹೀಗೆ ಹೇಳಿದರೆ ನಾನದನ್ನು ಅತ್ಯುಕ್ತಿಯೆಂದು ಹೇಳುವುದಿಲ್ಲ. ಎಷ್ಟು ಜನ ರಾಜಕೀಯ ಬಂದಿಗಳು ಫಾಸಿ ಸ್ತಂಭವನ್ನು ಏರುವುದಕ್ಕೆ ಮುನ್ನ ಎಷ್ಟು ವಿಧವಾಗಿ ಆಚರಿಸುತ್ತಿದ್ದರೆಂಬ ಕತೆಗಳನ್ನು ಕೇಳಿದ್ದೇನೆ. ಒಬ್ಬನು ಜ್ಞಾನತಪ್ಪಿ ಬಿದ್ದು ಬಿಟ್ಟಿದ್ದನಂತೆ. ಇನ್ನೊಬ್ಬ ಯಾರೋ, ಸೂಪರಿಂಟೆಂಡೆಂಟರನ್ನು ಹೀನಾಮಾನಾ ಬೈದನಂತೆ. ಒಬ್ಬ ಭಗವಂತನನ್ನು ತನ್ನ ಅವಸ್ಥೆಗೆ ಕಾರಣನೆಂದು ಹೇಳಿ ದೂಷಿಸಿದನಂತೆ. ಮತ್ತೊಬ್ಬ ದೇವರ ನಾಮ ಭಜನೆ ಮಾಡಿದ. ಮಗದೊಬ್ಬನು ಭಾಷಣ ಕೊಡಲು ವ್ಯರ್ಥ ಪ್ರಯತ್ನ. ಒಬ್ಬ ಧೀರನಂತೂ

---

* ಫ್ರೆಂಚ್ ಕ್ರಾಂತಿಯ ಕಾಲದಲ್ಲಿ ಗಲ್ಲಿಗೇರಿಸಲ್ಪಟ್ಟ ಫ್ರಾನ್ಸ್ ದೇಶದ ರಾಣಿ.

** ಇಂಗ್ಲೆಂಡಿನ ಎಲಿಜಬೆತ್ ರಾಣಿಯ ಕಾಲದಲ್ಲಿ ನೌಕಾ ಪಡೆಯ ಅಡ್ಮಿರಲ್ ಆಗಿದ್ದ.

"ಶಿರ್ ಫರೋಶೀ ಕಾ ತಮನ್ನಾ" (ಮಸ್ತಕ ದಾನದ ಆವೇದನ) ಎಂಬ ಹಾಡನ್ನು ಹಾಡುತ್ತ ಹಾಡುತ್ತಲೇ ನಿರ್ವಿಕಾರ ಭಾವದಲ್ಲಿ ಮೆಟ್ಟಲು ಹತ್ತಿ ಮರದ ಅಟ್ಟದ ಮೇಲೆ ನಿಂತುಕೊಂಡನಂತೆ. ಆದರೆ ಅಣ್ಣ ಮಾತ್ರ ಇಂಥವುಗಳೆಲ್ಲ ಸ್ವಲ್ಪ ಮಟ್ಟಿಗೆ ನಾಟಕೀಯವೆಂದು ಬಿಡುತ್ತಾನೆ. ಅಣ್ಣ ಇವುಗಳಲ್ಲಿ ಯಾವುದನ್ನೂ ಮಾಡುವುದಿಲ್ಲ. ಅವನು ತುಟಿಗಳಂಚಿನಲ್ಲಿ ಉದಾಸೀನ ತುಂಬಿದ ನಗೆ ಕಾಣಿಸಿಕೊಳ್ಳುತ್ತದೆ. ಆ ಉದಾಸೀನ, ನಿರಾತಂಕದ ನಗೆಯ ಮುಂದೆ ಸೂಪರಿಂಟೆಂಡೆಂಟನು ಕಣ್ಣು ಇಳಿಸಿಬಿಡುತ್ತಾನೆ. ಮ್ಯಾಜಿಸ್ಟ್ರೇಟನು ಬೇರೆ ಕಡೆ ನೋಟ ತಿರುಗಿಸಿ ಬಿಡುತ್ತಾನೆ. ಜೈಲರ್ ಸಾಹೇಬನು ಅಕಾರಣವಾಗಿ ಟಾರ್ಚ್ ಬೆಳಗಿಸಿ ಕೈಗಡಿಯಾರ ನೋಡಿಕೊಳ್ಳುತ್ತಾನೆ. ಸಜಾ ಅವಧಿಯಲ್ಲಿ ಸ್ವಲ್ಪ 'ರೆಮಿಷನ್' (ಮಾಫಿ) ಮತ್ತು ಐದು ರೂಪಾಯಿ ಇನಾಮಿಗೋಸ್ಕರ ಈ ನೇಣು ಹಾಕುವ ಕೆಲಸಕ್ಕೆ ಒಪ್ಪಿಕೊಂಡಿರುವ ನಿರ್ವಿಕಾರ ಭಾವದ ಖೈದಿಗೆ ಸಹ ಹೃದಯದ ಮಿಡಿತ ಜೋರಾಗಲು ತೊಡಗುತ್ತದೆ. ಹೀಗಲ್ಲದೆ ಅಣ್ಣ ಬೇರೆ ಯಾವ ರೀತಿಯಲ್ಲಾದರೂ ನಡೆದುಕೊಂಡಾನೆಂಬುದನ್ನು ಊಹಿಸಲೂ ಸಾಧ್ಯವಿಲ್ಲ.

ಖಟ್.... ಖಟ್... ಖಟ್! ಗೇಟಿನ ಎರಡನೆಯ ಮಾಳಿಗೆಯ ಕಡೆಯಿಂದ ಯಾರೋ ಮೆಟ್ಟಲಿಳಿದು ಬರುತ್ತಿದ್ದಾರೆ. ಗರ್ವಿಷ್ಟ, ಮದಾಂಧ, ಪೌರುಷ ಪ್ರದರ್ಶನ ಮಾಡುವಂಥ ವ್ಯಕ್ತಿಯೊಬ್ಬನ ಕಾಲು ಸಪ್ಪಳ ಅದು! "ಎಲೈ ಭೂಮಿಯೆ, ತಿಳಿದುಕೋ ಈ ಸ್ಥಾನದೊಳಗಡೆ ಬೇರೆ ಯಾರ ಸಾಮರ್ಥ್ಯವೂ, ಯಾರ ಆಜ್ಞೆಯೂ ನಡೆಯಲಿಕ್ಕಿಲ್ಲ. ಇಲ್ಲಿ ನಾನೇ ಸರ್ವಾಧಿಕಾರಿ ಗೊತ್ತಾಯಿತೇ!" ಎಂದು ಗರ್ಜಿಸಿ ಹೇಳುವ ಭಾವ ಆ ಪದ ಧ್ವನಿಗೆ. ಬಹಳ ಕಾಲದಿಂದ ಈ ಧ್ವನಿಯನ್ನೇ ನಿರೀಕ್ಷಿಸುತ್ತ ಕೂತಿದ್ದೆ. ಖಾಕಿಯ ಜೈಲು ಯೂನಿಫಾರಮ್ಮನ್ನು ಧರಿಸಿದ್ದ ಬಲಿಷ್ಠ ದೇಹದ ದೊಡ್ಡ ಮನುಷ್ಯನೊಬ್ಬ ಇಳಿದುಬಂದ. ಗೇಟಿನ ಕಾವಲುಗಾರನು ನೆಲಕ್ಕೆ ಬೂಟನ್ನೇ ಜೋರಾಗಿ ಮೆಟ್ಟಿ ಸೆಲ್ಯೂಟ್ ಮಾಡಿದ. ಆಮೇಲೆ ನೆಟ್ಟಗೆ ಅಲ್ಲಾಡದೆ ನಿಂತುಕೊಂಡ. ಒಳಗಡೆಯ ವಾರ್ಡರು ಸಲಾಮು ಮಾಡಿ ಬಾಗಿಲನ್ನು ತೆಗೆದ. ಸುಬೇದಾರ್ ಸಾಹೇಬನು ಗೇಟಿನ ಮುಂದೆ ನಿಂತಿದ್ದಾನೆ. ಕಪ್ಪು ಬಿಳುಪು, ಮಿಶ್ರವಾದ ಬಣ್ಣದ ಹಲ್ಲುಗಳು ಹೊರಗೆ ಬಂದಿವೆ. ಅವನ 'ದೇಶಾವರಿ' ನಗೆಯನ್ನು ನೋಡಿ ಜೈಲರ್ ಸಾಹೇಬರು, "ಎಲ್ಲ ಸರಿಯಾಗಿದೆಯಾ?" ಎಂದು ಪ್ರಶ್ನಿಸಿದರು. "ಹಾ, ಹುಜೂರ್!" ಎಂದ ಸುಬೇದಾರ್, ಅತ್ಯಂತ ನಮ್ರತೆಯಿಂದ. ಅವನೇ ಇಡೀ ರಾತ್ರಿ ಎಲ್ಲ ವ್ಯವಸ್ಥೆ ಮಾಡುವುದರಲ್ಲಿ ನಿದ್ದೆಗೆಟ್ಟಿರುವ ಹಾಗೆ.

ಆಗ ಜೈಲರ್ ಸಾಹೇಬರ ದೃಷ್ಟಿ 'ಟ್ರಾಲಿ' ಲೈನಿನ ಉದ್ದಕ್ಕೂ ಎರಡೂ ಕಡೆ ಬಿದ್ದಿರುವ ಸಗಣಿ ಕುಪ್ಪೆಗಳ ಮೇಲೆ ಬೀಳುತ್ತದೆ. ಕಾಲನ್ನು ತಿರುಗಿಸಿ ತನ್ನ ಬೂಟಿನ ತಳದ ಕಡೆ ನೋಡಿ ಮುಖದಲ್ಲಿ ಜುಗುಪ್ಸೆಯ ಭಾವ ತೋರುವನು. ಸುಬೇದಾರನೂ ದಿಗಿಲಿನಿಂದ ಆ ಬೂಟಿನ ಕಡೆ ನೋಡಿ 'ಸದ್ಯಃ' ಅಂದು ನಿಟ್ಟುಸಿರು ಬಿಡುವನು. ಸದ್ಯಃ ಬೂಟಿಗೆ ಸಗಣಿ ಅಂಟಿದ ಹಾಗೆ ಕಾಣಲಿಲ್ಲ. ಹೋಗಲಿ! "ಇದನ್ನು ಯಾಕೆ ಗುಡಿಸಿ ಹಾಕಿಲ್ಲ?" ಜೈಲರ್ ಸಾಹೇಬರು ಪ್ರಶ್ನೆ ಮಾಡಿದರು. "ಹುಜೂರ್, ಖೈದಿಗಳು ಯಾರೂ ಈ ಕಡೆ ಬರಲಿಲ್ಲ". "ಯಾಕೆ? ಜೈಲ್ ಬಾಗಿಲು

ಬೀಗ ಹಾಕಿದ ಮೇಲೆ ಹಸು ಗೇಟಿನಿಂದ ಒಳಗೆ ಬಂದಿಲ್ಲವಲ್ಲ ?"

ಇದರ ಮೇಲೆ ಮಾತಿಲ್ಲ. ಸುಬೇದಾರ ಸುಮ್ಮನಾಗಿಬಿಟ್ಟ. ಒಳಗಡೆಯ ವಾರ್ಡರು ತಾನೇ ಈ ಕೆಲಸವನ್ನು ಮಾಡುತ್ತಿದ್ದ. ಸುಬೇದಾರ ಸಾಹೇಬನ ದಿನ ಇವತ್ತು ಒಳ್ಳೆಯದಾಗಲಿಕ್ಕಿಲ್ಲ. ಬೆಳಗಾಗುತ್ತಲೂ ಈ ನಾಚಿಗೇಡಿನ ಪ್ರಸಂಗ!

ಜೈಲರ್ ಸಾಹೇಬರು ಒಳಗಡೆಯ ಬಾಗಿಲನ್ನು ತೆಗೆಸಿ ಜೈಲಿನೊಳಗೆ ಪ್ರವೇಶ ಮಾಡಿದರು. ಆಮೇಲೆ ಸುಬೇದಾರನಿಗೆ ಹೇಳಿದರು. "ಎಲ್ಲಿ ನೋಡೋಣ ಒಳಗಡೆಯ ವ್ಯವಸ್ಥೆ ಹೇಗಿದೆಯೋ. ನಿಮ್ಮಗಳ ಮೇಲೆಲ್ಲ ಜವಾಬುದಾರಿ ವಹಿಸಿಬಿಟ್ಟರೆ ನಿಶ್ಚಿಂತೆಯಾಗಿರಲಿಕ್ಕೇ ಸಾಧ್ಯ ಇಲ್ಲ. ಸಾಹೇಬರ ರೂಮು ಮತ್ತು ನನ್ನ ಆಫೀಸು ಸರಿಯಾಗಿದೆ ತಾನೆ ?" "ಹೌದು ಹುಜೂರ್... ಅದರ ವಿಷಯ ಯೋಚನೆ ಮಾಡಬೇಡಿ. ನಾನು ಎಲ್ಲ ನೋಡಿದ್ದೇನೆ."

ಆಮೇಲೆ ಸುಬೇದಾರನು ವಾರ್ಡರನ್ನು ಕೂಗಿ ಬೈಯುತ್ತಾನೆ. "ಗೂಬೆ ಹಾಗೆ ಮೂತಿ ಮಾಡಿಕೊಂಡು ಏನು ನೋಡತೀ ? ಹೋಗು ಸಾಹೇಬರ ರೂಮು ಚೊಕ್ಕಟವಾಗಿದೆಯಾ ಇಲ್ಲವಾ ಅಂತ ನೋಡು. ಈ ಹೊಸ ಹೊಸ 'ಬಾಹಾಲಿ*'ಗಳಿಂದ ಕೆಲಸ ಮಾಡಿಸೋದು ಸಾಧ್ಯವೇ ಇಲ್ಲ. ಈ ಕಾಂಗ್ರೆಸ್ ಗಲಾಟೆಯ ಸಲುವಾಗಿ ಎಷ್ಟು ಮಂದಿ ಗಾಡಿ ಹೊಡೆಯುವವರನ್ನೂ 'ಹರ್‌ಬಾಹಾ'** 'ಚರ್‌ಬಾಹಾ'***ಗಳನ್ನೂ ಕೆಲಸಕ್ಕೆ ದಾಖಲ್ ಮಾಡಿಬಿಟ್ಟಿದ್ದಾರೆ. ಹೇಳಿದರೆ ಅರ್ಥವಾಗೋದಿಲ್ಲ. ತಾವಾಗಿ ಕೆಲಸ ಮಾಡಲಿಕ್ಕೂ ಬರೋದಿಲ್ಲ. ಇವರನ್ನು ಕಟ್ಟಿಕೊಂಡು ನಮಗೊಳ್ಳೆ ಪರದಾಟ ಆಗಿಹೋಗಿದೆ."

ಹೀಗೆ ಚಿಕ್ಕವರಿಂದ ದೊಡ್ಡವರವರೆಗೂ ತಮ್ಮ ತಮ್ಮ ಕೆಳಗಿನವರು ಮೇಲೆ ಜೋರು ಮಾಡುವ ಪದ್ಧತಿ ಎಲ್ಲಾ ಕಡೆಗಳಲ್ಲಿ ಇದ್ದ ಹಾಗೆ ಜೈಲಲ್ಲೂ ಇದೆ.

ನಾಲ್ಕು ಗಂಟೆ ಹೊಡೆಯುತ್ತಿದೆ. ಮತ್ತೆ ವಾರ್ಡರುಗಳ ಹೊಸ ದಳ ಬರುತ್ತದೆ. ಒಂದೊಂದು ದಳದಲ್ಲೂ ಇಪ್ಪತ್ತೆರಡು ಜನ. ಒಂದೇ ದೃಶ್ಯದ ಪುನರಭಿನಯ ಆಗುತ್ತದೆ. ಎಲ್ಲಾ ಒಂದೆ ರಾತ್ರಿಯಲ್ಲಿ ಅಭ್ಯಾಸವಾಗಿ ಹೋಗಿರುವ ಹಾಗೆ. ಅದೇ ರೈಲ್ ಪ್ಲಾಟ್‌ಫಾರಮ್ಮಿನಂತೆಯೇ ಎಷ್ಟೋ ಜನ ಗಾಡಿಯಿಂದ ಇಳಿದರು. ಎಷ್ಟೋ ಜನ ಹತ್ತಿದರು. ಕೂಗು, ಕೋಲಾಹಲ ಅಂಕೆಯಿಲ್ಲದ ಆಚರಣೆ ಮತ್ತೆ ಹಿಂದಿನಂತೆ ಹೇಗಿತ್ತೋ ಹಾಗೇ ಮೊದಲಿನ ಸ್ತಬ್ಧತೆ ಹಿಂದಿರುಗುತ್ತದೆ. ಅಣ್ಣನೇನು ಈಗ ಸಲಾಕೆಗಳನ್ನು ಹಿಡಿದುಕೊಂಡು ಕಡೆಯ ಗಳಿಗೆಯನ್ನು ನಿರೀಕ್ಷೆ ಮಾಡುತ್ತ ಇರುತ್ತಾನೆಯೆ ? ಈಗ ತಾನೇ ನಾಲ್ಕು ಗಂಟೆ ಹೊಡೆಯಿತಲ್ಲ. ಅದು ಅವನ ಕಿವಿಗೆ ಬಿದ್ದಿರುತ್ತೇ ? ಗೇಟಿನ ಹೊರಗಡೆಯ ಶಬ್ದ ತರಂಗವು ವಾಯುಮಂಡಲದಲ್ಲಿ ಕಂಪನವನ್ನು ಸೃಷ್ಟಿ ಮಾಡುತ್ತಲ್ಲ. ಅದು ಫಾಸಿ ಆಸಾಮಿಗಳಿರುವ ಸೆಲ್ಲುಗಳಿಗೂ ತಲಪುತ್ತದೆ. ನನ್ನ ಯೋಚನಾ ತರಂಗವೂ ಹಾಗೇ ತಲಪಲು ಸಾಧ್ಯವಿಲ್ಲವೇ ? ಅಣ್ಣ ತನ್ನ ಕಡೇ ಗಳಿಗೆಯಲ್ಲಿ ಯಾರ ಯೋಚನೆ ಮಾಡುತ್ತಾನೆ ? ಅಮ್ಮನ ಯೋಚನೆ,

---

* ತಾತ್ಕಾಲಿಕವಾಗಿ ನಿಯುಕ್ತನಾದ ನೌಕರ.

** ನೇಗಿಲು ಹಿಡಿಯುವ ರೈತರು.

*** ದನಕಾಯುವ ಗೊಲ್ಲರು.

ದೊಡ್ಡಮ್ಮನ ಅಥವಾ ನನ್ನ ಯೋಚನೆ? ನನ್ನ ಯೋಚನೆ ಯಾಕೆ ಮಾಡುತ್ತಾನೆ ಅವನು? ಯಾಕೆ... ಯಾಕೆ ಮಾಡುವುದಿಲ್ಲ? ಖಂಡಿತ ನನ್ನ ಯೋಚನೆ ಮಾಡುತ್ತಾನೆ. ನೋವಿನಿಂದ, ವಿಷಾದದಿಂದ ನನ್ನನ್ನು ಕುರಿತು ಅಭಿಮಾನದಿಂದ ಯೋಚನಾಕ್ರಾಂತನಾಗಿರುತ್ತಾನೆ. ಅದು ತರ್ಕ ವಿಚಾರಗಳಿಗೆ ನಿಲುಕದ ವಸ್ತು. ಇನ್ನು ಮೇಲಿಂದ ನಾನು ಪೂರ್ಣಿಯಾ ನಗರದಲ್ಲಿ ಇರುವುದಕ್ಕೆ ಸಾಧ್ಯವಿಲ್ಲ. ದೊಡ್ಡಮ್ಮನಿಗೆ ಮುಖ ಹೇಗೆ ತೋರಿಸಲಿ? ನಮ್ಮ ಕೇರಿಯ ಜನರ ಮುಂದೆ ಹೇಗೆ ಹೋಗಲಿ?

ಸಾಕ್ಷ್ಯ ಹೇಳಿದ ಮೇಲೆ ಆವತ್ತಿನಿಂದ ಇಷ್ಟು ದಿನಗಳೂ ಈ ಅವಸ್ಥೆಯನ್ನು ಎಷ್ಟೋ ಸಹಿಸಿಕೊಂಡು ಬಂದಿದ್ದೇನೆ. ಆದರೆ ಅಮ್ಮನ ಎದುರಿಗೆ ಹೋಗುವುದಂತೂ. ಊಹೂ.... ನನ್ನ ಕೈಲಿ ಸಾಧ್ಯವಿಲ್ಲ. ಅಣ್ಣನ ಕೊನೆಯ ದಿನದ ಈ ಚಿತ್ರ ನನ್ನ ಮನಸ್ಸಿನಲ್ಲಿ ಬಂದುದು ಅನಿರೀಕ್ಷಿತ ಮತ್ತು ಆಕಸ್ಮಿಕವಾಗಿ. ಕಳೆದ ಕೆಲವು ತಿಂಗಳುಗಳಿಂದ ಈ ದಿನಕ್ಕಾಗಿ ಮನಸ್ಸನ್ನು ತಯಾರು ಮಾಡಿಕೊಂಡು ಬಂದಿದ್ದೇನೆ. ಸಮಯಾಸಮಯವೆನ್ನದೆ ಈ ಚಿತ್ರ ಕಣ್ಣ ಮುಂದೆ ಬಂದು ನಿಂತು ಮನಸ್ಸಿನ ಮೇಲೆ ಹೊರೆಯಾಗಿಬಿಟ್ಟಿದೆ. "ಪಾಕೂಡ್ ಮರ್ಡರ್ ಕೇಸ್ ಸುದ್ದಿ ಪೇಪರುಗಳಲ್ಲಿ ಬಂದಾಗ ಪ್ರತಿನಿತ್ಯ ಅದನ್ನು ನಾನೂ ಅಣ್ಣನೂ ಅಮ್ಮನಿಗೆ ಓದಿ ಹೇಳುತ್ತಿದ್ದೆವು. ಅಮ್ಮ ಅತ್ಯಂತ ವ್ಯಾಕುಲದಿಂದಲೂ, ಆಶ್ಚರ್ಯದಿಂದಲೂ ಕಣ್ಣರಳಿಸಿ "ಅಲ್ಲೋ, ಏನನ್ಯಾಯವೋ ಅಣ್ಣ, ತಮ್ಮಂದಿರಲ್ಲೂ ಹೀಗಾಗುತ್ತೇನೋ ?" ಮತ್ತೆ ಇವತ್ತು? ಇಷ್ಟು ದಿನಗಳೂ ಜನರ ಮಾತನ್ನು ಅಸಡ್ಡೆ ಮಾಡುತ್ತ ಬಂದಿದ್ದೇನೆ. ಆದರೆ ಇವತ್ತೇಕೆ ಮನಸ್ಸು ಮುರಿದು ಬೀಳುತ್ತಿದೆ? ಜನರ ಅಭಿಪ್ರಾಯವನ್ನು ಅವರ ಟೀಕೆಯನ್ನು ತಿರಸ್ಕಾರದಿಂದ ನೋಡಬಲ್ಲೆ. ಆದರೆ ಅಮ್ಮನ ಅವ್ಯಕ್ತ ವೇದನೆಯಿಂದ ತುಂಬಿದ ಆ ದೃಷ್ಟಿಯನ್ನು, ದೊಡ್ಡಮ್ಮನ ಮಾತಿಲ್ಲದ ದೂಷಣೆಯನ್ನು ಉಪೇಕ್ಷೆ ಮಾಡಲಾಗುವುದಿಲ್ಲ. ಯಾಕೆ... ಯಾಕೆ ಆಗುವುದಿಲ್ಲ? ಸೆಂಟಿಮೆಂಟಲ್ ನಾನ್‌ಸೆನ್ಸ್! ನನ್ನ ಎದುರಿಗೆ ಇರುವುದೇನು ಈಗ! ಸಾವಿರಾರು ವರುಷಗಳಿಂದ ನೋವು ತಿಂದುತಿಂದು ಜಜ್ಜಿ ಹೋದ ಸಮಾಜದ ಸಾಧಾರಣ ಜನತೆಯ ಕಡೆ ನನಗಾಗಿ ಕಾದಿರುವ ಕರ್ತವ್ಯ. ಎಷ್ಟು ಕೆಲಸಗಳನ್ನು ಮಾಡಬೇಕಾಗಿದೆ ನಾನು? ಅವಕ್ಕೆ ಲೆಕ್ಕವಿದೆಯೆ? ದಲಿತ ಜನತೆಯು ಯುಗಯುಗಗಳಿಂದ ಹರಿಸುತ್ತಿರುವ ಕಣ್ಣೀರನ್ನು ಅಳಿಸಿ ಹಾಕಲು ಪಣ ತೊಟ್ಟಿರುವ ನನ್ನಂಥವನು ಸಂಕೀರ್ಣವಾದ ನನ್ನ ಸ್ವಂತ ಮನೆಯ ಯಾವುದೋ ಮೂಲೆಯಲ್ಲಿ ಸುರಿಸುವ ಒಂದೆರಡು ಕಂಬನಿಯನ್ನು ಕುರಿತು ಮನಸ್ಸು ಕೆಡಿಸಿಕೊಂಡರೆ ಅದು ನಗೆಗೇಡಲ್ಲವೆ? ಖದ್ದರ್ ಸೀರೆಯ ಸೆರಗಿನಿಂದ ಆ ಒಂದೆರಡು ಕಣ್ಣೀರಿನ ತೊಟ್ಟುಗಳನ್ನು ಒರೆಸಿಕೊಂಡುಬಿಟ್ಟರೆ ಆಯಿತು. ನಾನು ಇಂಥವುಗಳನ್ನು ಹಚ್ಚಿಕೊಂಡು ವೃಥಾ ಚಿಂತಿಸಿದರೆ ನಡೆದೀತೆ? ಈಗಲೂ ನಾನು ನನ್ನ ಸ್ವಂತ ಭವಿಷ್ಯತ್ತನ್ನು ಕುರಿತು ಚಿಂತಿಸುತ್ತಿದ್ದೇನೆ. ನನಗೇನು ಆಗತ್ತೆ ಮುಂದೆ.... ಅದರ ಪ್ರಾಮುಖ್ಯವೇ ನನ್ನ ಕಣ್ಣಲ್ಲಿ ಹೆಚ್ಚು, ಅಣ್ಣನಿಗೆ ಏನಾಗಿ ಹೋಯಿತು ಎಂಬುದಲ್ಲ.

ಕಾನಾಯಿ ಲಾಲನ ಮೃತದೇಹದ ಫೋಟೋ ನೋಡಿದ್ದೆ. ಆ ಮುಖ ಈಗಲೂ ಕಣ್ಣ ಮುಂದೆ ಬರುತ್ತದೆ. ಅಣ್ಣನನ್ನೂ ಹಾಗೇ ಕಬ್ಬಿಣದ ಸ್ಟ್ರೇಚರಿನ ಮೇಲೆ

ಮಲಗಿಸಲು ಬಿಡುತ್ತಾರೆಯೆ? ಕಣ್ಣುಗಳೆರಡೂ ಅರ್ಧ ಮುಚ್ಚಿರುತ್ತವೆ. ಕಡೆಯ ಗಳಿಗೆಯಲ್ಲಿ ಉಸಿರು ತೆಗೆದುಕೊಳ್ಳುವ ಹತಾಶ ಪ್ರಯತ್ನದಲ್ಲಿ ಮುಖ ಬೀಭತ್ಸವಾಗಿ ಹೋಗಿಲ್ಲ. ಕಣ್ಣಿ ಗುಡ್ಡೆಗಳು ರೆಪ್ಪೆಗಳನ್ನು ತಳ್ಳಿಕೊಂಡು ಹೊರಗೆ ಬಂದಿಲ್ಲ. ಶಾಂತವಾದ ನಿದ್ದೆಯ ಭಾವ. ಕೇವಲ ಕುತ್ತಿಗೆ ಸ್ವಲ್ಪ ಊದಿದೆ. ರಕ್ತ ಹೆಪ್ಪುಗಟ್ಟಿ ನೀಲಿಯಾಗಿ ಕಾಣುತ್ತಿದೆ.

ಜೈಲ್ ಡಾಕ್ಟರ್ ಅಘೋರ್ ಬಾಬು ಜೈಲ್ ಗೇಟಿನೊಳಗೆ ಪ್ರವೇಶಿಸಿದ. ಪಾಪ, ಮನುಷ್ಯ ಅವಸರವಸರವಾಗಿ ಬರುವುದಕ್ಕೆ ಹೋಗಿ ಸುಸ್ತಾಗಿ ಉಸಿರು ಬಿಡುತ್ತಿದ್ದಾನೆ. ಅತ್ತಿತ್ತ ಯಾವ ಕಡೆಯೂ ದೃಷ್ಟಿ ಹಾಯಿಸುವ ಅವಕಾಶವೇ ಇಲ್ಲ ಅವನಿಗೆ. ಜೈಲಿನಲ್ಲಿ ಬಹುಶಃ ಐದು ಜನ ಡಾಕ್ಟರುಗಳಿದ್ದಾರೆ. ಆದರೆ ಜೈಲಿನ ದೊಡ್ಡ ಡಾಕ್ಟರಾದ ಸಿವಿಲ್ ಸರ್ಜನ್ ಶಹರಿನಲ್ಲಿರುತ್ತಾರೆ. ಅವರಿಗೆ ಇಲ್ಲಿ ವಸತಿಯಿಲ್ಲ. ಯುದ್ಧದ ಹಿಂದೆ ಸಿವಿಲ್ ಸರ್ಜನ್ ಆಗಿದ್ದವರೇ ಜೈಲಿನ ಸೂಪರಿಂಟೆಂಡೆಂಟರಾಗಿರುತ್ತಿದ್ದರೂ ಸಹ. ಈ ಅಘೋರ್ ಬಾಬು ಮತ್ತೆ ಬಂದಿದ್ದೇಕೆ? ಸುಬೇದಾರನು ಪ್ರಶ್ನೆ ಮಾಡುತ್ತಾನೆ. "ಡಾಕ್ಟರ್ ಸಾಬ್ ಮತ್ತೆ ಬಂದಿರಲ್ಲ ಏಕೇ?"

ಸುಬೇದಾರನಿಗೆ ತನ್ನ ಸಂಗತಿಯೇನು ಎಂದು ಗೊತ್ತು. ಇವತ್ತು ಎಲ್ಲ ನೌಕರರೂ ದೊಡ್ಡ ಸಾಹೇಬರ ಮುಂದೆ ತಮ್ಮ ತಮ್ಮ ಕರ್ತವ್ಯ ನಿಷ್ಠೆಯನ್ನು ಪ್ರದರ್ಶನ ಮಾಡಿಕೊಳ್ಳುವ ಸಡಗರ ಅಷ್ಟೇ. ಅಘೋರ್ ಬಾಬುವಿನೊಂದಿಗೆ ನನಗೆ ಪರಿಚಯವಿದೆ. ಅದೃಷ್ಟವಶಾತ್ ನನ್ನ ಕಡೆ ಅವನ ಗಮನ ಬೀಳಲಿಲ್ಲ. ಬಿದ್ದಿದ್ದರೆ ಮತ್ತೆ ಯಾವ ಯಾವುದೋ ಪ್ರಶ್ನೆಗಳನ್ನು ಹಾಕಿಬಿಟ್ಟು ನನ್ನನ್ನು ತಬ್ಬಿಬ್ಬು ಮಾಡಿಬಿಡುತ್ತಿದ್ದ. ಡಾಕ್ಟರು ಆಫೀಸು ರೂಮಿಗೆ ಹೋದ. ಜೈಲರ್ ಸಾಹೇಬರು ವಾಪಸು ಬಂದಿದ್ದರು. ಅವರ ಆಫೀಸು ರೂಮಿನ ದೀಪ ಬೆಳಗುತ್ತಿದೆ. ಫ್ಯಾನ್ ತಿರುಗುತ್ತಿದೆ. ಹಾಫ್ ಪ್ಯಾಂಟ್ ಮತ್ತು ಬಿಳಿಯ ಹಾಫ್ ಷರ್ಟ್ ಧರಿಸಿದ ಸೂಪರಿಂಟೆಂಡೆಂಟ್ ಸಾಹೇಬರೂ ಬಂದುಬಿಟ್ಟಿದ್ದಾರೆ. ಜೊತೆಯಲ್ಲೊಂದು ಬಿಳಿ ಮತ್ತು ಕಂದು ಬಣ್ಣ ಮಿಶ್ರಿತ ಮೈಯುಳ್ಳ ಬುಲ್ ಟೆರಿಯರ್. ವಾರ್ಡರುಗಳೆಲ್ಲ ಗಂಭೀರ ನಮ್ರತೆ ತೋರುತ್ತ ಸೆಲ್ಯೂಟ್ ಮಾಡಿ ಅಟೆನ್ಷನ್ ನಿಲ್ಲುತ್ತಾರೆ. ಜೂಲು ನಾಯಿ ನನ್ನ ಬಳಿ ಬಂದು ಒಮ್ಮೆ ಸುತ್ತ ತಿರುಗಿ ಮತ್ತೆ ಗೇಟಿನೊಳಗೆ ಹೋಯಿತು. ಒಳಗಡೆಯ ವಾರ್ಡರುಗಳು ನಾಯಿಗೋಸ್ಕರವಾಗಿ ಬಾಗಿಲನ್ನು ಅರ್ಧ ತೆರೆದಿದ್ದಾರೆ. ಸಾಹೇಬರ ಮೇಲಿರುವುದಕ್ಕಿಂತ ಅವರ ನಾಯಿಯ ಕಡೆ ಜೈಲ್ ನೌಕರರ ಶ್ರದ್ಧೆ ಕಡಮೆಯೇನೂ ಇಲ್ಲವೆಂಬುದನ್ನು ತೋರಿಸಿಕೊಳ್ಳುವುದರಲ್ಲಿ ಅವರೆಲ್ಲರೂ ಪೈಪೋಟಿ ಮಾಡಿದರು. ಸೂಪರಿಂಟೆಂಡೆಂಟರನ್ನು ಬರಮಾಡಿಕೊಳ್ಳಲು ಜೈಲರ್ ಸಾಹೇಬರು ಹೊರಗಡೆ ಬದರು. ಡಾಕ್ಟರ್ ಅಘೋರ ಬಾಬೂ ಸಹ ಅಲ್ಲಿ ಬಂದು ನಿಂತರು. ಸುಬೇದಾರನು ಜೈಲರ್ ಸಾಹೇಬರ ಸನ್ಮಾನ ಕಾಪಾಡುವುದಕ್ಕೇನೋ ಎಂದಿನಂತೆ ಮೈಮುಟ್ಟುವ ಹಾಗೆ ಹತ್ತಿರ ನಿಲ್ಲದೆ, ದೂರದಲ್ಲಿ ಅತಿ ವಿನಯ, ಭಕ್ತಿಗಳನ್ನು ತೋರುತ್ತ ನಿಂತಿದ್ದ. ದೊಡ್ಡ ಸಾಹೇಬರು ನಗುತ್ತ ಏನೇನೋ ಹೇಳುತ್ತ ಹೋದರು ಮತ್ತು ಅನ್ಯ ಮನಸ್ಕ ಭಾವದಲ್ಲಿ ಕೈಲಿದ್ದ ಟಾರ್ಚನ್ನು ಹತ್ತಿಸುವುದು ಆರಿಸುವುದು ಮಾಡುತ್ತಿದ್ದರು. ಅವರ ನಾಯಿಯು ಸುಮ್ಮನೆ ನಿಲ್ಲದೆ ಆಫೀಸು

ರೂಮಿನಿಂದ ಹಜಾರಕ್ಕೂ ಹಜಾರದಿಂದ ಆಫೀಸು ರೂಮಿಗೂ ಓಡಾಡತೊಡಗಿತ್ತು. ಹಜಾರದಲ್ಲಿದ್ದ ಬಟ್ಟೆ ಸುತ್ತಿರುವ ದೀವಟಿಗೆ ಕಟ್ಟಿಗೆಗಳ ಬಳಿ ಹೋಗಿ ಅವನ್ನು ವಾಸನೆ ನೋಡುವುದು ಒಮ್ಮೆ, ಇನ್ನೊಮ್ಮೆ ಸಾಹೇಬರ ಬಳಿ ಬಂದು ಏನೋ ಹೇಳಲು ಹೋಗುವಂತೆ ಮಾಡುತ್ತದೆ. ನಡುರಾತ್ರಿಯ ನಿಶ್ಯಬ್ದವನ್ನು ಸೀಳುತ್ತ ಮೋಟಾರ್ ಲಾರಿಯ ವಿಕಟ ಹಾರನ್ ಶಬ್ದ ಕೇಳಿಬಂತು. ಹತ್ತಿರ ಹತ್ತಿರ ಬರುತ್ತಿರುವ ಹಾಗಿದೆ. ಭೋಂ ಭೋಂ ಇಷ್ಟು ಜೋರಾಗಿರುತ್ತದೆಯೇ ಲಾರಿಯ ಹಾರನ್ ಶಬ್ದ ? ಜೈಲಿನ ಒಳಗಡೆ ಇರುವ ಅಪ್ಪ, ಅಮ್ಮ ಅಣ್ಣ ಎಲ್ಲರ ಕಿವಿಗೂ ಈ ಭೀಕರ ಶಬ್ದ ಬಿದ್ದೇ ಇರುತ್ತದೆ. ಮೋಟಾರ್ ವ್ಯಾನ್ ಗೇಟಿಗೆ ಸ್ವಲ್ಪ ದೂರದಲ್ಲಿ ಬಂದು ನಿಂತುಕೊಂಡಿತು. ಇನ್ನೇನು, ಇಷ್ಟರಲ್ಲೇ ಆದರ ಹಿಂದಿನ ಬಾಗಿಲು ತೆಗೆಯುತ್ತದೆ ಅಂತ ಕಾಣುತ್ತದೆ. ಆಮೇಲೆ ಒಬ್ಬರಾದ ಮೇಲೆ ಒಬ್ಬರು ಆಯುಧ ಹಿಡಿದ ಪೊಲೀಸರು ಕೆಳಗೆ ಧುಮುಕಿ ಕೂಡಲೇ ಸಾಲಾಗಿ ನಿಂತು "ರೈಟ್ ಎಬೌಟ್ ಟರ್ನ್ ರೈಟ್ ವ್ಹೀಲ್" ಮಾಡುವರೆಂದುಕೊಳ್ಳುತ್ತೇನೆ.... ಇಲ್ಲ... ಯಾರೂ ಹಾಗೆ ಇಳಿಯಲಿಲ್ಲ. ಎಲ್ಲರೂ ಬಹುಶಃ ಗಾಡಿಯೊಳಗೆ ಇದ್ದುಬಿಟ್ಟಿದ್ದಾರೆ. ಡ್ರೈವರು ಗಾಡಿಯ ದೀಪ ಆರಿಸಿಬಿಟ್ಟ. ರಸ್ತೆ ಮತ್ತು ನೌಕರರ ವಸತಿಗಳೂ ಮೊದಲಿನಂತೆ ಕತ್ತಲಲ್ಲಿ ಮುಳುಗಿ ಹೋದುವು. ಸಾಹೇಬರ ನಾಯಿ ಬಗುಳುತ್ತಿದೆ. ಬಗುಳಿ ಗೇಟಿನ ಒಳಗಡೆಯಿಂದ ಹೊರಗೆ ಬಂತು. ತನ್ನ ರಾಜ್ಯದ ಶಾಂತಿ ಭಂಗ ಏತರಿಂದ ಆಯಿತು ಎಂದು ನೋಡಲಿಕ್ಕೇನೋ ? ಅಥವಾ ಇಷ್ಟು ಹೊತ್ತೂ ಇದ್ದ ಬೆಳಕು ಈಗ ಹಠಾತ್ತಾಗಿ ಏಕೆ ಆರಿಹೋಯಿತು ಎಂಬುದನ್ನು ತಿಳಿದುಕೊಳ್ಳಲು ಹೊರಗೆ ಬಂದ ಹಾಗಿದೆ.

ರಾಷ್ಟ್ರದ ಸಂಚಾಲನ ಚಕ್ರ ತಿರುಗುತ್ತಿದೆ. ಮಂದ್ರವಾದರೂ ನಿಶ್ಚಿತಗತಿಯಲ್ಲಿ ಹಗಲು, ರಾತ್ರಿ ತಿರುಗುತ್ತಲೇ ಇದೆ. ಎಷ್ಟು ದಿನಗಳ ಹಿಂದೆಯೋ, ಎಂದೋ, ಯಾವ ನಿರ್ಭಾಗ್ಯ ಮೂರ್ಖನೋ, ಇದರ ಎದುರು ತಲೆಎತ್ತಿ ನಿಂತುಕೊಳ್ಳುವ ವ್ಯರ್ಥ ದುಸ್ಸಾಹಸ ಮಾಡಿದ್ದ. ಆದ ಕಾರಣ, ಆದರ ಪುನರಾವೃತ್ತಿ ಆಗದೇ ಇರಲೆಂದು ದೇಶವ್ಯಾಪಿ ಲೆಕ್ಕವಿಲ್ಲದಷ್ಟು ದೊಡ್ಡ ಮತ್ತು ಸಣ್ಣ ಚಕ್ರಗಳನ್ನು ಚಲಾಯಿಸಲಾಗಿದೆ. ಈ ಘಟನೆಯನ್ನು ಮತ್ತು ಆದರ ನಾಯಕನನ್ನ ನಿರ್ನಾಮ ಮಾಡಿದ ಹೊರತು ರಾಷ್ಟ್ರಕ್ಕೆ ಶಾಂತಿಯೂ ಇಲ್ಲ, ಕ್ಷೇಮವೂ ಇಲ್ಲ. ಯಾವ ದುಸ್ಸಾಹಸಿ ಮೂರ್ಖನ ಆವೇಶವು ಎಷ್ಟು ಮಂದಿ ಆಧುನಿಕ ಹೃದಯಗಳನ್ನು ಅದೇ ಹುಚ್ಚು ಸಾಹಸಕ್ಕೆ ಹುರಿದುಂಬಿಸಿತ್ತೋ ಅದನ್ನು ಹೆದರಿಸಿ ಪೂರ್ತಿಯಾಗಿ ನಿಸ್ಸತ್ವವಾಗಿ ಮಾಡಿಬಿಡಬೇಕೆಂಬುದೇ ಇದರ ಗುರಿ. ಕೋರ ಹಾಠಾಣೆ, ಇನ್‌ಸ್ಪೆಕ್ಟರ್ ವೆಂಕಟೇಶ್ವರ, ಫೌಜುದಾರ, ಸೆಕ್ಷನ್ ಕೋರ್ಟು, ಸರಕಾರಿ ವಕೀಲ, ಜಜ್ ಸಾಹೇಬರು, ಸರಕಾರಿ ಸಾಕ್ಷಿ ನೀಲೂ, ಮತ್ತು ಜೈಲಿನ ನೌಕರ ಗಣ - ಇವೆಲ್ಲವನ್ನೂ ಒಂದೊಂದಾಗಿ ಬೇರೆ ಬೇರೆ ರಂಗು, ಆಕಾರಗಳುಳ್ಳವನ್ನೆಲ್ಲ ಪೋಣಿಸಿ ಈ ಸ್ಥಿರ ಉದ್ದೇಶ್ಯಕ್ಕಾಗಿಯೇ ಉಪಯೋಗಿಸಬೇಕೆಂದು ತಯಾರು ಮಾಡಿಕೊಂಡಿದ್ದಾರೆ. ಇವರು ನಿರ್ಧರಿಸಿರುವ ಆ ಉದ್ದೇಶ್ಯವು ಹಣ್ಣಾಗುವ ಕೊನೆಯ ಮುಹೂರ್ತ ಬರುವುದಕ್ಕೆ ಇನ್ನೆಷ್ಟು ತಡವಾದೀತು ? ಈ ಉದ್ದೇಶ್ಯವು ಕೊನೆ ಮುಟ್ಟುವುದಕ್ಕೆ ನೆರವಾಗುವ ಕಟುಕನೆನ್ನಿಸಿಕೊಳ್ಳುವನನ್ನು ಹೊಣೆಗಾರನಾಗಿ ಮಾಡುವುದು ಸರಿಯಲ್ಲ. ಈ

ಬರ್ಬರತೆಗೆ ನಿಜವಾದ ಹೊಣೆಗಾರರು ಜಜ್ ಸಾಹೇಬನಿಂದ ಹಿಡಿದು ಜೈಲಿನ ಪ್ರತಿಯೊಬ್ಬ ವಾರ್ಡರೂ ಸಹ. ಈ ವಿಶೇಷಜ್ಞರ ಯುಗದಲ್ಲಿ ಯಾರೂ ತಮ್ಮತಮ್ಮ ಸೀಮಿತ ಕ್ಷೇತ್ರದಿಂದ ಹೊರಗೆ ದೃಷ್ಟಿ ಹಾಯಿಸುವುದಿಲ್ಲ. ಯಂತ್ರದ ಯಾವ ಸಣ್ಣ ಅಂಶಕ್ಕೆ ಅವರು ಜವಾಬುದಾರರಾಗಿರುವರೋ ಅದನ್ನು ಚೆನ್ನಾಗಿ ತಮಗೆ ತೃಪ್ತಿಕರವಾಗಿ ನಡೆಸಿಕೊಂಡು ಹೋದರೆ ಧನ್ಯರಾದ ಹಾಗೆ. ಈ ವಿರಾಟ ಸಂಚಲನದ ಮೂಲ, ಉಗಮ ಸ್ಥಾನ ಯಾವುದಾದರೆ ಅವರಿಗೇನು? ಎಂಜಿನ್ನಿನಿಂದ ಬೆಲ್ಟಿಂಗ್ ದ್ವಾರಾ ಆ ಶಕ್ತಿಯ ಅಂಶವನ್ನು ಅವರಿರುವ ಕಡೆ ತಲಪಿಸಿಬಿಟ್ಟರೆ ಸಾಕು. ಆಮೇಲೆ ಅವರು ತಮ್ಮ ಕಡೆ ಅರ್ಧ ತಯಾರಾದ ಕಚ್ಚಾ ಮಾಲನ್ನು ತಮ್ಮ ಪಕ್ಕದ ಭಾಗಕ್ಕೆ ತಲಪಿಸಿಬಿಟ್ಟರೆ ಅವರ ಕರ್ತವ್ಯ ಮುಗಿದ ಹಾಗೆ. ಇಷ್ಟು ದೂರದವರೆಗೆ ಎಷ್ಟು ಕೈಗಳಲ್ಲಿ ತಿರುಗಿ ಈ ವ್ಯವಹಾರ ಬಂದು ತಲಪಿದೆಯೋ, ಇವೆಲ್ಲ ಈ ರಾಷ್ಟ್ರದಾನವರ ನಗ್ನತೆಯನ್ನೂ ಬರ್ಬರತೆಯನ್ನೂ ಮರೆಮಾಡುವ ಪ್ರಯತ್ನವಾಗಿತ್ತು.

ಆದರೆ ಈಗ ಅದು ಬಂದು ತಲಪಿರುವ ಸ್ಥಾನದಲ್ಲಿನ್ನು ನಾಚಿಕೆಪಡುವ ಅಗತ್ಯವೇ ಇಲ್ಲ. "ಕ್ರಶ್ ಆರ್ ಬಿ ಕ್ರಶ್ಡ್!" ಪುರಿ ಕ್ಷೇತ್ರದ ಜಗನ್ನಾಥ ದೇವರ ರಥ. ಸ್ವಂತ ಗತಿಯ ಗರ್ವದಿಂದ ಮುಂದೆ ಹೋಗಬೇಕಾಗಿದೆ. ಅದರ ರಾಕ್ಷಸಾಕಾರದ ಚಕ್ರಗಳ ಕೆಳಗಡೆ ಕತ್ತಲ ಮುಸುಕಿನಲ್ಲಿ ಯಾವ ದುರ್ಭಾಗ್ಯ ಸಿಕ್ಕಿಹೋಗಿ ನುಚ್ಚು ನೂರಾಗಿ ಹೋದನೋ ಇಲ್ಲವೋ ಎಂಬುದನ್ನು ತಿಳಿಯಲು ಅದಕ್ಕೆ ಎಳ್ಳಷ್ಟು ಆತುರವಿಲ್ಲ. ಶ್ರೇಣೀ ಸ್ವಾರ್ಥದ ಸ್ಟೀಮ್‌ರೋಲರು ಸದಾ ರಸ್ತೆಯ ಮೇಲೆ ಹೋಗುತ್ತಲೇ ಇರಬೇಕು. ಸ್ವಲ್ಪ ಹೊತ್ತು ವಿರಾಮ ಕೊಟ್ಟರೆ ಸಾಕು ಪಾಚಿ ತಲೆಯ ಮೇಲೆಬಂದು ಕೂಡುತ್ತದೆ. ಆಶ್ರಮವನ್ನು ಪ್ರವೇಶ ಮಾಡುವ ಸಣ್ಣ ರಸ್ತೆಯನ್ನು ಅಣ್ಣನೇ ಕೈಯಾರೆ ತಯಾರು ಮಾಡಿದ್ದ. ಎರಡೂ ಪಾರ್ಶ್ವಗಳಲ್ಲಿ ರಜನೀಗಂಧ ಹೂಗಿಡಗಳನ್ನು ಬೆಳೆಸಿದ್ದ. ಸಮಯ ದೊರಕಿದಾಗೆಲ್ಲ ಅಣ್ಣ ಗುದ್ದಲಿ ಹಿಡಿದು ರಸ್ತೆಯ ಮೇಲೆ ಬೆಳೆದ ಹುಲ್ಲು, ಪಾಚಿ ಮುಂತಾದುವನ್ನು ಅಗೆದು ಹಾಕುತ್ತಿದ್ದ. ಅವನ ಎದೆಯ ಮೇಲೊಂದು ಬಿಳಿಯ ಖದ್ದರಿನ ಬನಿಯನ್.

ಇನ್ನೂ ಒಂದು ಮೋಟಾರ್ ಕಾರ್ ಬಂದು ನಿಂತಿತು. ಯೂನಿಫಾರಂ ಧರಿಸಿದ ಚಪರಾಸಿಯು ಬಂದು ಬಾಗಿಲನ್ನು ತೆಗೆದ. ಹ್ಯಾಟ್, ಕೋಟ್, ಬೂಟ್ ಧರಿಸಿದ ದೊಡ್ಡ ಮನುಷ್ಯನ ಬಾಯಲ್ಲಿ ಚುರೂಟ್! ಅವರು ಸಿವಿಲ್ ಸರ್ಜನ್! ಸೂಪರಿಂಟೆಂಡೆಂಟ್ ಸಾಹೇಬರ ದಳ ಅವರನ್ನು ಬರ ಮಾಡಿಕೊಂಡಿತು.

ಸಿವಿಲ್ ಸರ್ಜನರು, "ನಾನು ತಡವಾಗಿ ಬಂದೆನೇನು? ನೀವೆಲ್ಲ ಕಾಯಬೇಕಾಯಿತೇ?" ಎಂದರು. "ಇಲ್ಲ ಇಲ್ಲ, ಇನ್ನೂ ಮ್ಯಾಜಿಸ್ಟ್ರೇಟರು ಬಂದು ತಲಪಿಲ್ಲ" ಎಂದು ಸೂಪರಿಂಟೆಂಡೆಂಟರು ರಿಸ್ಟ್‌ವಾಚ್ ನೋಡಿಕೊಂಡರು. ಮುಖದಲ್ಲಿ ಬೇಸರದ ಭಾವ. "ಬನ್ನಿ ರೂಮಲ್ಲಿ ಹೋಗಿ ಕೂಡೋಣ." ಆಮೇಲೆ ಕುರ್ಚಿಯನ್ನು ಎಳೆದುಕೊಳ್ಳುವ ಶಬ್ದ ಕೇಳಿಬಂತು. ರೂಮಿನ ಒಳಗಡೆಯಿಂದ ಮಾತುಕತೆಯ ಮೃದುವಾದ ಗುಂಜನ ಕೇಳಿಬಂತು. ಮತ್ತೆ ಮೋಟಾರ್ ಹಾರ್ನಿನ ಶಬ್ದ. ಮತ್ತೊಂದು ಗಾಡಿ ಬಂದು ನಿಂತುಕೊಂಡಿತು. ಹಾಫ್ ಪ್ಯಾಂಟ್ ಧರಿಸಿದ ಒಬ್ಬಾತನ ಸಣ್ಣ ವಯಸ್ಸಿನ ದೊಡ್ಡ ಮನುಷ್ಯ ಗಾಡಿಯಿಂದ ಧುಮುಕಿದ. ಹಾಗೇ

ಓಡಿಕೊಂಡು ಜೈಲ್ ಗೇಟಿನೊಳಗೆ ಹೋದ. ಜೈಲರ್ ಸಾಹೇಬನು ಅವರನ್ನು ಸ್ವಾಗತ ಮಾಡಿದ.

"ಇಲ್ಲ ಇಲ್ಲ. ನಿಮ್ಮದೇನೂ ತಡವಾಗಲಿಲ್ಲ. ನಾವೇ ಸ್ವಲ್ಪ ಬೇಗ ಬಂದುಬಿಟ್ಟೆವು. ಡಾಕ್ಟರೂ ಸೂಪರಿಂಟೆಂಡೆಂಟ್ ಸಾಹೇಬರೂ ಆ ರೂಮಿನಲ್ಲಿ ನಿಮಗಾಗಿ ಕಾದಿದ್ದಾರೆ. ನಡೀರಿ..... ರೂಮಿನಲ್ಲಿ ಕೂಡುವಿರಂತೆ."

ರೂಮಿನೊಳಗೆ ಹೋಗಲು ಆಗಲಿಲ್ಲ. ಸೂಪರಿಂಟೆಂಡೆಂಟರೂ ಸಿವಿಲ್ ಸರ್ಜನರೂ ಎಲ್ಲರೂ ಜೈಲಿನೊಳಗಡೆ ಪ್ರವೇಶಿಸಬೇಕೆಂದು ರೂಮಿನ ಹೊರಗೆ ಬಂದರು. ಒಬ್ಬೊಬ್ಬರಾಗಿ ಒಳಗಡೆ ಪ್ರವೇಶಿಸಿದರು. ಬಾಗಿಲು ಅಷ್ಟು ಎತ್ತರವಾಗಿಲ್ಲ. ಎಲ್ಲರೂ ತಲೆ ಬಾಗಿಸಿಕೊಂಡೇ ಹೋಗಬೇಕಾಯಿತು. ಡೆಲ್ಲಿ ದರಬಾರಿನಲ್ಲಿ ಇದರಂತೆಯೇ ಇರುವ ಒಂದು ಬಾಗಿಲನ್ನು ಕುರಿತು ಒಂದು ಕತೆ ಕೇಳಿದ್ದೆ. ಯಾವ ಪ್ರಾಂತ್ಯದ ರಾಜನೋ ಇದನ್ನು ಅವಮಾನವೆಂದು ಭಾವಿಸಿ ರಾಜಧಾನಿಗೆ ಬರಲೇ ಇಲ್ಲ! ಪಾತಾಳ ನಗರಿಯ ಕಗ್ಗತ್ತಲು ಸೂಪರಿಂಟೆಂಡೆಂಟ್ ಗಿಂಟೆಂಡೆಂಟರೆಲ್ಲರನ್ನೂ ನುಂಗಿ ಒಳಗೆ ಸೇರಿಸಿಕೊಂಡುಬಿಟ್ಟಿತು.

ನಾನು ಈಗ ಇಲ್ಲಿಂದ ಓಡಿಹೋಗಿಬಿಟ್ಟರೆ ಹೇಗಿರತ್ತೆ? ಅಣ್ಣನ ಶವ ದೇಹದ ಕಡೆ ನೋಡಲು ನನ್ನ ಕೈಲಿ ಸಾಧ್ಯವಿಲ್ಲ. ಇಲ್ಲಿಂದ ಓಡಿ ಹೋದರೆ ಯಾರೂ ಲಕ್ಷ್ಯ ಮಾಡುವುದಿಲ್ಲ. ಯಾರಿಗೂ ಗೊತ್ತಾಗುವುದಿಲ್ಲ. ಮ್ಯಾಜಿಸ್ಟ್ರೇಟರು ಕೊಟ್ಟಿದ್ದ ಹುಕುಮನ್ನು ಜೈಲ್ ಅಧಿಕಾರಿಗಳಿಗೆ ತೋರಿಸಬೇಕಾಗಿದೆ. ತೋರಿಸದೇ ಹೋದರೆ ಅವರುಗಳು ಶವದೇಹವನ್ನು ನನ್ನ ವಶಕ್ಕೆ ಹೇಗೆ ಕೊಡುತ್ತಾರೆ. ಎಲ್ಲಿ ಹೋಯಿತೋ ಕಾಣೆ, ಆ ಕಾಗದ! ಯಾವ ಜೇಬಿನಲ್ಲೂ ಇದ್ದ ಹಾಗೆ ಕಾಣುವುದಿಲ್ಲ. ಏನಾಯಿತು. ಮನೆಯಲ್ಲೇ ಬಿಟ್ಟು ಬರಲಿಲ್ಲವಲ್ಲ? ಹಾಗೆಂದರೆ ಈಗಲೇ ಹೋಗಿ ತಂದು ಬಿಡಬೇಕು. ಹೋದರೆ ಹೋಗಲಿ, ಒಳ್ಳೆಯದೇ ಆಯಿತು. ಬೆಳಗ್ಗೆಯ ಟ್ರೈನಿನಲ್ಲಿ ಪಾಟನಾಗೋ ಬೊಂಬಾಯಿಗೋ ಹೊರಟುಹೋದರೆ ಏನಾಗುತ್ತದೆ? ನನ್ನ ಪಾರ್ಟಿಯ ಕಾಮ್ರೇಡುಗಳಲ್ಲಿ ಬುದ್ಧಿಜೀವಿಗಳೊಂದಿಗೆ ಹೋಗಿ ಭೆಟ್ಟಿಯಾಗುವುದೀಗ ಬಹಳ ಅವಶ್ಯಕ. ಅರೇ ಕಾಗದ ಇದೆ. ಈ ಜೇಬಿನಲ್ಲೇ ಇದೆ. ಮೊದಲಲ್ಲಿ ಹುಡುಕಿದಾಗ ಸಿಗಲಿಲ್ಲವಲ್ಲ? ಹೇಗೆ? ನಿನ್ನೆ ಇದೇ ಕೈಯಲ್ಲಿ ಈ ಜೇಬಿನಲ್ಲಿಟ್ಟಿದ್ದೆ. ಎಲ್ಲಿ ಹೋದೀತು?

ಸುಬೇದಾರ ಸಾಹೇಬನ ಕಡೆ ನನ್ನ ದೃಷ್ಟಿ ಹೋಗುತ್ತದೆ. ಅವನೂ ನನ್ನ ಕಡೆ ನೋಡುತ್ತಿದ್ದ. ಇದ್ದಕ್ಕಿದ್ದ ಹಾಗೆ ಮುಖ ಇನ್ನೆಲ್ಲೋ ತಿರುಗಿಸಿಕೊಂಡುಬಿಟ್ಟ. ಇನ್ನು ಮೇಲೆ ಅವನು ನನ್ನ ಕಡೆ ನೋಡುವುದಿಲ್ಲ, ಬಹುಶಃ.

ದೂರದಲ್ಲಿ ಇಬ್ಬರು ಮೂವರು ಜನ ನಿಂತು ನೋಡುತ್ತಿದ್ದಾರೆ. ಹಾಗೇ ಅನ್ನಿಸತ್ತೆ. ಆರ್ಮ್ಡ್ ಪೊಲೀಸರ ಭಯದಿಂದಲೇನೋ ಹೆಚ್ಚು ಮಂದಿ ಸೇರಿಲ್ಲ. ಹಾಗಿರದಿದ್ದರೆ ಈ ಸ್ಥಳದಲ್ಲಿ ಸಾವಿರಾರು ಮಂದಿ ಜನ ಕಿಕ್ಕಿರಿದು ತುಂಬಿರುತ್ತಿದ್ದರು. ಯಾವುದೋ ಒಂದು ಕ್ವಾರ್ಟರಿನಲ್ಲಿ ಬಾಗಿಲು ತೆಗೆಯಿತು. ಎಲ್ಲರೂ ಬಹುಶಃ ಶವ ದೇಹವನ್ನು ನೋಡಲು ಉತ್ಸುಕರಾಗಿದ್ದಾರೆ. ಅಣ್ಣನ ಕುತ್ತಿಗೆಯ ಮೇಲೊಂದು ಕರಿಯ ಮಚ್ಚೆ ಇದೆಯ? ಚಳಿಗಾಲದಲ್ಲಿ ಪಂಜಾಬಿನ ಕಡೆಯಿಂದ ಕೆಲವರು ಕಾವಿ ಬಟ್ಟೆ ಧರಿಸಿರುವ

ಜ್ಯೋತಿಷ್ಯರು ಪೂರ್ಣಯಾಗೆ ಬರುತ್ತಾರೆ. ಅವರಲ್ಲೊಬ್ಬ ನಮ್ಮ ಆಶ್ರಮಕ್ಕೂ ಬಂದಿದ್ದ. ಬಂದದ್ದೇ ಸ್ವಲ್ಪ ವಿಕೃತವಾದ ಉಚ್ಚಾರಣೆಯಲ್ಲಿ ನಗುತ್ತ ತಾನೊಬ್ಬ ಭವಿಷ್ಯ ಹೇಳುವವ ಎಂದು ಹೇಳಿಕೊಂಡ. ಅವನು ಅಣ್ಣನು ಅಡ್ಡಿ ಮಾಡಿದರೂ ಕೇಳದೆ ಅಣ್ಣನ ಕೈ ನೋಡಿ 'ನಿಮಗೆ ಎಂಬತ್ತು ವರುಷ ಆಯಸ್ಸು' ಎಂದು ಹೇಳಿದ. ಎಲ್ಲ ಸುಳ್ಳು ಹೇಳುವ ಭಂಡ ಜನ! ಅಣ್ಣ ಅವರಿಗೆ, "ಇದು ಕಾಂಗ್ರೆಸ್ ಆಶ್ರಮ. ನೀವು ಕಷ್ಟ ಪಟ್ಟುದರ ಫಲವಾಗಿ ನಿಮಗೆ ಇಲ್ಲೇನೂ ಸಿಗಲಿಕ್ಕಿಲ್ಲ" ಎಂದುಬಿಟ್ಟ. ಹೋಗಲಿ ಅಣ್ಣನಿಗೆ ಕಡೇ ಗಳಿಗೆಯಲ್ಲಿ ದಿಗಿಲಿನಿಂದ ಜ್ಞಾನ ತಪ್ಪಿ ಹೋದರೆ ಅಂಥ ಸ್ಥಿತಿಯಲ್ಲೂ ಅವನನ್ನು ಫಾಸಿ ಸ್ತಂಭದ ಕಡೆ ಕೊಂಡುಹೋಗುತ್ತಾರಾ ? ಛೇ.... ಅದು ಸಾಧ್ಯವೇ ಎಲ್ಲಾದರೂ ?

ಫಾಸಿ ಹಾಕುವ ಹಗ್ಗವನ್ನು ಹಿಡಿದುಕೊಂಡು 'ಮೇಟ್' ಮತ್ತು ಪಹರೆಯವನೂ ಎಳೆದಾಡುತ್ತಿದ್ದಾರೆ. ಹಿಂದೊಮ್ಮೆ ನಾನು ಜೈಲಿನಲ್ಲಿದ್ದಾಗ ನಡೆದ ಸಂಗತಿಯೊಂದು ನೆನಪಿಗೆ ಬರುತ್ತಿದೆ. ಹಗ್ಗವನ್ನು ಇವರು ತುಂಡುತುಂಡಾಗಿ ಕತ್ತರಿಸಲು ಪ್ರಯತ್ನಿಸುತ್ತಿದ್ದಾರೆ. ನುಣುಪಾದ ಕೊಬ್ಬನ್ನು ಬಳಿದಿರುವ ಹಗ್ಗಕ್ಕೆ ಒಂದು ಕಡೆ ಹಾಕಿರುವ ಹರಿತವಿಲ್ಲದ ಕಬ್ಬಿಣದ ಹಿಡಿ ಸರಿದು ಸರಿದು ಹೋಗುತ್ತಿತ್ತು. ಅದೃಷ್ಟವಂತರಾದ ಒಬ್ಬಿಬ್ಬರಿಗೆ ಕೆಲವು ತುಂಡುಗಳು ದೊರೆತವು. ಇವುಗಳನ್ನು ಅವರು ಇಷ್ಟಾರ್ಥ ಸಿದ್ಧಿಗಾಗಿ ವಶೀಕರಣ ಕವಚಗಳಾಗಿ ಉಪಯೋಗಿಸುತ್ತಾರೆ.

ಈ ಸಲ ಒಳಗಡೆಯ ದೊಡ್ಡ ಬಾಗಿಲು ತೆಗೆಯಿತು. ಸೂಪರಿಂಟೆಂಡೆಂಟ್, ಸಿವಿಲ್ ಸರ್ಜನ್, ಮ್ಯಾಜಿಸ್ಟ್ರೇಟ್, ಜೈಲರ್, ಅಘೋರ ಬಾಬು, ಅಸಿಸ್ಟೆಂಟ್ ಜೈಲರ್ ವಾರ್ಡರು, ವಾರ್ಡರು, ವಾರ್ಡರು... ನಾಯಿ - ವಾರ್ಡರು, ವಾರ್ಡರು.

ಎಲ್ಲರೂ ಬಲವಂತವಾಗಿ ಮುಖದ ಮೇಲೆ ನಗು ತಂದುಕೊಳ್ಳಲು ಪ್ರಯತ್ನಿಸುತ್ತಿರುವಂತಿದೆ. ಈ ಸಾಮಾನ್ಯ ಘಟನೆಯಿಂದ ಅವರ ಮನಸ್ಸು ಸ್ವಲ್ಪವೂ ಕದಲಿಲ್ಲವೆಂದು ತೋರಿಸಿಕೊಳ್ಳಬೇಕೆಂಬ ಉದ್ದೇಶ್ಯ. ಕೇವಲ ಅವರು ಚಹಾ ಕುಡಿಯುವುದಕ್ಕೆ ಒಂದೆರಡು ನಿಮಿಷ ತಡವಾಗಿರಬಹುದು ಅಷ್ಟೆ. ಸೂಪರಿಂಟೆಂಡೆಂಟರು ಸಿವಿಲ್ ಸರ್ಜನ್ ಮತ್ತು ಮ್ಯಾಜಿಸ್ಟ್ರೇಟರನ್ನು ತಮ್ಮ ಬಂಗಲೆಯಲ್ಲಿ ಬಂದು ಚಹಾ ಕುಡಿಯಬೇಕೆಂದು ಕೇಳಿಕೊಳ್ಳುತ್ತಿದ್ದಾರೆ. ಗೇಟು ತೆಗಯಲ್ಪಡುತ್ತದೆ. ನಾಯಿ ಮುಂದೆ ಮುಂದೆ ಹೋಗುತ್ತ ದಾರಿ ತೋರುತ್ತದೆ. ಕಾರುಗಳೆರಡೂ ಅದನ್ನು ಹಿಂಬಾಲಿಸಿ ಸಾಹೇಬರ ಬಂಗಲೆಯ ಪಕ್ಕದಲ್ಲಿ ಹೋಗಿ ನಿಲ್ಲುತ್ತವೆ. ಲಾರಿಯ ಡ್ರೈವರನು ಸಿದ್ಧನಾಗಿ ಸ್ಟೀರಿಂಗ್ ವ್ಹೀಲನ್ನು ಹಿಡಿದುಕೂಡುತ್ತಾನೆ. ವಾರ್ಡರನು ಒಳಗಡೆಯ ಬಾಗಿಲನ್ನು ಇನ್ನೂ ಅರ್ಧ ತೆರೆದು ಇಟ್ಟಿದ್ದಾನೆ. ಇಗೋ ಇಷ್ಟರಲ್ಲೇ ಬಂದುಬಿಡುತ್ತದೆ ಈ ಕ್ಷಣವೇ!

"ಅರೇ, ನೀಲೂ ಬಾಬೂ, ನೀವಿಲ್ಲಿ ? ನಮಸ್ಕಾರ, ಇಷ್ಟು ಬೆಳ್ಳಂಬೆಳಗ್ಗೆ ನೀವು ಈ ಕಡೆ ಎಲ್ಲಿಗೆ ? ಅಣ್ಣನನ್ನು ಭೆಟ್ಟಿಯಾಗುವುದಕ್ಕೆ ಅಂತ ಕಾಣತ್ತೆ. ಅಲ್ಲವಾ ? ಸಿ.ಐ.ಡಿ. ಎಂಟಕ್ಕೆ ಮುಂಚೆ ಬರೋದಿಲ್ಲ. ಬನ್ನಿ, ನಮ್ಮ ಮನೆಗೆ ಹೋಗೋಣಂತೆ. ಅಷ್ಟು ಹೊತ್ತಿಗೆ ಚಹಾ ಆದರೂ ಕುಡಿದು ಸ್ವಲ್ಪ ಸುಧಾರಿಸಿಕೊಳ್ಳಹುದು ಏನಂತೀರಿ ?"

ಈ ಅಘೋರ್ ಬಾಬು ನನಗೆ ಜವಾಬು ಕೊಡುವುದಕ್ಕೇ ಅವಕಾಶ ಕೊಡುವುದಿಲ್ಲ. ಬಹಳ ಕಷ್ಟದಿಂದ ಹೇಗೋ ಬಾಯಿಬಿಡುತ್ತೇನೆ, "ಇಲ್ಲ... ಇಂಟರ್‌ವ್ಯೂಗಲ್ಲ ಬಂದದ್ದು. ನಾನು ಬಂದದ್ದು... ಇವತ್ತೂ... ಅಣ್ಣನ.... ಅದೇ!" ಆಮೇಲೆ ಮಾತೇ ಹೊರಡಲಿಲ್ಲ. ತುಟಿ ನಡುಗುತ್ತಿದೆ. ಆದರೆ ಮಾತು ಹೊರಗೆ ಬರುತ್ತಿಲ್ಲ ಯಾಕೋ! ಯಾರೋ ಬಿಗಿಯಾದ ಮುಷ್ಟಿಯಿಂದ ನನ್ನ ಕುತ್ತಿಗೆ ಅದುಮಿ ಹಿಡಿದುಕೊಂಡುಬಿಟ್ಟ ಹಾಗೆ. ನನ್ನ ಕಣ್ಣಿಂದ ನೀರು ಸಹ ಬರುತ್ತಿದೆ. ಬೇರೆಲ್ಲೋ ನೋಡುತ್ತ ಹೇಗೋ ಮಾಡಿ ಮ್ಯಾಜಿಸ್ಟ್ರೇಟರು ಕೊಟ್ಟಿದ್ದ ಅನುಮತಿಯ ಕಾಗದವನ್ನು ಜೇಬಿನಿಂದ ತೆಗೆದು ಅವರ ಕೈಲಿ ಕೊಟ್ಟೆ. ಅಘೋರ್ ಬಾಬು ಕಾಗದ ಓದುತ್ತಾರೆ. ಅಷ್ಟರಲ್ಲಿ ನಾನು ಕಣ್ಣೀರನ್ನು ಒರೆಸಿಕೊಂಡುಬಿಟ್ಟೆ.

"ಅರೇ.... ಹಾಗೆ ಹೇಳಿ! ಅದಕ್ಕೇ? ಹಾಗಾದರೆ ನಿಮಗೆ ಗೊತ್ತೇ ಇಲ್ಲವೇ?" ಎಂದು ಅವರು ನನ್ನ ಕೈಯನ್ನು ಹಿಡಿದುಕೊಂಡರು.

"ಸರಕಾರದ ಹುಕುಂ ಬಂದಿದೆ. ಫಾಸಿಯಾಗುವ ಆರ್ಡರು ಸಸ್ಪೆಂಡ್ ಆಗಿದೆ. ಆಂ.... ಅದೇ ನಾನು ಹೇಳಿದ್ದು."

ಆಂ? ಏನಂತಾರೆ? ಈ ಅಘೋರ್ ಬಾಬುಗೆ ಹುಚ್ಚುಗಿಚ್ಚು ಹಿಡಿದು ಬಿಟ್ಟಿದೆಯೇನು? ನಾನಾಗ ಕೈ ಬಿಡಿಸಿಕೊಂಡು ಅವರ ಎರಡು ತೋಳುಗಳನ್ನೂ ಭದ್ರವಾಗಿ ಹಿಡಿದುಕೊಂಡು ಬಿಟ್ಟೆ.

ಅವರು ಹೇಳುತ್ತ ಹೋದರು.

"ಮಿಲಿಟರಿ ಇಲಾಖೆ ಒಂದನ್ನು ಬಿಟ್ಟು ಭಾರತವರ್ಷದಲ್ಲಿ ಆಗಸ್ಟ್ ಆಂದೋಳನದ ಸಮಯದಲ್ಲಿ ವಿಧ್ವಂಸ ಕೃತ್ಯಗಳ ಮಾಡಿದುದರ ಸಲುವಾಗಿ ಯಾರ ಯಾರ ಮೇಲೆ ಫಾಸಿ ಶಿಕ್ಷೆ ವಿಧಿಸಲಾಗಿತ್ತೋ ಅವರುಗಳ ಫಾಸಿ ಅನಿಶ್ಚಿತ ಕಾಲದವರೆಗೂ ಸ್ಥಗಿತ ಮಾಡಲಾಗಿದೆ. ಯಾರ ಮೇಲೆ ಖೂನಿ ಆಪಾದನೆ ಇತ್ತೋ ಅವರು ಈ ಆರ್ಡರ್ ಮಧ್ಯೆ ಬರುವುದಿಲ್ಲ. ಇವತ್ತು ಫಾಸಿಯಾಗಿದ್ದದ್ದು ಇನ್ನೊಬ್ಬ ಆಸಾಮಿಯದು. ಸಾಧಾರಣ ಖೈದಿ. ಅವನು ಇದ್ದದ್ದು ಮೂರನೆಯ ನಂಬರ ಸೆಲ್ಲಿನಲ್ಲಿ. ಮೊನ್ನೆ ಈ ಆರ್ಡರು ಬಂತು. ನಿಮ್ಮಣ್ಣನನ್ನು ಇನ್ನೂ ಒಂದನೆಯ ನಂಬರ್ ಸೆಲ್ಲಿನಿಂದ ಜರುಗಿಸಲಾಗಿಲ್ಲ. ಸಾಹೇಬರು 'ಯಾಕೆ ಸುಮ್ಮನೆ ತೊಂದರೆ ಹೆಚ್ಚಿಸೋದು?' ಅಂದುಬಿಟ್ಟರು. ಅದಕ್ಕೆ ನೋಡಿ ಇದೆಲ್ಲ ಅಪಾರ್ಥ ಆಗಿರೋದು ಮತ್ತು ಫಾಸಿಯಾಗುವ ತಾರೀಖನ್ನು ಮೊದಲಿಂದಲೂ ಜೈಲಿನ ಖೈದಿಗಳಿಗೆ ಹೇಳುವ ನಿಯಮವಿಲ್ಲ. ಆದರೆ ತಾವೇ ಅಂದಾಜಿನಿಂದ ಹೇಗೋ ತಿಳಿದುಕೊಳ್ಳುತ್ತಾರೆ ಖೈದಿಗಳು. ಆದರಿಂದಲೇ ನಿಮಗೆ ತಪ್ಪು ಸುದ್ದಿ ಬಂದಿದೆ." ನನಗೆ ಮಾತೇ ಉಡುಗಿ ಹೋಗಿದೆ. ಎಲ್ಲ ತಣ್ಣಗಾಗಿ ಹೋಯಿತು... ಎಲ್ಲ ಶಾಂತ. ಮೈಯೆಲ್ಲ ಮನಸ್ಸೆಲ್ಲ ಎಷ್ಟೋ ಹಗುರವಾಗಿ ಹೋಗಿದೆ. ಹಠಾತ್ತಾಗಿ, ನಾಡಿಗಳಲ್ಲಿ ರಕ್ತ ಹರಿಯುವುದೇ ನಿಂತು ಹೋಗಿದೆ... ಈ ಕಡೆ ಗಾಳಿ ಯಾಕೋ ಬೀಸುವುದು ನಿಂತು ಹೋಗಿದೆ. ಗಿಡಗಳ ಎಲೆಗಳು ಸಹ ಅಲ್ಲಾಡುತ್ತಿಲ್ಲ. ಮೇಲೆ ಸೂರ್ಯ ಮಂಡಲದ ಗ್ರಹಗಳೆಲ್ಲ ತಮ್ಮ ತಮ್ಮ ಅಕ್ಷಗಳಲ್ಲಿ ಹಾಗೇ ಸ್ತಬ್ಧವಾಗಿ ಹೋಗಿವೆ. ವೀರ ಭೋಗ್ಯಾ ವಸುಂಧರೆಯ ಅಪರ್ಣಾ ಮೂರ್ತಿ-ನಿಶ್ವಾಸ ಬಿಡುವುದಕ್ಕೂ ಭಯವಾಗುತ್ತದೆ...

ಉಷೆಯ ತಪಸ್ಸು ಎಲ್ಲಿ ಭಂಗವಾಗಿ ಹೋಗುತ್ತದೋ ಎಂದು.

ನಾಡಿಗಳಲ್ಲಿ ಮತ್ತೆ ರಕ್ತದ ಮಿಡಿತ ಶುರುವಾಗಿದೆ. ಗಿಡಗಿಡಗಳಲ್ಲಿ ಹಕ್ಕಿಗಳ ಚಿಲಿಪಿಲಿ. ಎಲೆಎಲೆಗಳಲ್ಲೂ ಎಳೆಯ ಸೂರ್ಯನ ಕಿರಣ ಓಲಾಡುತ್ತಿದೆ. ಲಾಸ್ಯಮಯಿಯಾದ ಧರಣಿ ಮತ್ತೆ ನಾನಾ ಛಂದಸ್ಸಿನಲ್ಲಿ ನರ್ತಿಸತೊಡಗಿದ್ದಾಳೆ... ಜೈಲುಗೇಟಿನ ಮೇಲುಗಡೆ ಕಲ್ಲಿನ ಕಟ್ಟಡದ ಮೇಲೂ ಉಷೆಯ ಕೆಂಪಾನೆ ಬೆಳಕಿನ ಸುಂದರ ಕಿರಣ ಹರಡಿಕೊಂಡಿದೆ.